

ನಮೋ ಭಗವತೇ ಶಂಕರಾನಂದಾಯ

ಶ್ರೋತ್ರೀಯ ಬ್ರಹ್ಮನಿಷ್ಠ ಶ್ರೀ ಪಂಡಿತ ಪೀತಾಂಬರಜಿ ಕೃತ

# ವಿಚಾರ ಚಂದ್ರೋದಯ

ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಸ್ವಾಮೀಜಿಯವರ
ವಿಚಾರ ಚಂದ್ರೋದಯ ಉಪನ್ಯಾಸಗಳು

## ಶ್ರೀ ವೃತ್ತಿರತ್ನಾವಳಿಸಾರ ಸಹಿತ

ಪ್ರಕಾಶಕರು :
ಶ್ರೀ ಸ್ವಾಮಿ ಶಂಕರಾನಂದ ಟ್ರಸ್ಟ್ (ರಿ.)
ಶ್ರೀ ಶಿವಾನಂದಾಶ್ರಮ :: ಅಜ್ಜಂಪುರ

ಬೆಲೆ : ರೂ. 10-00



ಪೂಜ್ಯಪಾದ ಶ್ರೀ ಶಿವಾನಂದಜೀ

(ಶ್ರೀ ಶ್ರೀ ಶ್ರೀ ಶಂಕರಾನಂದ ಸ್ವಾಮೀಜಿಯವರ ಕರಕಮಲ ಸಂಜಾತರು)

"ಸಂಸಾರ ದೀರ್ಘರೋಗಸ್ಯ
ವಿಚಾರಃ ಪರಮೌಷಧಂ"

**ಮೂಕಂ ಕರೋತಿ ವಾಚಾಲಂ**
**ಪಂಗುಂ ಲಂಘಯತೇ ಗಿರಿಮ್ ।**
**ಯತ್ಕೃಪಾ ತಮಹಂ ವಂದೇ**
**ಪರಮಾನಂದ ಮಾಧವಮ್ ॥**

ಯಾರ ಕೃಪೆಯು ಮೂಕರನ್ನು ವಾಚಾಳಿಗಳನ್ನಾಗಿ ಮಾಡುವುದೋ, ಕುಂಟರನ್ನು ಪರ್ವತವನ್ನು ದಾಟುವಂತೆ ಮಾಡುವುದೋ, ಅಂತಹ ಪರಮಾನಂದಸ್ವರೂಪಿಯಾದ ಮಾಧವನನ್ನು ವಂದಿಸುತ್ತೇನೆ.

# ಮುನ್ನುಡಿ

---

ವಿಚಾರ ಚಂದ್ರೋದಯುವು ಪಂಡಿತ ಶ್ರೀ ಪೀತಾಂಬರಜಿಯವರ ಸ್ವತಂತ್ರವಾದ ಒಂದು ಉತ್ತಮ ಗ್ರಂಥ. ಆ ಮಹಾಪಂಡಿತರು ವಿಚಾರ ಸಾಗರ, ವೇದಾಂತಪಂಚದಶಿ ಮತ್ತು ಕೆಲವು ಉಪನಿಷತ್ತುಗಳಿಗೆ ಟೀಕೆಯನ್ನು ಬರೆದಿರುವರು. ಅವುಗಳು ಬಹಳ ಜನಪ್ರಿಯತೆಯನ್ನು ಪಡೆದಿವೆ. ವೃತ್ತಿ ರತ್ನಾವಳಿ ಪ್ರಭುತಿ ಮುಂತಾದ ಕೆಲವು ಸ್ವತಂತ್ರ ಗ್ರಂಥಗಳನ್ನೂ ಸಹ ಬರೆದಿದ್ದಾರೆ. ಈ ಎಲ್ಲಾ ಗ್ರಂಥಗಳಲ್ಲಿ ವಿಚಾರ ಚಂದ್ರೋದಯುವು ಅಗ್ರಗಣ್ಯವಾಗಿದೆ. ಪಂಡಿತರಿಗೂ ಹಾಗೂ ಪಾಮರರಿಗೂ ಸಹ ಉಪಾದೇಯವಾದ ಗ್ರಂಥವು ಇದಾಗಿದೆ.

ನಮ್ಮ ಗುರುಗಳಾದ ಪರಮಪೂಜ್ಯ ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಶಂಕರಾನಂದ ಸ್ವಾಮಿಾಜಿಯವರು ‘‘ಸಂಸಾರಃ ದೀರ್ಘರೋಗಸ್ಯ ವಿಚಾರಃ ಪರಮೌಷಧಮ್’’ ಎಂಬ ವಾಸಿಷ್ಠೋಕ್ತಿಯನ್ನು ಪದೇ ಪದೇ ಒತ್ತಿ ಹೇಳುತ್ತಿದ್ದರು. ಅಂತಹ ಆತ್ಮ ವಿಚಾರವನ್ನು ಸುಸ್ಪಷ್ಟವಾಗಿ, ಬಾಲಬೋಧಕವಾಗಿ ಈ ವಿಚಾರ ಚಂದ್ರೋದಯುದಲ್ಲಿ ಹೇಳಿದೆ. ಚಂದ್ರನು ಷೋಡಷಕಳಾತ್ಮಕನು. ಈ ಗ್ರಂಥವೂ ಸಹ ಅದೇ ಉಪಮಾನದಿಂದ ಷೋಡಷಕಳೆಗಳಾಗಿ ವಿಭಾಗಿಸಲ್ಪಟ್ಟಿದೆ.

ಸಂಸ್ಕೃತದಲ್ಲಿ ಶ್ರೀ ಕೃಷ್ಣಮಿಶ್ರನೆಂಬ ಮಹಾ ಪಂಡಿತನು ಪ್ರಬೋಧ ಚಂದ್ರೋದಯವೆಂಬ ವೇದಾಂತ ಗ್ರಂಥವನ್ನು ನಾಟಕ ರೂಪದಲ್ಲಿ ಬರೆದಿದ್ದಾನೆ. ಈ ವಿಚಾರ ಚಂದ್ರೋದಯುವನ್ನು ಪಂಡಿತ ಪಿತಾಂಬರಜಿಯವರು ಆಗಿನ ಕಾಲದ ಹಳೆ ಹಿಂದಿ ಭಾಷೆಯಲ್ಲಿ ಬರೆದರು. ಈಗ ಆ ಹಳೆ ಹಿಂದಿಯ ಗ್ರಂಥವನ್ನು ಇಬ್ಬರು ಮಹಾತ್ಮರು ಕಡಿಬೋಲಿ ಹಿಂದಿಯಂತೆ ಪರಿವರ್ತನೆ ಮಾಡಿರುತ್ತಾರೆ.

ನಮ್ಮ ಗುರುಗಳು ತಮ್ಮದೇ ಆದ ರೋಚಕ ಶೈಲಿಯಲ್ಲಿ ಈ ಗ್ರಂಥವನ್ನು ವಿವರಿಸಿದ್ದಾರೆ. ಕನ್ನಡ ನಾಡಿನಲ್ಲಿ ಈ ಗ್ರಂಥಕ್ಕೆ ತುಂಬಾ ಗೌರವವಿದೆ. ಮೊದಲನೆಯ ಮುದ್ರಣದ ಪ್ರತಿಗಳು ಮುಗಿದುಹೋಗಿ ಜಿಜ್ಞಾಸುಗಳಿಗೆ ಬಹಳ ತೊಂದರೆಯಾಗಿತ್ತು. ಈ ಎರಡನೆಯ ಮುದ್ರಣದಿಂದ ಈ ಗ್ರಂಥದ ಪ್ರತಿಗಳ ಕೊರತೆಯು ನಿವಾರಣೆಯಾಗುವುದೆಂದು ಆಶಿಸುತ್ತೇವೆ.

ಈ ಉತ್ತಮ ಗ್ರಂಥದ ಪುನರ್ಮುದ್ರಣಕ್ಕೆ ದ್ರವ್ಯ ಸಹಾಯ ಮಾಡಿದ ಶಿವೈಕ್ಯರಾದ ಶ್ರೀ ಬಳೇಚಂಗಪ್ಪನವರು ಮತ್ತು ಅವರ ಧರ್ಮಪತ್ನಿಯವರಾದ ಶಿವೈಕ್ಯರಾದ ಶ್ರೀಮತಿ ಬಳೇ ಮುನಿವೆಂಕಟಮ್ಮನವರ ಆತ್ಮ ಶಾಂತಿಗಾಗಿ ಅವರ ಸುಪುತ್ರರಾದ ಚೀಫ್ ಇಂಜಿನಿಯರ್ ಶ್ರೀ ಬಿ. ಸುಬ್ಬಯ್ಯನವರಿಗೂ, ಅವರ ಕುಟುಂಬದವರಿಗೂ ಮತ್ತು ಶ್ರಮವಹಿಸಿದ ಪುಣ್ಯಾತ್ಮರಿಗೂ ಹಾಗೂ ಅಂದವಾಗಿ ಮುದ್ರಿಸಿಕೊಟ್ಟ ಕೂರ್ಗ್ ಪ್ರಿಂಟಿಂಗ್ ಪ್ರೆಸ್, ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು-3 ಇವರಿಗೂ ಸಚ್ಚಿದಾನಂದ ಸದ್ಗುರು ಪರಮಾತ್ಮನು ದೀರ್ಘಾಯಸ್ಸು ಆರೋಗ್ಯಗಳನ್ನೂ, ಭಕ್ತಿಜ್ಞಾನ ವೈರಾಗ್ಯಗಳನ್ನೂ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

**ಸ್ವಾಮಿ ರಾಮಕೃಷ್ಣಾನಂದ**
ಅಧ್ಯಕ್ಷರು
**ಶ್ರೀ ಸ್ವಾಮಿ ಶಂಕರಾನಂದ ಟ್ರಸ್ಟ್ (ರಿ.)**
ಅಜ್ಜಂಪುರ

ತಾ॥ 7-10-1978
ಮೊಕ್ಕಾಂ : ಅಲ್ಲಗಡ್ಡ
(ಆಂಧ್ರ ಪ್ರದೇಶ)

ಓಂ ತತ್ಸತ್

ಶ್ರೀ ಸದ್ಗುರು ಶಂಕರಾನಂದ ಪರಬ್ರಹ್ಮಣೇ ನಮಃ

ಓಂ ನಮೋ ಬ್ರಹ್ಮಾದಿಭ್ಯೋ ಬ್ರಹ್ಮವಿದ್ಯಾ ಸಂಪ್ರದಾಯ ಕರ್ತೃಭ್ಯೋ!
ವಂಶಋಷಿಭ್ಯೋ, ಮಹದ್ಭ್ಯೋ, ನಮೋ ಗುರುಭ್ಯಃ ||
ಸರ್ವೋಪಪ್ಲವರಹಿತಃ ಪ್ರಜ್ಞಾನ ಘನಪ್ರತ್ಯಗರ್ಥೋ |
ಬ್ರಹ್ಮೈವಾಹಮಸ್ಮಿ ಸೋಽಹಂ ಬ್ರಹ್ಮೈವಾಹಮಸ್ಮಿ ||

ಓಂ ಅಧಿಹೀ ಭಗವೋ ಬ್ರಹ್ಮೇತಿ

ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ
ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ

ಓಂ ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಮ್ |
ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀಗುರವೇ ನಮಃ ||

ಓಂ ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ |
ದ್ವಂದ್ವಾತೀತಂ ಗಗನ ಸದೃಶಂ ತತ್ವಮಸ್ಯಾದಿ ಲಕ್ಷ್ಯಂ ||
ಏಕಂ ನಿತ್ಯಂ ವಿಮಲಮಚಲಂ ಸರ್ವಧೀ ಸಾಕ್ಷಿಭೂತಂ |
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ||

ಓಂ ಅಸತೋಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾಽಮೃತಂಗಮಯ ||

ಓಂ ಸಹನಾವವತು ಸಹನೌಭುನಕ್ತು
ಸಹವೀರ್ಯಂ ಕರವಾವಹೈ
ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈಃ ||

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ||
ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ಮಂಗಲಂ ದಿಶತು ಮೇ ವಿನಾಯಕೌ
ಮಂಗಲಂ ದಿಶತು ಮೇ ಸರಸ್ವತಿ
ಮಂಗಲಂ ದಿಶತು ಮೇ ಮಹೇಶ್ವರಃ
ಮಂಗಲಂ ದಿಶತು ಮೇ ಸದಾಶಿವಃ ||

ಓಂ ಗುರುಬ್ರಹ್ಮಾ ಗುರುವಿಷ್ಣುಃ ಗುರುರ್ದೇವೋ ಮಹೇಶ್ವರಃ |
ಗುರುಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ||
ಯಸ್ಯ ಸ್ಮರಣಮಾತ್ರೇಣ ವಿಘ್ನಜಾತಂ ವಿನಶ್ಯತಿ |
ಅಸ್ತಿ ತುಂಡ ಲಸತ್ಕಾಯ ಗಣನಾಥ ನಮೋಸ್ತುತೇ ||
ವೇದಾಂತ ಸಿದ್ಧಾಂತ ವಿಕಾಸಕಾಯ ತಮೋತಮೋಧ್ವಂಸ ನ
ತತ್ಪರಾಯ |
ಶೀತಾಂಶುಶೀತಾಂಕಿತ ಶೇಖರಾಯ ನಮೋಸ್ತು ತಸ್ಮೈ ಗುರು
ಶಂಕರಾಯ ||

ಸರ್ವಾನರ್ಥ ನಿಹಂತ್ರೀಯ ಪರಮಾನಂದದಾಯಿನಿ |
ಹಿತಾತಮುಪನಿಷದ್ರೂಪ ಬ್ರಹ್ಮವಿದ್ಯಾಂ ಭಜಾಮಹೇ ||
ಪರಮಾತ್ಮಾದ್ವಯಾನಂದಃ ಪೂರ್ಣ ಶುದ್ಧ ಸ್ವಯಂಪ್ರಭಃ |
ವೇದಾಂತ ವಿಷಯಾಸ್ಸಾಕ್ಷಾತ್ ಸೋಽಹಮಸ್ಮಿ ನಿರಂತರಂ ||

ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ

**ನಮೋ ಭಗವತೇ ಶಂಕರಾನಂದಾಯ**

ವಿಚಾರ ಚಂದ್ರೋದಯ ಗ್ರಂಥಕರ್ತರಾದ

**ಬ್ರಹ್ಮನಿಷ್ಠ ಪಂಡಿತ ಪೀತಾಂಬರಜೀಯವರ**

## ಮಂಗಲಾಚರಣೆ

ಕಲಂಕಲಂಕ ಕಜ್ಜಲಂ ತಮಃ ಪ್ರಲಾಪಿ ಸಜ್ಜಲಂ ।
ಗತಾತಿ ಚಂಚಲಾಚಲಂ ಸುಶಾಂತಿ ಶೀಲಮುಜ್ವಲಂ ॥
ಸದಾಸುಖಾದಿ ಕಂದಲಂ ತ್ರಿತಾಪ ಪಾಪ ಶಾಮಕಂ ।
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ ॥ ೧ ॥

ಸಮಾನದಾನದಾಯಕಂಭವಾವವಾಪ್ಯ ನಾಯಕಂ ।
ಸುಶುದ್ಧಧೀವಿದಾಯಕಂ ಮುನೀಂದ್ರವೌಲಿ ನಾಯಕಂ ॥
ಸ್ವಸಂಗಗೀತಗಾಯಕಂ ವ್ಯಕಂತ್ರಿಲೋಕರಾಮಕಂ ।
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ ॥ ೨ ॥

ಶಮಕ್ಷಮಾದಿ ಲಕ್ಷಣಂ ಪ್ರತಿಲ ಕ್ಷಣಂ ಸ ಶಿಕ್ಷಣಂ ।
ಮುಮುಕ್ಷುರಕ್ಷಣೇಕ್ಷಮಂ ಕ್ಷಮೇಷು ವೈವಿಲಕ್ಷಣಂ ॥
ಸುಲಕ್ಷ್ಯ ಲಕ್ಷ್ಯಸಂಶಯಂ ಹರಂ ಗುರುಂ ಯಾಮಕಂ ।
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ ॥ ೩ ॥

ಕಲೇಶಲೇಶವೇಶ ಶೂನ್ಯ ದೇಶಿಕಂ ಪ್ರವೇಶಕಂ ।
ಗತಾ ವಿಶೇಷ ಶೇಷಕಂ ಹ್ಯಶೇಷವೇಷ ದೇಶಿಕಂ ॥
ಪರೇಶಕಂ ಭವೇಶಕಂ ಸಮಸ್ತ ಭೂಷ ಭಾಮಕಂ ।
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ ॥ ೪ ॥

ಸಕಾಲಕಾಲಿ ಜಾಲಬಾಲ ಭೇದಿಭಾನ ಭಲ್ಲಕಂ |
ಪ್ರಭಿನ್ನ ಖಿನ್ನನುನ್ನಬಾವಿ ಜನ್ಮ ಮತ್ತ ಮಲ್ಲಕಂ ||
ಸಭೇದ ಖೇದಭೇದ ವೇದವಾಕ್ಯ ಯೂಥ ಯಾಮುಕಂ |
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ || ೫ ||

ಭವಾಷ್ಟ ಕಷ್ಟ ಪಾಶದಾಸ ಭಾವ ಭಾಸ ನಾಶಕಂ |
ಸುಶುದ್ಧ ಸತ್ವ ಬುದ್ಧ ತತ್ವ ಬ್ರಹ್ಮತತ್ವ ಭಾಸಕಂ ||
ಸ್ವಲೋಕಶೋಕ ಶೋಷಕಂ ವಿತೋಷದೋಷ ವಾಮಕಂ |
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ || ೬ ||

ಸಬಂಧು ಜನ್ಮ ಸಿಂಧು ಪಾರಕಾರಿ ಕರ್ಣಧಾರಕಂ |
ಸಲೋಭ ಶೋಭ ಕೋಪಗೋಪರೂಪಮಾರ ಮಾರಕಂ ||
ಸ್ವಬಾಲಕಾಲ ವಾರಕಂ ಸಮಾಪ್ತ ಸರ್ವ ಕಾಮಕಂ |
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ || ೭ ||

ಸ್ವಲಕ್ಷದಕ್ಷ ಚಕ್ಷುಷಂ ಸ್ವರೂಪ ಸೌಖ್ಯ ಸಂಜುಷಂ |
ಕೃತಾರ್ಥಚೇತನಾಯುಷಂಗತಾರ್ಥ ಗಾಮಿ ತತ್ಸುಷಂ ||
ವಿಭೋಗ್ಯ ಜಾತದುರ್ವಿಷಂ ಮುಷಂ ಗುಣಾಲಿಧಾಮಕಂ |
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ || ೮ ||

ಭವಾಟವೀವಿಹಾರಕಾರಿಜೀವಪಾಂಥ ಪಾರದಂ |
ಸುಯುಕ್ತಿ ಮುಕ್ತಿ ಹಾರಸಾರದಂ ಸುಬುದ್ಧಿ ಶಾರದಂ ||
ಸಪೀತ ಪಾದಕಾಂಬರೋ ಬ್ರವೀಪಿತಂ ಸ್ವರಾಮಕಂ |
ನಮಾಮಿ ಬ್ರಹ್ಮಧಾಮಕಂ ಸಬಾಪುರಾಮನಾಮಕಂ || ೯ ||

ಶ್ರೀಮನ್ಮಂಗಲ ಮೂರ್ತಿ ಪೂತಿಸುಯಶಃ ಸ್ವಾನಂದವಾರ್ಯುಲ್ಲಸತ್ |
ಸೌಭಾಗ್ಯೈಕ ಸರಿತ್ಪತಿಂ ಪ್ರತಿಹತಾಪ್ರೋದ್ಭೂತ ತಾಪತ್ರಯಂ ||
ಸಂಸಾರಶೃತಿಲಗ್ನ ಮಗ್ನ ಮನಸಾಮುದ್ಧಾರಕಂ ಕ್ವಾಗತಂ |
ಪ್ರತ್ಯಕ್‌ತತ್ವಸುಚಿತ್ ಸ್ವರೂಪಸುಗುರುಂ ರಾಮಂಭಜೇಹಂಮುದಾ
|| ೧೦ ||

ಓಂ ತತ್ಸತ್ ಬ್ರಹ್ಮಾರ್ಪಣಮಸ್ತು

ಓಂ

ನಮೋ ಭಗವತೇ ಶಂಕರಾನಂದಾಯ

# ವಿಚಾರ ಚಂದ್ರೋದಯುದ ಮೂಲದೋಹಾಗಳು

## ಒಂದನೆಯು ಕಲಾ

### ಉಪೋದ್ಘಾತ ವರ್ಣನೆ

ಪುರುಷ ಇಚ್ಛಾ ವಿಷಯ ಪುರುಷಾರ್ಥ ಜೋಈ ಸೋಈ ।
ದುಃಖನಾಸ ಸುಖಪ್ರಾಪ್ತಿರೂಪ ಮೋಕ್ಷ ಮಾನಹು ॥

ಹೇತು ತಾಕೋ ಬ್ರಹ್ಮಜ್ಞಾನ ಸೋ ಪರೋಕ್ಷ ಅಪರೋಕ್ಷ ।
ತಾ ಮೈ ಅಪರೋಕ್ಷ ಧೃಢ ಅಧೃಢ ದೋಗಾನಹು ॥

ಮೋಕ್ಷ ಕೋ ಸಾಕ್ಷಾತ್ ಹೇತು ಧೃಢ ಅಪರೋಕ್ಷಜ್ಞಾನ ।
ಹೇತು ತಾ ವಿಚಾರ ಜೀವಬ್ರಹ್ಮಜಗ ಜಾನಹು ॥

ತೀನವಸ್ತುರೂಪ ಜಡ ಚೇತನ ದೊ ಜಡ ಮಿಥ್ಯಾ ।
ಮಾಯಾ ಬ್ರಹ್ಮಚಿತ್ "ಸೊಮ್ಯೆ" ಪೀತಾಂಬರ ಸ್ಯಾನಹು ॥

# ಎರಡನೆಯ ಕಲಾ

## ಪ್ರಪಂಚಾರೋಪಾಪವಾದ

॥ ಮನಹರ್ ಛಂದಃ ॥

ಪ್ರಪಂಚಾರೋಪಾಪವಾದ ಕರಿ ನಿಷ್ಪ್ರಪಂಚ ವಸ್ತು ।
ಬ್ರಹ್ಮ ಜಾನಿಕೆ ಅವಸ್ತು – ಮಾಯಾದಿಕ ಭಾನಿಯೆ ॥
ಬ್ರಹ್ಮಮಾಯಾ ಸಂಬಂಧರು ಜೀವಈಶ್ ಭೇದತಿನ ।
ಷಟ್ ಯೇ ಅನಾದಿ ತಾಮ್ಮೈ ಬ್ರಹ್ಮಾನಂತ ಮಾನಿಯೆ ॥
ವಸ್ತು ಮೈ ಅವಸ್ತು ಕರ ಕಥನ ಆರೋಪ ಭಾಧಿಃ ।
ಅವಸ್ತು ವಸ್ತು ಕಥನ ಅಪವಾದ ಗಾನಿಯೇ ॥
ಗುರು ಕೇ ಪ್ರಸಾದ ಯಹ ಯುಕ್ತಿ ಜಾನಿ ಪೀತಾಂಬರ ।
ತಜ ತಮಕಾ ರಜ ಆರಜ ನಿಜ ಜಾನಿಯೆ ॥

# ಮೂರನೆಯ ಕಲಾ

## ದೇಹ ತೀನ್ ಕಾ ಮೈ ದ್ರಷ್ಟಾ ಹುಂ

॥ ಮನಹರ್ ಛಂದಃ ॥

ದ್ರಷ್ಟಾ ತೀನ್ ದೇಹ ಕೋ ಮೈ ಸ್ಥೂಲಸೂಕ್ಷ್ಮ ಕಾರಣಯೇ ।
ತೀನ್‌ದೇಹ ದೃಶ್ಯ ಅರು ಅನಾತಮಾ ಮಾನಿಯೋ ॥
ಪಂಚೀಕೃತ ಪಂಚಭೂತ್ ಕೇ ಪಚೀಸ್ ತತ್ವನಕೊ ।
ಸ್ಥೂಲದೇಹ ಯಹ ಭೋಗಾಯತ ನ ಗಾನಿಯೋ ॥
ಅಪಂಚೀಕೃತ ಭೂತ್ ಕೇ ಸಪ್ತದಶ ತತ್ವನಕೊ ।
ಸೂಕ್ಷ್ಮದೇಹ ಕೋಯಿ ಭೋಗ ಸಾಧನ ಪ್ರಮಾನಿಯೋ ॥
ಅಜ್ಞಾನ ಕಾರಣದೇಹ ಘಟವತ ದೃಶ್ಯ ಯಹ ।
ಪೀತಾಂಬರ ದ್ರಷ್ಟಾ ಆಪ್ ಜಾನಿ ದೃಶ್ಯಭಾನಿಯೊ ॥

# ನಾಲ್ಕನೆಯು ಕಲಾ

## ಮ್ಹೈ ಪಂಚಕೋಶಾತೀತ ಹುಂ

|| ಮನಹರ್ ಛಂದಃ ||

ಪಂಚಾಕೋಶಾತೀತ ಮ್ಹೈಹು ಅನ್ನಪ್ರಾಣ ಮನೋಮಯ ।
ವಿಜ್ಞಾನ ಆನಂದಮಯ ಪಂಚಕೋಶ ನಾತಮಾ ॥
ಸ್ಥೂಲದೇಹ ಅನ್ನಮಯ – ಕೋಶ ಲಿಂಗದೇಹ ಪ್ರಾಣ ।
ಮನ ರು ವಿಜ್ಞಾನ ತೀನಕೋಶ್ ಕಹೇ ನಾತಮಾ ॥
ಕಾರಣ ಆನಂದಮಯ – ಕೋಶ ಯೆ ಕಾರಜ ಜಡ ।
ವಿಕಾರೀ ವಿನಾಶೀ ವ್ಯಭಿಚಾರೀ ಹೀ ಅನಾತಮಾ ॥
ಅಜ ಚಿತ ಅವಿಕಾರೀ ನಿತ್ಯ ವ್ಯಭಿಚಾರಹೀನ ।
ಪೀತಾಂಬರ ಅನುಭವ ಕರ್ತಾ ಮ್ಹೈ ಆತಮಾ ॥

# ಐದನೆಯ ಕಲಾ

## ತೀನ ಅವಸ್ಥಾ ಕಾ ಮ್ಹೈ ಸಾಕ್ಷಿ ಹುಂ

|| ಮನಹರ್ ಛಂದಃ ||

ಅವಸ್ಥಾ ತೀನಕೋ ಸಾಕ್ಷೀ ಆತಮಾ ಅನ್ವಯ ಯಾಕೊ ।
ವ್ಯಭಿಚಾರೀ ಅವಸ್ಥಾಕೊ ವ್ಯತಿರೇಕ ಪಾಯಿಯೊ ॥
ತ್ರಿಪುಟಿ ಚತುರದಶಕರಿ ವ್ಯವಹಾರ ಜಹಾಂ ।
ಸ್ಪಷ್ಟ ಸೋ ಜಾಗ್ರತ ಜೂಠ ತಾಕೂಂ ದೃಶ್ಯದ್ವಾಯಿಯೆ ॥
ದೇಖೇ ಸುಗೇ ವಸ್ತುನಕೇ ಸಂಸ್ಕಾರ ಸ್ವೈಂ ಸೃಷ್ಟಿ ಜಹಾಂ ।
ಅಸ್ಪಷ್ಟ ಪ್ರತೀತಿ ಸ್ವಪ್ನ ಮೃಷಾ ಲೋಕ ಗಾಯಿಯೊ ॥
ಸಕಲಕರಣ ಲಯಹೋಯ ಜ ಹಾಂಸುಷುಪ್ತಿಸೋ ।
ಪೀತಾಂಬರ ತುರೀಯಹೀಂ ಪ್ರತ್ಯಕ ಪ್ರತ್ಯಾಯಿಯೊ ॥

# ಆರನೆಯ ಕಲಾ

## ಪ್ರಪಂಚ ಮಿಥ್ಯತ್ವ ವರ್ಣನ

॥ ಲಲಿತ ಛಂದಃ ॥

ಸಕಲ ದೃಶ್ಯಸೋ – ಅಧ್ಯಾಸ ಛೋಡನಾ ।
ಜಗ ಅಧಾರ ಮ್ಯೆ ಚಿತ್ತ ಜೋಡನಾ ॥
ತ್ರಯುದಶಾಹಿ ಜೋ ಜಾಗ್ರದಾದಿ ಹೈ ।
ನಬ್ ಪ್ರಪಂಚ ಸೋ ಭಿನ್ನ ನಾಹಿ ಹೈ ॥
ರಜತ ಆದಿ ಹೈ ಸೀಪಿ ಮ್ಯೆ ಯಥಾ ।
ತ್ರಯು ದಶಾ ಸುಹೈ ಬ್ರಹ್ಮ ಮ್ಯೆ ತಥಾ ॥
ರಜತ ಆದಿ ವತ್ ದೃಶ್ಯ ಯೇ ಮೃಷಾ ।
ಶುಗತಿ ಕಾದಿವತ್ ಬ್ರಹ್ಮ ಅಮೃಷಾ ॥
ವ್ಯಭಿಚರೈ ಮಿಥೊ ರಜತ ಆದಿ ಜ್ಯೋ ।
ಇನಹಿಕೀ ಮಿಥೊ ವ್ಯಾವೃತ್ತಿ ಜ್ಯು ತ್ಯೋ ॥
ಶುಗತಿ ಸೂತ್ರವತ್ ಅನುಗ ಏಕಜೋ ।
ಅನುವೃತೀ ಯು ತೊ ಬ್ರಹ್ಮ ಆಪಸೊ ॥
ಶುಗತಿ ಕಾಮು ಹಿ ತೀನ ಅಂಶ ಜ್ಯೂ ।
ಅಜಡ ಬ್ರಹ್ಮ ಮ್ಯೆ ತೀನ ಅಂಶ ತ್ಯೂಂ ॥
ಉಭಯು ಅಂಶಕೂಂ ಸತ್ಯ ಜಾನಿಲೇ ।
ತೃತಿಯು ತ್ಯಾಗದೇ ಮೋಕ್ಷ ತೌವಿಲೇ ॥
ಭಿದ ಭ್ರಮಾದಿ ಪಂಚ ಧಾ ಭವಂ ।
ತ್ರಿವಿಧ ತಾಪತಾ ತಪ್ತ ಸೋ ದವಂ ॥
ಪರಶು ಪಂಚಧಾ – ಯುಕ್ತಿ ಯೋ ಕರಿ ।
ಕರಿ ವಿಚಾರ ತೂಂ ಛೇದ ನಾ ಡರೀ ॥
ನಹಿ ಜು ಜಾಹಿ ಮ್ಯೆ ತೀನ ಕಾಲ ಮ್ಯೆ ।
ತಹಂ ಹಿ ಭಾನ ಹ್ವೈ ಮಧ್ಯ ಕಾಲ ಮ್ಯೆ ॥

ಶುಗತಿ ತೌಪ್ಯವತ್ ಧ್ಯಾಸ ಸೋ ಭ್ರಮಂ ।
ಅರಥ ಜ್ಞಾನದೊ – ಭಾಂತಿ ಕಾ ಕ್ರಮಂ ॥
ದ್ವಿವಿಧ ವೇಮ ಹೈ ಜ್ಞಾನ ಅರ್ಥಕೊ ।
ಅರಧ ಭ್ರಾಂತಿ ವಾ ಷಡ್ವಿಧಾ ಬಕೊ ॥
ಸಕಲ ಧ್ಯಾಸ ಜೆ ಜಗತ ಮೈ ಧಸೇ ।
ಸಬಸು ಯಾಹಿಕೆ ಬೀಚಿ ಮೈ ಧಸೇ ॥
ನಿಜ ಚಿದಾತ್ಮಕೂಂ ಬ್ರಹ್ಮ ಜಾನಿಕೇ ।
ಸಕಲ ಮೇಮಕೊ ಮೂಲ ಭಾನಿಕೇ ॥
ಪರಮು ಮೋದ ಕೂಂ ಆಪ ಬೂಜಿಲೇ ।
ಇಹ ಹಿ ಮುಕ್ತಿ ಪೀತಾಂಬರೋ ಮಿಲೇ ॥

## ಏಳನೆಯ ಕಲಾ

### ಆತ್ಮಾ ಕೇ ವಿಶೇಷಣ

॥ ಇಂದ್ರ ವಿಜಯ ಛಂದಃ ॥

ಆತ್ಮ ವಿಶೇಷಣ ಹೈ ಜ್ಯು ದು ಭಾಂತಿ ।
ವಿಧೇಯ ನಿಷೇಧ್ಯ ಕಹೊಂ ನಿರಧಾರೆ ॥
ಸೇ ಸಬ್ ಜಾನಿ ಭಲೇ ಗುರು ಶಾಸ್ತ್ರ ಸು ।
ಸೊ ಅಪನೊ ನಿಜರೂಪ ನಿ ಹಾರೆ ॥
ಸಚ್ಚಿದಾನಂದ ರು ಬ್ರಹ್ಮ ಸ್ವಯಂಪರ ।
ಕಾಶ ಕೂಟಸ್ಥ ರು ಸಾಕ್ಷಿ ವಿಚಾರೆ ॥
ದ್ರಷ್ಟ ಅರು ಉಪದ್ರಷ್ಟ ರು ಏ ಕಹಿ ।
ಆದಿ ವಿಧೇಯ ವಿಶೇಷಣ ಧಾರೆ ॥
ಅಂತ ವಿಹೀನ ಅಖಂಡ ಅಸಂಗ ರು ।
ಅದ್ವಯ ಜನ್ಮ ವಿನಾ ಅವಿಕಾರೆ ॥

ಚಾರಿ ಅಕಾರ ವಿನಾ ಅರುವ್ಯಕ್ತ |
ನ ಮಾನ ನಕೊ ವಿಷಯೋ ಜ್ಯು ನಿಕಾರೆ ||
ಕರ್ಮ ಕರೀಹಿ ಬಢೈ ನಘಟೈ ಇಸ |
ಹೇತು ಹಿ ಅವ್ಯಯ ವೇದ ಪುಕಾರೆ ||
ಅಕ್ಷರ ನಾಶ ವಿನಾ ಕಹಿಯೆ ಇಸ |
ಆದಿ ನಿಷೇಧ್ಯ ಪೀತಾಂಬರ್ ಸಾರೆ ||

## ಎಂಟನೆಯ ಕಲಾ

### ಸತ್ ಚಿತ್ ಆನಂದ ಕಾ ವಿಶೇಷ ವರ್ಣನ

|| ಇಂದ್ರ ವಿಜಯ ಛಂದಃ ||

ಸಚ್ಚಿದಾನಂದ ಸರೂಪ ಹಿ ಮೈ ಯಹ |
ಸದ್ಗುರು ಕೆ ಮುಖಪೇ ಪಹಿ ಚಾನ್ಯೊ ||
ಜಾಗ್ರತ್ ಸ್ವಪ್ನ ಸುಷುಪ್ತಿ ಜು ಆದಿಕ |
ತೀ ನಹು ಕಾಲಹಿ ಮೈ ಪರಮಾನ್ಯೊ ||
ಜಾಗ್ರತ ಆದಿ ಲಯಾ ವಿಧ ತೀನಹು |
ಕಾಲಹಿ ಹೊ ಇಸ್ ತೈ ಸತ್ ಮಾನ್ಯೊ ||
ತೀನಹು ಕಾಲವಿಷೈ ಸ ಬ ಜಾನಹು |
ಯಾ ಹಿತ ಮೈ ಚಿದ ರೂಪ ಹಿ ಜಾನ್ಯೊ ||
ಮೈ ಪ್ರಿಯ ಹು ಧನ ಪುತ್ರರು ಪುದ್ಗಲ |
ಆದಿ ಕ ತೈ ತ್ರಯ ಕಾಲ ಅಗಾನ್ಯೊ||
ಆ ತಮ ಅರ್ಥ ನ ಬೇ ಪ್ರಿಯ ಆತಮ |
ಆಪ ಹಿ ಹೈ ಪ್ರಿಯ ದುಃಖ ನ ಸಾನ್ಯೊ ||
ಯಾ ಹಿತ ಮೈ ಸಬತೈ ಪ್ರಿಯ ತಮ್ಮರು |
ಹೊ ಪರಮಾನಂದ ದುಃಖ ಹಿ ಬಾನ್ಯೊ ||
ದೇಹ ದಶಾದಿ ಅತೀತ ಸು ಆತಮ |
ಪೂರಣ ಬ್ರಹ್ಮ ಪೀತಾಂಬರ ಗಾನ್ಯೊ ||

# ಒಂಭತ್ತನೆಯ ಕಲಾ

## ಅವಾಚ್ಯ ಸಿದ್ಧಾಂತ ವರ್ಣನ

|| ಇಂದ್ರ ವಿಜಯ ಛಂದಃ ||

ಬ್ರಹ್ಮ ಅಹೈ ಮನ ಬಾನಿ – ಅಗೋಚರ ।
ಶಾಸ್ತ್ರ ರು ಸಂತ ಕಹೈ ಅರುಧ್ಯಾ ವೈ ॥
ವೇದವದೇ ಲಛನಾದಿಕ ರೀತಿ ರು ।
ವೃತ್ತಿ ವಿ ಆಪ್ತಿ ಜನೊ ಮ ನ ಲಾವೈ ॥
ಹೈ ಜು ಸದಾದಿ ವಿಧೇಯ ವಿಶೇಷಣ ।
ವೇ ಅಸದಾದಿಕ ಭಿನ್ನ ಕ ಹಾವೈ ॥
ಸತ್ಯ ಅಪೇಕ್ಷಿಕ ಆದಿ ವಿರೋಧಿ ಜು ।
ಅಂಸ ತಜೀ ಪರಮಾರ್ಥ ಲಖಾವೈ ॥
ಹೈ ಜು ಅನಂತ ಅಖಂಡ ಅಸಂಗ ರು ।
ಅದ್ವಯ ಆದಿನಿಷೇಧ್ಯ ರಹಾವೈ ॥
ವೇ ಪರಪಂಚ ನಿಷೇಧ ಕರೀ ಅವ ।
ಶೇಷಿತ ವಸ್ತು ಗಿರಾಬಿನ ಗಾವೈ ॥
ಯೂಂ ಪರಮಾತಮ ಆತಮ ದೇವಹಿ ।
ವೇದ ರು ಶಾಸ್ತ್ರ ಸಬೇ ಸುರಟಾವೈ ॥
ಂಡಿತ ತ್ಯಾಗಿ ಅಭಾಸ ಪೀತಾಂಬರ ।
ವೃತ್ತಿ ಅಹಂ ಅಪರೋಕ್ಷ ಹಿ ಪಾವೈ ॥

# ಹತ್ತನೆಯ ಕಲಾ

## ಸಾಮಾನ್ಯ ವಿಶೇಷ ಚೈತನ್ಯ ವರ್ಣನ

॥ ಇಂದ್ರ ವಿಜಯ ಛಂದಃ ॥

ಚೇತನ ಹೈ ಜು ಸಮಾನ ವಿಶೇಷ ಸು ।
ದೋ ವಿಧ ಸತ್ಯ ಸುಜಾನ ಸಮಾನೈ ॥

ಭ್ರಾಂತಿ ಸರೂಪ ವಿಶೇಷ ಜು ಕಲ್ಪಿತ ।
ಸಂಸೃತಿ ಆಶ್ರಯ ಸೊ ತಿಹಿ ಭಾನೈ ॥

ಜ್ಯೊ ರವಿಕೊ ಪ್ರತಿಬಿಂಬ ಜಲಾದಿಕ ।
ಸೊ ರವಿರೂಪ ವಿಶೇಷ ಪಿಛಾನೈ ॥

ತ್ಯೊಮತಿಮ್ಯೆ ಪ್ರತಿಬಿಂಬ ಪರಾತಮ ।
ಸೋಕಲ ಪೀತವಿಶೇಷ ಹಿಜಾನೈ ॥

ಆವತ ಜಾವತ ಲೋಕ ಪ್ರಲೋಕ ಹಿ ।
ಭೋಗತ ಭೋಗ ಜು ಕರ್ಮ ನಿಪಾನೈ ॥

ಸೋ ಸಬ್ ಚಿತ – ಅಭಾಸ ಕರೈ ಅರು ।
ಶುದ್ಧ ಸಮಾನ್ ಮಹೀ ನಹಿ ಆನೈ ॥

ಅಸ್ತಿರು ಭಾತಿಪ್ರಿಯ ಸಬ ಪೂರನ ।
ಬ್ರಹ್ಮ ಸಮಾನ ಸು ಚೇತನ ಮಾನೈ ॥

ನಾಮ ರು ರೂಪ ತಜೀ ಸತು ಚೇತನ ।
ಮೋದ ಪೀತಾಂಬರ ಆಪ್ ಪಿ ಛಾ ನೈ ॥

# ಹನ್ನೊಂದನೆಯ ಕಲಾ

## ''ತತ್ವಂ'' ಪದಾರ್ಥೈಕ್ಯ ನಿರೂಪಣ

|| ಇಂದ್ರ ವಿಜಯ ಛಂದಃ ||

ವಾಚ್ಯ ರು ಲಕ್ಷ್ಯ ಲಖೀ ತತ – ತ್ವಂಪದ |
ಲಕ್ಷ್ಯ ದು ಹುಂಕರ ಏಕ ಧೃಢಾ ವೈ||

ಭಿನ್ನ ಜು ದೇಶ ಹಿ ಕಾಲ ಸು ವಸ್ತುರು |
ಧರ್ಮ ಸಮೇತ ಉಪಾಧಿ ಉಡಾವೈ ||

ಜನ್ಮ ಥಿತಿ ಲಯ ಕಾರಕ ಮಾಯಿಕ |
ಜಾನನ ಹಾರ ಸಬೀ ಜಗಭಾವೈ ||

ಈಶ್ವರ ವಾಚ್ಯ ಸು ಹೈ ತತಾ ಪಾದಹಿ |
ಬ್ರಹ್ಮ ಸು ಲಕ್ಷ್ಯ ಉಪಾಧಿ ಅಭಾವೈ ||

ಸಂಸೃತಿ ಮಾನತ ಆಪ ಹಿಮ್ಮೈ ಪರ |
ತಂತ್ರ ಅವಿದ್ಯ ಕಿ ಅಲ್ಪ ಜನಾವೈ ||

ತ್ವಂಪದ ವಾಚ್ಯ ಸು ಜೀವ ವಿವೇಚಿತ |
ಲಕ್ಷ್ಯ ಸು ಸಾಕ್ಷಿ ಉಪಾಧಿ ಥ ಹಾವೈ||

ವಾಚ್ಯ ದು ಅರ್ಥ ಹಿ ಭೇದ ವಿಹ್ಯೈ ಪುನಿ |
ಲಕ್ಷ್ಯ ವಿಭೇದ ನ ರಂಚಕ ಗಾವೈ ||

ಬ್ರಹ್ಮ ಅಹಂ ಇಸ ಭಾಂತಿ ಜು ಜಾನತ |
ಸೋ ಈ ಪೀತಾಂಬರ ಬ್ರಹ್ಮ ಹಿ ಪಾವೈ ||

ಭ್ರಮ ಬಂಧ ನಿವೃತ್ತಿ ಸದೇಹ ಹಿ ಕೂಂ ।
ಸುಖ ಸಂಪತಿ ಹೋವತ ಗೇಹ ಹಿ ಕೂ ॥

ವಿದವಾನ ತಜ್ಯೆ ಇಸ ದೇಹ ಹಿ ಕೂಂ ।
ತಬ ಪಾವಕ ಮುಕ್ತಿ ವಿದೇಹ ಹಿ ಕೂಂ ॥

ತಮು ಲೇಶ ಭಜೇ ಸದ ನಾಶ ಹಿ ಕೂಂ ।
ತಜ ದೇತ ಪ್ರಪಂಚ ಅಭಾಸ ಹಿ ಕೂಂ ॥

ಸರಿತಾ ಇವ ಸಾಗರ ದೇಶ ಹಿ ಕೂಂ ।
ಚಿನ ಮಾತ್ರ ಮಿಲಾಯ ವಿಶೇಷ ಹಿ ಕೂಂ ॥

ಚಿನ ಹೋಯ ಭಜೇ ಅವಶೇಷ ಹಿ ಕೂಂ ।
ನಹಿ ಜನ್ಮ ಪೀತಾಂಬರ ಶೇಷ ಹಿ ಕೂಂ ॥

# ಹದಿನೈದನೆಯ ಕಲಾ

## ವೇದಾಂತ ಪ್ರಮೇಯ ವರ್ಣನ

॥ ಲಲಿತ ಛಂದಃ ॥ (ಗೋಪಿಕಾ ಗೀತವ್)

ಜನತು ಜಾನಿಲೆ ಜ್ಞೇಯ ಅರ್ಥ ಕುಂ ।
ಸಕಲಭೇದ ಸಂ – ದೆ ಅನರ್ಥ ಕುಂ ॥

ಮುಗತಿ ಕೌನ ಹೈ ಹೇತು ತಾಹಿಕೊ ।
ಜನ ಕ ಬೀಚಕೊ ಕೌನ ವಾಹಿಕೊ ॥

ವಿಷಯ ಬೋಧ ಕೊ ಕೌನ ಜಾನಿಲೇ ।
ಪ್ರತಕ ಈಶ್ ಕೊ ತತ್ವ ಮಾನಿಲೇ ॥

ಅ ಹಮ ಅರ್ಥಕೂಂ ಖೂಬ ಸೋಜಿಲೇ ।
“ತತ್” ಪಧಾರ್ಥಕ ಕೂಂ ಶುದ್ಧ ಖೋಜೆಲೇ ॥

ಪರವು ಆತವಸಾ ಏಕ ಮಾನಿಲೇ ।
ತಹ ಸದಾದಿ ಐಶ್ವರ್ಯ ಆನಿಲೇ ।।
ಸತ್ ಚಿದಾತ್ಮಸೊ ಸರ್ವದಾ ಅಹೈ ।
ಇವು ಪೀತಾಂಬರೊ ಜ್ಞಾನಕೂಂ ಗಹೈ ।।

## ಹದಿನಾರನೆಯ ಕಲಾ

### ವೇದಾಂತ ಪದಾರ್ಥ ಸಂಜ್ಞಾ ವರ್ಣನ ಅಥವಾ ಲಘು ವೇದಾಂತ ಕೋಶ

।। ಲಲಿತ ಛಂದಃ ।।

ನಿಷಕಲಂ ನಿಜಂ ವೇದಹೀಂ ವದೇ ।
ಘಟ ದಶಂ ಕಲಾ ಬ್ರಹ್ಮ ಮೈ ನದೇ ।।
ನಿರವಯೇವ ಜೊ ನಿಷ್ಕಲಂಕ ಸೊ ।
ಇಕ ರಸಂ ಸದಾ ಅಂಗತಾನ ಸೊ ।।

ಹಿರಣ್ಯಗರ್ಭ ಔ ಶ್ರದ್ಧಯಾ ನಭೋ ।
ಪವ ನ ತೇಜಕಂ ಭೂಮಿ ಇಂದ್ರಿ ಭೊ ।।
ಮನ ಆನಾಜ ಔ ಶಕ್ತಿ ಸತ್ತ ಪೋ ।
ಕರಮು ಲೋಕ ನಾ ಮಾವು ನೂಜಪೊ ।।

ಘಟದಶಂ ಕಲಾ ಐಹಿ ಜಾನಿಲೇ ।
ಜಡ ಉಪಾಧಿ ಕೊ ಧರ್ಮ ಮಾನಿಲೇ ।।
ಅನುಗತಾ ಶ್ರಯೊ ಪುಷ್ಪ ಸೂತ್ರವತ್ ।
ನಿಜ ಚಿದಾತ್ಮ ಪೀತಾಂಬರೊ ಹಿ ಸತ್ ।।

———

# ವಿಷಯಾನುಕ್ರಮಣಿಕೆ


| ಸಂಖ್ಯೆ | | | ಪುಟ |
|---|---|---|---|
| ೧. | ಪ್ರಥಮ ಕಲಾ – ಉಪೋದ್ಘಾತ ಪ್ರಕರಣ | .... | ೧ |
| ೨. | ದ್ವಿತೀಯ ಕಲಾ – ಪ್ರಪಂಚಾರೋಪಾಪವಾದ | .... | ೪೦ |
| ೩. | ತೃತೀಯ ಕಲಾ – ಆತ್ಮನು ಮೂರು ದೇಹಗಳ ದ್ರಷ್ಟ | .... | ೬೦ |
| ೪. | ಚತುರ್ಥ ಕಲಾ – ನಾನು ಪಂಚಕೋಶಾತೀತನು | .... | ೧೧೬ |
| ೫. | ಪಂಚಮ ಕಲಾ – ಆತ್ಮನು ಅವಸ್ಥಾತ್ರಯಗಳಿಗೆ ಸಾಕ್ಷಿ | ... | ೧೪೪ |
| ೬. | ಆರನೆಯ ಕಲಾ – ಪ್ರಪಂಚ ಮಿಥ್ಯತ್ವ ಪ್ರಕರಣ | .... | ೧೬೨ |
| ೭. | ಸಪ್ತಮಕಲಾ – ಆತ್ಮನ ವಿಶೇಷಣಗಳು | .. | ೧೯೩ |
| ೮. | ಎಂಟನೆಯ ಕಲಾ – ಸಚ್ಚಿದಾನಂದ ವಿಶೇಷ ವರ್ಣನೆ | .... | ೨೧೩ |
| ೯. | ಒಂಭತ್ತನೆಯ ಕಲಾ – ಅವಾಚ್ಯ ಸಿದ್ಧಾಂತ | .... | ೨೨೩ |
| ೧೦. | ಹತ್ತನೆಯ ಕಲಾ – ಸಾಮಾನ್ಯ ವಿಶೇಷ ಚೈತನ್ಯ ವರ್ಣನೆ | | ೨೩೧ |
| ೧೧. | ಹನ್ನೊಂದನೆಯ ಕಲಾ – ಬ್ರಹ್ಮಾತ್ಮೈಕ್ಯ ನಿರೂಪಣ | ... | ೨೪೪ |
| ೧೨. | ಹನ್ನೆರಡನೆಯ ಕಲಾ – ಜ್ಞಾನಿಯ ಕರ್ಮ ನಿವೃತ್ತಿ | .... | ೨೫೮ |
| ೧೩. | ಹದಿಮೂರನೆಯ ಕಲಾ – ಸಪ್ತಜ್ಞಾನ ಭೂಮಿಕೆ | .... | ೨೬೩ |
| ೧೪. | ಹದಿನಾಲ್ಕನೆಯ ಕಲಾ – ಜೀವನ್ಮುಕ್ತಿ ವಿದೇಹಮುಕ್ತಿ ವರ್ಣನೆ | ... | ೨೭೫ |
| ೧೫. | ಹದಿನೈದನೆಯ ಕಲಾ – ವೇದಾಂತ ಪ್ರಮೇಯ ವರ್ಣನ | .... | ೨೮೦ |
| ೧೬. | ಹದಿನಾರನೆಯ ಕಲಾ – ಲಘು ವೇದಾಂತಕೋಶ | .... | ೨೮೩ |
| (೧) | ಪರಿಶಿಷ್ಟ ವೃತ್ತಿರತ್ನಾವಳಿಯ ಸಾರ ಪರಿಚಯ | .... | ೩೪೦ |








ದಿ॥ ಬಳೇಚಂಗಪ್ಪನವರು ಮತ್ತು ಮುನಿವೆಂಕಟಮ್ಮನವರು



ಶ್ರೀ ಪ್ರೇಮದಾಸ್‌ಜಿ ಗುನಾತಿಯವರು

# ಯದ್ಭಾವಂ ತದ್ಭವತಿ

(ನೀವೇ ಪ್ರಯೋಗ ಮಾಡಿ ನೋಡಿ)

ಒಂದು ದೊಡ್ಡ ಕನ್ನಡಿ ಎದುರು ಕುಳಿತುಕೊಳ್ಳಿ. ಕೋಪವನ್ನು ಕಲ್ಪಿಸಿಕೊಂಡು ಸಿಟ್ಟಾಗಿರುವವರಂತೆ ನಟನೆ ಮಾಡಿ. ಸಿಟ್ಟಾದಾಗ ಸಾಮಾನ್ಯವಾಗಿ ನೀವು ಮಾಡುವ ಹಾವಭಾವಗಳನ್ನೆಲ್ಲಾ ತನ್ಮಯತೆಯಿಂದ ಅಭಿನಯಿಸಿ. ಹತ್ತು ನಿಮಿಷಗಳ ಅಭಿನಯನಂತರ ನಟನೆಯನ್ನು ನಿಲ್ಲಿಸಿರಿ. ನಿಮ್ಮನ್ನು ನೀವೇ ವಿಶ್ಲೇಷಿಸಿಕೊಳ್ಳಿರಿ. ನಿಜವಾಗಿಯೂ ನಿಮಗೆ ಕೋಪದ ಆವೇಶ ಬಂದಿರುವುದರ ಅನುಭವವಾಗುವುದು. “ಯದ್ಭಾವಂ ತದ್ಭವತಿ”.

ಹಾಗೆಯೇ ಕಲ್ಪನೆ, ಭಾವ ಮತ್ತು ನಟನೆ ಇವುಗಳನ್ನು ಉಪಯೋಗಿಸಿಕೊಂಡು ನಿಮಗೆ ಬೇಕಾದ ಆಧ್ಯಾತ್ಮಿಕ ಅನುಭವಗಳನ್ನು ಪಡೆದುಕೊಳ್ಳಬಹುದೆಂಬ ಸತ್ಯವನ್ನು ಪ್ರಯೋಗಗಳ ಮೂಲಕ ಪರೀಕ್ಷೆ ಮಾಡಿಕೊಳ್ಳಿ.

## "ವಿಶ್ವಾಸ ಸೂತ್ರ"

ವಿಶ್ವಾಸ ಅಥವಾ ನಂಬಿಕೆಯನ್ನು ಪದೇ ಪದೇ ವಿಶ್ಲೇಷಿಸಿ ನೋಡಿದರೆ ಅದು ಬೆಳಸಿದ ಕಲ್ಪನೆ, ಅಭಿವೃದ್ಧಿ ಪಡಿಸಿಕೊಂಡ ಕಲ್ಪನೆ, ಹಾಗೂ ಒರೆಹಚ್ಚಿ ನೋಡಿ ಅನುಭವದ ಮೂಲಕ ದೃಢೀಕರಿಸಿದ್ದೆಂದು ಕಾಣುತ್ತದೆ. ನಿಸ್ಸಂದೇಹವಾಗಿ ನಂಬಿಕೆ ಮತ್ತು ಕಲ್ಪನೆಗಳು ಒಂದೇ ಅಲ್ಲ. ನೀವು ವಿಶ್ವಾಸವಿಲ್ಲದೆ ಕಲ್ಪನೆಯನ್ನು ಇಟ್ಟುಕೊಳ್ಳಬಹುದು. ಆದರೆ ಕಲ್ಪನೆಯಿಲ್ಲದೆ ವಿಶ್ವಾಸ ಅಥವಾ ನಂಬಿಕೆಯನ್ನು ಇಟ್ಟುಕೊಳ್ಳಲು ಅಸಾಧ್ಯ.

ಓಂ ನಮೋ ಭಗವತೇ ಶಂಕರಾನಂದಾಯ

# ವಿಚಾರ ಚಂದ್ರೋದಯದ ಒಪ್ಪೋಲೆ

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೮ | ೨೫ | ಪುನರಾವೃತ್ತಿನೋಽರ್ಜುನ | ಪುನರಾವರ್ತಿನೋಽರ್ಜುನ |
| ೧೩ | ೨೭ | ವಿಜಾತೀಯವೃತ್ತಿ, ತಿರಸ್ಕಾರ | ವಿಜಾತೀಯವೃತ್ತಿತಿರಸ್ಕಾರ |
| ೧೬ | ೮ | ಜ್ಞಾನ ಮನಂತಂ | ಜ್ಞಾನಮನಂತಂ |
| ೧೮ | ೧೩ | ಹೇಳಿಕೊಳ್ಳುವ | ಹೇಳಿಸಿಕೊಳ್ಳುವ |
| ೨೧ | ೧೩, ೧೮ | ತತ್ವ | ತತ್ತ್ವ |
| ೨೨ | ೧೪, ೧೭ | ಲಕ್ಷಾರ್ಥ | ಲಕ್ಷ್ಯಾರ್ಥ |
| ೨೩ | ೧೩ | ,, | ,, |
| ೨೩ | ೨೫ | ನಿಷ್ಕಾಮು ಕರ್ಮ | ನಿಷ್ಕಾಮುಕರ್ಮ |
| ೨೬ | ೧೩ | ಅಸಕ್ತಿರನ ಭಿಷ್ಟಂಗಃ | ಅಸಕ್ತಿರನಭಿಷ್ವಂಗಃ |
| ೨೮ | ೧೭ | ಪ್ರತ್ಯಗಾತ್ಯನು | ಪ್ರತ್ಯಗಾತ್ಮನು |
| ೩೧ | ೧೯ | ವಚ ಸಾತಥಾ | ವಚಸಾ ತಥಾ |
| ೩೨ | ೧೧ | ತತ್ವದರ್ಶಿನಃ | ತತ್ತ್ವದರ್ಶಿನಃ |
| ೩೨ | ೧೨ | ಮಂಡಕೋಪನಿಷತ್ತಿನಲ್ಲಿ | ಮುಂಡಕೋಪನಿಷತ್ತಿನಲ್ಲಿ |
| ೩೨ | ೧೩, ೧೬ | ಪರತತ್ವವರು ಪ್ರವಾಲಾವದ | ಪರತತ್ತ್ವವರುಪುವಾಲಾಪದ |
| ೩೨ | ೨೭ | ಮಾಡಬಹುದು | ಮಾಡಬಲ್ಲರು |
| ೩೪ | ೧೫ | ತತ್ವಮಸ್ಯಾದಿ | ತತ್ತ್ವಮಸ್ಯಾದಿ |
| ೩೫ | ೨೭ | ಜೀವೇಶ್ವರ ಭೇದ | ಜೀವಜೀವರ ಪರಸ್ಪರ ಭೇದ |
| ೩೬ | ೭ | ಬಹುಧಾ | ಬಹುಧಾಃ |
| ೩೬ | ೧೬ | ಭೇದಗಳು ಜೀವರುಗಳ | ಜೀವರುಗಳ ಭೇದಗಳು |
| ೩೬ | ೧೬ | ತೋರುತ್ತವೆ | ಅನೇಕವಾಗಿ ತೋರುತ್ತವೆ. |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೫೧ | ೧೪ | ಜೀವನದಲ್ಲಿ | ಜೀವರಲ್ಲಿ |
| ೮೦ | ೮೦ | ಮತ್ತು ೮೧ನೇ ಪುಟದಲ್ಲಿ ಒಂದೇ ವಿಷಯವೇ ಅಚ್ಚಾಗಿದೆ. ಆದ್ದರಿಂದ ೮೧ನೇ ಪುಟದ ವಿಷಯವನ್ನು ಬಿಟ್ಟು ಓದಿರಿ. | |
| ೮೭ | ೬,೭ | ಕರಚರಣಾದ್ಯವವಯು | ಕರಚರಣಾದ್ಯವಯುವ |
| ೮೯ | ೧ | ತತ್ವಗಳು | ತತ್ತ್ವಗಳು |
| ೧೦೦ | ೧೬ | ದಕ್ಷಿಣಾಮೂರ್ತಿಯೋ | ದಕ್ಷಿಣಾಮೂರ್ತಯೋ |
| ೧೦೭ | ೫ | ಇದನು | ಇದನ್ನು |
| ೧೦೭ | ೨೧ | ಕರ್ತೃತ್ವವ್ಪು | ಕರ್ತೃತ್ವವು |
| ೧೦೭ | ೨೨ | ಕೋಶಕ್ಕೂ | ಕೋಶಕ್ಕೂ |
| ೧೧೩ | ೫ | ಜ್ವಾಜಲ್ಯಮಾನ | ಜಾಜ್ವಲ್ಯಮಾನ |
| ೧೧೩ | ೨೪ | ಕಾರಣವೋ | ಕರಣವೋ |
| ೧೧೬ | ೪ | ತತ್ವಮಸಿ | ತತ್ತ್ವಮಸಿ |
| ೧೧೯ | ೨೦ | ದೃಷ್ಯವಾಗಿ | ದೃಶ್ಯವಾಗಿ |
| ೧೨೩ | ೪ | ಶತು | ಶತ್ರು |
| ೧೨೬ | ೨೫ | ಭಾಸಕ ಭಾಷ್ಯ | ಭಾಸಕ ಭಾಸ್ಯ |
| ೧೩೧ | ೧೫ | ತ್ತೈತ್ತರೀಯೋಪನಿಷತ್ತಿನಲ್ಲಿ | ತೈತ್ತರೀಯೋಪನಿಷತ್ತಿನಲ್ಲಿ |
| ೧೩೨ | ೧೫ | ಶೂನ | ಶೂನ್ಯ |
| ೧೩೬ | ೯, ೧೦ | ವಿಕಾರಧ್ಯಾಸ | ವಿಕಾರಾಧ್ಯಾಸ |
| ೧೪೧ | ೪ | ಸೇರಿದವುಗಳ | ಸೇರಿದವುಗಳು |
| ೧೪೮ | ೪, ೧೧, ೧೯ | ಯಾರು ? | ಯಾವುವು ? |
| ೧೫೧ | ೧೩ | ಸ್ವ+ಎಂದರೆ ತಾನು | ಸ್ವ+ಭಾವ, ಸ್ವ–ಎಂದರೆ ತಾನು |
| ೧೫೫ | ೧೪ | ತನ | ತನ್ನ |
| ೧೫೯ | ೧೫ | ನಿರ್ಗುಣಸ್ಯ | ನಿರ್ಗುಣಶ್ಚ |
| ೧೬೧ | ೧೪ | ದೇಹಗಳ | ದೇಹಗಳು |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೧೬೬ | ೧೨ | ಸುಷುಪ್ತಿ ಇದೆ ಎಂಬ ರೂಪದಿಂದ | ಸುಷುಪ್ತಿ ಇದೆ. ಹೀಗೆ "ಇದೆ" ಎಂಬ ರೂಪದಿಂದ |
| ೧೬೭ | ೧೬ | ನಿಶ್ಚಯು | ನಿಶ್ಚಯವೇ |
| ೧೬೯ | ೧೦ | ದೃಷ್ಟಾಂತದಿಂದ ಸಂಗಭ್ರಾಂತಿಯು ಇವೃತ್ತಿ | ದೃಷ್ಟಾಂತದಿಂದ ಸಂಗಭ್ರಾಂತಿ ನಿವೃತ್ತಿ |
| ೧೬೯ | ೧೨ | ಬ್ರಾಂತಿ | ಭ್ರಾಂತಿ |
| ೧೮೫ | ೩ | ಅದ್ಯಾಸ | ಅಧ್ಯಾಸ |
| ,, | ೧೯, ೨೦ | ಸವಾದಾನ | ಸಮಾಧಾನ |
| ,, | ೨೫ | ಅಥ್ಯಾನ | ಅಧ್ಯಾಸ |
| ೧೮೭ | ೧೩. ೧೫ | ಸಾಧಿ | ಸಾದಿ |
| ೧೮೮ | ೪ | ಸಂಬಂಧಾದ್ಯಾಸ | ಸಂಬಂಧಾಧ್ಯಾಸ |
| ,, | ೨೧ | ಕೇವಲ ಥರ್ಮಾಧಾಸ | ಕೇವಲ ಧರ್ಮಾಧ್ಯಾಸ |
| ,, | ೨೨ | ಅತ್ಮನಲ್ಲಿ | ಆತ್ಮನಲ್ಲಿ |
| ,, | ೨೬ | ವೇಳುವುದು | ಕೇಳುವುದು |
| ,, | ೨೬, ೨೭ | ಅಘ್ರಾಣಿಸುಕೆದು | ಆಘ್ರಾಣಿಸುವುದು |
| ೧೮೯ | ೭ | ಅತ್ಮನಲ್ಲಿ | ಆತ್ಮನಲ್ಲಿ |
| ,, | ೧೦ | ಅಥ್ಯಾಸ | ಅಧ್ಯಾಸ |
| ,, | ೧೫, ೧೬ | ಆವೃತ್ತಿ· ಗಿಂತಲೂ | ಆ ವೃತ್ತಿಗಿಂತಲೂ |
| ೧೯೦ | ೭ | ಧರ್ಮಿರ್ಾಧ್ಯಾಸ | ದರ್ಮಿ ಅಧ್ಯಾಸ |
| ,, | ೧೦ | ಅಧ್ಯಾಸವಾಗಿವೆ | ಅಧ್ಯಾಸವಾಗಿದೆ |
| ,, | ೧೫ | ಅನ್ಯೋನ್ಯಾಧ್ಯಾಸಪೆಂದರೇನು ? | ಅನ್ಯೋನ್ಯಾಧ್ಯಾಸವೆಂದರೆ |
| ೧೯೧ | ೧೩ | ಅನ್ಯೋನ್ಯಾಧ್ಯಾಸವಾಗಿವೆ | ಅನ್ಯೋನ್ಯಾಧ್ಯಾಸವಾಗಿದೆ |
| ,, | ೨೫ | ಅನ್ಯೋನ್ಯಾದ್ಯಾಸ | ಅನ್ಯೋನ್ಯಾಧ್ಯಾಸ |
| ೧೯೨ | ೧ | ಅದ್ಯಾಸದ | ಅಧ್ಯಾಸದ |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೫೧ | ೧೪ | ಜೀವನದಲ್ಲಿ | ಜೀವರಲ್ಲಿ |
| ೮೦ | ೮೦ | ಮತ್ತು ೮೧ನೇ ಪುಟದಲ್ಲಿ ಒಂದೇ ವಿಷಯವೇ ಅಚ್ಚಾಗಿದೆ. ಆದ್ದರಿಂದ ೮೧ನೇ ಪುಟದ ವಿಷಯವನ್ನು ಬಿಟ್ಟು ಓದಿರಿ. | |
| ೮೭ | ೬,೭ | ಕರಚರಣಾದ್ಯವವು | ಕರಚರಣಾದ್ಯವಯವ |
| ೮೯ | ೧ | ತತ್ವಗಳು | ತತ್ತ್ವಗಳು |
| ೧೦೦ | ೧೬ | ದಕ್ಷಿಣಾಮೂರ್ತಿಯೇ | ದಕ್ಷಿಣಾಮೂರ್ತಯೇ |
| ೧೦೭ | ೫ | ಇದನು | ಇದನ್ನು |
| ೧೦೭ | ೨೧ | ಕರ್ತೃತ್ವಪ್ಕು | ಕರ್ತೃತ್ವವು |
| ೧೦೭ | ೨೨ | ಕೋಶಕ್ಕೂ | ಕೋಶಕ್ಕೂ |
| ೧೧೩ | ೫ | ಜ್ವಾಜಲ್ಯಮಾನ | ಜಾಜ್ವಲ್ಯಮಾನ |
| ೧೧೩ | ೨೪ | ಕಾರಣವೋ | ಕರಣವೋ |
| ೧೧೬ | ೪ | ತತ್ವಮಸಿ | ತತ್ತ್ವಮಸಿ |
| ೧೧೯ | ೨೦ | ದೃಷ್ಯವಾಗಿ | ದೃಶ್ಯವಾಗಿ |
| ೧೨೩ | ೪ | ಶತು | ಶತ್ರು |
| ೧೨೬ | ೨೫ | ಭಾಸಕ ಭಾಷ್ಯ | ಭಾಸಕ ಭಾಸ್ಯ |
| ೧೩೧ | ೧೫ | ತ್ತೈತ್ತರೀಯೋಪನಿಷತ್ತಿನಲ್ಲಿ | ತೈತ್ತರೀಯೋಪನಿಷತ್ತಿನಲ್ಲಿ |
| ೧೩೨ | ೧೫ | ಸೂನ | ಸೂನ್ಯ |
| ೧೩೬ | ೯, ೧೦ | ವಿಕಾರಧ್ಯಾಸ | ವಿಕಾರಾಧ್ಯಾಸ |
| ೧೪೧ | ೪ | ಸೇರಿದವುಗಳ | ಸೇರಿದವುಗಳು |
| ೧೪೮ | ೪, ೧೧, ೧೯ | ಯಾರು ? | ಯಾವುವು ? |
| ೧೫೧ | ೧೩ | ಸ್ವ+ಎಂದರೆ ತಾನು | ಸ್ವ+ಭಾವ, ಸ್ವ–ಎಂದರೆ ತಾನು |
| ೧೫೫ | ೧೪ | ತನ | ತನ್ನ |
| ೧೫೯ | ೧೫ | ನಿರ್ಗುಣಸ್ಯ | ನಿರ್ಗುಣಶ್ಚ |
| ೧೬೧ | ೧೪ | ದೇಹಗಳ | ದೇಹಗಳು |

| ಪುಟ | ಸಾಲು | ಇರುವುದು | ಇರಬೇಕಾದುದು |
| --- | --- | --- | --- |
| ೨೯೪ | ೨೩, ೨೫ | ಪ್ರಾರಾಬ್ಧ | ಪ್ರಾರಬ್ಧ |
| ೨೯೮ | ೧೯ | ,, | ,, |
| ೩೦೦ | ೧೦, ೧೧, ೧೨ | ,, | ,, |
| ೩೦೧ | ೬ | ತತ್ವವನ್ನು | ತತ್ತ್ವವನ್ನು |
| ೩೦೪ | ೧೬ | ಭಗವತ್ತತ್ವ | ಭಗವತ್ತತ್ತ್ವ |
| ೩೬೨ | ೧೦ | ಆಗಿದ್ದನು. "ದಶಮೋಹಮ್" ಎಂಬ ಜ್ಞಾನ ಉಂಟಾಗುವುದಿಲ್ಲ | ಆಗಿದ್ದರೂ 'ದಶಮೋಽಹಮ್' ಎಂಬ ಜ್ಞಾನ ಉಂಟಾಗುವುದಿಲ್ಲ |
| ೩೬೮ | ೨೧, ೨೨ | ಮೂರವಸ್ಥೆಗಳು | ಮೂರು ಅವಸ್ಥೆಗಳು |
| ೩೭೯ | ೧೬ | ತತ್ವಮಸಿ | ತತ್ತ್ವಮಸಿ |
| ೩೮೦ | ೫, ೭ | ಅಭೇದವನ್ನು ಅನುಭವಿಸುವವನು. | ಅಭೇದವನ್ನು ಅನುಭವಿಸುವುದು. |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| ೫೧ | ೧೪ | ಜೀವನದಲ್ಲಿ | ಜೀವರಲ್ಲಿ |
| ೮೦ | ೮೦ | ಮತ್ತು ೮೧ನೇ ಪುಟದಲ್ಲಿ ಒಂದೇ ವಿಷಯವೇ ಅಚ್ಚಾಗಿದೆ. ಆದ್ದರಿಂದ ೮೧ನೇ ಪುಟದ ವಿಷಯವನ್ನು ಬಿಟ್ಟು ಓದಿರಿ. | |
| ೮೭ | ೬,೭ | ಕರಚರಣಾದ್ಯವವಯು | ಕರಚರಣಾದ್ಯವಯುವ |
| ೮೯ | ೧ | ತತ್ವಗಳು | ತತ್ತ್ವಗಳು |
| ೧೦೦ | ೧೬ | ದಕ್ಷಿಣಾಮೂರ್ತಿಯೇ | ದಕ್ಷಿಣಾಮೂರ್ತಯೇ |
| ೧೦೭ | ೫ | ಇದನು | ಇದನ್ನು |
| ೧೦೭ | ೨೧ | ಕರ್ತೃತ್ವಪ್ಕು | ಕರ್ತೃತ್ವವು |
| ೧೦೭ | ೨೨ | ಕೋಶಕ್ನೂ | ಕೋಶಕ್ಕೂ |
| ೧೧೩ | ೫ | ಜ್ವಾಜಲ್ಯಮಾನ | ಜಾಜ್ವಲ್ಯಮಾನ |
| ೧೧೩ | ೨೪ | ಕಾರಣವೋ | ಕರಣವೋ |
| ೧೧೬ | ೪ | ತತ್ವಮಸಿ | ತತ್ತ್ವಮಸಿ |
| ೧೧೯ | ೨೦ | ದೃಷ್ಯವಾಗಿ | ದೃಶ್ಯವಾಗಿ |
| ೧೨೩ | ೪ | ಶತು | ಶತ್ರು |
| ೧೨೬ | ೨೫ | ಭಾಸಕ ಭಾಷ್ಯ | ಭಾಸಕ ಭಾಸ್ಯ |
| ೧೩೧ | ೧೫ | ತ್ತೈತ್ತರೀಯೋಪನಿಷತ್ತಿನಲ್ಲಿ | ತೈತ್ತರೀಯೋಪನಿಷತ್ತಿನಲ್ಲಿ |
| ೧೩೨ | ೧೫ | ಸೂನ | ಸೂನ್ಯ |
| ೧೩೬ | ೯, ೧೦ | ವಿಕಾರಧ್ಯಾಸ | ವಿಕಾರಾಧ್ಯಾಸ |
| ೧೪೧ | ೪ | ಸೇರಿದವುಗಳ | ಸೇರಿದವುಗಳು |
| ೧೪೮ | ೪, ೧೧, ೧೯ | ಯಾರು ? | ಯಾವುವು ? |
| ೧೫೧ | ೧೩ | ಸ್ವ+ಎಂದರೆ ತಾನು | ಸ್ವ+ಭಾವ, ಸ್ವ–ಎಂದರೆ ತಾನು |
| ೧೫೫ | ೧೪ | ತನ | ತನ್ನ |
| ೧೫೯ | ೧೫ | ನಿರ್ಗುಣಸ್ಯ | ನಿರ್ಗುಣಶ್ಚ |
| ೧೬೧ | ೧೪ | ದೇಹಗಳ | ದೇಹಗಳು |

ಓಂ

ನಮೋ ಭಗವತೇ ಶಿವಾನಂದಾಯ

**ಶ್ರೋತ್ರೀಯ ಬ್ರಹ್ಮನಿಷ್ಠ ಪಂಡಿತ ಪೀತಾಂಬರಜಿ ಕೃತ**

# ವಿಚಾರ ಚಂದ್ರೋದಯ

## ಪ್ರಥಮಕಲಾ ಪ್ರಾರಂಭಃ

## ಉಪೋದ್ಘಾತ ವರ್ಣನೆ

ಪ್ರಶ್ನೆ ೧: **ಉಪೋದ್ಘಾತವೆಂದರೇನು ?**

ಉತ್ತರ : ಪ್ರತಿಪಾದನೆ ಮಾಡಲು ಯೋಗ್ಯವಾದ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು, ಅದಕ್ಕೆ ಸಂಬಂಧಪಟ್ಟ ಬೇರೆ ವಿಷಯವನ್ನು ಪ್ರಸ್ತಾಪಿಸುವುದಕ್ಕೆ **'ಉಪೋದ್ಘಾತ'** ವೆಂದು ಹೆಸರು.

ಉದಾಹರಣೆ: ಉರಿಬಿಸಿಲಿನ ಬೇಸಿಗೆಯ ಮಧ್ಯಾಹ್ನದಲ್ಲಿ ದಾರಿ ನಡೆಯುತ್ತಿದ್ದ ಒಬ್ಬಾನೊಬ್ಬ ಪ್ರಯಾಣಿಕನಿಗೆ ಬಹಳ ಬಾಯಾರಿಕೆಯಾಗಿ, ಸ್ವಲ್ಪ ಮಜ್ಜಿಗೆ ಕುಡಿಯಬೇಕೆಂಬ ಇಚ್ಛೆ ಉಂಟಾಯಿತು. ಆಗ ಆತನು ಸಮೀಪದಲ್ಲಿ ಕಾಣಿಸಿದ ಒಂದು ಹಳ್ಳಿಗೆ ಹೋಗಿ, ಅಲ್ಲಿ ಒಬ್ಬ ದೊಡ್ಡ ಗೃಹಸ್ಥರ ಮನೆಗೆ ಹೋದನು. ಮನೆಯ ಯಜಮಾನನು ಅವನನ್ನು ಮಾತಾಡಿಸಿ ಕುಳ್ಳಿರಿಸಿಕೊಂಡನು. ಪ್ರಯಾಣಿಕನಿಗೆ ಈಗ ಮುಖ್ಯವಾಗಿ ಮಜ್ಜಿಗೆ ಬೇಕು; ನೇರವಾಗಿ ಸ್ವಲ್ಪ ಮಜ್ಜಿಗೆ ಕೊಡಿ ಎಂದು ಕೇಳಿದಾಗ ಅವರು ಇಲ್ಲವೆಂದರೆ ಏನು ಮಾಡುವುದೆಂದು ಯೋಚಿಸಿ, ಆ ಬುದ್ಧಿವಂತನಾದ ಪ್ರಯಾಣಿಕನು ತತ್ಸಂಬಂಧವಾದ ಇತರ ಪ್ರಶ್ನೆಗಳನ್ನು ಮಾಡಹತ್ತಿದನು. "ಏನು ಯಜಮಾನರೇ ! ಮನೆಯಲ್ಲಿ ಯಾರೂ ಕಾಣಿಸುವುದಿಲ್ಲವಲ್ಲಾ ?" ಎಂದನು. ಅದಕ್ಕೆ ಯಜಮಾನನು, "ಕೆಲವರು ಹೊಲ ಗದ್ದೆಗಳಲ್ಲಿ ಕೆಲಸ

ಮಾಡಲು ಹೋಗಿದ್ದಾರೆ; ಮತ್ತೆ ಕೆಲವರು ದನಕರುಗಳನ್ನು ಮೇಯಿಸಿ ಕೊಂಡು ಬರಲು ಹೋಗಿದ್ದಾರೆ" ಎಂದು ಉತ್ತರ ಹೇಳಿದನು. "ಹಾಗಾದರೆ ನಿಮ್ಮ ಮನೆಯಲ್ಲಿ ದನಕರುಗಳೂ ಸಹ ಇವೆಯೇ?" ಎಂದು ಕೇಳಿದನು. "ಹೌದು, ಏಳೆಂಟು ಹಸುಗಳೂ, ನಾಲ್ಕಾರು ಎಮ್ಮೆಗಳೂ ಇವೆ" ಎಂದನು. "ಎಲ್ಲಾ ಹಸುಗಳು ಹಾಲು ಕೊಡುತ್ತವೆಯೇ?" ಎಂದು ಕೇಳಲು "ಕೊಡು ತ್ತವೆ" ಎಂದು ಆತ ಉತ್ತರಿಸಿದನು. "ಹಾಲನ್ನು ಹೆಪ್ಪಾಕಿ ಮೊಸರು ಮಾಡು ತ್ತೀರಲ್ಲವೇ?" ಎಂದು ಪ್ರಶ್ನಿಸಿದನು. ಯಜಮಾನನು ಹೌದೆಂದನು. "ಹಾಗಾದರೆ ಕುಡಿಯಲು ಸ್ವಲ್ಪ ಮಜ್ಜಿಗೆ ಕೊಡಿ" ಎಂದು ಕೇಳಿದನು. ಆಗ ಆ ಯಜಮಾನನು ಆತನಿಗೆ ಮಜ್ಜಿಗೆ ತಂದುಕೊಟ್ಟನು. ಇದು ದೃಷ್ಟಾಂತ.

ದಾರ್ಷ್ಟಾಂತ: ಈಗ ನಮಗೆಲ್ಲರಿಗೂ ಬೇಕಾಗಿರುವುದು ಮೋಕ್ಷ. ಆ ಮೋಕ್ಷವು ದೊರೆಯಲು ಆತ್ಮಜ್ಞಾನ ಅಥವಾ ಬ್ರಹ್ಮಜ್ಞಾನವೇ ನೇರವಾದ ಸಾಧನ. ನೇರವಾಗಿ ಆತ್ಮನ ಲಕ್ಷಣಗಳನ್ನು ತಿಳಿಯುವುದಕ್ಕೆ ಮೊದಲು ತತ್ಸಂಬಂಧವಾದ ಉಳಿದ ಎಲ್ಲಾ ವಿಚಾರಗಳನ್ನು ಈ '**ಉಪೋದ್ಘಾತ**'ವೆಂಬ ಪ್ರಥಮ ಕಲಾದಲ್ಲಿ ತೆಗೆದುಕೊಂಡಿದೆ.

ಪ್ರ ೨: **ಪುರುಷಾರ್ಥ ಎಂದರೇನು?**

ಉ: ಸರ್ವ ಪುರುಷರ ಇಚ್ಛೆಗೆ ಯಾವುದು ವಿಷಯವೋ ಅದು ಪುರುಷಾರ್ಥ.

ಪ್ರ ೩: **'ಪುರುಷಾರ್ಥ' ಎಂಬ ಶಬ್ದದಲ್ಲಿರುವ 'ಪುರುಷ' ಮತ್ತು 'ಅರ್ಥ' ಎಂಬ ಪದಗಳಿಗೆ ಅರ್ಥವೇನು?**

ಉ: "ಪೂರ್ಣಂ ಅನೇನ ಸರ್ವಮಿತಿ ಪುರುಷಃ" – ಯಾರಿಂದ ಸರ್ವ ಜಗತ್ತು ತುಂಬಿದೆಯೋ ಅಂದರೆ ಯಾವನು ಪ್ರಪಂಚದ ತುಂಬಾ ವ್ಯಾಪಿ ಸಿರುವನೋ ಅವನು ಪರಮಾತ್ಮ; ಅದರಂತೆ ದೇಹದ ತುಂಬಾ ವ್ಯಾಪಿಸಿರುವ ಚೇತನಕ್ಕೆ 'ಪುರುಷ'ನೆಂದು ಹೆಸರು. ದೇಹದ ಯಾವುದೋ ಒಂದು ಭಾಗ ದಲ್ಲಿ ಅಥವಾ ಬೆನ್ನಿನಲ್ಲಿ ಹುಳು ಹರಿದಾಡಿದರೆ ತಕ್ಷಣ ಅದು ನಮಗೆ ತಿಳಿಯು ತ್ತದೆ. ಕಾಲಿಗೆ ಮುಳ್ಳು ನೆಟ್ಟರೂ ಕೂಡಲೇ ಗೊತ್ತಾಗುತ್ತದೆ. ಆದ್ದರಿಂದ ಶರೀರದಲ್ಲಿ ನಖಶಿಖ ಪರ್ಯಂತ ವ್ಯಾಪಿಸಿರುವವನೇ ಪುರುಷ. ಪುರುಷ ಎಂಬ

ಪದಕ್ಕೆ ವೇದಾದಿ ಉಪನಿಷತ್ತುಗಳಲ್ಲಿಯೂ ಸಹ 'ಪರಮಾತ್ಮ'ನೆಂದು ಅರ್ಥ ಮಾಡಿದೆ.

ಇನ್ನು 'ಅರ್ಥ'ವೆಂದರೆ ಇಚ್ಛೆ ಅಥವಾ ವಿಷಯ. ಇಲ್ಲಿ ಪುರುಷನಿಗೆ ಇಚ್ಛೆ ಇರುವುದರಿಂದ ಅವನನ್ನು 'ಜೀವ'ನೆಂದು ಕರೆಯಬಹುದು.

ಪ್ರ ೪: **ಪುರುಷನ ಇಚ್ಛೆಗಳು ಯಾವುವು ?**

ಉ: ಪುರುಷನ ಇಚ್ಛೆಗಳು ನಾಲ್ಕು: ೧ ಧರ್ಮ, ೨ ಅರ್ಥ, ೩ ಕಾಮ, ೪ ಮೋಕ್ಷ.

ಇವುಗಳಲ್ಲಿ ಧರ್ಮ, ಅರ್ಥ ಮತ್ತು ಕಾಮಗಳು ಗೌಣ ಪುರುಷಾರ್ಥ ಗಳು; ಮೋಕ್ಷವೇ ಪರಮ ಪುರುಷಾರ್ಥ.

ಪ್ರ ೫: **ಗೌಣ ಪುರುಷಾರ್ಥ ಎಂದರೇನು? ಮುಖ್ಯ ಪುರುಷಾರ್ಥ ಎಂದರೇನು? ಮತ್ತು ಅವುಗಳನ್ನು ಗೌಣ, ಮುಖ್ಯವೆಂದು ಕರೆಯಲು ಕಾರಣವೇನು ?**

ಉ: ಮೊದಲನೆಯ ಮೂರು ಅನಿತ್ಯವಾದ ಇಹಲೋಕ ಪರಲೋಕ ಸುಖಗಳನ್ನು ಕೊಡುವುದರಿಂದಲೂ ಮತ್ತು ಕಡೆಯ ಪುರುಷಾರ್ಥಕ್ಕೆ ಸಾಧನ ಪ್ರಾಯಗಳಾಗಿರುವುದರಿಂದಲೂ, ಇವುಗಳನ್ನು ಗೌಣ ಅಂದರೆ ಅಷ್ಟು ಪ್ರಾಮುಖ್ಯವಾಗಿಲ್ಲದ ಪುರುಷಾರ್ಥಗಳೆಂದು ಕರೆದಿದೆ. ಕಡೆಯದಾದ 'ಮೋಕ್ಷ'ವು ನಿತ್ಯವಾದ ಫಲವನ್ನು ಕೊಡುವುದರಿಂದಲೂ ಮತ್ತು ಧರ್ಮ, ಅರ್ಥ ಮತ್ತು ಕಾಮಗಳೆಂಬ (ಗೌಣ ಪುರುಷಾರ್ಥಗಳೆಂಬ) ಸಾಧನಗಳಿಂದ ದೊರೆಯುವ 'ಸಾಧ್ಯ' ವಸ್ತುವಾಗಿರುವುದರಿಂದಲೂ ಅದನ್ನು ಮುಖ್ಯ ಪುರುಷಾರ್ಥವೆನ್ನುತ್ತಾರೆ.

ಪ್ರ ೬: **ಚತುರ್ವಿಧ ಪುರುಷಾರ್ಥಗಳಲ್ಲಿ 'ಧರ್ಮ'ವು ಮೊದಲೂ, 'ಮೋಕ್ಷ'ವು ಅಂತ್ಯದಲ್ಲೂ ಬರಲು ಕಾರಣವೇನು ?**

ಉ: ಕಾರಣವೇನೆಂದರೆ, ಧರ್ಮ ಮಾರ್ಗದಿಂದ ಅರ್ಥವನ್ನು ಅಂದರೆ ಧನಕನಕ ವಸ್ತುವಾಹನಾದಿಗಳನ್ನು ಗಳಿಸಿ, ಮತ್ತೆ ಧರ್ಮ ಮಾರ್ಗದಿಂದಲೇ ತನ್ನ ಕಾಮನೆಗಳನ್ನು ಈಡೇರಿಸಿಕೊಳ್ಳುವವನೇ ಕೊನೆಯದಾದ ಮೋಕ್ಷಕ್ಕೆ ಅಧಿಕಾರಿಯಾಗುತ್ತಾನೆ ಎಂಬುದನ್ನು ಸೂಚಿಸಲು ಮೊದಲು ಧರ್ಮವನ್ನೂ, ಕಡೆಯಲ್ಲಿ ಮೋಕ್ಷವನ್ನೂ, ಮಧ್ಯದಲ್ಲಿ ಅರ್ಥ ಕಾಮಗಳನ್ನೂ ಇಟ್ಟಿದ್ದಾರೆ.

ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ಭಗವಂತನು "ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ" – ಸರ್ವ ಜೀವಿಗಳಲ್ಲಿರುವ, ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನಾಗಿರುವೆನು ಎಂದು ಹೇಳಿದ್ದಾನೆ. ಅಧರ್ಮ ಮಾರ್ಗದಲ್ಲಿ ಅಂದರೆ ಪರರಿಗೆ ಹಿಂಸೆ ಕೊಟ್ಟು ಅನ್ಯಾಯದಿಂದ ಹಣ ಸಂಪಾದಿಸಿ, ಅದನ್ನು ತನ್ನ ಮನಸ್ಸ್ವೇಚ್ಛೆಯಾಗಿ ದುಷ್ಕಾರ್ಯಗಳಿಗೆ ಉಪಯೋಗಿಸಿ, ಶಾಸ್ತ್ರನಿಷಿದ್ಧವಾದ ಕಾಮನೆಗಳಿಂದ ಕೂಡಿದವನು ಮೋಕ್ಷಕ್ಕೆ ಅಧಿಕಾರಿಯಾಗಲಾರನು.

**ಪ್ರ ೭ : ಈ ಪುರುಷಾರ್ಥಗಳಿಗೆ ಇರುವ ಮತ್ತೊಂದು ಹೆಸರೇನು ?**

ಉ : ಗೌಣ ಪುರುಷಾರ್ಥಗಳಿಗೆ "ಪ್ರೇಯಸ್ಸೆ"ಂತಲೂ, ಮುಖ್ಯ ಪುರುಷಾರ್ಥಕ್ಕೆ "ಶ್ರೇಯಸ್ಸೆ"ಂತಲೂ ಉಪನಿಷತ್ತುಗಳಲ್ಲಿ ಕರೆದಿದೆ. ಪ್ರೇಯಸ್ಸೆಂದರೆ ರುಚಿಕರವಾದುದು. ಶ್ರೇಯಸ್ಸೆಂದರೆ ಹಿತಕರವಾದುದು.

ಉದಾಹರಣೆ : ಒಬ್ಬ ಜ್ವರ ಪೀಡಿತನಾದ ರೋಗಿಗೆ ಮೊಸರು ರುಚಿಕರ, ಔಷಧಿ ಹಿತಕರವಾಗಿದೆ. ಆ ರೋಗಿಯು ಹಿತಕರವಾದ ಔಷಧಿಯು ಕಹಿಯಾಗಿದೆಯೆಂದು ಕುಡಿಯದೆ, ಮೊಸರು ಬಾಯಿಗೆ ರುಚಿಯಾಗಿದೆ ಎಂದು ಅದನ್ನು ಕುಡಿದುಬಿಟ್ಟರೆ, ಅವನ ರೋಗವು ಮತ್ತಷ್ಟು ಹೆಚ್ಚಾಗಿ ಬಹಳ ದುಃಖ ಅನುಭವಿಸಬೇಕಾಗುತ್ತದೆ. ಕಹಿಯಾಗಿದ್ದರೂ, ಔಷಧಿಯನ್ನು ಸೇವಿಸಿದರೆ ಅದು ಅವನ ರೋಗವನ್ನು ನಿವಾರಣೆ ಮಾಡಿ ಆನಂದವನ್ನುಂಟು ಮಾಡುತ್ತದೆ.

ಇದರಂತೆ ಭವರೋಗ ಪೀಡಿತನಾದ ಜೀವನಿಗೆ ಪಂಚ ವಿಷಯ ಸುಖವು ಮೊಸರಿನಂತೆ ರುಚಿಕರವಾಗಿದೆ. ಪಾರಮಾರ್ಥ ವಿಚಾರವು ಔಷಧಿಯಂತೆ ಹಿತಕರವಾಗಿದೆ. ಅನಿತ್ಯವಾದ ಇಹಲೋಕ ಪರಲೋಕ ಸುಖವು ಮೊದಲು ಸುಖ ಕೊಡುವಂತೆ ಕಂಡರೂ ಪರಿಣಾಮದಲ್ಲಿ ದುಃಖವನ್ನೇ ಕೊಡುತ್ತದೆ. ಆತ್ಮ ವಿಚಾರವು ಮೊದಲು ಔಷಧದಂತೆ ಕಹಿಯಾಗಿ ಕಂಡರೂ ಪರಿಣಾಮದಲ್ಲಿ ಪರಮ ಸುಖವನ್ನೇ ಕೊಡುತ್ತದೆ – ಎಂಬುದಾಗಿ ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯದಲ್ಲಿ ಭಗವಂತನು ತಿಳಿಸಿ, ಮತ್ತೆ "ಯೇಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವತೇ । ಆದ್ಯಂತವಂತಃ ಕೌಂತೇಯ

ನತೇಷು ರಮತೇ ಬುಧಃ ||" – ಹೇ ಕೌಂತೇಯ! ವಿಷಯ ಮತ್ತು ಇಂದ್ರಿಯಗಳ ಸಂಬಂಧದಿಂದ ಉಂಟಾಗುವ ಸಮಸ್ತ ಭೋಗಗಳೂ ದುಃಖಕ್ಕೆ ಕಾರಣವಾಗಿವೆ ಮತ್ತು ಉತ್ಪತ್ತಿ ವಿನಾಶವುಳ್ಳವುಗಳಾಗಿವೆ. ಹೀಗೆ ತಿಳಿದಿರುವುದರಿಂದಲೇ ಜ್ಞಾನಿಯಾದವನು ಅವುಗಳಲ್ಲಿ ರಮಿಸುವುದಿಲ್ಲ ಎಂದು ೫ನೇ ಅಧ್ಯಾಯದ ೨೨ನೇ ಶ್ಲೋಕದಲ್ಲಿ ಹೇಳಿರುತ್ತಾನೆ.

ಅನಾದಿ ಕಾಲದಿಂದ ಅಂಟಿಕೊಂಡು ಬಂದಿರುವ ಜನನ ಮರಣ ರೂಪ ಈ ಸಂಸಾರವೆಂಬ ದೀರ್ಘರೋಗಕ್ಕೆ ಆತ್ಮವಿಚಾರವೇ ದಿವ್ಯೌಷಧವೆಂದು ಶ್ರೀರಾಮಚಂದ್ರನನ್ನು ಕುರಿತು ವಸಿಷ್ಠ ಮಹರ್ಷಿಗಳು ಅಪ್ಪಣೆ ಮಾಡಿದ್ದಾರೆ. ಆದ್ದರಿಂದ ಮುಮುಕ್ಷುಗಳಾದವರೆಲ್ಲರೂ ಪ್ರೇಯಸ್ಸೆನಿಸಿಕೊಂಡಿರುವ ಗೌಣ ಪುರುಷಾರ್ಥವನ್ನು ಸಂಪಾದಿಸುವುದರಲ್ಲೇ ಆಯುಷ್ಯವನ್ನು ಕಳೆಯದೆ, ಶ್ರೇಯಸ್ಸನ್ನು ಪಡೆದುಕೊಳ್ಳುವುದಕ್ಕಾಗಿ ಐಹಿಕ ಸುಖವನ್ನು ತ್ಯಾಗಮಾಡಿ ಸದಾ ಆತ್ಮವಿಚಾರವನ್ನು ಮಾಡುತ್ತಿರಬೇಕು.

ಪ್ರ ೮ : **ಪುರುಷರೆಲ್ಲರೂ ಕೋರುವ ವಿಷಯ ಯಾವುದು ?**

ಉ : ಸರ್ವ ದುಃಖಗಳ ಆತ್ಯಂತಿಕ ನಿವೃತ್ತಿ ಮತ್ತು ಪರಮಾನಂದ (ಶಾಶ್ವತಾನಂದ) ಪ್ರಾಪ್ತಿಯನ್ನೇ ಪುರುಷರೆಲ್ಲರೂ ಕೋರುತ್ತಾರೆ. ಇದನ್ನೇ ಮೋಕ್ಷವೆಂದು ಕರೆಯುತ್ತಾರೆ.

ಪ್ರ ೯ : **ಸರ್ವ ದುಃಖಗಳ ಆತ್ಯಂತಿಕ ನಿವೃತ್ತಿ ಎಂದರೇನು ?**

ಉ : ಅಜ್ಞಾನ ಸಹಿತ ಜನನ ಮರಣ ರೂಪ ಸಂಸಾರವೇ ಸರ್ವ ದುಃಖಗಳು. ನನ್ನಲ್ಲಿ ಮೂರು ಕಾಲದಲ್ಲಿಯೂ ಇಲ್ಲವೆಂಬುದಾಗಿ ಅದರ ಮಿಥ್ಯಾತ್ವ ನಿಶ್ಚಯವೇ ಆತ್ಯಂತಿಕ ನಿವೃತ್ತಿ.

ಪ್ರ ೧೦ : **ದುಃಖಕ್ಕೆ ಮೂಲಕಾರಣ ಯಾವುದು ಮತ್ತು ಹೇಗೆ?**

ಉ : ದುಃಖಕ್ಕೆ ಮೂಲ ಕಾರಣ ಅಜ್ಞಾನ. ಹೇಗೆಂದರೆ, ನಮಗೆ ದುಃಖದ ಅನುಭವವಾಗುವುದು ದೇಹದ ಮೂಲಕ. ೧. ಈ ದೇಹಕ್ಕೆ ಕಾರಣ ಜನ್ಮ. ೨. ಜನ್ಮಕ್ಕೆ ಕಾರಣ ಪುಣ್ಯ – ಪಾಪ ಕರ್ಮಗಳು. ೩. ಈ ಕರ್ಮಗಳಿಗೆ ಕಾರಣ ರಾಗದ್ವೇಷಗಳು. ೪. ರಾಗದ್ವೇಷಗಳಿಗೆ ಅನುಕೂಲ ಪ್ರತಿಕೂಲ ಬುದ್ಧಿಯೇ ಕಾರಣ. ೫. ಇದಕ್ಕೆ ಕಾರಣ ದ್ವೈತ ಬುದ್ಧಿ.

೬. ದ್ವೈತ ಬುದ್ಧಿಗೆ ಅಧ್ಯಾಸವೇ ಕಾರಣ. ೭. ಅಧ್ಯಾಸಕ್ಕೆ ಅಜ್ಞಾನವೇ ಕಾರಣ. ೮. ಆದುದರಿಂದ ದುಃಖಕ್ಕೆ ಅಜ್ಞಾನವೇ ಬೇರು.

ಪ್ರ ೧೧ : **ನಿವೃತ್ತಿಯ ಸ್ವರೂಪವೇನು ?**

ಉ : ಮಿಥ್ಯಾತ್ವ ನಿಶ್ಚಯವೇ ನಿವೃತ್ತಿಯ ಸ್ವರೂಪ. ನಿವೃತ್ತಿ ಎರಡು ವಿಧ: ೧. ತಾತ್ಕಾಲಿಕ ನಿವೃತ್ತಿ. ೨. ಆತ್ಯಂತಿಕ ನಿವೃತ್ತಿ.

೧. ತಾತ್ಕಾಲಿಕ ನಿವೃತ್ತಿ ಎಂದರೆ ಕಾರಣವು ಹಾಗೇ ಇದ್ದು ಕಾರ್ಯವು ಮಾತ್ರ ನಾಶವಾಗುವುದು ಅಥವಾ ಕಾರ್ಯವು ಕಾರಣದಲ್ಲಿ ಲಯಿಸುವುದು.

೨. ಆತ್ಯಂತಿಕ ನಿವೃತ್ತಿ ಎಂದರೆ ಕಾರಣ ಸಹಿತ ಕಾರ್ಯವು ನಾಶ ವಾಗುವುದು.

ಇದಕ್ಕೆ ಉದಾಹರಣೆ: ಒಂದು ಸಕ್ಕರೆ ಗೊಂಬೆ ಇದೆ ಸಕ್ಕರೆ ಕಾರಣ, ಗೊಂಬೆ ಎಂಬ ಆಕಾರ ಕಾರ್ಯ. ಆ ಗೊಂಬೆ ಕೆಳಗೆ ಬಿದ್ದು ಒಡೆದುಹೋದರೆ ಅದು ತಾತ್ಕಾಲಿಕ ನಿವೃತ್ತಿ. ಹೇಗೆಂದರೆ, ಕಾರಣವಾದ ಸಕ್ಕರೆ ಹಾಗೇ ಉಳಿದಿರುವುದರಿಂದ ಅದರಿಂದ ಮತ್ತೇನಾದರೂ ಕಾರ್ಯ ಮಾಡಬಹುದು. ಆ ಸಕ್ಕರೆ ಗೊಂಬೆಯನ್ನು ಕಾಫಿಗೋ, ಪಾನಕಕ್ಕೋ ಹಾಕಿ ಕುಡಿದುಬಿಟ್ಟರೆ ಅದು ಆತ್ಯಂತಿಕ ನಿವೃತ್ತಿ.

ಇದರಂತೆ ಪ್ರತಿದಿನವೂ ನಮಗೆ ಸುಷುಪ್ತಿಯಲ್ಲಿ ಅಂದರೆ ಗಾಢ ನಿದ್ರೆ ಯಲ್ಲಿ ನಮ್ಮ ಎಲ್ಲಾ ದುಃಖಗಳ ತಾತ್ಕಾಲಿಕ ನಿವೃತ್ತಿಯಾಗುತ್ತದೆ. ಕಾರ್ಯ ವಾದ ಈ ದುಃಖವು ಕಾರಣವಾದ ಅಜ್ಞಾನದಲ್ಲಿ ಲಯಿಸಿರುತ್ತದೆ. ಮತ್ತೆ ಎದ್ದ ಕೂಡಲೇ ಬಂದು ಗಂಟುಬೀಳುತ್ತದೆ. ಆದುದರಿಂದ ಇದು ತಾತ್ಕಾಲಿಕ ನಿವೃತ್ತಿ. ಜ್ಞಾನ ಕಾಲದಲ್ಲಿ, ಮೂಲ ಕಾರಣವಾದ ಅಜ್ಞಾನವೇ ನಾಶವಾಗು ವುದರಿಂದ ಕಾರಣ ಸಹಿತ ಸಮಸ್ತ ದುಃಖಗಳೂ ಇಲ್ಲವಾಗುತ್ತವೆ; ಇದು ಆತ್ಯಂತಿಕ ನಿವೃತ್ತಿ. ದುಃಖಗಳ ಆತ್ಯಂತಿಕ ನಿವೃತ್ತಿ ಅಂದರೆ ಅದು ಒಮ್ಮೆ ನಮ್ಮನ್ನು ಬಿಟ್ಟು ಹೋದರೆ ಮತ್ತೆ ಯಾವಾಗಲೂ ನಮಗೆ ಅದರ ಭೇಟಿ ಯಾಗಬಾರದು. ಇಂತಹ ಆತ್ಯಂತಿಕ ದುಃಖದ ನಿವೃತ್ತಿಯನ್ನು ಎಲ್ಲರೂ ಬಯಸುತ್ತಾರೆಯೇ ಹೊರತು, ಈ ದಿನ ಹೋಗಿ ನಾಳೆ ಮತ್ತೆ ದುಃಖ ಬರಲಿ ಎಂದು ಯಾರೂ ಬಯಸುವುದಿಲ್ಲ. ಬಯಸದಿದ್ದರೆ ಮಾತ್ರ ಸಾಲದು ;

ಪ್ರಯತ್ನಮಾಡಿ ಗುರುಕೃಪೆ ಸಂಪಾದಿಸಿ, ದುಃಖಕ್ಕೆ ತಾಯಿಬೇರಾಗಿರುವ ಅಜ್ಞಾನವನ್ನು ಕಳೆದುಕೊಳ್ಳಬೇಕು.

ಪ್ರ ೧೨ : **ಪರಮಾನಂದ ಪ್ರಾಪ್ತಿಯ ಸ್ವರೂಪವೇನು ?**

ಉ : ಪರಮ ಪ್ರೇಮಕ್ಕೆ ವಿಷಯವಾದುದೇ ಪರಮಾನಂದ. ಅದನ್ನು ಪಡೆಯುವುದೇ ಪ್ರಾಪ್ತಿ. ಹೀಗೆ ನಮ್ಮ ಅದ್ವೈತ ಮತಾಚಾರ್ಯರು ಸರ್ವ ದುಃಖಗಳ ಆತ್ಯಂತಿಕ ನಿವೃತ್ತಿ, ಪರಮಾನಂದ ಪ್ರಾಪ್ತಿಯೇ ಮೋಕ್ಷವೆಂಬು ದಾಗಿ ಅಭಿಪ್ರಾಯ ಪಟ್ಟಿದ್ದಾರೆ.

ಪ್ರ ೧೩ : **ಪ್ರಾಪ್ತಿಗಳು ಎಷ್ಟು ವಿಧ? ಮೋಕ್ಷವು ಯಾವ ವಿಧಕ್ಕೆ ಸೇರಿದ್ದು?**

ಉ : ಪ್ರಾಪ್ತಿಗಳು ಎರಡು ವಿಧ : ೧. ಅಪ್ರಾಪ್ತರೂಪ ಪ್ರಾಪ್ತಿ, ೨. ಪ್ರಾಪ್ತರೂಪ ಪ್ರಾಪ್ತಿ.

ನಮ್ಮಲ್ಲಿ 'ವಿಚಾರ ಚಂದ್ರೋದಯ' ಗ್ರಂಥವು ಮೊದಲು ಇರಲಿಲ್ಲ. ಅದನ್ನು ಆಶ್ರಮಕ್ಕೆ ಹೋಗಿ ತೆಗೆದುಕೊಂಡೆವು. ಇದು ಅಪ್ರಾಪ್ತರೂಪ ಪ್ರಾಪ್ತಿ. ಮೊದಲು ನಮ್ಮ ಬಳಿ ಇಲ್ಲದ್ದನ್ನು ಪ್ರಯತ್ನಮಾಡಿ ಪಡೆದು ಕೊಳ್ಳುವುದೇ ಅಪ್ರಾಪ್ತರೂಪ ಪ್ರಾಪ್ತಿ.

ನಮ್ಮ ಬಳಿ ಇದ್ದ ಒಂದು ಪೆನ್ನನ್ನು ಅಂಗಿಗೆ ಸಿಕ್ಕಿಸಿಕೊಂಡಿದ್ದೆವು. ಆದರೆ ಮರೆತುಬಿಟ್ಟು ಎಲ್ಲಾ ಕಡೆ ಹುಡುಕಿ ಹುಡುಕಿ, ಅಯ್ಯೋ ! ನನ್ನ ಪೆನ್ನು ಕಳೆದು ಹೋಯಿತು ಎಂದು ವ್ಯಸನಪಡುತ್ತಿರುವಾಗ ನಮ್ಮ ಒಬ್ಬ ಸ್ನೇಹಿತರು ಬಂದು ವಿಚಾರಿಸಿ, ನಮ್ಮ ಅಂಗಿಯ ಕಡೆ ನೋಡಿ, ಅಂಗಿಗೆ ಪೆನ್ನನ್ನು ಸಿಕ್ಕಿಸಿಕೊಂಡು ಹೊರಗೆಲ್ಲಾ ಹುಡುಕುತ್ತಿದ್ದೀರಲ್ಲಾ! ಎಂದಾಗ, ಓ, ನನ್ನ ಪೆನ್ನು ಸಿಕ್ಕಿತು ಎಂದು ಆನಂದಪಡುತ್ತೇವೆ. ಇದು ಪ್ರಾಪ್ತರೂಪ ಪ್ರಾಪ್ತಿ. ಅಂದರೆ ಮೊದಲೇ ನಮ್ಮಲ್ಲಿದ್ದ ವಸ್ತುವನ್ನು ಮರೆತು ನಂತರ ಅದನ್ನು ನೆನಪಿಸಿಕೊಂಡು ಸಿಕ್ಕಿತೆನ್ನುವುದೇ ಪ್ರಾಪ್ತರೂಪ ಪ್ರಾಪ್ತಿ.

ಮೋಕ್ಷವು ಈ ಪ್ರಾಪ್ತರೂಪ ಪ್ರಾಪ್ತಿಗೆ ಸೇರಿದ್ದು. ಮೋಕ್ಷವೆಂದರೆ ನಮ್ಮ ಆತ್ಮ ಸ್ವರೂಪ. ಇದು ಯಾರಲ್ಲಿಲ್ಲ? ಎಲ್ಲರಲ್ಲಿಯೂ ಮೊದಲೇ ಸಿದ್ಧ ವಾಗಿದೆ. ಆದರೂ ಅಜ್ಞಾನದಿಂದ ಮರೆವುಂಟಾಗಿ ನಾನಾರೋ ತಿಳಿಯದು ಎನ್ನುತ್ತೇವೆ. ಸದ್ಗುರುವು ನಮ್ಮ ಸ್ವರೂಪವನ್ನು ನೆನಪಿಸಿಕೊಟ್ಟಾಗ ಅರ್ಜು

ನನು ಹೇಳಿದಂತೆ ಸ್ಮೃತಿರ್ಲಬ್ಧಾ – "ನನಗೆ ಈಗ ನಾನಾರೆಂಬುದು ನೆನಪಿಗೆ ಬಂದಿತು" ಎಂದು ಹೇಳಬೇಕಾಗುತ್ತದೆ. ಆದುದರಿಂದ ಮೋಕ್ಷವೆಂದರೆ ಹೊರಗಿನಿಂದ ಹೊಸದಾಗಿ ಪಡೆಯುತಕ್ಕ ವಸ್ತುವಲ್ಲ. ಅದು ಎಲ್ಲರ ಜನ್ಮ ಸಿದ್ಧವಾದ ಸ್ವತ್ತಾಗಿದೆ. ಆದುದರಿಂದ ಅದು ಪ್ರಾಪ್ತರೂಪ ಪ್ರಾಪ್ತಿ.

ಪ್ರ ೧೪ : **ಮೋಕ್ಷದ ವಿಷಯದಲ್ಲಿ ಮತಾಂತರದವರ ಅಭಿಪ್ರಾಯವೇನು ?**

ಉ : ಮತಾಂತರದವರು ಲೋಕಾಂತರ ಗಮನವೇ ಮೋಕ್ಷವೆಂಬುದಾಗಿಯೂ, ಅದು ನಾಲ್ಕು ವಿಧವಾಗಿದೆ ಎಂದೂ ಅಭಿಪ್ರಾಯ ಪಡುತ್ತಾರೆ. ಅವು ಯಾವುವೆಂದರೆ : ೧. ಸಾಲೋಕ್ಯ, ೨. ಸಾಮಿಪ್ಯ, ೩. ಸಾರೂಪ್ಯ, ೪. ಸಾಯುಜ್ಯ.

(೧) ಸಾಲೋಕ್ಯವೆಂದರೆ ರಾಜನಿರುವ ಊರಿನಲ್ಲಿ ಪ್ರಜೆಗಳಿದ್ದಂತೆ, ತನ್ನ ಇಷ್ಟದೇವತೆಯ ಲೋಕದಲ್ಲಿ ಅಂದರೆ ವಿಷ್ಣುಲೋಕ, ಶಿವಲೋಕ ಇತ್ಯಾದಿಗಳಲ್ಲಿ ವಾಸಮಾಡುವುದು.

(೨) ಸಾಮಿಪ್ಯವೆಂದರೆ ರಾಜನ ಬಳಿ ಅವನ ಅಧಿಕಾರಿಗಳಿದ್ದಂತೆ, ತನ್ನ ಇಷ್ಟದೇವತೆಯ ಬಳಿ ಇಂದ್ರನೋ ಚಂದ್ರನೋ ಆಗಿರುವುದು.

(೩) ಸಾರೂಪ್ಯವೆಂದರೆ ರಾಜನ ಬಳಿ ಆತನ ಚಿಕ್ಕ ಮಕ್ಕಳಿದ್ದಂತೆ, ತನ್ನ ಇಷ್ಟದೇವತೆಯ ಬಳಿ ಇರುವುದು.

(೪) ಸಾಯುಜ್ಯವೆಂದರೆ ರಾಜನ ಬಳಿ ಯುವರಾಜನಿದ್ದಂತೆ, ತನ್ನ ಇಷ್ಟದೇವತೆಯ ಬಳಿ ಅವನ ಸ್ವರೂಪವನ್ನೇ ಪಡೆದುಕೊಂಡಿರುವುದು. ಈ ರೀತಿ ಮತಾಂತರದವರು ಮೋಕ್ಷವು ನಾಲ್ಕು ವಿಧವಾಗಿದೆ ಎನ್ನುತ್ತಾರೆ.

ಪ್ರ ೧೫ : **ಮತಾಂತರದವರು ಹೇಳುವ ಈ ಮೋಕ್ಷ ಸ್ವರೂಪದಲ್ಲಿ ಕಂಡುಬರುವ ದೋಷಗಳೇನು ?**

ಉ : ಮತಾಂತರದವರು ಹೇಳುವ ಈ ಮೋಕ್ಷ ಸ್ವರೂಪದಲ್ಲಿ ಗಮನಾಗಮನ ಅಥವಾ ಪುನರಾವೃತ್ತಿ ಎಂಬ ದೋಷವಿದೆ. ಇದಕ್ಕೆ ಗೀತೆಯ ೮ನೇ ಅಧ್ಯಾಯದಲ್ಲಿ ''ಆಬ್ರಹ್ಮಭುವನಾಲ್ಲೋಕಾಃ ಪುನರಾವೃತ್ತಿನೋಽರ್ಜುನ" ಎಂಬುದಾಗಿ ಪ್ರಮಾಣವಿದೆ. ಆದರೆ ವೇದಾಂತ ಮತದವರು ಗಮನಾಗಮನ ರಹಿತವಾದ ಸ್ವಸ್ವರೂಪಸ್ಥಿತಿಯೇ ಮೋಕ್ಷವೆಂಬುದಾಗಿ ಹೇಳುತ್ತಾರೆ.

ಪ್ರ ೧೬ : **ಮೋಕ್ಷಕ್ಕೆ ನೇರವಾದ ದಾರಿ ಯಾವುದು ?**

ಉ : ಮೋಕ್ಷಕ್ಕೆ ಬ್ರಹ್ಮಜ್ಞಾನವೊಂದೇ ನೇರವಾದ ದಾರಿ. ಇದಕ್ಕೆ "ಜ್ಞಾನಾದೇವತು ಕೈವಲ್ಯಂ" ಎಂಬುದಾಗಿ ಶೃತಿ ಪ್ರಮಾಣವೂ, "ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ" ಎಂಬುದಾಗಿ ಸ್ಮೃತಿ ಪ್ರಮಾಣವೂ ಸಹ ಇದೆ.

ಪ್ರ ೧೭ : **ಮೋಕ್ಷವು ಕರ್ಮೋಪಾಸನೆಗಳಿಂದ ಏಕೆ ದೊರೆಯುಲಾರದು ?**

ಉ : ಕರ್ಮೋಪಾಸನೆಗಳಿಂದ ದೊರೆಯುವ ಫಲಗಳು ಅನಿತ್ಯವಾಗಿವೆ. ಮೋಕ್ಷವು ಅನಿತ್ಯವಾದುದಲ್ಲ. ಆದ್ದರಿಂದ ನಿತ್ಯವಾದ ಮೋಕ್ಷವು ಅನಿತ್ಯವಾದ ಕರ್ಮ–ಉಪಾಸನೆಗಳಿಂದ ದೊರೆಯತಕ್ಕದ್ದಲ್ಲ. ಮತ್ತು ಮೋಕ್ಷವು ಹೊಸದಾಗಿ ಸಂಪಾದಿಸುವುದಾಗಿದ್ದರೆ ಕರ್ಮ–ಉಪಾಸನೆಯು ಅಗತ್ಯವಿದ್ದಿತು. ಆದರೆ ಅದು ನಿತ್ಯ ಸಿದ್ಧವಾಗಿರುವುದರಿಂದ ಕೇವಲ ಜ್ಞಾನ ಅಥವಾ ತಿಳುವಳಿಕೆಯಿಂದ ಅದನ್ನು ಸಂಪಾದಿಸಬಹುದು. ಆದರೆ ಕರ್ಮೋಪಾಸನೆಗಳಿಂದ ಚಿತ್ತಶುದ್ಧಿ ಹಾಗೂ ಚಿತ್ತೈಕಾಗ್ರತೆ ಉಂಟಾಗುವುದರಿಂದ ಅವು ಮೋಕ್ಷಕ್ಕೆ ನೇರವಾದ ಸಾಧನವಾಗದಿದ್ದರೂ ಪರಂಪರಾ ಸಾಧನಗಳಾಗಿವೆ.

ಪ್ರ ೧೮ : **ಕರ್ಮಗಳ ವಿಚಾರವೇನು ?**

ಉ : ಕರ್ಮಗಳು ಸಕಾಮ ಕರ್ಮಗಳೆಂದೂ ನಿಷ್ಕಾಮ ಕರ್ಮಗಳೆಂದೂ ಎರಡು ವಿಧ. ಸಕಾಮ ಕರ್ಮಗಳಿಂದ ಸ್ವರ್ಗಾದಿ ಪರಲೋಕ ಪ್ರಾಪ್ತಿಯಾಗುವುದೇ ವಿನಹ ಚಿತ್ತಶುದ್ಧಿಯಾಗುವುದಿಲ್ಲ. ಗೀತೆಯಲ್ಲಿ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂದು ಹೇಳಿದೆ. ಈ ಕಾರಣದಿಂದ ಕರ್ತೃತ್ವ ಬುದ್ಧಿ, ಫಲಾಪೇಕ್ಷೆರಹಿತವಾದ ನಿಷ್ಕಾಮ ಕರ್ಮಗಳನ್ನು ಆಚರಿಸುವುದರಿಂದ ಮೋಕ್ಷಕ್ಕೆ ಸಾಧನವಾದ ಚಿತ್ತಶುದ್ಧಿ ಉಂಟಾಗುತ್ತದೆ.

ಪ್ರ ೧೯ : **ಉಪಾಸನೆಯ ವಿಚಾರವೇನು ?**

ಉ : ಉಪಾಸನೆಯಲ್ಲಿಯೂ ಮುಖ್ಯವಾಗಿ ಎರಡು ವಿಧ :

(೧) ಪ್ರತೀಕೋಪಾಸನೆ : ಎಂದರೆ ತನ್ನ ಇಷ್ಟದೇವತೆಯನ್ನು ತನ್ನಗಿಂತ ಬೇರೆ ಎಂದು ತಿಳಿದು ಉಪಾಸನೆ ಮಾಡುವುದು. ಇದರ ಫಲವೂ ಸಹ ತನ್ನ ಇಷ್ಟದೇವತೆಯ ಲೋಕಕ್ಕೆ ಹೋಗುವುದು ಇತ್ಯಾದಿ.

(೨) ಅಹಂಗ್ರಹೋಪಾಸನೆ : ಎಂದರೆ ತನ್ನ ಇಷ್ಟದೇವತೆಯು ತನ್ನ

ಆತ್ಮ ಸ್ವರೂಪವೇ ಎಂದು ತಿಳಿದು ಅಭೇದ ಬುದ್ಧಿಯಿಂದ ಉಪಾಸನೆ ಮಾಡುವುದು. ಇದರ ಫಲವೇ ಚಿತ್ತೈಕಾಗ್ರತೆ.

**ಪ್ರ ೨೦ : ಅಂತಃಕರಣದಲ್ಲಿರುವ ದೋಷಗಳೆಷ್ಟು?**

**ಉ :** ಸ್ಥೂಲ ಶರೀರದಲ್ಲಿ ಹೇಗೆ ವಾತ, ಪಿತ್ತ, ಕಫಗಳೆಂಬ ಮೂರು ದೋಷಗಳಿರುತ್ತವೆಯೋ, ಹಾಗೆಯೇ ಸೂಕ್ಷ್ಮ ಶರೀರ ಅಥವಾ ಅಂತಃಕರಣ ದಲ್ಲಿಯೂ ಮಲ, ವಿಕ್ಷೇಪ ಮತ್ತು ಆವರಣಗಳೆಂಬ ಮೂರು ದೋಷಗಳಿರು ತ್ತವೆ. ಅವುಗಳ ಸ್ವರೂಪವೇನೆಂದರೆ—ಮಲದೋಷವೆಂದರೆ ಜನ್ಮ ಜನ್ಮಾಂತರ ಗಳ ಪಾಪ ಸಂಸ್ಕಾರ. ವಿಕ್ಷೇಪ ದೋಷವೆಂದರೆ ಮನಸ್ಸಿನ ಚಾಂಚಲ್ಯತೆ. ಆವರಣ ದೋಷವೆಂದರೆ ನಾನಾರೋ ತಿಳಿಯದು ಎಂಬ ರೂಪದಲ್ಲಿರುವ ನಮ್ಮ ಸ್ವರೂಪದ ಅಜ್ಞಾನ. ಇವುಗಳನ್ನು ಗುರುತಿಸುವ ಬಗೆ ಹೇಗೆಂದರೆ— ಶ್ರವಣ ಕಾಲದಲ್ಲಿ ನಮ್ಮ ಮನಸ್ಸು ಅಲ್ಲಿ ಹೇಳುವ ಅರ್ಥದ ಆಕಾರವಾಗದೆ, ಅನ್ಯ ವಿಷಯಾಕಾರವಾಗುವುದೇ ಮಲದೋಷ. ಶ್ರವಣದಲ್ಲಿ ಕುಳಿತಾಗ ಇದ್ದಲ್ಲೇ ಮನಸ್ಸು ಚಂಚಲವಾಗುವುದೇ ವಿಕ್ಷೇಪ ದೋಷ.

**ಪ್ರ ೨೧ : ಅಂತಃಕರಣದ ದೋಷಗಳು ಯಾವ ಸಾಧನೆಯಿಂದ ನಿವೃತ್ತಿಯಾಗುತ್ತವೆ ? ಅದರಿಂದ ಏನು ಪ್ರಯೋಜನ ?**

ಉ : ನಿಷ್ಕಾಮ ಕರ್ಮದಿಂದ ಮಲದೋಷದ ನಿವೃತ್ತಿಯೂ, ಅಹಂ ಗ್ರಹೋಪಾಸನೆಯಿಂದ ಮಲದೋಷ, ವಿಕ್ಷೇಪ ದೋಷಗಳೆರಡೂ, ವೇದಾಂತ ಶ್ರವಣದಿಂದ ಮಲ, ವಿಕ್ಷೇಪ, ಆವರಣವೆಂಬ ಮೂರು ದೋಷಗಳೂ ನಿವೃತ್ತಿ ಯಾಗುತ್ತವೆ. ಹೀಗೆ ಶುದ್ಧವಾದ ಅಂತಃಕರಣವೆಂಬ ಭೂಮಿಯಲ್ಲಿ ಬ್ರಹ್ಮ ಜ್ಞಾನವೆಂಬ ಬೆಳೆ ಹುಲುಸಾಗಿ ಬೆಳೆಯುತ್ತದೆ. ಕನ್ನಡಿಯ ಮೇಲೆ ಕೊಳೆ, ಧೂಳು ತುಂಬಿದ್ದರೆ ಅದು ಕನ್ನಡಿಯ ಮಲದೋಷ. ಆಗ ನಮ್ಮ ಮುಖ ಅದರಲ್ಲಿ ಸರಿಯಾಗಿ ಕಾಣಿಸುವುದಿಲ್ಲ. ಒಂದು ಬಟ್ಟೆಯಿಂದ ಚೆನ್ನಾಗಿ ಒರೆಸಿ ಬಿಟ್ಟರೆ ಕನ್ನಡಿಯ ಮಲದೋಷ ಹೋಗುತ್ತದೆ. ನಂತರ ಅದು ಅಲ್ಲಾಡು ತ್ತಿದ್ದರೆ ಆಗಲೂ ಸಹ ನಮ್ಮ ಮುಖ ಸರಿಯಾಗಿ ಕಾಣಿಸಲಾರದು. ಇದು ಕನ್ನಡಿಯ ವಿಕ್ಷೇಪ ದೋಷ. ಕನ್ನಡಿಯ ಮೇಲೆ ಒಂದು ಬಟ್ಟೆ ಮುಚ್ಚಿ ಬಿಟ್ಟರೆ ಅದು ಆವರಣ ದೋಷ. ಕನ್ನಡಿ ಶುದ್ಧವಾಗಿರಬೇಕು, ಸ್ಥಿರವಾಗಿರ ಬೇಕು, ಮತ್ತು ಯಾವ ಆವರಣದಿಂದಲೂ ಮರೆಯಾಗಿರಬಾರದು. ಆಗಲೇ ನಮ್ಮ ಮುಖದ ಪ್ರತಿಬಿಂಬ ಅದರಲ್ಲಿ ಸರಿಯಾಗಿ ಬೀಳಲು ಸಾಧ್ಯ.

ಇದರಂತೆ, ನಮ್ಮ ಅಂತಃಕರಣವೂ ಒಂದು ಕನ್ನಡಿ. ಹೊರಗಿನ ಕನ್ನಡಿ ಮಣ್ಣಿನಿಂದಾಗಿದ್ದರೆ, ಒಳಗಿನ ಈ ಕನ್ನಡಿಯು ಈಶ್ವರನು ತನ್ನ ಮುಖವನ್ನು ನೋಡಿಕೊಳ್ಳಲು ಮಾಡಿಕೊಂಡಿರುವ ಮಾಯೆಯಿಂದಾದ ಕನ್ನಡಿ. ಈ ಕನ್ನಡಿಯು ಮಲ, ವಿಕ್ಷೇಪ, ಆವರಣಗಳೆಂಬ ಮೂರು ದೋಷ ಗಳನ್ನೂ ಕಳೆದುಕೊಂಡರೆ ಆಗ ಆತ್ಮನ ಆನಂದರೂಪವು ಅದರಲ್ಲಿ ಪ್ರತಿಬಿಂಬಿತ ವಾಗಿ ತನ್ಮೂಲಕ ನಾನು ಆನಂದ ಸ್ವರೂಪನೆಂಬ ಆತ್ಮನ ಯಥಾರ್ಥ ಜ್ಞಾನ ಉಂಟಾಗುತ್ತದೆ. ಆದುದರಿಂದ ಮಲವಿಕ್ಷೇಪ ದೋಷಗಳನ್ನು ಕರ್ಮ ಉಪಾಸನೆಗಳಿಂದ ನಿವಾರಿಸಿಕೊಂಡು, ಆವರಣ ದೋಷವನ್ನು ಬ್ರಹ್ಮಜ್ಞಾನ ದಿಂದಲೇ ಕಳೆದುಕೊಳ್ಳಬೇಕು.

ಪ್ರ ೨೨ : **ಬ್ರಹ್ಮಜ್ಞಾನವೆಂದರೇನು ? ಅದು ಎಷ್ಟು ವಿಧ ?**

ಉ : ತನ್ನ ಸ್ವರೂಪವನ್ನು ಇದ್ದಕ್ಕಿದ್ದಂತೆ ತಿಳಿಯುವುದೇ ಬ್ರಹ್ಮಜ್ಞಾನ. ಇದು ಎರಡು ವಿಧ :

(೧) ಪರೋಕ್ಷ ಬ್ರಹ್ಮಜ್ಞಾನ

(೨) ಅಪರೋಕ್ಷ ಬ್ರಹ್ಮಜ್ಞಾನ

ಪ್ರ ೨೩ : **ಪರೋಕ್ಷ ಬ್ರಹ್ಮಜ್ಞಾನವೆಂದರೇನು ?**

ಉ : ಸತ್ತು, ಚಿತ್ತು, ಆನಂದರೂಪನಾದ ಬ್ರಹ್ಮ ಒಂದಿದೆ ಎಂದು ತಿಳಿಯುವುದು.

ಪ್ರ ೨೪ : **ಪರೋಕ್ಷ ಬ್ರಹ್ಮಜ್ಞಾನವು ಹೇಗಾಗುತ್ತದೆ ಮತ್ತು ಅದು ಯಾವಾಗ ಪೂರ್ಣವಾಗುತ್ತದೆ ?**

ಉ : ಸದ್ಗುರು ಮತ್ತು ಸಚ್ಛಾಸ್ತ್ರಗಳಲ್ಲಿ ನಂಬಿಕೆ ಅಥವಾ ವಿಶ್ವಾಸ ವಿಡುವುದರಿಂದ ಪರೋಕ್ಷ ಬ್ರಹ್ಮಜ್ಞಾನ ಉಂಟಾಗುತ್ತದೆ. ಮತ್ತು ಸದ್ಗುರು ಸಚ್ಛಾಸ್ತ್ರಗಳಲ್ಲಿಟ್ಟಿರುವ ವಿಶ್ವಾಸವು ದೃಢವಾದಾಗ ಇದು ಪೂರ್ಣವಾಗುತ್ತದೆ.

ಪ್ರ ೨೫ : **ಪರೋಕ್ಷ ಬ್ರಹ್ಮಜ್ಞಾನದಿಂದಾಗುವ ಪ್ರಯೋಜನ ವೇನು ?**

ಉ : ಪರೋಕ್ಷ ಬ್ರಹ್ಮಜ್ಞಾನದಿಂದ "ಅಸತ್ವಾಪಾದಕಾವರಣ"ದ ನಿವೃತ್ತಿಯಾಗುತ್ತದೆ. "ಅಸತ್" ಎಂದರೆ ಇಲ್ಲ, "ಆಪಾದಕ" ಎಂದರೆ ತಿಳಿಯುವುದು. ದೇವರಿಲ್ಲ ಎಂಬ ನಾಸ್ತಿಕ ಭಾವನೆ ಹೋಗಿ, ದೇವರಿದ್ದಾನೆ

ಎಂಬ ಆಸ್ತಿಕ ಭಾವನೆ ಉಂಟಾಗುವುದೇ ಇದರಿಂದಾಗುವ ಪ್ರಯೋಜನ. ಮತ್ತು ಇದು ತತ್ತ್ವಮಸಿ ಮಹಾವಾಕ್ಯದಲ್ಲಿನ 'ತತ್' ಪದದ ವಿಚಾರವನ್ನು ತಿಳಿಸಿಕೊಡುತ್ತದೆ.

ಪ್ರ ೨೬ : **ಅಪರೋಕ್ಷ ಬ್ರಹ್ಮಜ್ಞಾನವೆಂದರೇನು ?**

ಉ : ಸಚ್ಚಿದಾನಂದರೂಪ ಬ್ರಹ್ಮವೇ ತಾನೆಂದು ತಿಳಿಯುವುದೇ ಅಪರೋಕ್ಷ ಬ್ರಹ್ಮಜ್ಞಾನ. ಪರೋಕ್ಷ ಮತ್ತು ಅಪರೋಕ್ಷ ಬ್ರಹ್ಮಜ್ಞಾನಕ್ಕೆ ದೃಷ್ಟಾಂತ : ಒಬ್ಬ ರೋಗಿಯು ಡಾಕ್ಟರ್ ಬಳಿ ಬಂದು ತನಗೆ ಹೊಟ್ಟೆ ನೋವೆಂದಾಗ ಅದನ್ನು ಡಾಕ್ಟರು ಪರೀಕ್ಷಿಸಿ ತಿಳಿಯುತ್ತಾನೆ. ಆಗ ಅವನಿಗೆ ಹೊಟ್ಟೆನೋವಿನ ಪರೋಕ್ಷ ಜ್ಞಾನವಾಗುತ್ತದೆ ! ಮತ್ತೊಂದು ದಿನ ಡಾಕ್ಟರ ರಿಗೇ ಹೊಟ್ಟೆನೋವು ಬರುತ್ತದೆ. ಆಗ ಅವನಿಗೆ ಹೊಟ್ಟೆನೋವಿನ ಅಪರೋಕ್ಷ ಜ್ಞಾನವಾಗುತ್ತದೆ !

ಪ್ರ ೨೭ : **ಅಪರೋಕ್ಷ ಬ್ರಹ್ಮಜ್ಞಾನವು ಯಾವುದರಿಂದಾಗುತ್ತದೆ ?**

ಉ : ಶ್ರೀ ಗುರು ಮುಖದಿಂದ ತತ್ತ್ವಮಸ್ಯಾದಿ ಮಹಾವಾಕ್ಯವನ್ನು ಶ್ರವಣ ಮಾಡುವುದರಿಂದ ಅಪರೋಕ್ಷ ಬ್ರಹ್ಮಜ್ಞಾನವಾಗುತ್ತದೆ. ಈ ಅಪರೋಕ್ಷ ಬ್ರಹ್ಮಜ್ಞಾನವು ದೃಢ ಮತ್ತು ಅದೃಢ ಎಂದು ಎರಡು ವಿಧ.

ಪ್ರ ೨೮ : **ಅದೃಢ ಅಪರೋಕ್ಷ ಬ್ರಹ್ಮಜ್ಞಾನವೆಂದರೇನು ? ಬ್ರಹ್ಮಜ್ಞಾನವು ಅದೃಢವಾಗಲು ಕಾರಣವೇನು ?**

ಉ : ಅಂತಃಕರಣದಲ್ಲಿ ಅಸಂಭಾವನಾ, ವಿಪರೀತ ಭಾವನಾಗಳೆಂಬ ದೋಷಗಳಿರುವಾಗ ಗುರು ಮುಖದಿಂದ ತತ್ತ್ವಮಸಿ ಮಹಾವಾಕ್ಯವನ್ನು ಕೇಳುವುದರಿಂದ ಆಗುವ ಜ್ಞಾನವು ಅದೃಢ ಅಪರೋಕ್ಷ ಬ್ರಹ್ಮಜ್ಞಾನ.

ಅಧಿಕಾರಿಯಾದವನ ಅಂತಃಕರಣದಲ್ಲಿ ದೋಷವಿದ್ದಾಗಲೂ, ಭೇದವಾದೀ ಪಾಮರ ಪುರುಷರ ಸಂಗ ಸಂಸ್ಕಾರ ಮಾಡಿದಾಗಲೂ, ಶ್ರೀ ಗುರುಗಳ ಮುಖದಿಂದ "ತತ್ತ್ವಮಸಿ" ಮಹಾವಾಕ್ಯ ಶ್ರವಣ ಮಾಡಿದಾಗಲೂ "ಅಹಂ ಬ್ರಹ್ಮಾಸ್ಮಿ" ಎಂಬ ದೃಢಜ್ಞಾನ ಉಂಟಾಗದೆ ಅದೃಢ ಅಪರೋಕ್ಷ ಬ್ರಹ್ಮಜ್ಞಾನವೇ ಆಗುತ್ತದೆ.

ಪ್ರ ೨೯ : **ಅದೃಢ ಅಪರೋಕ್ಷ ಬ್ರಹ್ಮಜ್ಞಾನವು ಯಾವಾಗ ಪೂರ್ಣವಾಗುತ್ತದೆ ? ಮತ್ತು ಅದರ ಫಲವೇನು ?**

ಉ : ಮುಮುಕ್ಷುವಿನ ಅಂತಃಕರಣದಲ್ಲಿ ಅಸಂಭಾವನಾ, ವಿಪರೀತ ಭಾವನಾಗಳು ಪೂರ್ತಿಯಾಗಿ ಹೋದನಂತರ, ಗುರುಮುಖದಿಂದ ಕೇಳಿದ ಮಹಾವಾಕ್ಯದ ತಾತ್ಪರ್ಯವಾದ ಜೀವ ಬ್ರಹ್ಮರ ಏಕತೆಯನ್ನು ನಿಶ್ಚಯ ಮಾಡಿಕೊಂಡಾಗ ಪೂರ್ಣವಾಗುತ್ತದೆ

ಈ ರೀತಿ ಅದೃಢ ಅಪರೋಕ್ಷ ಬ್ರಹ್ಮಜ್ಞಾನ ಉಂಟಾದವನು ಸಕಾಮ ನಾಗಿದ್ದರೆ, ದೇಹ ಬಿಟ್ಟನಂತರ ಉತ್ತಮ ಲೋಕಗಳನ್ನು ಪಡೆದು, ನಂತರ ಉತ್ತಮರಾದ ಶ್ರೀಮಂತರ ಮನೆಯಲ್ಲಿ ಜನ್ಮ ತಾಳುತ್ತಾನೆ. ನಿಷ್ಕಾಮನಾಗಿ ದ್ದರೆ, ಬಡವರಾದ ಜ್ಞಾನಿಗಳ ಕುಲದಲ್ಲಿ ಶುಕ, ವಾಮದೇವಾದಿಗಳಂತೆ ಜನ್ಮ ತಾಳಿ ದೃಢ ಅಪರೋಕ್ಷ ಬ್ರಹ್ಮಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ.

ಪ್ರ ೩೦ : **ಅಸಂಭಾವನಾ ದೋಷ ಯಾವುದು ?**

ಉ : ಅಸಂಭಾವನಾ ದೋಷ ಎಂದರೆ ಸಂಶಯ. ಇದು ಎರಡು ವಿಧ:

(೧) ಪ್ರಮಾಣಗತ — ಶಾಸ್ತ್ರಗಳಲ್ಲಿ ಜೀವ ಬ್ರಹ್ಮರ ಭೇದವನ್ನು ಪ್ರತಿ ಪಾದಿಸಿದೆಯೋ ಅಥವಾ ಅಭೇದವನ್ನು ಪ್ರತಿಪಾದಿಸಿದೆಯೋ ಎಂಬ ಸಂಶಯ.

(೨) ಪ್ರಮೇಯಗತ — ಜೀವ ಬ್ರಹ್ಮರ ಭೇದವು ಸತ್ಯವೋ ಅಥವಾ ಅಭೇದವು ಸತ್ಯವೋ ಎಂಬ ಸಂಶಯ.

ಪ್ರ ೩೧ : **ವಿಪರೀತ ಭಾವನಾ ದೋಷ ಎಂದರೇನು ?**

ಉ : ಜೀವ ಬ್ರಹ್ಮರ ಭೇದವೂ ಸತ್ಯ, ದೇಹಾದಿ ಪ್ರಪಂಚವೂ ಸತ್ಯ – ಹೀಗೆ ವಿಪರೀತವಾಗಿ ತಿಳಿಯುವುದು ವಿಪರೀತ ಭಾವನಾ ದೋಷ.

ಪ್ರ ೩೨ : **ಇವುಗಳ ನಿವಾರಣೋಪಾಯವೇನು ?**

ಸದ್ಗುರುಗಳ ಬಳಿಯಲ್ಲಿ ಕುಳಿತು, ಅವರು ಹೇಳುವ ವಚನದಲ್ಲಿ ದೃಢ ವಿಶ್ವಾಸವಿಟ್ಟು ಮಹಾವಾಕ್ಯವನ್ನು ಶ್ರವಣ ಮಾಡುವುದರಿಂದ ಪ್ರಮಾಣಗತ ಸಂಶಯವು ಪರಿಹಾರವಾಗುತ್ತದೆ. (ಶ್ರವಣ ಮಾಡುವುದೆಂದರೆ **ವೇದಾಂತ** ಶಾಸ್ತ್ರಗಳ ತಾತ್ಪರ್ಯವನ್ನು ತಿಳಿದುಕೊಳ್ಳುವುದು.)

ಇನ್ನು ಗುರುಗಳಿಂದ ಶ್ರವಣ ಮಾಡಿದ ವೇದಾಂತ ಶಾಸ್ತ್ರಗಳ ತಾತ್ಪರ್ಯ ವನ್ನು ಭೇದಬಾಧಕ, ಅಭೇದ ಸಾಧಕ ಯುಕ್ತಿಗಳಿಂದ ಚಿಂತನೆ ಮಾಡುವು ದೆಂಬ 'ಮನನ'ದಿಂದ ಪ್ರಮೇಯಗತ ಸಂಶಯವು ಪರಿಹಾರವಾಗುತ್ತದೆ. ಇನ್ನು ವಿಜಾತೀಯ ವೃತ್ತಿ, ತಿರಸ್ಕಾರ ಪೂರ್ವಕ ಸಜಾತೀಯ ವೃತ್ತಿ

ಪ್ರವಾಹವೇ ನಿಧಿಧ್ಯಾಸ. ಈ ನಿಧಿಧ್ಯಾಸನದಿಂದ ವಿಪರೀತ ಭಾವನೆಯು ಪರಿಹಾರವಾಗುತ್ತದೆ.

ಪ್ರ ೩೩ : **ದೃಢ ಅಪರೋಕ್ಷ ಬ್ರಹ್ಮಜ್ಞಾನವೆಂದರೇನು ? ಅದು ಹೇಗೆ ಆಗುತ್ತದೆ ?**

ಉ : ಅಧಿಕಾರಿಯ ಅಂತಃಕರಣದಲ್ಲಿ ಮಲವಿಕ್ಷೇಪ ದೋಷಗಳು ಸಂಪೂರ್ಣವಾಗಿ ಇಲ್ಲದಂತಾದ ಮೇಲೆ ಅಸಂಭಾವನಾ, ವಿಪರೀತ ಭಾವನಾ ಗಳೂ ಇಲ್ಲದೆ, ಕೃತೋಪಾಸ್ತಿಯಾಗಿ ಶ್ರೋತ್ರೀಯ ಬ್ರಹ್ಮನಿಷ್ಠ ಸದ್ಗುರುಗಳ ಶ್ರೀಮುಖದಿಂದ 'ತತ್ತ್ವಮಸಿ' ಮಹಾವಾಕ್ಯವನ್ನು ಶ್ರವಣ ಮಾಡಿ, ಅದರ ತಾತ್ಪರ್ಯವನ್ನು ಮನನ ಮಾಡಿ ನಂತರ ನಿಧಿಧ್ಯಾಸ ಮಾಡುವುದರಿಂದ ದೃಢ ಅಪರೋಕ್ಷ ಬ್ರಹ್ಮಜ್ಞಾನವಾಗುತ್ತದೆ. 'ನಾನೇ ಬ್ರಹ್ಮ'ವೆಂಬ ದೃಢಜ್ಞಾನವು ಒಂದು ಸಾರಿ ಉಂಟಾದರೆ ಅದು ಪುನಃ ಎಂದಿಗೂ ಹೋಗಲಾರದು. ಇದೇ ದೃಢ ಅಪರೋಕ್ಷ ಬ್ರಹ್ಮಜ್ಞಾನ.

ಪ್ರ ೩೪ : **ದೃಢ ಅಪರೋಕ್ಷ ಬ್ರಹ್ಮಜ್ಞಾನದ ಪೂರ್ಣತೆ ಯಾವಾಗ ?**

ಉ : ಅಜ್ಞಾನ ಕಾಲದಲ್ಲಿ ದೇಹವೇ ನಾನೆಂಬ ಜ್ಞಾನವು ಎಷ್ಟು ದೃಢ ವಾಗಿದ್ದಿತೋ ಅಷ್ಟೇ ದೃಢವಾಗಿ ಬ್ರಹ್ಮವೇ ನಾನೆಂಬ ಅನುಭವ ಜ್ಞಾನ ಉಂಟಾದಾಗ ದೃಢ ಅಪರೋಕ್ಷ ಬ್ರಹ್ಮಜ್ಞಾನವು ಪೂರ್ಣವಾಗುತ್ತದೆ.

ಪ್ರ ೩೫ : **ದೃಢ ಅಪರೋಕ್ಷ ಬ್ರಹ್ಮಜ್ಞಾನಕ್ಕೆ ಫಲವೇನು ?**

ಉ : (೧) ಅಂತಃಕರಣದ ವಿಕ್ಷೇಪ ದೋಷ ನಿವೃತ್ತಿಯಾಗುವುದು.

(೨) ಅಸತ್ವಾಪಾದಕ, ಅಭಾನಾಪಾದಕ ಆವರಣಗಳು ನಾಶವಾಗು ವುದು.

(೩) ಕಾರಣವಾದ ಅಜ್ಞಾನ, ಅದರ ಕಾರ್ಯವಾದ ಮೂರು ದೇಹ ಗಳು, ಅಭಿಮಾನಿ ಜೀವರುಗಳು — ಇವರ ಧರ್ಮಗಳ ಆರೋಪ ನಿವೃತ್ತಿ– ಈ ಮೂರು ದೃಢ ಅಪರೋಕ್ಷ ಬ್ರಹ್ಮಜ್ಞಾನದ ಫಲಗಳು.

ಪ್ರ ೩೬ : **ವಿಕ್ಷೇಪವೆಂದರೇನು ?**

ಉ : ಸ್ಥೂಲ ಸೂಕ್ಷ್ಮ ಕಾರಣ ದೇಹಗಳು, ಇವರ ಅಭಿಮಾನಿ ಜೀವರುಗಳಾದ ವಿಶ್ವ, ತೈಜಸ, ಪ್ರಾಜ್ಞರೆಂಬುವರು, ಇವರ ಧರ್ಮಗಳಾದ ಕರ್ತೃತ್ವ, ಭೋಕ್ತೃತ್ವ, ಜನನ ಮರಣಾದಿಗಳೇ ವಿಕ್ಷೇಪಗಳಾಗಿವೆ.

ಪ್ರ ೩೭ : **ಅಭಾನಾಪಾದಕ ಆವರಣವೆಂದರೇನು ?**

ಉ : ಬ್ರಹ್ಮವು ಭಾಸಿಸುವುದಿಲ್ಲ ಅಂದರೆ ತೋರುವುದಿಲ್ಲ ಎನ್ನುವುದೇ ಅಭಾನಾಪಾದಕ ಆವರಣ.

ಪ್ರ ೩೮ : **ಗುರುಗಳ ಮುಖದಿಂದ ವೇದಾಂತ ವಾಕ್ಯಗಳ ಶ್ರವಣ ದಿಂದ ಅಪರೋಕ್ಷ ಬ್ರಹ್ಮಜ್ಞಾನ ಆಗುತ್ತದೆ ಎಂದು ಹೇಳಿದಿರಿ. ಹಾಗಾದರೆ ಆ ವೇದಾಂತ ವಾಕ್ಯಗಳು ಯಾವುವು ?**

ಉ : ಶಾಸ್ತ್ರಗಳಲ್ಲಿ (೧) ರೋಚಕ ವಾಕ್ಯಗಳೆಂದೂ, (೨) ಭಯಾನಕ ವಾಕ್ಯಗಳೆಂದೂ, (೩) ಸಿದ್ಧಾರ್ಥ ಬೋಧಕ ವಾಕ್ಯಗಳೆಂದೂ ಮೂರು ವಿಧ ವಾಗಿ ವಾಕ್ಯಗಳ ವರ್ಣನೆ ಇದೆ.

ಪ್ರ ೩೯ : **ರೋಚಕ ವಾಕ್ಯಗಳೆಂದರೇನು ?**

ಉ : ರುಚಿಯನ್ನು ಹುಟ್ಟಿಸಿ, ಒಳ್ಳೆಯ ಕೆಲಸಗಳನ್ನು ಮಾಡಿಸುವ ವಾಕ್ಯಗಳು. ಉದಾ : ದಾನ ಧರ್ಮ ಪರೋಪಕಾರಗಳನ್ನು ಮಾಡು ; ಯಜ್ಞಯಾಗಾದಿಗಳನ್ನು ಮಾಡು. ಇದರಿಂದ ನಿನಗೆ ಈ ಲೋಕದಲ್ಲಿ ಕೀರ್ತಿ ಗೌರವಗಳು ಬರುವುದಲ್ಲದೆ, ಸ್ವರ್ಗಲೋಕಾದಿ ಸುಖವೂ ಸಿಗುತ್ತದೆಂದು ಹೇಳಿ, ಸತ್ಕರ್ಮಗಳನ್ನು ಮಾಡುವಂತೆ ಬೋಧಿಸುವ ವಾಕ್ಯಗಳೇ ರೋಚಕ ವಾಕ್ಯಗಳು.

ಪ್ರ ೪೦ : **ಭಯಾನಕ ವಾಕ್ಯಗಳೆಂದರೇನು ?**

ಉ : ಭಯವನ್ನು ಹುಟ್ಟಿಸಿ ಕೆಟ್ಟ ಕೆಲಸಗಳನ್ನು ಬಿಡಿಸುವ ವಾಕ್ಯ ಗಳು. ಉದಾ : ಮಾನವರು ಮಾಡುವ ದುಷ್ಕರ್ಮಗಳಿಗೆ ತಕ್ಕ ಪ್ರಾಯ ಶ್ಚಿತ್ತ ಉಂಟಾಗುತ್ತದೆ. ನಾವು ಮಾಡುವ ಎಲ್ಲಾ ಕೆಟ್ಟ ಕರ್ಮಗಳನ್ನೂ ಸರ್ವ ಸಾಕ್ಷಿಯಾದ ಪರಮಾತ್ಮನೊಬ್ಬನು ನೋಡುತ್ತಿರುವನು. ಆ ಕರ್ಮಾದಿಗಳಿಗೆ ತಕ್ಕಂತೆ ನರಕಾದಿ ಲೋಕಗಳನ್ನು ಹೊಂದಲೇಬೇಕಾಗಿರು ತ್ತದೆ. ಪಾಪಕರ್ಮದ ಫಲವೇ ರೋಗರುಜಿನಾದಿಗಳು ಮತ್ತು ಬಡತನಾದಿ ಗಳು. "ಪೂರ್ವಜನ್ಮ ಕೃತಂ ಪಾಪಂ ವ್ಯಾಧಿ ರೂಪೇಣ ಬಾಧಿತಂ" – ಹೀಗೆ ಶಾಸ್ತ್ರದಲ್ಲೂ ಹೇಳಿದೆ. ಈ ರೀತಿ ಬೋಧಿಸುವ ವಾಕ್ಯಗಳು ಭಯಾನಕ ವಾಕ್ಯಗಳು.

ಪ್ರ ೪೧ : **ಸಿದ್ಧಾರ್ಥ ಬೋಧಕ ವಾಕ್ಯಗಳೆಂದರೇನು ?**

ಉ : ಮೊದಲೇ ಸಿದ್ಧವಾಗಿರುವ ವಸ್ತುವನ್ನು ಇದ್ದಕ್ಕಿದ್ದಂತೆ ಬೋಧಿಸುವ ವಾಕ್ಯಗಳಿಗೆ ಸಿದ್ಧಾರ್ಥ ಬೋಧಕ ವಾಕ್ಯಗಳೆಂದು ಹೆಸರು. ಈ ಸಿದ್ಧಾರ್ಥ ಬೋಧಕ ವಾಕ್ಯಗಳಲ್ಲಿ ಅವಾಂತರ ವಾಕ್ಯಗಳೆಂದೂ, ಮಹಾ ವಾಕ್ಯಗಳೆಂದೂ ಎರಡು ವಿಧ.

ಜೀವ ಮತ್ತು ಬ್ರಹ್ಮರ ಲಕ್ಷಣಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಬೋಧಿಸುವುದಕ್ಕೆ ಅವಾಂತರ ವಾಕ್ಯಗಳೆಂದು ಹೆಸರು. "ಏ ಏಷಾ ಹೃದ್ಯಂತರ್ ಜ್ಯೋತಿಃ ಪುರುಷಃ" ಎಂಬುದಾಗಿ ಜೀವನ ಲಕ್ಷಣವನ್ನೂ, "ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂಬುದಾಗಿ ಬ್ರಹ್ಮದ ಲಕ್ಷಣವನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಬೋಧಿಸುವುದಕ್ಕೆ ಅವಾಂತರ ವಾಕ್ಯಗಳೆಂದು ಹೆಸರು. ಇದರಿಂದ ಅಸತ್ವಾಪಾದಕ ಆವರಣ ನಿವೃತ್ತಿಯೂ, ಪರೋಕ್ಷ ಬ್ರಹ್ಮಜ್ಞಾನವೂ ಆಗುತ್ತದೆ.

ಜೀವ ಬ್ರಹ್ಮರ ಏಕತೆಯನ್ನು ಬೋಧಿಸುವ ವಾಕ್ಯಗಳಿಗೆ ಮಹಾ ವಾಕ್ಯಗಳೆಂದು ಹೆಸರು. ಈ ಮಹಾವಾಕ್ಯಗಳು ಮುಖ್ಯವಾಗಿ ನಾಲ್ಕು: "ತತ್ತ್ವಮಸಿ", "ಅಯಮಾತ್ಮಾ ಬ್ರಹ್ಮ", "ಅಹಂ ಬ್ರಹ್ಮಾಸ್ಮಿ", "ಪ್ರಜ್ಞಾನಂ ಬ್ರಹ್ಮ" – ಇವೇ ಆ ನಾಲ್ಕು ಮಹಾವಾಕ್ಯಗಳು. ಸ್ವರೂಪ ಬೋಧಕ ಪದ ಯಾವ ವಾಕ್ಯದಲ್ಲಿರುತ್ತದೆಯೋ ಅದು ಮಹಾವಾಕ್ಯ. ಈ ಮಹ ವಾಕ್ಯ ಶ್ರವಣದಿಂದ ಅಪರೋಕ್ಷ ಬ್ರಹ್ಮಜ್ಞಾನ ಉಂಟಾಗುತ್ತದೆ.

ಪ್ರ ೪೨ : **ಪರೋಕ್ಷ ಹಾಗೂ ಅಪರೋಕ್ಷ ಬ್ರಹ್ಮಜ್ಞಾನಗಳನ್ನು ಉದಾಹರಣೆ ಪೂರ್ವಕ ತಿಳಿಸಿ.**

ಉ : ದಶಮನ ದೃಷ್ಟಾಂತದಿಂದ ಇದನ್ನು ಚೆನ್ನಾಗಿ ತಿಳಿದುಕೊಳ್ಳಬಹುದು :

ಒಂದು ಆಶ್ರಮದಲ್ಲಿ ಒಬ್ಬ ಶ್ರೋತ್ರೀಯ ಬ್ರಹ್ಮನಿಷ್ಠ ಗುರುಗಳಿದ್ದರು. ಅವರ ಬಳಿ ಹತ್ತು ಮಂದಿ ಶಿಷ್ಯರು ಅಧ್ಯಯನ ಮಾಡುತ್ತಿದ್ದರು. ಒಂದು ದಿನ ಯಾವುದೋ ಪರ್ವಕಾಲ ಬರಲು, ಅದಕ್ಕಾಗಿ ಹೂವು, ಪತ್ರೆ, ಹಣ್ಣು ಮುಂತಾದವುಗಳನ್ನು ತರಲು ಹತ್ತು ಮಂದಿಯೂ ಗುರುಗಳ ಅಪ್ಪಣೆ ಪಡೆದು ಕಾಡಿಗೆ ಹೊರಟರು. ಎಲ್ಲರೂ ಒಂದೇ ದಿಕ್ಕಿಗೆ ಹೋಗುವುದಕ್ಕಿಂತ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಹೋಗಿ, ಪುನಃ ಸಂಜೆಯ ವೇಳೆಗೆ

ಎಲ್ಲರೂ ಒಟ್ಟಾಗಿ ಬಂದು ಗೊತ್ತಾದ ಸ್ಥಳದಲ್ಲಿ ಕೂಡಿ ಆಶ್ರಮಕ್ಕೆ ಹೋಗೋಣವೆಂದು ಮಾತನಾಡಿಕೊಂಡು, ಒಬ್ಬೊಬ್ಬರು ಒಂದೊಂದು ಕಡೆ ಹೋದರು. ಎಲ್ಲರೂ ತಮ್ಮ ಕೈಲಾದಷ್ಟು ಹಣ್ಣು ಹಂಪಲು, ಗೆಡ್ಡೆ ಗೆಣಸು, ಹೂ ಪತ್ರೆ, ಮಾವಿನ ಸೊಪ್ಪು, ಬಾಳೆ ಎಲೆ, ಸಮಿತ್ತು ಇತ್ಯಾದಿಗಳನ್ನು ಶೇಖರಿಸಿಕೊಂಡು ಗೊತ್ತಾದ ಸ್ಥಳದಲ್ಲಿ ಬಂದು ಸೇರಿದರು. ಈ ಅಡವಿಯಲ್ಲಿ ಭಯಂಕರ ಕ್ರೂರ ಮೃಗಗಳಿರುವುದರಿಂದ ಹತ್ತು ಮಂದಿಯೂ ಬಂದು ಸೇರಿದ್ದೇವೆಯೋ ಇಲ್ಲವೋ ಎಣಿಸಿ ನೋಡೋಣವೆಂದು ಒಬ್ಬನು ಎಣಿಸತೊಡಗಿದನು. ಅವನು ಸ್ವಲ್ಪ ಮಂದ ಬುದ್ಧಿಯುಳ್ಳವನಾಗಿದ್ದ ಕಾರಣ ಎದುರಿಗಿದ್ದ ಒಂಭತ್ತು ಜನರನ್ನು ಎಣಿಸಿ ಹತ್ತನೆಯವನಾದ ತನ್ನನ್ನೇ ಬಿಟ್ಟುಬಿಟ್ಟನು. ಸರಿ, ಒಬ್ಬನು ಇನ್ನೂ ಬಂದಿಲ್ಲ ಎಂದನು. ಮತ್ತೊಬ್ಬ ದಡ್ಡಶಿಖಾಮಣಿಯೂ ಅದೇ ರೀತಿ ಎಣಿಸಿ, ಒಬ್ಬನು ಎಲ್ಲೋ ಹೊರಟು ಹೋಗಿದ್ದಾನೆ ಎಂದನು. ಇದೇ ರೀತಿ ಆ ಹತ್ತು ಜನರೂ ತಮ್ಮನ್ನು ಬಿಟ್ಟು ಉಳಿದ ಒಂಭತ್ತು ಜನರನ್ನು ಎಣಿಸಿ ಹತ್ತನೆಯವನು ಇಲ್ಲ, ಬಹುಶಃ ಹುಲಿ–ಸಿಂಹದ ಬಾಯಿಗೆ ತುತ್ತಾಗಿರಬಹುದೆಂದು ಇಲ್ಲದ ವಿಕ್ಷೇಪ ಮಾಡಿಕೊಂಡು, ಈಗ ಗುರುಗಳಿಗೆ ಏನು ಹೇಳುವುದು ಎಂದು ಎಲ್ಲರೂ ಅಳತೊಡಗಿದರು. ಆಗ ಅದೇ ದಾರಿಯಲ್ಲಿ ಹೋಗುತ್ತಿದ್ದ ಆಶ್ರಮದ ಭಕ್ತರೊಬ್ಬರು ಇವರ ಆರ್ತಧ್ವನಿಯನ್ನು ಕೇಳಿ ಗಾಬರಿಗೊಂಡು, ಬಂದು ಏನಾಯಿತೆಂದು ವಿಚಾರಿಸಲಾಗಿ ಅವರು ಹತ್ತನೆಯವನು ಇಲ್ಲದ ವಿಷಯವನ್ನು ತಿಳಿಸಿದರು. ಅವರ ಕಣ್ಣಿಗೆ ಹತ್ತು ಜನರೂ ಕಾಣಿಸುತ್ತಿದ್ದರು. ಆಗ ಅವರು ಮನಸ್ಸಿನಲ್ಲೇ ಇವರ ದಡ್ಡತನಕ್ಕೆ ನಕ್ಕು, "ಎಲೈ ವಟುಗಳಿರಾ! ಅಳಬೇಡಿ, ಹತ್ತನೆಯವನು ಇದ್ದಾನೆ, ದಶಮೋಽಸ್ತಿ" ಎಂದರು. ಆಗ ಆ ಹತ್ತು ಮಂದಿಗೂ ಬಹಳ ಸಂತೋಷವಾಯಿತು ಮತ್ತು ಧೈರ್ಯವೂ ಬಂದಿತು. ಇದು ದಶಮನ ಪರೋಕ್ಷ ಜ್ಞಾನ. ಆದರೆ ಇಷ್ಟರಿಂದಲೇ ಅವರಿಗೆ ತೃಪ್ತಿಯಾಗಲಿಲ್ಲ. ಹತ್ತನೆಯವನು ಎಲ್ಲಿದ್ದಾನೆ? ಎಂದು ಆತುರದಿಂದ ಕೇಳಿದರು. ಆಗ ಅವರು "ಎಲ್ಲಿದ್ದಾನೆ ಎಂದು ಪ್ರಶ್ನಿಸುವ ನೀನೇ ಹತ್ತನೆಯವನಾಗಿದ್ದೀಯೆ, ದಶಮಸ್ತ್ವಮಸಿ" ಎಂಬುದಾಗಿ ದಶಮನ ಅಪರೋಕ್ಷ ಜ್ಞಾನವನ್ನುಂಟುಮಾಡಿಕೊಟ್ಟರು. "ನೀವು ಎಣಿಸುವಾಗ ಎದುರಿಗಿರುವವರನ್ನು ಮಾತ್ರ ಎಣಿಸಿ,

ಎಣಿಸುವ ನಿಮ್ಮನ್ನೇ ಮರೆತು ದುಃಖಿಸುತ್ತಿದ್ದೀರಲ್ಲಾ! ನಿಮ್ಮ ಅವಿವೇಕಕ್ಕೆ ಏನು ಹೇಳಲಿ ?" ಎಂದು ಅವರು ಹೇಳಲಾಗಿ, ಆ ಹತ್ತು ಮಂದಿಯೂ ತಮ್ಮ ಮೂರ್ಖತನಕ್ಕೆ ನಾಚಿ ಅವರಿಗೆ ನಮಸ್ಕರಿಸಿ ಸಂತೋಷದಿಂದ ಆಶ್ರಮಕ್ಕೆ ಹೋದರು.

ದ್ರಾಷ್ಟಾಂತ : ೧) ಕರ್ಮೇಂದ್ರಿಯ ಪಂಚಕ, ೨) ಜ್ಞಾನೇಂದ್ರಿಯ ಪಂಚಕ, ೩) ಪ್ರಾಣ ಪಂಚಕ, ೪) ಭೂತ ಪಂಚಕ, ೫) ಅಂತಃಕರಣ, ೬) ಅವಿದ್ಯಾ, ೭) ಕಾಮ, ೮) ಕರ್ಮ, ೯) ಸ್ಥೂಲ ದೇಹ, ೧೦) ಜೀವ – ಹೀಗೆ ದೇಹಾದಿ ಸಂಘಾತದಲ್ಲೂ ಒಟ್ಟು ಹತ್ತು ವಸ್ತುಗಳಿರುವುದರಿಂದ ವೇದಾಂತ ಶಾಸ್ತ್ರದಲ್ಲಿ ವಿಶೇಷವಾಗಿ 'ದಶಮನ ದೃಷ್ಟಾಂತ'ವನ್ನೇ ತೆಗೆದು ಕೊಳ್ಳುತ್ತಾರೆ. ಈ ಅಜ್ಞಾನಿಯಾದ ಜೀವನು ತನ್ನನ್ನು ಬಿಟ್ಟು ಎದುರಿಗೆ ಕಾಣುವ ಒಂಭತ್ತು ವಸ್ತುಗಳೊಡನೆ ಸೇರಿ ಅವುಗಳ ಧರ್ಮಗಳನ್ನು ತನ್ನ ಮೇಲೆ ಆರೋಪಿಸಿಕೊಂಡು ದುಃಖಿಯಾಗಿದ್ದಾನೆ. ಅಥವಾ 'ಪುರ್ಯಷ್ಟಕ'ವೆಂದು ಹೇಳಿಕೊಳ್ಳುವ ಎಂಟು ವಸ್ತುಗಳಿಂದ ಕೂಡಿರುವ ಲಿಂಗದೇಹ, ೯) ಸ್ಥೂಲ ದೇಹ, ೧೦) ಜೀವ – ಹೀಗೆ ಬೇಕಾದರೂ ಹೇಳಬಹುದು. ಜೀವನು ಅಜ್ಞಾನಿಯಾಗಿರುವುದರಿಂದ ಬ್ರಹ್ಮವಿಲ್ಲ, ತೋರುವುದಿಲ್ಲ ಎಂಬುದಾಗಿ ತಿಳಿದು ದುಃಖಿಯಾಗಿದ್ದಾನೆ. ಆಗ ಸದ್ಗುರುಗಳು 'ಬ್ರಹ್ಮವಿದೆ' ಎಂದಾಗ ಪರೋಕ್ಷ ಬ್ರಹ್ಮಜ್ಞಾನವೂ. 'ಆ ಬ್ರಹ್ಮವೇ ನೀನಾಗಿದ್ದೀಯೆ, ತತ್ತ್ವಮಸಿ' ಎಂದು ಹೇಳಿದಾಗ ಅಪರೋಕ್ಷ ಬ್ರಹ್ಮಜ್ಞಾನವೂ ಉಂಟಾಗಿ ಆನಂದಪಡುತ್ತಾನೆ.

ಪ್ರ ೪೩ : **ಜ್ಞಾನದ ಸ್ವರೂಪ, ಅದರ ಪೂರ್ಣತೆ ಮತ್ತು ಅದರ ಫಲಗಳೇನು ?**

ಉ : ಆತ್ಮ ಅನಾತ್ಮವನ್ನು ಬೇರ್ಪಡಿಸಿ ತಾನು ಆತ್ಮಸ್ವರೂಪನೆಂದೂ, ತನಗಿಂತ ಭಿನ್ನವಾದ ಪದಾರ್ಥವು ಅನಾತ್ಮವೆಂದೂ ತಿಳಿಯುವುದೇ ಜ್ಞಾನ. ಹೀಗೆ ಬೇರ್ಪಡಿಸಿದ ಮೇಲೆ ಅನಾತ್ಮದಲ್ಲಿ ಕೂಡದಿರುವುದೇ ಅದರ ಫಲ. ಪರಬ್ರಹ್ಮವೇ ನಾನೆಂಬ ದೃಢ ಭಾವನೆ ಉಂಟಾಗಿ ಅದು ಅನುಭವಕ್ಕೆ ಬರುವುದೇ ಅದರ ಪೂರ್ಣತೆ.

ಪ್ರ ೪೪ : **ವಿಚಾರವೆಂದರೇನು ? ವಿಚಾರ ಶಕ್ತಿ ಉಂಟಾಗುವ ಬಗೆ ಹೇಗೆ ?**

ಉ ಆತ್ಮಾನಾತ್ಮಗಳನ್ನು ಅನ್ವಯ ವ್ಯತಿರೇಕಯುಕ್ತಿಯಿಂದ ಬೇರ್ಪಡಿಸಿ ತಾನು ನಿತ್ಯಮುಕ್ತನಾದ ಆತ್ಮಸ್ವರೂಪನೆಂದೂ, ತನಗಿಂತ ಭಿನ್ನವಾದ ಈ ಸಂಸಾರವು ಅನಾತ್ಮವೂ – ಮಿಥ್ಯವೂ ಆಗಿರುವುದೆಂದೂ ತಿಳಿದುಕೊಳ್ಳುವುದೇ ವಿಚಾರ. ಈ ವಿಚಾರ ಶಕ್ತಿ ಉಂಟಾಗಬೇಕಾದರೆ ಚತುರ್ವಿಧ ಕೃಪೆಗಳು ಅಗತ್ಯ:

೧) ಈಶ್ವರ ಕೃಪೆ, ೨) ವೇದ ಕೃಪೆ, ೩) ಗುರು ಕೃಪೆ, ೪) ಅಂತಃಕರಣ ಕೃಪೆ – ಇವು ಚತುರ್ವಿಧ ಕೃಪೆಗಳು.

ಪ್ರ ೪೫ : **ಈಶ್ವರ ಕೃಪೆಯ ಸ್ವರೂಪವೇನು ?**

ಉ : ಇದು ನಾಲ್ಕು ವಿಧ :

೧) ಮನುಷ್ಯನಾಗಿ ಹುಟ್ಟುವುದು.

೨) ಜೀವನಕ್ಕೆ ಕೊರತೆ ಇಲ್ಲದಿರುವುದು.

೩) ಸದ್ಗುರು ದೊರೆಯುವುದು.

೪) ಶ್ರವಣಕ್ಕೆ ಹೋಗಲು ಯಾವ ಆತಂಕವೂ ಇಲ್ಲದಿರುವುದು – ಈ ನಾಲ್ಕು ಈಶ್ವರ ಕೃಪೆಯ ಫಲವಾಗಿವೆ.

ಪ್ರ ೪೬ : **ವೇದ ಕೃಪೆಯ ಸ್ವರೂಪವೇನು ?**

ಉ : ಗುರುಗಳು ಬೋಧಿಸಿದ ವಿಷಯಗಳೂ, ಶಾಸ್ತ್ರಾರ್ಥಗಳೂ ಚೆನ್ನಾಗಿ ತಿಳಿಯುವುದೇ ವೇದ ಕೃಪೆ. ಶಾಸ್ತ್ರವು ತನ್ನ ಗರ್ಭವನ್ನು ಬಿಚ್ಚಿ ತೋರಿಸಬೇಕಾದರೆ ಶಾಸ್ತ್ರ ಕೃಪೆ ಅಗತ್ಯ.

ಪ್ರ ೪೭ : **ಗುರು ಕೃಪೆಯ ಸ್ವರೂಪವೇನು ?**

ಉ : ಶಾಸ್ತ್ರ, ಯುಕ್ತಿ, ಸ್ವಾನುಭವ ಪೂರ್ವಕವಾಗಿ ತನ್ನ ಶಿಷ್ಯನ ಅಂತಃಕರಣಕ್ಕೆ ತಿಳಿಯುವಂತೆ, ನಿಸ್ಪೃಹತೆಯಿಂದಲೂ, ದಯೆಯಿಂದಲೂ ಆತ್ಮ ಅಥವಾ ಬ್ರಹ್ಮದ ವಿಚಾರವನ್ನು ಬೋಧಿಸುವುದು ಗುರುಕೃಪೆಯ ಫಲವಾಗಿದೆ.

ಪ್ರ ೪೮ : **ಅಂತಃಕರಣ ಕೃಪೆಯ ಸ್ವರೂಪವೇನು ?**

ಉ : ಗುರು, ಶಾಸ್ತ್ರಗಳು ಬೋಧಿಸಿದ ರೀತಿಯಲ್ಲಿ ನಾವು ಸಾಧನೆ ಮಾಡುವುದಕ್ಕೆ ತಮ್ಮ ಮನಸ್ಸು ಅನುಕೂಲವಾಗಿರುವುದು ಮತ್ತು ಆ ವಿಷಯಗಳು ಅನುಭವಕ್ಕೆ ಬರುವುದು – ಇದು ಅಂತಃಕರಣದ ಕೃಪೆಯ ಫಲವಾಗಿದೆ.

ಪ್ರ ೪೯ : **ವಿಚಾರಕ್ಕೆ ಫಲವೇನು ?**

ಉ : ದೃಢ ಅಪರೋಕ್ಷ ಬ್ರಹ್ಮಜ್ಞಾನವೇ ಫಲ.

ಪ್ರ ೫೦ : **ವಿಚಾರವನ್ನು ಎಲ್ಲಿಯವರೆಗೆ ಮಾಡುತ್ತಿರಬೇಕು ?**

ಉ : ಊಟವನ್ನು ಎಲ್ಲಿಯವರೆಗೆ ಮಾಡಬೇಕೆಂದರೆ ಹೊಟ್ಟೆ ತುಂಬು ವವರೆಗೆ ಮಾಡಬೇಕು. ಇದರಂತೆ ದೃಢ ಅಪರೋಕ್ಷ ಬ್ರಹ್ಮಜ್ಞಾನವು ಸಿದ್ಧಿಸಿ ಅನುಭವಕ್ಕೆ ಬರುವವರೆಗೂ ವಿಚಾರ ಮಾಡುತ್ತಲೇ ಇರಬೇಕು.

ಪ್ರ ೫೧ : **ವಿಚಾರಕ್ಕೆ ವಿಷಯಗಳೆಷ್ಟು? ಅವುಗಳ ಸಾಧಾರಣ ಸ್ವರೂಪವೇನು ?**

ಉ : ವಿಚಾರಕ್ಕೆ ವಿಷಯಗಳು ಮೂರು : ೧. ಜೀವ (ನಾನಾರು ?) ೨ ಜಗತ್ತು, ೩. ಈಶ್ವರ.

ಇವರಲ್ಲಿ ಜೀವ ಮತ್ತು ಈಶ್ವರ ಇಬ್ಬರೂ ಚೇತನ ಸ್ವರೂಪ, ಜಗತ್ತು ಜಡ ಸ್ವರೂಪ.

ಪ್ರ ೫೨ : **ಚೇತನ ಎಂದರೇನು ?**

ಉ : ತನ್ನ ಬೆಳಕಿನಲ್ಲಿ ತಾನು ಬೆಳಗಿ, ತನಗೆ ಸಂಬಂಧಪಟ್ಟ ಎಲ್ಲಾ ವಸ್ತುಗಳನ್ನೂ ಇತರ ಬೆಳಕಿನ ಅಪೇಕ್ಷೆಯಿಲ್ಲದೆ ಬೆಳಗುವುದೇ ಚೇತನ.

ಉದಾ : ಸೂರ್ಯನು ತನ್ನ ಬೆಳಕಿನಲ್ಲಿ ತಾನು ಬೆಳಗಿ, ತನ್ನ ಬೆಳಕಿಗೆ ಸಂಬಂಧಪಟ್ಟ ಸಮಸ್ತ ನಾಮ ರೂಪ ಪ್ರಪಂಚವನ್ನೂ ಬೆಳಗುವುದರಿಂದ ಸೂರ್ಯನು ಚೇತನ. ಇದಕ್ಕೆ ಶಾಸ್ತ್ರದಲ್ಲಿ "ಸ್ವಯಮಿತರಜ್ಞಪ್ತಿ" ಉಳ್ಳದ್ದೆಂದು ಹೇಳಿದೆ.

ಪ್ರ ೫೩ : **ಜಡ ಎಂದರೇನು ?**

ಉ : ಸ್ವಯಮಿತರಜ್ಞಪ್ತಿ ಶೂನ್ಯವಾದುದು, ಜಡ – ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳಿದೆ. ಜಡ ವಸ್ತುವು ತನ್ನನ್ನು ತಾನೂ ತಿಳಿಯುವುದಿಲ್ಲ ಮತ್ತು ಇತರ ಯಾವುದನ್ನೂ ತಿಳಿಯಲಾರದು.

ಉದಾ : ಘಟ – ಇದು ತನ್ನನ್ನು ತಾನೂ ತಿಳಿಯಲಾರದು. ಅನ್ಯ ವನ್ನೂ ತಿಳಿಯಲಾರದು. ಆದುದರಿಂದ ಘಟ ಪಟಾದಿ ಸಮಸ್ತ ನಾಮ ರೂಪ ಪ್ರಪಂಚವು ಜಡ. ಆತ್ಮವೊಂದೇ ಚೇತನ.

ಪ್ರ ೫೪ : **ಜಡವರ್ಗಗಳು ಯಾವುವು ?**

ಉ : ಅಜ್ಞಾನ ಸಹಿತ ಸಮಷ್ಟಿ, ವ್ಯಷ್ಟಿ, ಸ್ಥೂಲ, ಸೂಕ್ಷ್ಮ, ಮತ್ತು ಕಾರಣ ದೇಹಗಳು, ಇವುಗಳ ಅಭಿಮಾನಿ ಜೀವರುಗಳು, ಇವರ ಧರ್ಮಗಳು – ಇವೆಲ್ಲಾ ಜಡವರ್ಗಗಳೇ. ಇವುಗಳ ಸಮೂಹಕ್ಕೆ ಪ್ರಪಂಚವೆನ್ನುತ್ತಾರೆ.

ಪ್ರ ೫೫ : **ಸಮಷ್ಟಿ, ವ್ಯಷ್ಟಿಗಳ ಸ್ವರೂಪವೇನು ?**

ಉ : ಸಮಷ್ಟಿ ಎಂದರೆ ಅನೇಕ ಅಥವಾ ಗುಂಪು. ವ್ಯಷ್ಟಿ ಎಂದರೆ ಏಕ ಅಥವಾ ಒಂದೇ ಒಂದು ವಸ್ತುವಿಗೆ ಸಂಬಂಧಪಟ್ಟಿರುವುದು.

ಉದಾ : ಒಂದು ತೋಟದಲ್ಲಿ ಹತ್ತು ಮಾವಿನ ಮರಗಳಿವೆ. ಆ ತೋಟದ ಮಾಲೀಕನು ಎಲ್ಲಾ ಮರಗಳನ್ನೂ ತನ್ನವೆನ್ನುತ್ತಾನೆ. ಒಂದು ಮರವನ್ನು ಒಬ್ಬನಿಗೆ ಮಾರಿದರೆ, ಕೊಂಡುಕೊಂಡವನು ಅದನ್ನು ಮಾತ್ರ ತನ್ನದೆನ್ನುತ್ತಾನೆ. ಇದರಂತೆ ಸಮಷ್ಟಿ ಅಭಿಮಾನಿ ಈಶ್ವರ, ವ್ಯಷ್ಟಿ ಅಭಿಮಾನಿ ಜೀವ.

ಪ್ರ ೫೬ : **ಸಮಷ್ಟಿ ತತ್ವದ ದೇಹಗಳು, ಅಭಿಮಾನಿಗಳು ಮತ್ತು ಅವಸ್ಥೆಗಳಾವುವು ?**

ಉ : ೧. ವಿರಾಟ್, ೨. ಹಿರಣ್ಯಗರ್ಭ, ೩. ಅವ್ಯಾಕೃತ – ಇವು ಸಮಷ್ಟಿ ದೇಹಗಳು ; ವೈಶ್ವಾನರ, ಸೂತ್ರಾತ್ಮ, ಅಂತರ್ಯಾಮಿ – ಇವರು ಅಭಿಮಾನಿಗಳು ; ಸೃಷ್ಟಿ, ಸ್ಥಿತಿ ಮತ್ತು ಪ್ರಳಯ – ಇವು ಅವಸ್ಥೆಗಳು.

ಪ್ರ ೫೭ : **ವ್ಯಷ್ಟಿ ತತ್ವದ ದೇಹಗಳು, ಅಭಿಮಾನಿಗಳು ಮತ್ತು ಅವಸ್ಥೆಗಳಾವುವು ?**

ಉ : ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ದೇಹಗಳು; ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವರುಗಳು ; ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿಗಳೆಂಬ ಅವಸ್ಥೆಗಳು.

ಪ್ರ ೫೮ : **ಭೂತಗಳೆಂದರೇನು ?**

ಉ : "ಭವತಿ ಇತಿ ಭೂತಃ" – ಯಾವುದು ಆಗುತ್ತದೆಯೋ ಅದು ಭೂತ. ಭೂತಗಳು ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿ ಎಂಬುದಾಗಿ ಐದು. ಈ ಪಂಚ ಮಹಾಭೂತಗಳಿಂದ ಆಗಿರುವ ವಸ್ತುಗಳಿಗೆ ಭೌತಿಕ ವಸ್ತುಗಳೆನ್ನುತ್ತಾರೆ.

ಪ್ರ ೫೯ : **ಅಜ್ಞಾನವೆಂದರೇನು ?**

ಉ : ಅಜ್ಞಾನವು ೧. ಆವರಣ ವಿಕ್ಷೇಪಗಳೆಂಬ ಶಕ್ತಿಗಳಿಂದ ಕೂಡಿದ್ದು, ೨. ಭಾವರೂಪವಾದದ್ದು, ೩. ಅನಾದಿ ಸಾಂತವಾದುದು, ೪. ಭ್ರಾಂತಿ ಹುಟ್ಟಿಸುವುದು ಮತ್ತು ೫. ಏಕವಾಗಿರುವುದು.

ಪ್ರ ೬೦ : **ಈಶ್ವರನ ಸ್ವರೂಪದ ವಾಚ್ಯಾರ್ಥವೇನು ?**

ಉ : ಈಶ್ವರನ ಸ್ವರೂಪಕ್ಕೆ ಪ್ರಧಾನವಾಗಿ ವಾಚ್ಯಾರ್ಥವೆನಿಸಿಕೊಳ್ಳುವುದು ಮೂರು ಸ್ವರೂಪಗಳು :

೧. ಕಾರ್ಯ, ೨. ಕಾರಣ, ೩. ಅಧಿಷ್ಠಾನ. ವಿರಾಟ್, ಹಿರಣ್ಯಗರ್ಭ, ಅವ್ಯಾಕೃತಗಳೆಂಬ ಮೂರು ದೇಹಗಳು, ವೈಶ್ವಾನರ, ಸೂತ್ರಾತ್ಮ, ಅಂತರ್ಯಾಮಿಗಳೆಂಬ ಮೂರು ಅಭಿಮಾನಿಗಳು, ಸೃಷ್ಟಿ, ಸ್ಥಿತಿ, ಪ್ರಳಯಗಳೆಂಬ ಮೂರು ಅವಸ್ಥೆಗಳು – ಈ ಒಂಭತ್ತು ಸೇರಿ ಕಾರ್ಯವೆನಿಸುತ್ತದೆ. ಹತ್ತನೆಯದಾದ ಮಾಯೆಯೇ ಕಾರಣ. ಹನ್ನೊಂದನೆಯದಾದ ಪರಬ್ರಹ್ಮವೇ ಅಧಿಷ್ಠಾನ. ಇವೆಲ್ಲಾ ಸೇರಿ ಈಶ್ವರ ಸ್ವರೂಪದ ವಾಚ್ಯಾರ್ಥವೆನಿಸುತ್ತದೆ.

ಪ್ರ ೬೧ : **ಈಶ್ವರ ಸ್ವರೂಪಕ್ಕೆ ಲಕ್ಷ್ಯಾರ್ಥವೇನು ?**

ಉ : ಮೇಲೆ ಹೇಳಿದ ಕಾರ್ಯ, ಕಾರಣಗಳಾದ ಹತ್ತು ವಸ್ತುಗಳನ್ನೂ ಬಿಟ್ಟು, ಹನ್ನೊಂದನೆಯದಾದ ಅಧಿಷ್ಠಾನವಾದ ಪರಬ್ರಹ್ಮವೇ ಈಶ್ವರ ಸ್ವರೂಪಕ್ಕೆ ಲಕ್ಷ್ಯಾರ್ಥ.

ಪ್ರ ೬೨ : **ಜೀವನ ಸ್ವರೂಪಕ್ಕೆ ವಾಚ್ಯಾರ್ಥವೇನು ?**

ಉ : ಜೀವನ ಸ್ವರೂಪಕ್ಕೆ ಕೆಳಗಿನ ಮೂರು ಅಂಶಗಳು ಸೇರಿವೆ :

೧) ಕಾರ್ಯ — ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳು ; ವಿಶ್ವ, ತೈಜಸ, ಪ್ರಾಜ್ಞರೆಂಬ ಮೂರು ಜೀವರುಗಳು ; ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳು – ಈ ಒಂಭತ್ತು ಸೇರಿ 'ಕಾರ್ಯ'ವೆನಿಸುತ್ತದೆ.

೨) ಕಾರಣ—ಅವಿದ್ಯೆ.

೩) ಅಧಿಷ್ಠಾನ—ಕೂಟಸ್ಥ ಚೇತನ.

ಈ ಮೂರೂ 'ಜೀವನ' ಸ್ವರೂಪಕ್ಕೆ ವಾಚ್ಯಾರ್ಥಗಳಾಗಿವೆ.

ಪ್ರ ೬೪ : **ಜಗತ್ತು, ಜೀವ, ಈಶ್ವರ – ಈ ಮೂರರ ವಿಚಾರಕ್ಕೆ ಫಲವೇನು ?**

ಉ : ಜಗತ್ತೇನು ಎಂಬುದಾಗಿ ವಿಚಾರ ಮಾಡುತ್ತಾ ಹೊರಟರೆ, ಅದು ಹಗ್ಗದಲ್ಲಿ ಕಂಡ ಹಾವನ್ನು ವಿಚಾರ ಮಾಡುತ್ತಾ ಹೋದರೆ ಹಾವು ಮಿಥ್ಯೆ ಯಾಗಿ ಹಗ್ಗವೊಂದೇ ಉಳಿಯುವಂತೆ, ಮೋಟು ಮರದಲ್ಲಿ ಕಂಡ ಕಳ್ಳ, ಮರು ಮರೀಚಿಕೆ, ಜಲ ಇವುಗಳನ್ನು ವಿಚಾರ ಮಾಡ ಹೊರಟರೆ ಅವು ಇಲ್ಲ ವಾಗುವಂತೆ, ಜಗತ್ತೂ ಸಹ ಸುಳ್ಳಾಗುತ್ತದೆ. ಸ್ವಪ್ನ ಸಾಕ್ಷಿಯನ್ನು ವಿಚಾರ ಮಾಡಿದಾಗ ಸ್ವಪ್ನವು ಮಿಥ್ಯೆಯಾಗುವಂತೆ, ಜಗತ್ತಿನ ಸ್ವರೂಪವನ್ನು ವಿಚಾರ ಮಾಡ ಹೊರಟರೆ ಅದು ಕೇವಲ ನುಡಿ ಮಾತ್ರವಾಗಿರುವುದರಿಂದ ಮಿಥ್ಯೆ ಎಂಬುದಾಗಿ ತಿಳಿದು ಬರುತ್ತದೆ ಜೀವೇಶ್ವರರ ವಿಚಾರ ಮಾಡು ವುದರಿಂದ, ಇವರಲ್ಲಿ ತೋರುವ ಸರ್ವಜ್ಞತ್ವ, ಕಿಂಚಿಜ್ಞತ್ವಾದಿ ವಿಷಮತ್ವವು ವಾಚ್ಯಾರ್ಥಕ್ಕೆ ಸೇರಿರುವುದರಿಂದ ಅವು ಮಿಥ್ಯೆ ಎಂಬುದಾಗಿ ಕಳೆದು, ಇಬ್ಬರ ಲಕ್ಷ್ಯಾರ್ಥವಾದ ಚೇತನದಲ್ಲಿ ಯಾವ ಭೇದವೂ ಇಲ್ಲವೆಂಬುದಾಗಿ ತಿಳಿದು ಬರುತ್ತದೆ. "ಬ್ರಹ್ಮಸತ್ಯಂ ಜಗನ್ಮಿಥ್ಯಂ ಜೀವೋ ಬ್ರಹ್ಮೈವನಾಪರಃ" ಎಂಬ ತೀರ್ಮಾನವೇ ಈ ಮೂರರ ವಿಚಾರದಿಂದಾಗುವ ಫಲ

ಪ್ರ ೬೫ : **ಆತ್ಮವಿಚಾರ ಅಥವಾ ಜೀವೇಶ್ವರರ ವಿಚಾರಕ್ಕೆ ಅಧಿ ಕಾರಿ ಯಾರು ?**

ಉ : ಪ್ರತಿಯೊಂದು ವಸ್ತುವಿಗೂ ಒಬ್ಬೊಬ್ಬ ಅಧಿಕಾರಿಯಿರುತ್ತಾನೆ ಹೇಗೆಂದರೆ, ಹಸಿದವನೇ ಊಟಕ್ಕೆ ಅಧಿಕಾರಿ; ರೋಗಿಯೇ ಔಷಧಕ್ಕೆ ಅಧಿ ಕಾರಿ ; ಹೈಸ್ಕೂಲ್ ದಾಟಿದವನೇ ಕಾಲೇಜಿಗೆ ಸೇರಲು ಅಧಿಕಾರಿ ; ಅನಧಿ ಕಾರಿಗೆ ವಸ್ತುವನ್ನು ಕೊಟ್ಟರೆ ಅದರ ಯೋಗ್ಯತೆ ಆತನಿಗೆ ತಿಳಿಯದೆ ಅದು ಹಾಳಾಗುವುದಲ್ಲದೆ ಅದನ್ನು ಪಡೆದವನಿಗೂ ತೊಂದರೆಯೇ ಆಗುತ್ತದೆ.

ಉದಾ : ಒಂದು ಸಣ್ಣ ಮಗುವಿನ ಕೈಗೆ ಚಾಕು ಕೊಟ್ಟಂತೆ.

ಇದರಂತೆ ಯಾವಾತನು ಶಾಸ್ತ್ರಗಳಲ್ಲಿ ಹೇಳಿರುವ ಪ್ರಕಾರ ಹಿಂದಿ ನಿಂದಲೂ ನಿಷ್ಕಾಮ ಕರ್ಮ, ಉಪಾಸನೆಗಳಿಂದ ಅಂತಃಕರಣದ ಮಲ ವಿಕ್ಷೇಪ ದೋಷಗಳನ್ನು ಕಳೆದುಕೊಂಡು, ಸಾಧನ ಚತುಷ್ಟಯ ಸಂಪತ್ತನ್ನು

ಪಡೆದುಕೊಂಡು, ಸದ್ಗುರುಗಳ ಬಳಿಗೆ ಶ್ರವಣಕ್ಕಾಗಿ ಹೋಗುವನೋ ಅವನೇ ಆತ್ಮವಿಚಾರಕ್ಕೆ ಅಧಿಕಾರಿ.

ಪ್ರ ೬೬ : **ಮಲ, ವಿಕ್ಷೇಪ, ಆವರಣ ದೋಷಗಳಿಗೆ ಸ್ಥಾನ ಯಾವುದು ?**

ಉ : ಅಂತಃಕರಣ ಅಥವಾ ಸೂಕ್ಷ್ಮ ದೇಹವೇ ಸ್ಥಾನ.

ಪ್ರ ೬೭ : **ನಮ್ಮಲ್ಲಿ ಮಲ ದೋಷ ಇನ್ನೂ ಇರುವುದೇ ಅಥವಾ ಇಲ್ಲವೇ ಎಂಬುದನ್ನು ಹೇಗೆ ಗುರುತಿಸುವುದು ?**

ಉ : ಅಂತಃಕರಣ ಅಥವಾ ಮನಸ್ಸಿನಲ್ಲಿ ವಿಷಯಾಸಕ್ತಿ, ಕಾಮ ಕ್ರೋಧಾದಿಗಳಿದ್ದರೆ ಮಲದೋಷವಿದೆ ಎಂದು ತಿಳಿದುಕೊಳ್ಳಬೇಕು. "ಊಟಕ್ಕೆ ವಿಷಯಕ್ಕೆ ಮರುಗುತಿರ್ಪಾತಂಗೆ ಕೂಟವಪ್ಪುದೇ ಶಿವಪಥ ದೊಳು" ಎಂಬಂತೆ ಸದಾ ವಿಷಯಗಳಲ್ಲೇ ಆಸಕ್ತನಾಗಿರುವವನು ಮಲ ದೋಷವುಳ್ಳವನೆಂದು ಗುರುತಿಸಬಹುದು.

ಪ್ರ ೬೮ : **ವಿಕ್ಷೇಪ ದೋಷದ ಪರಿಚಯವೇನು ?**

ಉದಾ : ವರ್ತೆಯ ನೀರು ಅಲ್ಲಾಡುತ್ತಿದ್ದರೆ ಅದರ ತಳ ಸ್ಪಷ್ಟವಾಗಿ ಕಾಣಲಾರದು. ಇದರಂತೆ ಅಂತಃಕರಣವೆಂಬ ಜಲವು ಚಂಚಲತೆಯಿಂದ ಕೂಡಿದ್ದರೆ ಅದರ ತಳದೋಪಾದಿಯಾಗಿ ಅಧಿಷ್ಠಾನವಾಗಿರುವ ಆತ್ಮನು ಸರಿ ಯಾಗಿ ಕಾಣಿಸುವುದಿಲ್ಲ.

ಪ್ರ ೬೯ : **ಆವರಣ ದೋಷದ ಪರಿಚಯವೇನು ?**

ಉ : 'ನೀನಾರು ?' ಎಂದು ಯಾರಾದರೂ ಪ್ರಶ್ನಿಸಿದರೆ, ನಾನು ತಿಮ್ಮಪ್ಪನ ಮಗ, ಬೊಮ್ಮಪ್ಪನ ಮಗ ಇತ್ಯಾದಿಯಾಗಿ ಹೇಳಿ, ದೇಹವನ್ನೇ ತೋರಿಸಿ 'ಇದೇ ನಾನು' ಎನ್ನುತ್ತೇವೆ. "ಏನಯ್ಯಾ, ಈ ಜಡವಾದ ದೇಹ ನೀನು ಹೇಗೆ ಆಗುವೆ ? ಇದಕ್ಕಿಂತ ನೀನು ಬೇರೆಯಾಗಿರುವೆ. ನಿನ್ನ ಸ್ವರೂಪವೇನು ?" ಎಂದು ಪ್ರಶ್ನಿಸಿದರೆ, "ಹಾಗಾದರೆ ನಾನಾರೋ ನನಗೆ ತಿಳಿಯದು ಸ್ವಾಮಿ" ಎಂದುತ್ತರ ಕೊಡುತ್ತೇವೆ. ಇದೇ ಆವರಣ ದೋಷದ ಪರಿಚಯ.

ಪ್ರ ೭೦ : **ಇವುಗಳಿಗೆ ನಿವಾರಣೋಪಾಯವೇನು ?**

ಉ : ನಿಷ್ಕಾಮ ಕರ್ಮೋಪಾಸನೆಗಳಿಂದ ಮಲವಿಕ್ಷೇಪ ದೋಷ

ಗಳನ್ನೂ, ಶ್ರವಣ ಮನನಾದಿ ನಿಧಿಧ್ಯಾಸದಿಂದ ಅಸಂಭಾವನಾ, ವಿಪರೀತ ಭಾವನಾ ದೋಷಗಳನ್ನೂ ನಿವಾರಿಸಿಕೊಳ್ಳಬೇಕು.

ಪ್ರ ೭೧ : **ಸಾಧನ ಚತುಷ್ಟಯ ಸಂಪತ್ತಿ ಎಂದರೇನು ?**

ಉ : ಸಾಧನ ಅಥವಾ ಪುರುಷಾರ್ಥವನ್ನು ಮಾಡಿ ನಮ್ಮಲ್ಲಿರುವ ದುರ್ಗುಣಗಳ ಸಮೂಹ ಅಥವಾ ಕಾಮಾದಿಗಳೆಂಬ ಅರಿಷಡ್ವರ್ಗಗಳನ್ನು ಗೆಲ್ಲುವುದರಿಂದ ಯಾವ ನಾಲ್ಕು ಉತ್ತಮ ಗುಣಗಳು ಪ್ರಾಪ್ತವಾಗುವುವೋ ಅವುಗಳಿಗೆ ಸಾಧನ ಚತುಷ್ಟಯ ಸಂಪತ್ತಿ ಎನ್ನುತ್ತಾರೆ. ಮುಖ್ಯವಾಗಿ ಸಾಧನ ಚತುಷ್ಟಯಗಳು ನಾಲ್ಕು: ೧. ವಿವೇಕ, ೨. ವೈರಾಗ್ಯ, ೩. ಶಮಾದಿ ಷಟ್ಕ ಸಂಪತ್ತಿ, ಮತ್ತು ೪. ಮುಮುಕ್ಷುತ್ವ.

ಪ್ರ ೭೨ : **ಇವುಗಳನ್ನು ಸಂಪತ್ತೆಂದು ಕರೆಯಲು ಕಾರಣ ವೇನು ?**

ಉ : ಸಂಪತ್ತೆಂದರೆ ಐಶ್ವರ್ಯ. ಲೌಕಿಕ ಜನರು ದುಡ್ಡು ಕಾಸು, ಒಡವೆ ವಸ್ತು, ಮನೆ ಮಠ ಇತ್ಯಾದಿಗಳು ಯಾರ ಬಳಿ ಹೇರಳವಾಗಿರುತ್ತದೋ ಅವರನ್ನು ಶ್ರೀಮಂತರೆಂದೂ, ಬಹಳ ಸಂಪತ್ತುಳ್ಳವರೆಂದೂ ಮತ್ತೆ ಕೆಲವರು ದೊಡ್ಡ ಅಧಿಕಾರಗಳಿರುವುದು, ಆರೋಗ್ಯವಿರುವುದೇ ಸಂಪತ್ತು ಎಂದೂ ತಿಳಿದಿರುತ್ತಾರೆ. ಆದರೆ ಪಾರಮಾರ್ಥದಲ್ಲಿ ಈ ಸಂಪತ್ತುಗಳು ಉಪಯೋಗಕ್ಕೆ ಬರುವುದಿಲ್ಲ. ದುಡ್ಡು ಕೊಟ್ಟು ಗುರುಗಳಿಂದ ಜ್ಞಾನ ಪಡೆಯಬಹುದಾಗಿದ್ದರೆ ಶ್ರೀಮಂತರೆಲ್ಲಾ ಜ್ಞಾನಿಗಳಾಗಬಹುದಾಗಿದ್ದಿತು. ಆದರೆ ಹೀಗೆ ಯಾರೂ ಆಗಿಲ್ಲ. ಆದ್ದರಿಂದ ಲೌಕಿಕ ಸಂಪತ್ತು ನಿಜವಾದ ಸಂಪತ್ತಲ್ಲ. ಯಾವ ಸಂಪತ್ತನ್ನು ಗಳಿಸುವುದರಿಂದ ನಮಗೆ ಅಮೂಲ್ಯವಾದ ಬ್ರಹ್ಮಜ್ಞಾನವು ದೊರಕಿ ತದ್ವಾರ ಜನ್ಮರಾಹಿತ್ಯ ಉಂಟಾಗುವುದೋ ಅದೇ ನಿಜವಾದ ಸಂಪತ್ತು. ಈ ಸಾಧನ ಚತುಷ್ಟಯಗಳಲ್ಲಿ ಈ ಶಕ್ತಿ ಇರುವುದರಿಂದ ಇವುಗಳನ್ನು ಸಂಪತ್ತೆಂದು ಕರೆದಿದ್ದಾರೆ. ಸದ್ಗುರುಗಳು ಶಿಷ್ಯನಲ್ಲಿ ಈ ಸಂಪತ್ತಿರುವುದೋ ಇಲ್ಲವೋ ಎಂದು ಪರೀಕ್ಷಿಸಿ ನೋಡಿ, ಇದ್ದರೆ ಅವನನ್ನು ಆದರಿಸಿ, ಗೌರವಿಸಿ, ಪ್ರೇಮದಿಂದ ಮಹಾವಾಕ್ಯ ಉಪದೇಶ ಮಾಡಿ ಅವನನ್ನು ಮುಕ್ತನನ್ನಾಗಿ ಮಾಡುತ್ತಾರೆ.

ಪ್ರ ೭೩ : **ಸಾಧನ ಚತುಷ್ಟಯಗಳಲ್ಲಿ ಮೊದಲನೆಯದಾದ ವಿವೇಕ ಎಂದರೇನು ?**

ಉ : 'ವಿವೇಕ'ದಲ್ಲಿ ಸಾಧಾರಣ ವಿವೇಕವೆಂದೂ, ವಿಶೇಷ ವಿವೇಕ ವೆಂದೂ ಎರಡು ವಿಧವಾಗಿದೆ.

ಗ್ರಂಥಗಳನ್ನೋದಿ ಆತ್ಮಾನಾತ್ಮರುಗಳನ್ನು ವಿಭಜನೆ ಮಾಡಿ ತಿಳಿಯು ವುದು ಸಾಧಾರಣ ವಿವೇಕ. ಇದರಿಂದ ವೈರಾಗ್ಯವು ಹುಟ್ಟುವುದಿಲ್ಲ.

ಅಂತಃಕರಣದ ಮಲವಿಕ್ಷೇಪ ದೋಷಗಳನ್ನು ಕಳೆದುಕೊಂಡು ಶುದ್ಧ ವಾದ ಹೃದಯದಲ್ಲಿ ಉದಯಿಸಿದ ವಿವೇಕವೇ ವಿಶೇಷ ವಿವೇಕ. ಇದರಿಂದ ವೈರಾಗ್ಯವು ತಾನಾಗಿ ಜನಿಸುತ್ತದೆ. ಇದನ್ನು ನಿತ್ಯಾನಿತ್ಯ ವಸ್ತು ವಿವೇಕ ವೆಂದು ಕರೆಯುತ್ತಾರೆ.

ಪ್ರ ೭೪ : **ವೈರಾಗ್ಯವೆಂದರೇನು ?**

ಉ : ವಿ + ರಾಗ = ವೈರಾಗ್ಯ. ವಿಷಯಗಳಲ್ಲಿ ರಾಗವಿಲ್ಲದಿರುವುದೇ ವೈರಾಗ್ಯ. ಭಗವದ್ಗೀತೆಯ ೧೩ನೇ ಅಧ್ಯಾಯದಲ್ಲಿ "ಅಸಕ್ತಿರನ ಭಿಷ್ವಂಗಃ ಪುತ್ರದಾರ ಗೃಹಾದಿಷು" ಎಂಬುದಾಗಿಯೂ, "ಇಂದ್ರಿಯಾರ್ಥೇಷು ವೈರಾಗ್ಯಂ" ಎಂದೂ ಮುಂತಾಗಿ ಹೇಳಿದೆ. ಈ ವೈರಾಗ್ಯದಲ್ಲೂ ಪುರಾಣ ವೈರಾಗ್ಯ, ಸ್ಮಶಾನ ವೈರಾಗ್ಯ, ಪ್ರಸೂತಿ ವೈರಾಗ್ಯ ಮತ್ತು ಕ್ಷಣಿಕ ವೈರಾಗ್ಯ ಗಳೆಂಬುದಾಗಿ ಅನೇಕ ವಿಧದ ವೈರಾಗ್ಯಗಳಿವೆ. ಇವುಗಳಿಂದ ಯಾವ ಪ್ರಯೋಜನವೂ ಇಲ್ಲ. ವಾಂತಿ ಮಾಡಿದ ಅನ್ನದಲ್ಲಿ ದೋಷವನ್ನು ಕಂಡು ಅದನ್ನು ಪುನಃ ತಿನ್ನದಂತೆ, ಊಟದಲ್ಲಿ ಒಂದು ಹನಿ ವಿಷ ಬೆರೆತಿದೆ ಎಂದು ತಿಳಿದರೆ ಅದು ಎಷ್ಟೇ ಮಧುರ ಮನೋಹರವಾಗಿ ಕಂಡರೂ ಅದನ್ನು ಊಟ ಮಾಡದಂತೆ, ಉಪ್ಪಿನ ಕಾಯಿಯಲ್ಲಿ ಹುಳು ಬಿದ್ದಿದೆ ಎಂದು ತಿಳಿದರೆ ಅದನ್ನು ಬಿಸಾಕುವಂತೆ, ಇಹಲೋಕದ ಸುಖವು ಅನಿತ್ಯವಾದುದೆಂಬ, ಆಸೆಗಳನ್ನು ಹೆಚ್ಚಿಸುವುದೆಂಬ, "ಭೋಗ ರೋಗ ಭಯಂ"—ವಿಷಯ ಭೋಗಾನಂತರ ಅದು ರೋಗಕ್ಕೆ ಕಾರಣವಾಗುವುದೆಂಬ ದೋಷಗಳನ್ನು ಕಂಡು, ಇಹಲೋಕ ಸುಖವನ್ನು ತ್ಯಾಗ ಮಾಡುವುದು ಮತ್ತು ಕ್ಷಯ, ಸಾತಿಶಯ, ಪತನಗಳೆಂಬ ದೋಷಗಳಿಂದ ಪರಲೋಕ ಸುಖವು ಕೂಡಿರುವುದರಿಂದ ಅದನ್ನೂ ತ್ಯಾಗ ಮಾಡಿ, ಪುನರಾವೃತ್ತಿ ರಹಿತವಾದ, ಶಾಶ್ವತವಾದ ನಿರ್ವಿಷಯಾನಂದ

ಸ್ವರೂಪವೇ ಆಗಿರುವ ಮೋಕ್ಷವನ್ನು ಬಿಟ್ಟು ಮತ್ಯಾವ ಸುಖವೂ ನನಗೆ ಬೇಡ ಎಂಬುದಾಗಿ ದೃಢ ನಿಶ್ಚಯ ಮಾಡುವುದೇ ವೈರಾಗ್ಯ. ವಿಷಯಗಳಲ್ಲಿ ದೋಷಗಳನ್ನು ಕಂಡು, ವಿವೇಕಯುಕ್ತವಾದ ಬುದ್ಧಿಯಿಂದ ವಿಚಾರಮಾಡಿ, ಅವುಗಳನ್ನು ತ್ಯಾಗ ಮಾಡುವುದೇ ವಿರಾಗ. ಇಂತಹ ತ್ಯಾಗದಿಂದಲೇ ಮೋಕ್ಷವೆಂಬುದಾಗಿ ಕೈವಲ್ಯೋಪನಿಷತ್ತಿನಲ್ಲಿ "ತ್ಯಾಗೇನೈಕೇ ಅಮೃತತ್ವ ಮಾನಶುಃ" ಎಂಬುದಾಗಿ ಹೇಳಿದೆ.

ಪ್ರ ೭೫ : **ಶಮಾದಿಗಳೆಷ್ಟು? ಅವುಗಳ ಹೆಸರೇನು ?**

ಉ : ಶಮಾದಿಗಳು ಆರು : ೧. ಶಮ, ೨. ದಮ, ೩. ತಿತಿಕ್ಷೆ, ೪. ಸಮಾಧಾನ, ೫. ಉಪರತಿ, ೬. ಶ್ರದ್ಧೆ.

ಪ್ರ ೭೬ : **ಶಮ ಎಂದರೇನು ?**

ಉ : ಶಮವೆಂದರೆ ಮನೋನಿಗ್ರಹ.

ಉದಾ : ಮದೋನ್ಮತ್ತವಾದ ಆನೆಯನ್ನು ಮಾವಟಿಗನು ಅಂಕುಶ ದಿಂದ ತಿವಿದು ತನ್ನ ವಶದಲ್ಲಿಟ್ಟುಕೊಂಡಿರುವಂತೆ, ಮನಸ್ಸೆಂಬ ಗಜವು ಮದೋನ್ಮತ್ತವಾಗಿ ವಿಷಯಗಳೆಂಬ ಅರಣ್ಯದಲ್ಲಿ ಸ್ವೇಚ್ಛೆಯಾಗಿ ಹೋಗ ದಂತೆ, ಅದನ್ನು – ಜನ್ಮ ಮೃತ್ಯು ಜರಾವ್ಯಾಧಿ ದುಃಖದೋಷಾನು ದರ್ಶನಂ– ವಿಷಯಗಳಲ್ಲಿ ದೋಷ ದರ್ಶನ ಮಾಡಿಸುವುದೆಂಬ ಅಂಕುಶದ ಸಹಾಯದಿಂದ ಅದನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವುದು 'ಶಮ'ವೆನಿಸುತ್ತದೆ.

ಪ್ರ ೭೭ : **ದಮವೆಂದರೇನು ?**

ಉ : ಬಾಹ್ಯೇಂದ್ರಿಯಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವುದಕ್ಕೆ ದಮವೆಂದು ಹೆಸರು. ಅಂದರೆ ಪಂಚಜ್ಞಾನೇಂದ್ರಿಯ ಹಾಗೂ ಪಂಚ ಕರ್ಮೇಂದ್ರಿಯಗಳಿಂದ ಶಾಸ್ತ್ರಸಮ್ಮತವಾದ, ವೇದಸಮ್ಮತವಾದ, ಆತ್ಮೋ ದ್ಧಾರಕ್ಕೆ ಸಾಧನವಾದ ಕೆಲಸಗಳನ್ನೇ ಮಾಡುವುದಕ್ಕೆ ದಮವೆನ್ನಬಹುದು.

ಹೀಗೆ ಮನಸ್ಸೆಂಬ ಲಗಾಮನ್ನೂ, ಇಂದ್ರಿಯಗಳೆಂಬ ಕುದುರೆಗಳನ್ನೂ ತನ್ನ ವಶದಲ್ಲಿಟ್ಟುಕೊಂಡಿರುವ ಬುದ್ಧಿ ಎಂಬ ಸಾರಥಿಯು ಶರೀರವೆಂಬ ರಥದಲ್ಲಿ ಕುಳಿತು ತನ್ನ ಸ್ವಧಾಮವನ್ನು ಸೇರಬಲ್ಲನು.

ಪ್ರ ೭೮ : **ತಿತಿಕ್ಷೆ ಎಂದರೇನು ?**

ಉ : ತಿತಿಕ್ಷೆ ಎಂದರೆ ಸಹನೆ. **ಶೀತ–ಉಷ್ಣ,** ಸುಖ–ದುಃಖ, **ಮಾನ–**

ಅವಮಾನ, ಲಾಭ–ನಷ್ಟ ಇತ್ಯಾದಿ ದ್ವಂದ್ವಗಳನ್ನು ವಿವೇಕದಿಂದ ಅಂದರೆ ಇವು ಆಗಮಾಪಾಯಿಗಳು ಅರ್ಥಾತ್ ಬಂದು ಹೋಗತಕ್ಕವುಗಳೆಂದು ತಿಳಿದು ಸಹಿಸುವುದು. ಶಕ್ತಿ ಇಲ್ಲದೆ ಬಲಾತ್ಕಾರದಿಂದಾಗಲೀ ಅಥವಾ ಮತ್ತೊಬ್ಬರ ದಾಕ್ಷಿಣ್ಯಕ್ಕಾಗಲೀ ಸಹಿಸುವುದಲ್ಲ. ಜಟಕಾ ಗಾಡಿಯ ಕುದುರೆ ನೆಟ್ಟನ್ನು ಸಹಿಸಿದಂತೆ ಅಥವಾ ಕೂಲಿಯವನು ಭಾರ ಹೊತ್ತು ಅದನ್ನು ಸಹಿಸಿಕೊಳ್ಳು ವಂತೆ – ಅಂದರೆ ಒಳಗೆ ಅಸಹನೆ, ಹೊರಗೆ ಸಹನೆ ಇರುವುದಲ್ಲ. ಒಳಗೂ ಶಾಂತಿ, ಹೊರಗೂ ಸಹನೆ – ಈ ರೀತಿ ಇರುವುದಕ್ಕೆ ತಿತಿಕ್ಷೆ ಎನ್ನುತ್ತಾರೆ.

ಪ್ರ ೭೯ : **ಸಮಾಧಾನವೆಂದರೇನು ?**

ಉ : ಸಮಾಧಾನವೆಂದರೆ ಶಾಂತಿಯಿಂದಿರುವುದು ಅಂದರೆ ಭಗವಂತನು ಮಾಡುವುದೆಲ್ಲಾ ನಮ್ಮ ಒಳ್ಳೆಯದಕ್ಕೇ ಎಂದು ಭಾವಿಸಿ ಮನಸ್ಸನ್ನು ಒಂದೇ ಸಮವಾಗಿರಿಸಿಕೊಳ್ಳುವುದಕ್ಕೆ ಸಮಾಧಾನವೆಂದು ಹೆಸರು.

ಪ್ರ ೮೦ : **ಉಪರತಿ ಎಂದರೇನು ?**

ಉ : ವಿಷಯಗಳ ಕಡೆ ಧಾವಿಸುವ ಮನಸ್ಸನ್ನು ಆತ್ಮನ ಕಡೆಗೆ ತಿರುಗಿಸಿಕೊಳ್ಳುವುದು ಅಥವಾ ವೈರಾಗ್ಯ ಸಾಧನೆಯ ಕಾಲದಲ್ಲಿ ದೋಷ ಗಳಿಂದ ಕೂಡಿದವುಗಳೆಂದು ತಿಳಿದು ತ್ಯಜಿಸಿದ ವಿಷಯಗಳನ್ನು ಮತ್ತೆಂದೂ ಬಯಸದಂತಿರುವುದು ; ಒಂದು ವೇಳೆ ಅವು ತಾವಾಗಿಯೇ ಬಂದರೂ ಸಹ ಭೋಗಿಸದಂತಿರುವುದು ; ಅಥವಾ ಮನಸ್ಸು ಸತಿ, ಪ್ರತ್ಯಗಾತ್ಮನು ಪತಿ – ಮನಸ್ಸೆಂಬ ಸತಿಯು ತನ್ನ ಪತಿಯಾದ ಪ್ರತ್ಯಗಾತ್ಮನನ್ನು ಬಿಟ್ಟು ಇತರ ವಿಷಯಗಳ ಕಡೆ ಹೋಗದಂತಿರುವುದು. 'ಉಪರತಿ' ಎಂಬ ಪದಕ್ಕೆ ಈ ಮೂರು ಅರ್ಥಗಳಲ್ಲಿ ಯಾವುದನ್ನಾದರೂ ಗ್ರಹಿಸಬಹುದು.

**ಪ್ರ** ೮೧ : **ಶ್ರದ್ಧೆ ಎಂದರೇನು ?**

ಉ : ಗುರುವಾಕ್ಯಗಳಲ್ಲಿಯೂ, ಶಾಸ್ತ್ರ ವಿಷಯದಲ್ಲಿಯೂ ದೃಢ ನಂಬಿಕೆ ಇಡುವುದೇ ಶ್ರದ್ಧೆ.

ಪ್ರ ೮೨ : **ಶಮಾದಿ ಷಟ್ ಸಂಪತ್ತಿಯಲ್ಲಿ 'ಶ್ರದ್ಧೆ' ಎಂಬುದು ಅಂತ್ಯದಲ್ಲಿ ಬರಲು ಕಾರಣವೇನು ?**

ಉ : 'ಶ್ರದ್ಧೆ' ಎಂಬುದು ಒಂದು ಪಾತ್ರೆ ಇದ್ದಂತೆ. ಈ ಶ್ರದ್ಧೆ ಎಂಬ ಪಾತ್ರೆ ಸರಿಯಾಗಿದ್ದರೆ ಅಂದರೆ ಭದ್ರವಾಗಿದ್ದರೆ ಅದರಲ್ಲಿ ಯಾವ ಸಾಮಾನು

ಹಾಕಿದರೂ ಅದರ ರಕ್ಷಣೆಯಾಗುವುದು. ಪಾತ್ರೆಯೇ ಭದ್ರವಾಗಿಲ್ಲದಿದ್ದರೆ ಅದರಲ್ಲಿ ಹಾಕುವ ವಸ್ತುಗಳೂ ಹಾಳಾಗುವಂತೆ, ಶ್ರದ್ಧೆ ಇಲ್ಲದಿದ್ದರೆ ಮೇಲೆ ಹೇಳಿದ ಶಮಾದಿಗಳಿದ್ದೂ ಫಲವಿಲ್ಲ ಮತ್ತು ಶ್ರದ್ಧೆ ಇಲ್ಲದೆ ಯಾವ ಕೆಲಸ ಮಾಡಿದರೂ ಅದರ ಸರಿಯಾದ, ಶುದ್ಧವಾದ ಫಲ ದೊರೆಯುವುದಿಲ್ಲ. ಆದುದರಿಂದಲೇ ಭಗವದ್ಗೀತೆಯ ೪ನೇ ಅಧ್ಯಾಯದಲ್ಲಿ 'ಶ್ರದ್ಧಾವಾನ್ ಲಭತೇ ಜ್ಞಾನಂ' ಎಂದು ಹೇಳಿದೆ.

ಪ್ರ ೮೩: **ಮುಮುಕ್ಷುತ್ವ ಎಂದರೇನು ?**

ಉ: ಮುಮುಕ್ಷುತ್ವವೆಂದರೆ ಮೋಕ್ಷದ ಇಚ್ಛೆ. ಮೋಕ್ಷವೆಂದರೂ, ಸುಖವೆಂದರೂ ಒಂದೇ. ಅಂದ ಮೇಲೆ ಸುಖವನ್ನು ಇಚ್ಛಿಸುವವರೆಲ್ಲರೂ ಮುಮುಕ್ಷುಗಳೇ? ಎಂಬ ಶಂಕೆ ಬರುತ್ತದೆ. ಹಾಗಲ್ಲ. ವಿಷಯ ಸುಖ, ಇಂದ್ರಿಯ ಸುಖಗಳನ್ನು ಬಯಸುವವರೆಲ್ಲಾ ಮುಮುಕ್ಷುಗಳೆನಿಸುವುದಿಲ್ಲ; ಸರ್ವ ದುಃಖಗಳ ಆತ್ಯಂತಿಕ ನಿವೃತ್ತಿ, ಪರಮಾನಂದ ಪ್ರಾಪ್ತಿಯು ಮೋಕ್ಷ. ಅದಕ್ಕಾಗಿ ಬಯಸುವವರು ಮುಮುಕ್ಷುಗಳು.

ಈ ಮುಮುಕ್ಷುಗಳಲ್ಲೂ ಎರಡು ವಿಧ: ಮಂದ ಮುಮುಕ್ಷುಗಳು, (೨) ತೀವ್ರ ಮುಮುಕ್ಷುಗಳು. ಪ್ರಪಂಚ ಸುಖವೂ ಬೇಕು, ಮೋಕ್ಷವೂ ಬೇಕು ಎಂದು ಬಯಸುವವರು ಮಂದ ಮುಮುಕ್ಷುಗಳು. ಆದರೆ ಸಂಸಾರದ ತಾಪತ್ರಯವೆಂಬ ಅಗ್ನಿಯಲ್ಲಿ ಬೆಂದು, ಇದರಿಂದ ಕೂಡಲೇ ಪಾರಾಗಬೇಕು, ಮೋಕ್ಷವೊಂದೇ ನಮಗೆ ಬೇಕು ಎಂದು ತೀವ್ರವಾಗಿ ಇಚ್ಛಿಸುವವರು ತೀವ್ರ ಮುಮುಕ್ಷುಗಳು.

ಉದಾ: ಮನೆಗೆ ಬೆಂಕಿ ಹತ್ತಿದಾಗ, ತಾನು ಮೊದಲು ಪ್ರಾಣಸಹಿತ ಪಾರಾಗಬೇಕೆಂದು ಹೇಗೆ ತೀವ್ರೇಚ್ಛೆ ಮಾಡುತ್ತಾನೋ, ನೀರಿನಲ್ಲಿ ಮುಳುಗಿದವನು ನೀರಿನಿಂದ ಮೇಲಕ್ಕೆ ಬರಲು ಹೇಗೆ ಸರ್ವ ಪ್ರಯತ್ನಗಳನ್ನೂ ಮಾಡುತ್ತಾನೋ, ಅದರಂತೆ ಮೋಕ್ಷೇಚ್ಛೆಯೂ ಸಹ ತೀವ್ರವಾಗಿರಬೇಕು.

ಪ್ರ: ೮೪: **ದುಃಖಗಳೆಷ್ಟು ? ಅವು ಯಾವುವು ?**

ಉ: ದುಃಖಗಳು ಆಧ್ಯಾತ್ಮಿಕ, ಆದಿಭೌತಿಕ ಮತ್ತು ಆದಿದೈವಿಕಗಳೆಂದು ಮೂರು ವಿಧ.

ಪ್ರ ೮೫: **ಆಧ್ಯಾತ್ಮಿಕ ದುಃಖವೆಂದರೇನು ?**

ಉ : ಸ್ಥೂಲ ಸೂಕ್ಷ್ಮ ದೇಹಗಳಲ್ಲಿ ತೋರಿಬರುವ ಆದಿ ಮತ್ತು ವ್ಯಾಧಿಗಳೆಂಬ ಎರಡು ವಿಧವಾದ ದುಃಖಗಳಿಗೆ ಆಧ್ಯಾತ್ಮಿಕ ದುಃಖವೆಂದು ಹೆಸರು. ಮನಸ್ಸಿನಲ್ಲಿ ಕಾಮಕ್ರೋಧಾದಿಗಳಿಂದಲೂ, ಹಸಿವು ತೃಷೆಗಳಿಂದಲೂ ಉಂಟಾಗುವ ದುಃಖಕ್ಕೆ ಆದಿ ದುಃಖವೆಂದು ಹೆಸರು. ಸ್ಥೂಲ ದೇಹದಲ್ಲಿ ವಾತ, ಪಿತ್ತ, ಕಫ – ಇವುಗಳ ವ್ಯತ್ಯಾಸದಿಂದ ಬರುವ ಜ್ವರ ಇತ್ಯಾದಿ ರೋಗಗಳಿಗೆ "ವ್ಯಾಧಿ" ಎಂದು ಹೆಸರು. ಇವುಗಳಲ್ಲಿ ಮತ್ತೆ ೧. ಕರ್ಮಜ, ೨. ಧಾತುಜ, ೩. ಗ್ರಹಜವೆಂದು ಮೂರು ವಿಧಗಳಿವೆ.

"ಕರ್ಮಜ" ವೆಂದರೆ "ಪೂರ್ವಜನ್ಮಕೃತಂ ಪಾಪಂ ವ್ಯಾಧಿರೂಪೇಣ ಬಾಧಿತಂ" – ಅಂದರೆ ಪೂರ್ವಜನ್ಮಗಳಲ್ಲಿ ಮಾಡಿದ ಪಾಪವು ಈ ಜನ್ಮದಲ್ಲಿ ವ್ಯಾಧಿ ರೂಪದಿಂದ ಬಾಧಿಸುತ್ತದೆ. "ಧಾತುಜ" ವೆಂದರೆ ವಾತಾ, ಪಿತ್ತ, ಕಫಗಳ ಹಾಗೂ ಆಹಾರ, ಪಾನೀಯಗಳ ವ್ಯತ್ಯಾಸದಿಂದ ಉಂಟಾಗುವ ರೋಗಗಳು. "ಗ್ರಹಜ" ವೆಂದರೆ ಗ್ರಹಗತಿಗಳ ಬದಲಾವಣೆಯಿಂದ ಅಥವಾ ಭೂತ ಪ್ರೇತ ಪಿಶಾಚಿಗಳಿಂದ ಉಂಟಾಗುವ ದುಃಖಗಳು. ಇವಕ್ಕೆ 'ಗ್ರಹಜ' ದುಃಖವೆನ್ನುತ್ತಾರೆ.

ಪ್ರ ೮೬ : **ಆದಿಭೌತಿಕ ದುಃಖವೆಂದರೇನು ?**

ಉ : ಸ್ವಸಂಘಾತಕ್ಕಿಂತ (ಅಂದರೆ ಶರೀರ ಮೊದಲುಗೊಂಡು ಅಹಂಕಾರ ಪರ್ಯಂತರ) ಭಿನ್ನವಾಗಿದ್ದು, ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗುವ ಪಂಚಮಹಾಭೂತಗಳಿಂದ ಅಥವಾ ಹಾವು, ಚೇಳು, ಕಳ್ಳರು ಇವರಿಂದ ಉಂಟಾಗುವ ದುಃಖಗಳಿಗೆ ಆದಿಭೌತಿಕ ದುಃಖವೆನ್ನುತ್ತಾರೆ.

ಪ್ರ ೮೭ : **ಆದಿದೈವಿಕ ದುಃಖವೆಂದರೇನು ?**

ಉ : ಸ್ವಸಂಘಾತಕ್ಕಿಂತ ಭಿನ್ನವಾಗಿದ್ದು, ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗದ, ದೇವತೆಗಳಿಂದಾಗಲೀ ಅಥವಾ ಅತಿವೃಷ್ಟಿ – ಅನಾವೃಷ್ಟಿ, ಸಿಡಿಲು, ಅತಿ ಬಿಸಿಲು, ಭೂಕಂಪ, ವಾಹನಗಳ ಅಪಘಾತ ಇವುಗಳಿಂದಾಗಲೀ ಆಗುವ ತಾಪಗಳಿಗೆ ಆದಿದೈವಿಕ ದುಃಖಗಳೆಂದು ಹೆಸರು.

ಪ್ರ : ೮೮ : **ಉತ್ತಮ ಜಿಜ್ಞಾಸುವಿನ ಲಕ್ಷಣವೇನು ?**

ಉ : ೧) ಸಾಧನ ಚತುಷ್ಟಯ ಸಂಪತ್ತಿರುವುದು.

೨) ಗುರು ಶಾಸ್ತ್ರಾದಿ ವಚನದಲ್ಲಿ ಶ್ರದ್ಧಾ ವಿಶ್ವಾಸವಿಡುವುದು.

೩) ಕುತರ್ಕ ಮಾಡದಿರುವುದು.

೪) ಈ ಜನ್ಮದಲ್ಲೇ ಮೋಕ್ಷವನ್ನು ಪಡೆಯಬೇಕೆಂಬ ತೀವ್ರೇಚ್ಛೆ ಇರುವುದು.

ಈ ನಾಲ್ಕು ಉತ್ತಮ ಜಿಜ್ಞಾಸುವಿನ ಲಕ್ಷಣಗಳು.

ಪ್ರ ೮೯ : **ಉತ್ತಮ ಜಿಜ್ಞಾಸುವಿನ ಕರ್ತವ್ಯವೇನು ?**

ಉ : ಭಗವದ್ಗೀತೆಯ ನಾಲ್ಕನೇ ಅಧ್ಯಾಯದಲ್ಲಿ ಹೇಳಿರುವಂತೆ, "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ" ಅಂದರೆ ಶ್ರೋತ್ರೀಯ ಬ್ರಹ್ಮನಿಷ್ಠ ಸದ್ಗುರುಗಳ ಬಳಿಗೆ ಹೋಗಿ, ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತನ್ನ ವಿನಯ ಭಾವವನ್ನೂ, ಶರಣಾಗತಿಯನ್ನೂ ಪ್ರದರ್ಶಿಸಿ, ಗುರುಗಳು ಅಷ್ಟರಿಂದಲೇ ಪ್ರಸನ್ನರಾದರೆ ಅವರನ್ನು ಶಾಸ್ತ್ರಸಮ್ಮತವಾದ ಪ್ರಶ್ನೆಗಳನ್ನು ಕೇಳಿ ಅವರಿಂದ ಉಪದೇಶವನ್ನು ಪಡೆಯಬೇಕು.

ಪ್ರ : ೯೦ : **ಶಿಷ್ಯನ ಪ್ರಶ್ನೆಯ ಸ್ವರೂಪವೇನು ?**

ಉ : ೧) ಬಂಧವೆಂದರೇನು ? ೨) ಮೋಕ್ಷವೆಂದರೇನು ? ೩) ಜೀವ ಎಂದರೇನು ? ೪) ಈಶ್ವರನೆಂದರೆ ಯಾರು ? ೫) ಜೀವೇಶ್ವರರ ಏಕತೆ ಹೇಗೆ ಸಿದ್ಧಿಸುತ್ತದೆ ? ೬) ನಾನಾರು ? ೭) ಪ್ರಪಂಚವು ಸತ್ಯವೋ ಅಥವಾ ಮಿಥ್ಯವೋ ? ೮) ಮೋಕ್ಷಕ್ಕೆ ನೇರವಾದ ಸಾಧನ ಯಾವುದು ? ಹೀಗೆಯೇ ಮುಂತಾಗಿ ಅತಿ ವಿನಯದಿಂದ ಪ್ರಶ್ನಿಸಬೇಕು.

ಪ್ರ : ೯೧ : **ಸಾಷ್ಟಾಂಗ ನಮಸ್ಕಾರವೆಂದರೇನು ?**

ಉ : ಶ್ಲೋಕ : "ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚ ಸಾತಥಾ ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋ ಅಷ್ಟಾಂಗ ಉಚ್ಯತೇ – ಎದೆ, ತಲೆ, ಕಣ್ಣುಗಳು, ಮನಸ್ಸು, ವಾಣಿ ಹಾಗೂ ಪಾದಗಳು, ಎರಡು ಕೈಗಳು, ಎರಡು ತೊಡೆಗಳು – ಈ ಎಂಟು ಅಂಗಗಳನ್ನು ನೆಲಕ್ಕೆ ಮುಟ್ಟಿಸಿ ಮಾಡುವ ನಮಸ್ಕಾರಕ್ಕೆ ಸಾಷ್ಟಾಂಗ ನಮಸ್ಕಾರವೆಂದು ಹೆಸರು. ಮನಸ್ಸು, ವಾಣಿಗಳನ್ನು ನೆಲಕ್ಕೆ ಮುಟ್ಟಿಸುವುದು ಹೇಗೆ ಎಂದು ಪ್ರಶ್ನಿಸಿದರೆ, ಮನಸ್ಸಿನಲ್ಲಿ ಸದ್ಗುರುಗಳು ಸಾಕ್ಷಾತ್ ಪರಬ್ರಹ್ಮವೇ ಎಂಬ ಶುದ್ಧ ಭಾವನೆ ಉಳ್ಳವರಾಗಿ, ವಾಣಿಯಿಂದ ಅದೇ ರೀತಿ ಅವರ ಸ್ತುತಿ ಮಾಡುತ್ತಿದ್ದರೆ, ಆಗ ಮನ ವಾಣಿ

ಗಳನ್ನೂ ನೆಲಕ್ಕೆ ಮುಟ್ಟಿಸಿದಂತಾಗುತ್ತದೆ. ಅರ್ಥಾತ್ ಮೇಲ್ಕಂಡ ಎಂಟು ಅಂಗಗಳನ್ನು ಗುರುವಿಗೆ ಅರ್ಪಿಸಿದ್ದೇನೆಂಬ ನಿರಹಂಕಾರ ಭಾವ.

ಪ್ರ ೯೨ : **ಉತ್ತಮ ಜಿಜ್ಞಾಸುವು ಪಡೆಯುವ ಅನುಭವವೇನು?**

ಉ : ಈ ದೇಹ ನಾನಲ್ಲ, ಪ್ರಪಂಚ ಸತ್ಯವಲ್ಲ, ಪರಬ್ರಹ್ಮವೇ ನಾನು ಎಂದು ದೃಢವಾಗಿ ತಿಳಿಯುವುದೇ ಅವನು ಪಡೆಯುವ ಅನುಭವ.

ಪ್ರ ೯೩ : **ಸದ್ಗುರುಗಳ ಲಕ್ಷಣವೇನು ?**

ಉ : ಶ್ರೋತ್ರೀಯತ್ವ ಅಂದರೆ ಸಮಸ್ತ ಶಾಸ್ತ್ರಗಳ ಪಾಂಡಿತ್ಯ ಮತ್ತು ಬ್ರಹ್ಮನಿಷ್ಠತ್ವ ಅಂದರೆ 'ಅಹಂಬ್ರಹ್ಮಾಸ್ಮಿ' ಎಂಬ ದೃಢ ಅಪರೋಕ್ಷ ಬ್ರಹ್ಮ ಜ್ಞಾನ—ಈ ಎರಡು ಲಕ್ಷಣಗಳಿರುವವರೇ ನಿಜವಾದ ಸದ್ಗುರುಗಳು. ಇದಕ್ಕೆ ಭಗವದ್ಗೀತೆಯ ೪ನೇ ಅಧ್ಯಾಯದ ೩೪ನೇ ಶ್ಲೋಕದಲ್ಲಿ ಭಗವಂತನು "ಜ್ಞಾನಿನಃ ತತ್ವದರ್ಶಿನಃ" ಎಂಬುದಾಗಿ ಹೇಳಿದ್ದಾನೆ. ಇನ್ನು ಇದೇ ವಿಷಯ ವನ್ನು ಮುಂಡಕೋಪನಿಷತ್ತಿನಲ್ಲಿ "ತದ್ವಿಜ್ಞಾನಾರ್ಥಂ ಸಗುರುಮೇವಾಭಿ ಗಚ್ಛೇತ್ ಸಮಿತ್ಪಾಣಿಃ ಶ್ರೋತ್ರೀಯಂ ಬ್ರಹ್ಮನಿಷ್ಠಂ" ಎಂಬುದಾಗಿಯೂ ಹೇಳಿದೆ. ಶ್ರೀಮನ್ನಿಜಗುಣ ಶಿವಯೋಗಿಗಳು "ಕರುಣರಸದ ಕೋಡಿವರಿವ ಕಟಾಕ್ಷದ ಪರತತ್ವವರು ಪ್ರವಾಲಾಪದ, ವರಪುಣ್ಯಮಯ ಶರೀರದ ನಿರಾ ಭಾರಿ ಸದ್ಗುರುವಿರಲೆನ್ನ ಮಾನಸದಲ್ಲಿ" ಎಂಬುದಾಗಿ ಪರಮಾನುಭವ ಬೋಧೆ ಯಲ್ಲಿ ಹೇಳಿದ್ದಾರೆ. "ಕರುಣರಸದ ಕೋಡಿವರಿವ ಕಟಾಕ್ಷದ" ಎಂಬುದು ಬ್ರಹ್ಮನಿಷ್ಠತ್ವವನ್ನೂ, "ಪರತತ್ವವರು ಪ್ರವಾಲಾಪದ" ಎಂಬುದು ಶ್ರೋತ್ರೀ ಯತ್ವ ಲಕ್ಷಣವನ್ನೂ ಸೂಚಿಸಿದೆ. ಕೇವಲ ಶ್ರೋತ್ರೀಯತ್ವವಿದ್ದು ಬ್ರಹ್ಮನಿ ಷ್ಠತ್ವವಿಲ್ಲದಿದ್ದರೆ, ಅವನು ತಾನೇ ಸ್ವತಃ ಬ್ರಹ್ಮದ ಅನುಭವ ಮಾಡಿಕೊಂಡಿರು ವುದಿಲ್ಲವಾಗಿ ಮತ್ತೊಬ್ಬರಿಗೆ ಹೇಗೆ ಮಾಡಿಕೊಟ್ಟಾನು ! "ಧರ್ವೀಪಾಕ ರಸಂಯಥಾ" ಸೌಟು ಪಾಯಸದಲ್ಲೇ ಸಾಯಂಕಾಲದವರೆಗೂ ಇದ್ದರೂ ಅದು ಹೇಗೆ ಅದರ ಮಧುರವನ್ನು ಸವಿಯಲಾರದೋ ಅದರಂತೆ ಕೇವಲ ಶಾಸ್ತ್ರ ಪಾಂಡಿತ್ಯವಿರುವವರು ಸದಾ ಆತ್ಮವಿಚಾರವಾಗಿಯೇ ಮಾತಾಡುತ್ತಿದ್ದರೂ ಅದರ ಆನಂದದ ಅನುಭವ ಅವರಿಗಾಗಿರುವುದಿಲ್ಲ. ಇನ್ನು ಬ್ರಹ್ಮನಿಷ್ಠತ್ವ ವಿದ್ದು, ಶ್ರೋತ್ರೀಯತ್ವವಿಲ್ಲದಿದ್ದರೂ ಅವರು ತಮಗೆ ತಾವು ಉದ್ಧಾರವಾಗಿ, ಉತ್ತಮ ಜಿಜ್ಞಾಸುವನ್ನೂ ಸಹ ಉದ್ಧಾರ ಮಾಡಬಹುದು. ಆದರೆ ಎಲ್ಲಾ

ಮುಮುಕ್ಷುಗಳಿಗೆ ಬರುವ ಅನೇಕ ವಿಧವಾದ ಸಂದೇಹಗಳನ್ನು ಕಳೆದು, ಅನೇಕ ಶೃತಿಸ್ಮೃತಿ ಯುಕ್ತಿಗಳ ಸಹಾಯದಿಂದ ಅವರಿಗೆ ಬೋಧೆ ಮಾಡಲು ಬರುವುದಿಲ್ಲವಾದ ಕಾರಣ ಶ್ರೋತ್ರೀಯತ್ವವೆಂಬ ಲಕ್ಷಣವೂ ಸದ್ಗುರುವಿನಲ್ಲಿರ ಬೇಕು.

ಉದಾ : ಒಬ್ಬ ವ್ಯಾಪಾರಿಯು ವ್ಯಾಪಾರಕ್ಕಾಗಿ ಮತ್ತೊಂದು ಊರಿಗೆ ಹೋಗಬೇಕಾಯಿತು. ಆಗ ರೈಲು ಮೋಟಾರುಗಳೇನೂ ಇರಲಿಲ್ಲವಾಗಿ ಕಾಲು ನಡಿಗೆಯಿಂದಲೇ ಪ್ರಯಾಣ ಮಾಡುತ್ತಿದ್ದ. ಮಧ್ಯೆ ಒಂದು ನದಿ ಅಡ್ಡವಿದ್ದದ್ದರಿಂದ ಆ ನದಿಯನ್ನು ದಾಟಿ ಆ ದಂಡೆಯನ್ನು ತಲುಪುವ ಬಗೆ ಹೇಗೆಂದು ಯೋಚಿಸಿ ಆ ವ್ಯಾಪಾರಿಯು ದಂಡೆಯ ಬಳಿ ಭಿಕ್ಷೆ ಬೇಡಲು ಕುಳಿತಿದ್ದ ಒಬ್ಬ ಕುರುಡನ ಬಳಿಗೆ ಹೋಗಿ ನದಿಯನ್ನು ಹೇಗೆ ದಾಟುವುದೆಂದು ಪ್ರಶ್ನಿಸಿದನು. ಆ ಕುರುಡನು ಹಣದಾಸೆಯಿಂದ "ನನ್ನ ಹೆಗಲ ಮೇಲೆ ಕುಳಿತು ಕೊಳ್ಳಿರಿ, ನಾನು ದಾಟಿಸಿಬಿಡುತ್ತೇನೆ" ಎಂದನು. ಆದರೆ ಈ ಕುರುಡನು ಸ್ವತಃ ತಾನೇ ಆ ದಂಡೆಯನ್ನು ನೋಡಿಲ್ಲ. ಇನ್ನು ನನ್ನನ್ನು ಹೇಗೆ ತಲುಪಿ ಸುತ್ತಾನೆ ಎಂಬ ಸಂಶಯ ಉಂಟಾಗಿ ಆ ವ್ಯಾಪಾರಿಯು ಸ್ವಲ್ಪ ಮುಂದೆ ಹೋಗಲು, ಅಲ್ಲಿ ಒಬ್ಬ ಕುಂಟನು ಕುಳಿತಿದ್ದನು. ಅವನನ್ನು ಕೇಳಲು, ಅವನು "ನಾನು ಇಲ್ಲಿ ೨೫ ವರ್ಷಗಳಿಂದ ಕುಳಿತು ಈ ದಂಡೆಯಿಂದ ಆ ದಂಡೆಗೆ ಆ ದಂಡೆಯಿಂದ ಈ ದಂಡೆಗೆ ಬರುವ ಜನರನ್ನು ನೋಡಿದ್ದೇನೆ. ನಾನು ಹೇಳುವ ದಾರಿಯಲ್ಲಿ ಹೋದರೆ ನೀನು ಸುಖವಾಗಿ ನದಿಯನ್ನು ದಾಟ ಬಹುದು. ನದಿಯೂ ಅಷ್ಟೇನೂ ಆಳವಾಗಿಲ್ಲ"ವೆಂದು ಹೇಳಿ ಆ ಕುಂಟನು ನದಿಯಲ್ಲಿ ಇಳಿದು ಸ್ವಲ್ಪ ದೂರ ಹೋದರೆ ಅಲ್ಲಿ ಒಂದು ಮರ ಸಿಗುತ್ತದೆ, ಅದರ ಎಡಭಾಗದಲ್ಲೇ ಹೋದರೆ ಮಧ್ಯದಲ್ಲಿ ಒಂದು ಮರಳ ದಿಬ್ಬ ಸಿಗುತ್ತದೆ, ಅದರಿಂದ ಬಲಗಡೆಗೆ ತಿರುಗಿ ನೆಟ್ಟಗೆ ಹೋದರೆ ಆ ದಂಡೆ ಸಿಗುತ್ತದೆ ಎಂದು ಮುಂತಾಗಿ ಹೇಳಿದನು. ಆದರೆ ಇವನು ಹೇಳುವ ಮಾರ್ಗದಲ್ಲಿ ಹೊರಟರೆ ಏನಾದರೂ ಅಪಾಯ ಸಂಭವಿಸಿದರೆ ಈ ಕುಂಟನು ಬಂದು ಕಾಪಾಡಲಾರ; ಏಕೆಂದರೆ ಅವನಿಗೆ ಕಾಲುಗಳೇ ಇಲ್ಲ – ಎಂಬುದಾಗಿ ಯೋಚಿಸುತ್ತಿರಲು, ಅಲ್ಲಿಗೆ ಕಣ್ಣು ಕಾಲುಗಳೆರಡೂ ಇದ್ದು ಈಜು ಬರುತ್ತಿದ್ದ ವ್ಯಕ್ತಿಯೊಬ್ಬ

ಅಲ್ಲಿಗೆ ಬರಲು, ಅವನನ್ನು ಆಶ್ರಯಿಸಿ ಆ ವ್ಯಾಪಾರಿಯು ನದಿಯನ್ನು ದಾಟಿದನು. ಇದು ದೃಷ್ಟಾಂತ.

ದ್ರಾಷ್ಟಾಂತ : ಜೀವನೆಂಬ ವ್ಯಾಪಾರಿಯು ತನ್ನ ಪ್ರಾರಬ್ಧ ಕರ್ಮಗಳನ್ನು ಭೋಗಿಸುತ್ತಾ ಮೋಕ್ಷ ಸಂಪಾದನೆಗಾಗಿ ಈ ಇಹಲೋಕಕ್ಕೆ ಬಂದಿದ್ದಾನೆ. ಅವನು ಜನನ–ಮರಣ–ರೂಪಿ ಸಂಸಾರ ಪ್ರವಾಹವನ್ನು ದಾಟಬೇಕಾದರೆ ಕೇವಲ ಶ್ರೋತ್ರೀಯತ್ವವುಳ್ಳ ಗುರುಗಳನ್ನು ಆಶ್ರಯಿಸದೆ ಅಥವಾ ಕುಂಟನಂತಿರುವ ಕೇವಲ ಬ್ರಹ್ಮನಿಷ್ಠರನ್ನೂ ಆಶ್ರಯಿಸದೆ, ಕಣ್ಣು ಕೈಕಾಲುಗಳಿದ್ದು ಈಜುವುದನ್ನೂ ಕಲಿತಿರುವ ಮನುಷ್ಯನನ್ನು ಆಶ್ರಯಿಸಿದಂತೆ ಶ್ರೋತ್ರೀಯತ್ವ ಬ್ರಹ್ಮನಿಷ್ಠತ್ವಗಳೆರಡೂ ಉಳ್ಳ ಸದ್ಗುರುವನ್ನೇ ಕುರಿತು ಶರಣಾಗತನಾಗಬೇಕು.

ಪ್ರ ೯೪ : **ಸದ್ಗುರುಗಳ ಕರ್ತವ್ಯವೇನು ?**

ಉ : ಸದ್ಗುರುಗಳ ಪ್ರಥಮ ಕರ್ತವ್ಯವೇನೆಂದರೆ – ಶಿಷ್ಯನ ಅಂತಃಕರಣದಲ್ಲಿರುವ ವಿಜಾತೀಯ ಪ್ರತ್ಯಯವನ್ನು ಅಂದರೆ ದೇಹಾತ್ಮ ಬುದ್ಧಿಯನ್ನು ಕಳೆದು, ಸಜಾತೀಯ ಪ್ರತ್ಯಯ ಅಂದರೆ 'ಅಹಂಬ್ರಹ್ಮಾಸ್ಮಿ' ವೃತ್ತಿಯನ್ನು ಹುಟ್ಟಿಸಿ, ಅದು ದೃಢವಾಗುವಂತೆ ತತ್ವಮಸ್ಯಾದಿ ಮಹಾವಾಕ್ಯಗಳನ್ನು ಪದೇ ಪದೇ ಬೋಧಿಸುವುದು ಮತ್ತು ಶಿಷ್ಯನ ಬುದ್ಧಿಯಲ್ಲಿರುವ ಪಂಚವಿಧ ಭೇದಗಳನ್ನು ಕಳೆಯುವುದು.

ಪ್ರ ೯೫ : **ಪಂಚವಿಧ ಭೇದಗಳೆಂದರೆ ಯಾವುವು ?**

ಉ : ೧) ಜೀವ–ಈಶ್ವರ ಭೇದ, ೨) ಜೀವ–ಜೀವರುಗಳ ಪರಸ್ಪರ ಭೇದ, ೩) ಜೀವ–ಜಡ ಭೇದ, ೪) ಈಶ್ವರ–ಜಡ ಭೇದ, ಮತ್ತು ೫) ಜಡ–ಜಡ ಭೇದ. ಇವೇ ಪಂಚವಿಧ ಭೇದಗಳು.

ಪ್ರ ೯೬ : **ಜೀವೇಶ್ವರ ಭೇದದ ಸ್ವರೂಪವೇನು ?**

ಉ : ಈಶ್ವರನು ಸರ್ವಜ್ಞ, ಜೀವನು ಕಿಂಚಿಜ್ಞ.

ಈಶ್ವರನು ಸರ್ವಶಕ್ತ, ಜೀವನು ಅಲ್ಪಶಕ್ತ.

ಈಶ್ವರನು ಸರ್ವವ್ಯಾಪಿ, ಜೀವನು ಪರಿಚ್ಛಿನ್ನ.

ಹೀಗೆ ತಿಳಿದಿರುವುದೇ ಜೀವೇಶ್ವರ ಭೇದದ ಸ್ವರೂಪ. ಇದರಿಂದ ಅದ್ವೈತ ಸಿದ್ಧಿಯಾಗುವುದಿಲ್ಲ.

ಪ್ರ ೯೭ : **ಜೀವೇಶ್ವರ ಭೇದದ ನಿವೃತ್ತಿಯ ಉಪಾಯವೇನು ?**

ಉ : ಜೀವೇಶ್ವರ ಭೇದವು ಉಪಾಧಿ ಕಲ್ಪಿತವಾದದ್ದೇ ಹೊರತು ಸಹಜವಾದದ್ದಲ್ಲ. ಇದಕ್ಕೆ ಉದಾ : ಘಟಾಕಾಶ, ಮಹಾಕಾಶಗಳಂತೆ. ಒಂದೇ ಆಕಾಶದಲ್ಲಿ ಮಠದ ಉಪಾಧಿಯಿಂದ ಮಹಾಕಾಶವೆಂದೂ, ಘಟದ ಉಪಾಧಿಯಿಂದ ಘಟಾಕಾಶವೆಂದೂ ಹೆಸರು ಬಂದಿದೆ. ಮಠದ ಉಪಾಧಿ ದೊಡ್ಡದಾದ್ದರಿಂದ ಅದರಲ್ಲಿ ಅನೇಕ ಜನರು ಕುಳಿತುಕೊಳ್ಳಬಹುದು. ಶ್ರವಣಾದಿಗಳನ್ನು ಮಾಡಬಹುದು. ಇನ್ನು ಘಟದ ಉಪಾಧಿ ಚಿಕ್ಕದಾದ್ದರಿಂದ ಅದರಲ್ಲಿ ನೀರು ತರುವ, ಅಡಿಗೆ ಮಾಡುವ ಕೆಲಸ ಮಾತ್ರ ಮಾಡಬಹುದು. ಆದರೆ ಈ ಘಟ ಮಠಗಳ ಉಪಾಧಿ ಬಿಟ್ಟರೆ ಆಕಾಶದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಯಾವ ಹೆಸರೂ ಇಲ್ಲ. ಇದರಂತೆ ಈಶ್ವರನ ಉಪಾಧಿ ಮಾಯೆ, ಇದು ಶುದ್ಧ ಸತ್ವಗುಣ ಉಳ್ಳದ್ದು ಮತ್ತು ದೊಡ್ಡದು. ಆದ್ದರಿಂದ ಈಶ್ವರನಿಗೆ ಸರ್ವಜ್ಞತ್ವಾದಿ ಗುಣಗಳು ಬಂದಿವೆ. ಜೀವನ ಉಪಾಧಿ ಅವಿದ್ಯೆ. ಇದು ಮಲಿನ ಸತ್ವಗುಣ ಉಳ್ಳದ್ದು, ಮತ್ತು ಚಿಕ್ಕದು. ಆದ್ದರಿಂದ ಜೀವನಿಗೆ ಕಿಂಚಿಜ್ಞತ್ವಾದಿಗಳು ಬಂದಿವೆ. ಜೀವೇಶ್ವರರ ಉಪಾಧಿಗಳು ಕಲ್ಪಿತವಾದುದರಿಂದ, ವಿಚಾರದಿಂದ ಮಿಥ್ಯೆ ಎಂದು ತಿಳಿದು ಬಾಧೆ ಮಾಡಿದರೆ ಅಧಿಷ್ಠಾನವಾದ ಬ್ರಹ್ಮಚೇತನವು ಒಂದೇ ಆಗಿರುತ್ತದೆ. ಹೀಗೆ ನಿಶ್ಚಯಿಸುವುದೇ ಜೀವೇಶ್ವರ ಭೇದವನ್ನು ನಿವೃತ್ತಿ ಮಾಡಿಕೊಳ್ಳುವ ಉಪಾಯ. ಇದರಿಂದ ಅದ್ವೈತ ಸಿದ್ಧಿಯಾಗುತ್ತದೆ.

ಪ್ರ ೯೮ : **ಜೀವ ಜೀವರುಗಳ ಪರಸ್ಪರ ಭೇದದ ಸ್ವರೂಪವೇನು ?**

ಉ : ಜೀವರುಗಳಲ್ಲಿರುವ ಪರಸ್ಪರ ಭೇದವೇನೆಂದರೆ—

ಒಬ್ಬನು ಸುರೂಪಿ, ಮತ್ತೊಬ್ಬನು ಕುರೂಪಿ.

ಒಬ್ಬನು ಆರೋಗ್ಯವಂತ, ಮತ್ತೊಬ್ಬನು ರೋಗಿ.

ಒಬ್ಬನು ಸುಖಿ, ಮತ್ತೊಬ್ಬನು ದುಃಖಿ.

ಒಬ್ಬನು ಶ್ರೀಮಂತ, ಮತ್ತೊಬ್ಬನು ಬಡವ.

ಒಬ್ಬನು ಬುದ್ಧಿವಂತ, ಮತ್ತೊಬ್ಬನು ದಡ್ಡ.

ಹೀಗೆ ತಿಳಿದಿರುವುದೇ ಜೀವೇಶ್ವರ ಭೇದ.

ಈ ರೀತಿ ಅನೇಕ ವಿಧದ ಭೇದಗಳು ಜೀವರುಗಳಲ್ಲಿ ತೋರಿಬರುತ್ತವೆ. ಇದರಿಂದ ಅದ್ವೈತ ಸಿದ್ಧಿಯಾಗುವುದಿಲ್ಲ.

ಪ್ರಶ್ನೆ : **ಜೀವರುಗಳ ಪರಸ್ಪರ ಭೇದದ ನಿವೃತ್ತಿಯ ಉಪಾಯವೇನು ?**

ಉ : ಈ ಭೇದವೂ ಸಹ ಉಪಾಧಿಗತವಾದದ್ದರಿಂದ ಕಲ್ಪಿತವಾದುದೇ ವಿನಹ ಸಹಜವಾದುದಲ್ಲ. ಇದಕ್ಕೆ ಉದಾ : ಘಟಾಕಾಶಗಳ ಭೇದದಂತೆ ಅಥವಾ "ಏಕದಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್" ಎಂಬ ದೃಷ್ಟಾಂತದಂತೆ. ಎಂದರೆ ಒಂದು ಪೂರ್ಣಿಮಾ ರಾತ್ರಿ ಒಂದು ಮೈದಾನದಲ್ಲಿ ಸಾವಿರಾರು ಘಟಗಳಲ್ಲಿ ನೀರು ತುಂಬಿಟ್ಟಿದೆ. ಅವುಗಳಲ್ಲಿ ಸಾವಿರಾರು ಚಂದ್ರನ ಪ್ರತಿಬಿಂಬಗಳು ಬೀಳುತ್ತವೆ. ಆದರೆ ಚಂದ್ರನೇನೂ ಅನೇಕನಾಗಿಲ್ಲ, ಒಬ್ಬನೇ ಇದ್ದಾನೆ. ಅಲ್ಲದೆ ಅಧೋಮುಖ ದೃಷ್ಟಿ ಉಳ್ಳವರಿಗೆ ಮಾತ್ರ ಚಂದ್ರನ ಪ್ರತಿಬಿಂಬವು ಅನೇಕವಾಗಿ ಕಂಡರೂ, ಊರ್ಧ್ವ ದೃಷ್ಟಿಯುಳ್ಳವರಿಗೆ ಒಬ್ಬನೇ ಚಂದ್ರನು ಹೇಗೆ ಕಾಣುತ್ತಾನೋ ಅದರಂತೆ ಅವಿಚಾರ ಕಾಲದಲ್ಲಿ ಜೀವರುಗಳು ಅನೇಕರಾಗಿ ಕಂಡುಬಂದರೂ, ವಿಚಾರ ಮಾಡುವುದರಿಂದ ಆತ್ಮ ಒಬ್ಬನೇ ಎಂಬ ನಿಶ್ಚಯ ಉಂಟಾಗುತ್ತದೆ. ಈ ಭೇದಗಳು ಜೀವರುಗಳ ಸಾಭಾಸ ಅಂತಃಕರಣ ಭೇದದಿಂದ ತೋರುತ್ತವೆ. ಈ ಅಂತಃಕರಣ ಉಪಾಧಿಯು ಮಿಥ್ಯೆ. ಇದು ನಮಗೆ ದಿನವೂ ಅನುಭವಕ್ಕೆ ಬರುತ್ತದೆ. ನಮಗೆ ನಿದ್ರೆ ಬಂದಾಗ ಅಂದರೆ ಸುಷುಪ್ತಿಯಲ್ಲಿ ತಂದೆ ತಂದೆಯಲ್ಲ, ಮಗ ಮಗನಲ್ಲ, ಸ್ತ್ರೀ ಸ್ತ್ರೀಯಲ್ಲ, ಪುರುಷ ಪುರುಷನಲ್ಲ. ಆದ್ದರಿಂದ ಉಪಾಧಿ ಮಿಥ್ಯೆಯಾದದ್ದರಿಂದ ಭೇದವೂ ಮಿಥ್ಯೆ ಎಂದು ತಿಳಿಯುವುದರಿಂದ ಜೀವರುಗಳ ಪರಸ್ಪರ ಭೇದವು ಹೋಗಿ ಅದ್ವೈತ ಸಿದ್ಧಿಯಾಗುತ್ತದೆ. ಇದಕ್ಕೆ ಭಗವದ್ಗೀತಾ ಪ್ರಮಾಣವೂ ಇದೆ. ಭಗವಂತನು ೧೩ನೇ ಅಧ್ಯಾಯದ ೨ನೇ ಶ್ಲೋಕದಲ್ಲಿ "ಕ್ಷೇತ್ರಜ್ಞಂ ಚಾಪಿಮಾಂವಿದ್ಧಿ ಸರ್ವಕ್ಷೇತ್ರೇಷು ಭಾರತ" – ಎಂದರೆ ಎಲ್ಲಾ ಕ್ಷೇತ್ರಗಳಲ್ಲಿರುವ ಕ್ಷೇತ್ರಜ್ಞನು ನಾನೇ ಎಂದು ಹೇಳಿರುವುದರಿಂದ – ವಿಚಾರದಿಂದ ಉಪಾಧಿಗಳನ್ನು ಬಾಧಾ ಮಾಡಿದರೆ – ಪರಬ್ರಹ್ಮ ಚೇತನವಾದ ಆತ್ಮನೊಬ್ಬನೇ ಉಳಿಯುತ್ತಾನೆ

ಪ್ರ ೧೦೦ : **ಜೀವ – ಜಡ ಭೇದದ ಸ್ವರೂಪವೇನು ? ಮತ್ತು ಅದನ್ನು ನಿವೃತ್ತಿಸುವ ಉಪಾಯವೇನು ?**

ಉ : ಜೀವನು ಚೇತನನಾಗಿರುವುದರಿಂದ ಅವನು ಸುಖ-ದುಃಖಗಳ ಅನುಭವ ಮಾಡುವವನೆಂತಲೂ, ಜಡ ವಸ್ತುಗಳು ಚೇತನರಹಿತವಾಗಿರುವುದರಿಂದ ಅವುಗಳಿಗೆ ಸುಖ–ದುಃಖಗಳ ಪರಿವೇ ಇಲ್ಲವೆಂಬುದಾಗಿಯೂ ಜೀವ – ಜಡ ಭೇದವು ತೋರಿಬರುತ್ತದೆ. ಇದರಿಂದ ಅದ್ವೈತ ಸಿದ್ಧಿಯಾಗುವುದಿಲ್ಲ.

ಆದರೆ ಈ ಭೇದವು ಸತ್ಯವೋ ಅಥವಾ ಮಿಥ್ಯವೋ ಎಂದು ವಿಚಾರ ಮಾಡಿದರೆ, ಈ ಭೇದವೂ ಉಪಾಧಿಗತವಾದುದರಿಂದ ಮಿಥ್ಯೆಯೇ. ಹೇಗೆಂದರೆ ಜೀವನ ಉಪಾಧಿ ಸಾಭಾಸ ಅಂತಃಕರಣ ; ಜಡಗಳ ಉಪಾಧಿ ನಿರಾಭಾಸ ನಾಮ ರೂಪಗಳು. ಜೀವನು ಅಂತಃಕರಣ ಉಳ್ಳವನಾದ್ದರಿಂದ ಸುಖ ದುಃಖಗಳು ಅವನಲ್ಲಿ ತೋರುತ್ತವೆ. ಜಡ ವಸ್ತುಗಳಿಗೆ ಅಂತಃಕರಣವಿಲ್ಲದ್ದರಿಂದ ಅವುಗಳಲ್ಲಿ ಸುಖ–ದುಃಖಗಳು ತೋರುವುದಿಲ್ಲ. ಸ್ವಪ್ನದಲ್ಲಿ ಹೇಗೆ ಸ್ವಪ್ನ ಸಾಕ್ಷಿಯೊಬ್ಬನೇ ಜೀವ – ಜಡ ಎರಡೂ ಆಗಿ ತೋರಿ, ಎದ್ದನಂತರ ಎಲ್ಲವೂ ತಾನೇ ಆಗಿ ತೋರಿದೆನೆಂಬ ಅನುಭವ ಬರುವುದೋ, ಅದರಂತೆ ಜೀವ – ಜಡಗಳ ಭೇದವೂ ಉಪಾಧಿಗಳಿಂದ ತೋರುವುದರಿಂದ, ಉಪಾಧಿಗಳು ಮಿಥ್ಯೆಯಾದದ್ದರಿಂದ ಜೀವ – ಜಡ ಭೇದವೂ ಮಿಥ್ಯೆಯಾಗಿದೆ. ಈ ರೀತಿ ವಿಚಾರ ಮಾಡುವುದರಿಂದ ಅದ್ವೈತ ಸಿದ್ಧಿಯಾಗುತ್ತದೆ.

ಪ್ರ ೧೦೧ : **ಈಶ್ವರ–ಜಡ ಭೇದದ ಸ್ವರೂಪವೇನು ? ಮತ್ತು ಅದನ್ನು ನಿವೃತ್ತಿಸುವ ಉಪಾಯವೇನು ?**

ಉ : ಈಶ್ವರನು ಜಡವಸ್ತುಗಳನ್ನು ಸೃಷ್ಟಿಸಿದ ಸೃಷ್ಟಿಕರ್ತನೆಂಬುದಾಗಿಯೂ, ಜಡವಸ್ತುಗಳು ಈಶ್ವರನಿಂದ ಸೃಷ್ಟಿಸಲ್ಪಡತಕ್ಕವುಗಳೆಂಬುದಾಗಿಯೂ ತೋರುವುದೇ ಈಶ್ವರ–ಜಡ ಭೇದದ ಸ್ವರೂಪವಾಗಿದೆ. ಇದರಿಂದ ಅದ್ವೈತ ಸಿದ್ಧಿಯಾಗುವುದಿಲ್ಲ.

ಈ ಭೇದವು ಸತ್ಯವೋ ಮಿಥ್ಯವೋ ಎಂದು ವಿಚಾರ ಮಾಡಿದರೆ, ಈ ಭೇದವೂ ಸಹ ಉಪಾಧಿಗತವಾದುದರಿಂದ ಮಿಥ್ಯೆಯಾಗಿದೆ.

ಉದಾ : ಸ್ವಪ್ನ ಸಾಕ್ಷಿಗೂ, ಸ್ವಪ್ನದಲ್ಲಿ ಕಾಣುವ ಪದಾರ್ಥಗಳಿಗೂ

ಇರುವ ಭೇದದಂತೆ, ಸ್ವಪ್ನ ಸಾಕ್ಷಿಯೊಬ್ಬನೇ ಸತ್ಯವೇ ಹೊರತು ಅಲ್ಲಿ ತೋರಿದ ಜಡವಸ್ತುಗಳೆಲ್ಲಾ ಮಿಥ್ಯೆಯಾಗಿವೆ.

ಇದರಂತೆ ಈಶ್ವರನ ಉಪಾಧಿ ಸಾಭಾಸ ಮಾಯೆ. ಇದು ಅಘಟಿತ ಘಟನಾ ಶಕ್ತಿ ಉಳ್ಳದ್ದು ಮತ್ತು ಎಲ್ಲವನ್ನೂ ಸೃಷ್ಟಿ ಮಾಡಿ ತೋರಿಸಬಲ್ಲದು. ಘಟದ ಉಪಾಧಿ ನಿರಾಭಾಸ ನಾಮರೂಪಗಳು. ಉಪಾಧಿಗಳ ಭೇದವೇ ಹೊರತು ಚೇತನದಲ್ಲಿ ಯಾವ ಭೇದವೂ ಇಲ್ಲ. ಹೀಗೆ ವಿಚಾರ ಮಾಡುವುದ ರಿಂದ ಅದ್ವೈತ ಸಿದ್ಧಿಯಾಗುತ್ತದೆ.

ಪ್ರ ೧೦೨ : **ಜಡ–ಜಡ ಭೇದದ ಸ್ವರೂಪವೇನು ? ಮತ್ತು ಅದರ ನಿವಾರಣೋಪಾಯವೇನು ?**

ಉ : ಒಂದು ಜಡ ವಸ್ತುವಿನ ನಾಮರೂಪ ಕ್ರಿಯೆಗಳು ಮತ್ತೊಂದು ಜಡ ವಸ್ತುವಿನಲ್ಲಿಲ್ಲ. ಅದರ ನಾಮರೂಪ ಕ್ರಿಯೆಗಳು ಇನ್ನೊಂದರಲ್ಲಿಲ್ಲ. ಹೀಗೆ ತೋರುತ್ತದೆ. ಉದಾ : ಪುಸ್ತಕದ ನಾಮರೂಪ ಕ್ರಿಯೆಗಳು ಗಡಿ ಯಾರದಲ್ಲಿಲ್ಲ. ಗಡಿಯಾರದ ನಾಮರೂಪ ಕ್ರಿಯೆಗಳು ಕುರ್ಚಿಯಲ್ಲಿಲ್ಲ. ಹೀಗೆ ಭೇದ ತೋರುವುದರಿಂದ ಅದ್ವೈತ ಸಿದ್ಧಿಯಾಗುವುದಿಲ್ಲ.

ಇದರ ನಿವಾರಣೋಪಾಯವೇನೆಂದರೆ– ನಾಲ್ಕು ಜನ ದಾರಿಹೋಕರಿಗೆ ಮಂದಾಂಧಕಾರದಲ್ಲಿ ಒಂದೇ ಒಂದಾದ ಹಗ್ಗವು ಅವರವರ ಸಂಸ್ಕಾರಕ್ಕನು ಗುಣವಾಗಿ ಸರ್ಪ, ಮಾಲ, ದಂಡ, ನೀರಿನ ಧಾರೆ ಇತ್ಯಾದಿಯಾಗಿ ಕಂಡು ಬಂದು, ವಿಚಾರ ಮಾಡಿದ ಮೇಲೆ ಅಲ್ಲಿರುವುದು ಅಧಿಷ್ಠಾನವಾದ ಹಗ್ಗ ವೊಂದೇ ಎಂಬ ಜ್ಞಾನ ಉಂಟಾಗುವಂತೆ, ಅಧಿಷ್ಠಾನ ದೃಷ್ಟಿ ಅಂದರೆ ಅಸ್ತಿ, ಭಾತಿ, ಪ್ರಿಯ ರೂಪವಾಗಿರುವ ಬ್ರಹ್ಮದ ಅಂಶವು ಎಲ್ಲಾ ಜಡವಸ್ತುಗಳಲ್ಲಿ ಏಕರೂಪವಾಗಿದೆ ಎಂದು ತಿಳಿಯದವರಿಗೆ, ಕೇವಲ ಮಾಯೆಗೆ ಸೇರಿದ ಅಂಶ ಗಳಾದ ನಾಮರೂಪಗಳನ್ನೇ ನೋಡುವವರಿಗೆ ಜಡ–ಜಡ ಭೇದವು ತೋರು ವುದೇ ಹೊರತು, ಅಧಿಷ್ಠಾನ ದೃಷ್ಟಿ ಉಳ್ಳವರಿಗೆ ಈ ಭೇದವು ತೋರುವುದಿಲ್ಲ. ನಾಮರೂಪಗಳು ವ್ಯತಿರೇಕವಾಗಿದ್ದರೂ ಬ್ರಹ್ಮದ ಅಂಶವಾದ 'ಇದೆ, ತೋರುತ್ತಿದೆ, ಬೇಕಾಗಿದೆ" ಎಂಬುದು ಎಲ್ಲಾ ವಸ್ತುಗಳಲ್ಲೂ ಅನ್ವಯ ವಾಗಿದೆ. ಹೀಗೆ ತಿಳಿಯುವುದರಿಂದ ಅದ್ವೈತ ಸಿದ್ಧಿಯಾಗುತ್ತದೆ.

ಪ್ರ ೧೦೩ : **ಈ ಪಂಚವಿಧ ಭೇದಗಳ ವಿಚಾರದಿಂದ ಪ್ರಯೋಜನವೇನು ?**

ಉ : ಎಲ್ಲಾ ಭೇದಗಳು ಉಪಾಧಿಗಳ ಭೇದದಿಂದ ತೋರಿ ಬರುತ್ತವೆಯೇ ವಿನಹ ವಾಸ್ತವವಾಗಿಲ್ಲ. ಉಪಾಧಿಗಳು ಮಿಥ್ಯೆಯಾದುದರಿಂದ ಅವುಗಳಿಂದ ತೋರಿಬರುವ ಭೇದಗಳೂ ಮಿಥ್ಯೆ. ಇವೆಲ್ಲಕ್ಕೂ ಅಧಿಷ್ಠಾನವಾದ ಪರಬ್ರಹ್ಮವೊಂದೇ ಸತ್ಯ, ಆ ಪರಬ್ರಹ್ಮವೇ ನಾನು – ಎಂಬ ಅಭೇದ ತಿಳುವಳಿಕೆ ಉಂಟಾಗುವುದೇ ಈ ಪಂಚವಿಧ ಭೇದಗಳನ್ನು ತಿಳಿಯುವುದರಿಂದಾಗುವ ಪ್ರಯೋಜನ.

ಓಂ ತತ್ಸತ್

ಇತಿ ಉಪೋದ್ಘಾತ ನಾಮ ಪ್ರಥಮ ಕಲಾ ಸಮಾಪ್ತಃ

ಓಂ

ನಮೋ ಭಗವತೇ ಶಿವಾನಂದಾಯ

## ದ್ವಿತೀಯ ಕಲಾ ಪ್ರಾರಂಭಃ

# ಪ್ರಪಂಚಾರೋಪಾಪವಾದ

ಪ್ರ ೧ : **ಅಧ್ಯಾರೋಪವೆಂದರೇನು ?**

ಉ : ಅಧಿ + ಆರೋಪ=ಅಧ್ಯಾರೋಪ ; ಇದ್ದದ್ದರಲ್ಲಿ ಇಲ್ಲದ್ದನ್ನು ಕಲ್ಪಿಸುವುದಕ್ಕೆ ಅಧ್ಯಾರೋಪವೆಂದು ಹೆಸರು. ಇದ್ದ ಬ್ರಹ್ಮದಲ್ಲಿ ಇಲ್ಲದ ಜಗತ್ತನ್ನು ಕಲ್ಪಿಸುವುದಕ್ಕೆ ಅಧ್ಯಾರೋಪವೆಂದು ಹೆಸರು.

ಪ್ರ ೨ : **ಅಪವಾದವೆಂದರೇನು ?**

ಉ : ಇದ್ದ ವಸ್ತುವಿನಲ್ಲಿ ಕಲ್ಪಿಸಿದ ಇಲ್ಲದ ವಸ್ತುವನ್ನು ಇಲ್ಲವೆಂದು ವಿಚಾರಮಾಡಿ ತೆಗೆದುಹಾಕುವುದಕ್ಕೆ ಅಪವಾದವೆಂದು ಹೆಸರು.

ಪ್ರ ೩ : **ಅಧ್ಯಾರೋಪ ಅಪವಾದಗಳ ಲಕ್ಷಣವೇನು ?**

ಉ : ವಸ್ತುವಿನಲ್ಲಿ ಅವಸ್ತುವನ್ನು ಕಲ್ಪಿಸುವುದೇ ಅಧ್ಯಾರೋಪ. ವಸತಿ ಇತಿ ವಸ್ತುಃ—ಮೂರು ಕಾಲದಲ್ಲಿಯೂ ಯಾವುದರಿಂದಲೂ ಬಾಧೆಯಾಗದಿರುವುದೇ ವಸ್ತು. ಅವಸ್ತುವೆಂದರೆ ಇಲ್ಲದೇ ತೋರುವುದು. ಉದಾ: ಹಗ್ಗವು ವಸ್ತು, ಹಾವು ಅವಸ್ತು. ಇದ್ದ ಹಗ್ಗದಲ್ಲಿ ಇಲ್ಲದ ಹಾವನ್ನು ಕಲ್ಪಿಸುವುದೇ ಅಧ್ಯಾರೋಪ. ವಿಚಾರಮಾಡಿ, ಕಲ್ಪಿಸಿದ ವಸ್ತುವನ್ನು ಇಲ್ಲವೆಂದು ಕಳೆಯುವುದೇ ಅಪವಾದ.

ಪ್ರ ೪ : **ಅನಾದಿಯಾದ ಶುದ್ಧ ಬ್ರಹ್ಮದಲ್ಲಿ ಪ್ರಪಂಚವು ಹೇಗೆ ಕಲ್ಪಿಸಿದೆ ?**

ಉ : ಅನಾದಿಯಾದ ಶುದ್ಧ ಬ್ರಹ್ಮವೊಂದಿದೆ. ಈ ಅನಾದಿ ಶುದ್ಧ ಬ್ರಹ್ಮದಲ್ಲಿ ಅನಾದಿ ಕಲ್ಪಿತ ಪ್ರಕೃತಿ ಒಂದಿದೆ. ಈ ಪ್ರಕೃತಿಗೂ ಬ್ರಹ್ಮಕ್ಕೂ

ಅನಾದಿ ಕಲ್ಪಿತ ತಾದಾತ್ಮ್ಯ ಸಂಬಂಧವಿದೆ. ಈ ಪ್ರಕೃತಿಯಿಂದ ಪ್ರಪಂಚವು ಕಲ್ಪಿಸಲ್ಪಟ್ಟಿದೆ.

**ಪ್ರ ೫: ಅನಾದಿ ವಸ್ತುಗಳೆಷ್ಟು? ಅವು ಯಾವುವು ?**

ಉ: ಅನಾದಿ ವಸ್ತುಗಳು ಆರು :

೧. ಶುದ್ಧ ಬ್ರಹ್ಮ

೨. ಮಾಯೆ

೩. ಇವುಗಳ ಪರಸ್ಪರ ಸಂಬಂಧ

೪. ಈಶ್ವರ

೫. ಜೀವ

೬. ಇವರ ಪರಸ್ಪರ ಭೇದ.

**ಪ್ರ ೬: ಅನಾದಿ ಅನಂತ ಯಾವುದು ? ಅನಾದಿ ಸಾಂತಗಳಾವುವು ?**

ಉ: ಶುದ್ಧ ಬ್ರಹ್ಮವು ಅನಾದಿ ಅನಂತ. ಉಳಿದ ಐದೂ ಅನಾದಿ ಸಾಂತಗಳು. ಅನಾದಿ ಎಂದರೆ ಆದಿ ಅಥವಾ ಹುಟ್ಟುವಿಕೆ ಇಲ್ಲದ್ದು. ಅನಂತವೆಂದರೆ ಅಂತ ಅಥವಾ ನಾಶವಿಲ್ಲದ್ದು. ಬ್ರಹ್ಮವು ಅನಾದಿ ಅನಂತ. ಉಳಿದ ಐದೂ ಅನಾದಿಯಾದರೂ ಅಂದರೆ ಇವುಗಳ ಆದಿ ತಿಳಿಯದಿದ್ದರೂ, ವಿಚಾರದ್ವಾರ ಅಂತವಾಗುವುದರಿಂದ ಇವು ಅನಾದಿ ಸಾಂತ ವಸ್ತುಗಳು.

ಉದಾ: ನಮ್ಮ ಬಳಿ ಹತ್ತು ಸೇರು ಕಡಲೆಕಾಳು ಇದೆ. ಇದರ ಹುಟ್ಟು 'ಬೀಜ ವೃಕ್ಷ ನ್ಯಾಯದಿಂದ' ನಮಗೆ ಸಿಕ್ಕದಿದ್ದರೂ, ಇದನ್ನು ಹುರಿದುಬಿಟ್ಟರೆ ಮತ್ತೆ ಭೂಮಿಯಲ್ಲಿ ಹಾಕಿದರೆ ಬೆಳೆಯುವುದಿಲ್ಲ. ಅಂದರೆ ಇದರ ಅಂತ್ಯವಾದಂತೆ ಆಯಿತು. ಇದರಂತೆ ಮೇಲೆ ಹೇಳಿದ ಐದು ವಸ್ತುಗಳ ಆದಿ ನಮಗೆ ಗೊತ್ತಿಲ್ಲದಿದ್ದರೂ, ಅವುಗಳು ಮಿಥ್ಯೆ ಎಂಬುದಾಗಿ ವಿಚಾರ ದ್ವಾರ ಅವುಗಳನ್ನು ಅಂತ್ಯಗೊಳಿಸುವುದು ನಮ್ಮ ಕೈಲಿ ಇದೆ. ಆದ್ದರಿಂದ ಜಗತ್ತೆಲ್ಲಾ ಕಲ್ಪಿತ ಪದಾರ್ಥ.

**ಪ್ರ ೭: ಕಲ್ಪಿತ ಮತ್ತು ಕಲ್ಪಿತ–ಸಂಬಂಧವೆಂದರೇನು ?**

ಉ: ಇಲ್ಲದೆ ತೋರುವುದು ಕಲ್ಪಿತ. ಸಂಬಂಧ ನಿಜವಾಗಿ ಇಲ್ಲದಿದ್ದರೂ ಇದ್ದಂತೆ ತೋರುವುದಕ್ಕೆ ಕಲ್ಪಿತ ಸಂಬಂಧವೆಂದು ಹೆಸರು.

**ಪ್ರ ೮: ಸಂಬಂಧಗಳು ಎಷ್ಟು ವಿಧ ?**

ಉ : ೧. ಸಂಯೋಗ ಸಂಬಂಧ, ೨. ಸಮವಾಯಿ ಸಂಬಂಧ, ೩. ಕಲ್ಪಿತ ತಾದಾತ್ಮ್ಯ ಸಂಬಂಧ – ಎಂಬುದಾಗಿ ಸಂಬಂಧಗಳು ಮೂರು ವಿಧವಾಗಿವೆ.

ಪ್ರ ೯ : **ಸಂಯೋಗ ಸಂಬಂಧವೆಂದರೇನು ?**

ಉ : ಎರಡು ಸಾಕಾರ ಅಥವಾ ಸಾವಯುವ ವಸ್ತುಗಳು ಒಂದಕ್ಕೊಂದು ಪರಸ್ಪರ ಕೂಡಿ ನಂತರ ಅಗಲುವುದಕ್ಕೆ ಸಂಯೋಗ ಸಂಬಂಧವೆನ್ನುತ್ತಾರೆ.

ಉದಾ : ಒಂದು ಪಕ್ಷಿಯು ಒಂದು ಮರದ ಕೊಂಬೆಯ ಮೇಲೆ ಸ್ವಲ್ಪ ಹೊತ್ತು ಕುಳಿತಿದ್ದು ನಂತರ ಹಾರಿ ಹೋಗುತ್ತದೆ. ಇದು ಸಂಯೋಗ ಸಂಬಂಧ. ಇಲ್ಲಿ ಪಕ್ಷಿಯೂ ಸಾಕಾರ, ಮರವೂ ಸಾಕಾರ. ಆದ್ದರಿಂದ ಇವೆರಡಕ್ಕೆ ಸಂಯೋಗ ಸಂಬಂಧ ಉಂಟಾಗಬಹುದು

ಆದರೆ ಶುದ್ಧ ಬ್ರಹ್ಮಕ್ಕೂ, ಪ್ರಪಂಚಕ್ಕೂ ಈ ವಿಧವಾದ ಸಂಬಂಧವಿದೆಯೇ ಎಂಬುದಾಗಿ ವಿಚಾರ ಮಾಡಿದರೆ, ಶುದ್ಧ ಬ್ರಹ್ಮವು ನಿರಾಕಾರ ವಸ್ತು, ಜಗತ್ತು ಸಾಕಾರ ವಸ್ತು ಆದ್ದರಿಂದ ಈ ಸಂಬಂಧ ಸಂಭವಿಸುವುದಿಲ್ಲ.

ಪ್ರ ೧೦ : **ಸಮವಾಯಿ ಸಂಬಂಧವೆಂದರೇನು ?**

ಉ : ಯಾವುದು ಒಂದು ವಸ್ತುವಿನಲ್ಲಿ ನಿತ್ಯ ಸಂಬಂಧವಾಗಿದ್ದು, ಬೇರ್ಪಡಿಸಲಿಕ್ಕಾಗದೆ ಇರುತ್ತದೋ ಅದಕ್ಕೆ ಸಮವಾಯಿ ಸಂಬಂಧವೆನ್ನುತ್ತಾರೆ.

ಉದಾ : ಬೆಲ್ಲ ಮತ್ತು ಅದರ ಸಿಹಿ, ದೀಪ ಮತ್ತು ಅದರ ಪ್ರಕಾಶ, ಸೂರ್ಯ ಮತ್ತು ಆತನ ಕಿರಣ.

ಬ್ರಹ್ಮಕ್ಕೂ ಜಗತ್ತಿಗೂ ಈ ವಿಧವಾದ ಸಂಬಂಧವಿರುವುದೇ ಎಂಬುದಾಗಿ ವಿಚಾರ ಮಾಡಿದರೆ, ಜಗತ್ತು ಬ್ರಹ್ಮದಲ್ಲಿ ಯಾವಾಗಲೂ ತೋರುವುದಿಲ್ಲ – ಬ್ರಹ್ಮದ ಅಜ್ಞಾನ ಕಾಲದಲ್ಲಿ ಮಾತ್ರ ತೋರುತ್ತದೆ. ಗಾಢ ನಿದ್ರೆಯಲ್ಲೇ ಈ ಜಗತ್ತು ಪತ್ತೆ ಇರುವುದಿಲ್ಲ. ಆದ್ದರಿಂದ ಈ ಸಂಬಂಧವೂ ಬ್ರಹ್ಮಕ್ಕೂ ಜಗತ್ತಿಗೂ ಸಂಭವಿಸುವುದಿಲ್ಲ.

ಪ್ರ ೧೧ : **ಕಲ್ಪಿತ ತಾದಾತ್ಮ್ಯ ಸಂಬಂಧವೆಂದರೇನು ?**

ಉ : ಒಂದು ವಸ್ತುವಿನಲ್ಲಿ ಮತ್ತೊಂದು ವಸ್ತು ಅದರ ಅಜ್ಞಾನ ಕಾಲ

ದಲ್ಲಿ ಮಾತ್ರ ಅದಕ್ಕಿಂತ ಬೇರೆಯಾಗಿ ತೋರಿ, ಜ್ಞಾನ ಕಾಲದಲ್ಲಿ ಅದೇ ಆಗಿರುವುದಕ್ಕೆ ಕಲ್ಪಿತ ತಾದಾತ್ಮ್ಯ ಸಂಬಂಧವೆನ್ನುತ್ತಾರೆ.

ಉದಾ : ಹಗ್ಗದಲ್ಲಿ ಹಾವು, ಹಗ್ಗದ ಅಜ್ಞಾನ ಕಾಲದಲ್ಲಿ ಹಗ್ಗಕ್ಕಿಂತ ಬೇರೆಯಾಗಿ ತೋರಿ, ಹಗ್ಗದ ಜ್ಞಾನವಾದ ಕೂಡಲೇ ಹಾವು ಇಲ್ಲವಾಗಿ ಹಗ್ಗವೊಂದೇ ಉಳಿಯುವಂತೆ, ಬ್ರಹ್ಮದ ಅಜ್ಞಾನ ಕಾಲದಲ್ಲಿ ಪ್ರಪಂಚವು ಅದಕ್ಕಿಂತ ವಿಲಕ್ಷಣವಾದ ಲಕ್ಷಣಗಳಿಂದ ಕೂಡಿದೆಯೋ ಎಂಬಂತೆ ತೋರಿ, ಜ್ಞಾನ ಕಾಲದಲ್ಲಿ ಜಗತ್ತು ಮಿಥ್ಯೆಯಾಗಿ ಬ್ರಹ್ಮವೊಂದೇ ಉಳಿಯುವುದರಿಂದ, ಬ್ರಹ್ಮಕ್ಕೂ ಜಗತ್ತಿಗೂ ಕಲ್ಪಿತ ತಾದಾತ್ಮ್ಯ ಸಂಬಂಧವಿದೆ ಎಂದು ಎಲ್ಲಾ ಶಾಸ್ತ್ರಗಳೂ ಒಪ್ಪಿವೆ.

ಪ್ರ ೧೨ : **ಬ್ರಹ್ಮವು ಅನಾದಿ ಎನ್ನುವುದಕ್ಕೆ ಪ್ರಮಾಣವೇನು ?**

ಉ : "ಸದೇವ ಸೌಮ್ಯೇದಮಗ್ರಮಾಸೀತ್ । ಏಕಮೇವಾದ್ವಿತೀಯಂ ಬ್ರಹ್ಮ ನೇಹನಾನಾಸ್ತಿ ಕಿಂಚನ" ಎಂಬುದಾಗಿ ಛಾಂದೋಗ್ಯ ಶ್ರುತಿಯಲ್ಲಿ ಹೇಳಿದೆ. ಅಂದರೆ ಈ ಸೃಷ್ಟಿಗೆ ಪೂರ್ವ ಸದ್ರೂಪವಾದ ಪರಬ್ರಹ್ಮವೊಂದೇ ಇತ್ತೆಂದು ಉಪನಿಷತ್ತುಗಳಲ್ಲಿ ಹೇಳಿರುವುದರಿಂದ ಬ್ರಹ್ಮವು ಅನಾದಿ, ಈ ಬ್ರಹ್ಮಕ್ಕೆ ಆದಿ ಇದೆ ಎಂದು ಹೇಳಬೇಕಾದರೆ, ಹುಟ್ಟಿಸಿದ ಚೈತನ್ಯ ವಸ್ತು ಒಂದಿರಬೇಕು. ಆದರೆ ಚೈತನ್ಯ ವಸ್ತು ಬ್ರಹ್ಮವನ್ನು ಬಿಟ್ಟು ಇನ್ನೊಂದಿಲ್ಲ. ಉಳಿದ ಎಲ್ಲಾ ವಸ್ತುಗಳೂ ಇದರಲ್ಲಿ ಅಧ್ಯಸ್ತಗಳಾಗಿವೆ. ಅಧ್ಯಸ್ತ ವಸ್ತುವಿನಿಂದ ಅಧಿಷ್ಠಾನ ಎಂದೂ ಹುಟ್ಟಲಾರದು. ಬ್ರಹ್ಮವು ಸರ್ವಕ್ಕೂ ಅಧಿಷ್ಠಾನವಾಗಿರುವುದರಿಂದ ಅದು ಅನಾದಿ.

ಪ್ರ ೧೩ : **ಮಾಯೆಯು ಅನಾದಿ ಹೇಗೆ ?**

ಉ : ಮಾಯೆಯು ಕಲ್ಪಿತವಾದದ್ದರಿಂದ ಅದರ ಹುಟ್ಟು ನಮಗೆ ಸಿಕ್ಕುವುದಿಲ್ಲ. ಶುದ್ಧ ಬ್ರಹ್ಮವು ನಿರ್ವಿಕಾರವಾದದ್ದರಿಂದ ಇದು ಮಾಯೆಯನ್ನು ಹುಟ್ಟಿಸುವ ಗೋಜಿಗೆ ಹೋಗುವುದಿಲ್ಲ. ಈಶ್ವರನು ಹುಟ್ಟಿಸಿರಬಹುದೇ ಎಂದರೆ, ಮಾಯೆಯು ಸಿದ್ಧಿಯಾದ ಮೇಲೆ ಈಶ್ವರ ಸಿದ್ಧಿ; ಆದ್ದರಿಂದ ಈಶ್ವರನು ಮಾಯೆಯ ಹಿರಿಯ ಮಗನಿದ್ದಂತೆ ! ಇನ್ನು ಜೀವನಿಂದ ಮಾಯೆ ಹುಟ್ಟಿರಬಹುದೇ ಎಂದರೆ, ಜೀವನೂ ಸಹ ಈಶ್ವರನ ಸಿದ್ಧಿಯಾದ ಮೇಲೆ ಸಿದ್ಧಿಯಾಗುವುದರಿಂದ ಇವನು ಮಾಯೆಯ ಕಿರಿಯ ಮಗನಿದ್ದಂತೆ! ಮಕ್ಕಳಿಂದ

ತಾಯಿಯು ಹುಟ್ಟುವುದಿಲ್ಲವಾದ ಕಾರಣ ಮಾಯೆಯು ಬ್ರಹ್ಮನಿಂದಲೂ ಹುಟ್ಟಿಲ್ಲ, ಜೀವೇಶ್ವರನಿಂದಲೂ ಹುಟ್ಟಿಲ್ಲ. ಹೋಗಲಿ, ಜಗತ್ತಿನಿಂದ ಮಾಯೆ ಸಂಭವಿಸಿರಬಹುದೇ ಎಂದರೆ ಜಗತ್ತು ಮಾಯಾಕಾರ್ಯ; ಕಾರ್ಯದಿಂದ ಕಾರಣ ಎಂದಿಗೂ ಹುಟ್ಟಲಾರದು. ಆದ್ದರಿಂದ ಮಾಯೆಯು ಅನಾದಿ.

ಪ್ರ ೧೪: **ಬ್ರಹ್ಮ ಮತ್ತು ಮಾಯೆಯ ಸಂಬಂಧವು ಅನಾದಿ ಹೇಗೆ?**

ಉ: ಬ್ರಹ್ಮ ಹಾಗೂ ಮಾಯೆ ಎರಡೂ ಅನಾದಿಯಾದುದರಿಂದ, ಇವರ ಸಂಬಂಧವೂ ಅನಾದಿ.

ಪ್ರ ೧೫: **ಈಶ್ವರನು ಅನಾದಿ ಎನ್ನುವುದಕ್ಕೆ ಪ್ರಮಾಣವೇನು?**

ಉ: ಬ್ರಹ್ಮಚೇತನವೂ ಅನಾದಿ, ಮಾಯೆಯೂ ಅನಾದಿಯಾದ್ದರಿಂದ ಮಾಯೆಯಲ್ಲಿ ಬಿದ್ದ ಬ್ರಹ್ಮ ಚೇತನದ ಪ್ರತಿಬಿಂಬವೂ ಅನಾದಿ. ಈ ಪ್ರತಿಬಿಂಬವೇ ಈಶ್ವರನಾಗಿರುವುದರಿಂದ ಅವನೂ ಅನಾದಿ.

ಉದಾ: ಒಂದು ಕನ್ನಡಿಯನ್ನು ನಾವು ಹಿಡಿದುಕೊಂಡರೆ ಅದರಲ್ಲಿ ನಮ್ಮ ಪ್ರತಿಬಿಂಬ ಬೀಳುತ್ತದೆ. ಪ್ರತಿಬಿಂಬ ಯಾವಾಗ ಹುಟ್ಟಿತೆಂದರೆ, ಆ ಕನ್ನಡಿಯನ್ನು ಯಾವಾಗ ಹಿಡಿದುಕೊಂಡೆವೋ ಆಗಿನಿಂದಲೂ ಇದೆ ಎನ್ನಬೇಕಾಗುತ್ತದೆ. ಇದರಂತೆ ಮಾಯೆ ಎಂಬ ಕನ್ನಡಿಯ ಉಪಾಧಿ ಇರುವವರೆಗೂ ಈಶ್ವರನಿರುತ್ತಾನೆ. ಮಾಯೆ ಯಾವಾಗ ಹುಟ್ಟಿತೋ ಆಗಲೇ ಈಶ್ವರನೂ ಹುಟ್ಟಿದ್ದಾನೆಂದು ಹೇಳಬೇಕಾಗುತ್ತದೆ. ಮಾಯೆಯು ಅನಾದಿ, ಬಿಂಬರೂಪವಾದ ಬ್ರಹ್ಮವೂ ಅನಾದಿ; ಆದ್ದರಿಂದ ಪ್ರತಿಬಿಂಬ ರೂಪವಾದ ಈಶ್ವರನೂ ಅನಾದಿ.

ಪ್ರ ೧೬: **ಜೀವನು ಅನಾದಿ ಎನ್ನುವುದಕ್ಕೆ ಪ್ರಮಾಣವೇನು?**

ಉ: ಶ್ರೀಮಚ್ಛಂಕರಾಚಾರ್ಯರು "ಜೀವೋ ಬ್ರಹ್ಮೈವನಾಽಪರಃ" ಜೀವನು ಬ್ರಹ್ಮನೇ, ಬೇರೆಯಲ್ಲವೆಂಬುದಾಗಿ ಹೇಳಿದ್ದಾರೆ. ಬ್ರಹ್ಮವೂ ಅನಾದಿ, ಅವಿದ್ಯೆಯೂ ಅನಾದಿ; ಆದ್ದರಿಂದ ಅವಿದ್ಯೆಯಲ್ಲಿ ಬಿದ್ದ ಪ್ರತಿಬಿಂಬರೂಪನಾದ ಜೀವನೂ ಅನಾದಿ.

ಪ್ರ ೧೭: **ಈಶ್ವರ–ಜೀವ ಇವರ ಭೇದವು ಅನಾದಿ ಹೇಗೆ?**

ಉ: ಈಶ್ವರ ಜೀವ ಇಬ್ಬರೂ ಅನಾದಿಯಾದುದರಿಂದ ಇವರಲ್ಲಿ ತೋರುವ ಭೇದವೂ ಸಹ ಅನಾದಿಯೇ ಆಗಿದೆ.

ಪ್ರ ೧೮ : **ಅನಾದಿಯಾದ ಮೇಲಿನ ಆರು ಪದಾರ್ಥಗಳನ್ನು ತಿಳಿಯುವುದರಿಂದ ಫಲವೇನು ?**

ಉ : ಅನಾದಿಯಾದ ಮೇಲಿನ ಆರು ಪದಾರ್ಥಗಳನ್ನು ವಿಚಾರ ಮಾಡುವುದರಿಂದ ಶುದ್ಧ ಬ್ರಹ್ಮವು ಅನಾದಿ ಅನಂತವಾದುದು, ಉಳಿದ ಐದು ಅನಾದಿ ಸಾಂತವಾದುವುಗಳೆಂಬುದಾಗಿ ತಿಳಿದು, ಅನಾದಿ ಸಾಂತವಾದ ಐದು ವಸ್ತುಗಳೂ ಮಿಥ್ಯೆ ಎಂಬುದಾಗಿ ತಿಳಿದು ಬಾಧೆ ಮಾಡಿ ಅಧಿಷ್ಠಾನವಾದ ಪರ ಬ್ರಹ್ಮ ಒಂದೇ ಉಳಿಯುವುದೆಂಬ ದೃಢ ನಿಶ್ಚಯವಾಗಿ ಅದ್ವೈತ ಸಿದ್ಧಿ ಯಾಗುವುದೇ ಫಲ.

ಪ್ರ ೧೯ : **ಪ್ರಕೃತಿಯು ಎಷ್ಟು ವಿಧ ?**

ಉ : ಪ್ರಕೃತಿಯು ಮೂರು ವಿಧ :

೧) ಶುದ್ಧ ಸತ್ವಮಾಯೆ.

೨) ಮಲಿನ ಸತ್ವ ಅವಿದ್ಯೆ.

೩) ತಮಃ ಪ್ರಧಾನ ಪ್ರಕೃತಿ.

ಮಾಯೆ ಎಂದರೆ ಶುದ್ಧ ಸತ್ವ ಪ್ರಕೃತಿ; ಅವಿದ್ಯೆ ಎಂದರೆ ಮಲಿನ ಸತ್ವ ಪ್ರಕೃತಿ; ತಮಃ ಪ್ರಧಾನ ಪ್ರಕೃತಿ ಎಂದರೆ ತಮೋಗುಣವೇ ಪ್ರಧಾನವಾಗಿರುವ ಪ್ರಕೃತಿ.

ಪ್ರ ೨೦ : **ಶುದ್ಧ ಸತ್ವಗುಣವೆಂದರೇನು ?**

ಉ : ರಜೋಗುಣ ತಮೋಗುಣಗಳನ್ನು ದಬಾಯಿಸಿ ಅವುಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ಅವುಗಳ ಮೇಲೆ ಅಧಿಕಾರ ನಡೆಸುವ ಸತ್ವಗುಣಕ್ಕೆ ಶುದ್ಧ ಸತ್ವಗುಣವೆಂದು ಹೆಸರು.

**ಉದಾ :** ಧರ್ಮಬಲ, ದರ್ಪಬಲ ಇರುವ ಒಬ್ಬ ರಾಜನು ತನ್ನ ಇಬ್ಬರು ಮಂತ್ರಿಗಳನ್ನು ಆಳುವಂತೆ, ಶುದ್ಧ ಸತ್ವಗುಣವು ರಜೋಗುಣ ತಮೋಗುಣ ಗಳ ಮೇಲೆ ತನ್ನ ಆಳ್ವಿಕೆಯನ್ನು ನಡೆಸುತ್ತದೆ.

ಪ್ರ ೨೧ : **ಮಲಿನ ಸತ್ವಗುಣವೆಂದರೇನು ?**

ಉ : ರಜೋಗುಣ ತಮೋಗುಣಗಳಿಗೆ ಅಧೀನವಾದ ಸತ್ವಗುಣ.

ಉದಾ : ಧರ್ಮಬಲ, ದರ್ಪಬಲವಿಲ್ಲದ ರಾಜನು ತನ್ನ ಇಬ್ಬರು ಮಂತ್ರಿಗಳ ಅಧೀನನಾಗಿರುವಂತೆ, ರಜೋಗುಣ ತಮೋಗುಣಗಳು ಯಾವ

ಸತ್ತ್ವಗುಣವನ್ನು ದಬಾಯಿಸಿ ಅದರ ಮೇಲೆ ತಮ್ಮ ಅಧಿಕಾರ ನಡೆಸುವುವೋ ಅದಕ್ಕೆ ಮಲಿನ ಸತ್ತ್ವಗುಣವೆಂದು ಹೆಸರು.

ಪ್ರ ೨೨ : **ಎಷ್ಟು ವಸ್ತುಗಳು ಸೇರಿ ಈಶ್ವರನೆನಿಸುತ್ತಾನೆ ?**

ಉ : ನಾವು ಪ್ರಥಮ ಕಲಾದಲ್ಲಿ ತಿಳಿದುಕೊಂಡಿರುವಂತೆ ಬ್ರಹ್ಮಚೇತನ, ಮಾಯೆ, ಅದರಲ್ಲಿ ಬಿದ್ದ ಪ್ರತಿಬಿಂಬ – ಇವು ಮೂರೂ ಸೇರಿ ಈಶ್ವರನೆನಿಸುತ್ತಾನೆ. ಆದರೆ ಇಲ್ಲಿ ಈಶ್ವರನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನಾಗಿರುವನೆಂದು ಹೇಳಲ್ಪಡುವುದರಿಂದ ಮಾಯೆಯ ಜೊತೆಗೆ ತಮಃಪ್ರಧಾನ ಪ್ರಕೃತಿಯನ್ನೂ ಸೇರಿಸಬೇಕು.

ಪ್ರ ೨೩ : **ನಿಮಿತ್ತ ಕಾರಣವೆಂದರೇನು ?**

ಉ : ಒಂದು ಕಾರ್ಯವಾಗುವುದಕ್ಕೆ ಕಾರಣವಾಗಿದ್ದು, ಆ ಕಾರ್ಯವಾದನಂತರ ಕಾರ್ಯಕ್ಕಿಂತ ಬೇರೆಯಾಗಿರುವುದು ಮತ್ತು ಚೇತನವಾಗಿರುವುದು.

ಉದಾ : ಕುಂಬಾರನು ಒಂದು ಘಟವಾಗುವುದಕ್ಕೆ ಕಾರಣನಾಗಿ ಘಟವಾದನಂತರ ಬೇರೆ ಇರುತ್ತಾನೆ. ಆದ್ದರಿಂದ ಘಟವೆಂಬ ಕಾರ್ಯಕ್ಕೆ ಕುಂಬಾರನು ನಿಮಿತ್ತ ಕಾರಣ.

ಪ್ರ ೨೪ : **ಉಪಾದಾನ ಕಾರಣವೆಂದರೇನು ?**

ಉ : ಕಾರ್ಯಕ್ಕೆ ಕಾರಣವಾಗಿದ್ದು ಕಾರ್ಯದಲ್ಲೇ ವ್ಯಾಪಕವಾಗಿರುವುದು ಮತ್ತು ಕಾರ್ಯದ ಉತ್ಪತ್ತಿ, ಸ್ಥಿತಿ ಮತ್ತು ಲಯ – ಈ ಮೂರರಲ್ಲೂ ಇರುವುದು.

ಉದಾ : ಮಣ್ಣು ಘಟಕ್ಕೆ ಕಾರಣವಾಗಿದ್ದು ಘಟದಲ್ಲೆಲ್ಲಾ ವ್ಯಾಪಕವಾಗಿರುತ್ತದೆ. ಮತ್ತು ಘಟದ ಉತ್ಪತ್ತಿ, ಸ್ಥಿತಿ, ಲಯ ಮೂರರಲ್ಲೂ ಇರುತ್ತದೆ. ಆದ್ದರಿಂದ ಸತ್ ಆಗಿದೆ. ಮಣ್ಣನ್ನು ಉಪಾದಾನ ಕಾರಣವೆನ್ನುತ್ತಾರೆ.

ಪ್ರ ೨೫ : **ಈಶ್ವರನು ಜಗತ್ತಿಗೆ ನಿಮಿತ್ತ ಮತ್ತು ಉಪಾದಾನ ಕಾರಣನು ಹೇಗೆ ?**

ಉ : ಈಶ್ವರನು ಶುದ್ಧ ಸತ್ತ್ವ ಮಾಯೆಯ ಉಪಾಧಿಯಿಂದ ಜಗತ್ತಿಗೆ

ನಿಮಿತ್ತ ಕಾರಣನೂ, ತಮಃ ಪ್ರಧಾನ ಪ್ರಕೃತಿಯ ಉಪಾಧಿಯಿಂದ ಉಪಾದಾನ ಕಾರಣನೂ ಆಗಿದ್ದಾನೆ.

ಪ್ರ ೨೬ : **ಈಶ್ವರನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನು ಹೇಗೆ ?**

ಉ : ಈಶ್ವರನು ಚೇತನನಾದುದರಿಂದ ಜಗತ್ತಿಗೆ ನಿಮಿತ್ತ ಕಾರಣನೂ, ಸದ್ರೂಪನಾದುದರಿಂದ ಉಪಾದಾನ ಕಾರಣನೂ, ಸರ್ವವ್ಯಾಪಕ, ಸರ್ವಾಧಿಷ್ಠಾನನಾಗಿರುವುದರಿಂದ ಅಭಿನ್ನನೂ – ಹೀಗೆ ತಾನು ಸೃಷ್ಟಿಸಿದ ಜಗತ್ತಿಗೆ ಈಶ್ವರನು ಅಭಿನ್ನ ನಿಮಿತ್ತೋಪಾದಾನ ಕಾರಣನಾಗಿದ್ದಾನೆ.

ಪ್ರ ೨೭ : **ಮಾಯೆಯು ಜಗತ್ತಿಗೆ ನಿಮಿತ್ತ ಕಾರಣವಾಗಲೀ ಅಥವಾ ಉಪಾದಾನ ಕಾರಣವಾಗಲೀ ಏಕೆ ಆಗುವುದಿಲ್ಲ ?**

ಉ : ಮಾಯೆಯು ಚೇತನವಲ್ಲ, ಜಡ. ಮತ್ತು ಅದು ಸದಸದ್ವಿಲಕ್ಷಣವಾದುದು. ಆದ್ದರಿಂದ ಅದು ಜಗತ್ತಿಗೆ ನಿಮಿತ್ತ ಕಾರಣವೂ ಆಗಲಾರದು ಮತ್ತು ಉಪಾದಾನ ಕಾರಣವೂ ಆಗಲಾರದು.

ಪ್ರ ೨೮ : **ಜೀವನೆಂದರೇನು ? ಅವನ ಸ್ವಭಾವವೇನು ?**

ಉ : ಬ್ರಹ್ಮಚೇತನ, ಮಲಿನ ಸತ್ವ ಅವಿದ್ಯೆ, ಅದರಲ್ಲಿ ಬಿದ್ದ ಪ್ರತಿಬಿಂಬ – ಈ ಮೂರೂ ಸೇರಿ ಜೀವ. ಇವನು ತನ್ನ ಸ್ವರೂಪವನ್ನು ಮರೆತು ಜನನ ಮರಣ ರೂಪ ಸಂಸಾರದಲ್ಲಿ ಬಿದ್ದು ಹೊರಳಾಡುತ್ತಿರುವುದೇ ಇವನ ಸ್ವಭಾವವಾಗಿದೆ.

ಪ್ರ ೨೯ : **ಜೀವನು ಭೋಕ್ತನು ಹೇಗೆ ?**

ಉ : ಜೀವನ ಉಪಾಧಿ ಅವಿದ್ಯೆ. ಇದು ತಪ್ಪು ತಿಳುವಳಿಕೆಯಿಂದ ಕೂಡಿದೆ. ಇದರಿಂದ ಇವನು ಫಲದಾಸೆ ಉಳ್ಳವನಾಗಿರುವುದರಿಂದ ಭೋಕ್ತನಾಗಿದ್ದಾನೆ.

ಪ್ರ ೩೦ : **ಈಶ್ವರನ ಕರ್ತೃತ್ವ ವಿಷಯದಲ್ಲಿ ವಿಶೇಷ ವಿಚಾರವೇನು ?**

ಉ : ಪ್ರಪಂಚದ ಪ್ರತಿಯೊಂದು ಕಾರ್ಯವಾಗುವುದಕ್ಕೂ ಮೂರು ಕಾರಣಗಳಿರಬೇಕು: ೧) ನಿಮಿತ್ತ ಕಾರಣ, ೨) ಉಪಾದಾನ ಕಾರಣ, ೩) ಸಹಕಾರಿ ಕಾರಣ. ಒಂದು ಘಟವಾಗುವುದಕ್ಕೆ ಕುಂಬಾರ ನಿಮಿತ್ತ ಕಾರಣ,

ಮಣ್ಣು ಉಪಾದಾನ ಕಾರಣ, ಚಕ್ರದಂಡಾದಿಗಳು ಸಹಕಾರಿ ಕಾರಣ. ನಿಮಿತ್ತ ಮತ್ತು ಸಹಕಾರಿ ಕಾರಣಗಳು ಕಾರ್ಯವಾದ ನಂತರ ಅದಕ್ಕಿಂತ ಬೇರೆಯಾಗಿ ಉಳಿಯುವುದರಿಂದ ಎರಡನ್ನೂ ಸೇರಿಸಿ ನಿಮಿತ್ತ ಕಾರಣವೆಂದು ಹೇಳಬಹುದು. ಆದರೆ ಈಶ್ವರನು ಜಗತ್ತೆಂಬ ಕಾರ್ಯಕ್ಕೆ ತಾನೊಬ್ಬನೇ ಅಭಿನ್ನನಿಮಿತ್ತೋಪಾದಾನ ಕಾರಣನಾಗಿದ್ದಾನೆ. ಪ್ರಪಂಚದಲ್ಲಿ ಇಂಥಾ ವಸ್ತು ಯಾವುದಿದೆ ಎಂಬುದಾಗಿ ನೋಡಿದರೆ ಊರ್ಣನಾಭಿ ಅಥವಾ ಜೇಡರ ಹುಳು ಎಂಬುದಿದೆ. ಇದು ತನ್ನ ಗೂಡು ಅಥವಾ ಪಟ (ಬಲೆ)ವನ್ನು ಕಟ್ಟುವುದಕ್ಕೆ ಕಾಗೆ ಗುಬ್ಬಿಗಳಂತೆ ಹೊರಗಿನಿಂದ ಯಾವ ಸಾಮಗ್ರಿಯನ್ನೂ ತರದೆ, ತನ್ನ ದೇಹದಿಂದಲೇ ಎಳೆಗಳನ್ನು ತೆಗೆದು, ತನ್ನ ಬುದ್ಧಿಶಕ್ತಿಯನ್ನುಪಯೋಗಿಸಿ ಸುಂದರವಾದ ಬಲೆಯನ್ನು ರಚಿಸಿ ತಾನು ಅದರೊಳಗೆ ವಾಸಮಾಡುತ್ತದೆ. ಈ ಹುಳು ತನ್ನ ಪಟಕ್ಕೆ ತನ್ನ ಬುದ್ಧಿಶಕ್ತಿ ಎಂಬ ಉಪಾಧಿಯಿಂದ ನಿಮಿತ್ತ ಕಾರಣವೂ, ದೇಹದ ಉಪಾಧಿಯಿಂದ ಉಪಾದಾನ ಕಾರಣವೂ ಆಗಿದೆ. ಇಂತಹ ಒಂದು ತುಚ್ಛವಾದ ಕೀಟವೇ ತನ್ನ ಗೂಡಿಗೆ ನಿಮಿತ್ತ – ಉಪಾದನೆಗಳೆಂಬ ಎರಡೂ ಕಾರಣವಾಗಿರಬೇಕಾದರೆ ಸರ್ವಶಕ್ತನಾದ-ಈಶ್ವರನು ಏಕೆ ಆಗಿರಬಾರದು ?

ಆದರೆ ಈ ಉದಾಹರಣೆಯಲ್ಲೂ ಒಂದು ಕೊರತೆ ಇದೆ. ಅದೇನೆಂದರೆ— ಜೇಡರ ಹುಳುವು ತಾನು ಹೆಣೆದ ಬಲೆಗಿಂತ ತಾನು ಬೇರೆಯಾಗಿರುತ್ತದೆ. ಅಂದರೆ ಬಲೆಯು ನಾಶವಾದರೂ ತಾನು ಬೇರೆಯಾಗಿ ಉಳಿಯುತ್ತದೆ. ಅಥವಾ ಬಲೆಯು ನಾಶವಾಗುವ ಮೊದಲೇ ಆ ಹುಳುವೇ ಸಾಯಬಹುದು. ಆದರೆ ಈಶ್ವರನು ಹೀಗಿಲ್ಲ; ತನ್ನ ಸೃಷ್ಟಿಗೆ ಅಭಿನ್ನನಾಗಿದ್ದಾನೆ. ಹೇಗೆಂದರೆ, ಸ್ವಪ್ನಕ್ಕೆ ಸ್ವಪ್ನಸಾಕ್ಷಿಯೇ ನಿಮಿತ್ತ ಕಾರಣ. ಸಾಕ್ಷಿಯ ಆಶ್ರಯದಲ್ಲಿರುವ ನಿದ್ರೆಯೇ ಉಪಾದಾನ ಕಾರಣ. ಇನ್ನು ಸ್ವಪ್ನಸಾಕ್ಷಿಯೇ ಸ್ವಪ್ನದಲ್ಲಿ ಕಾಣುವ ಸಮಸ್ತ ಪದಾರ್ಥಗಳೂ ಆಗಿರುತ್ತಾನೆಯೇ ಹೊರತು ಅವನಿಗಿಂತ ಭಿನ್ನವಾದುದು ಯಾವುದೂ ಇರುವುದಿಲ್ಲ. ಸ್ವಪ್ನ ಕಾಲದಲ್ಲಿ ಮಾತ್ರ ಬೇರೆಯಾಗಿದ್ದಂತೆ ತೋರಿದರೂ, ಎಚ್ಚರವಾದ ಕೂಡಲೇ ಎಲ್ಲವೂ ಸುಳ್ಳಾಗಿ ತಾನೊಬ್ಬನೇ ಸತ್ಯವಾಗಿ ಉಳಿಯುವಂತೆ, ಅವಿಚಾರ ಕಾಲದಲ್ಲಿ ಈಶ್ವರನಿಗೂ ಜಗತ್ತಿಗೂ ಭೇದ ತೋರಿದರೂ ವಿಚಾರ ಮಾಡಿದರೆ ಜಗತ್ತು ಮಿಥ್ಯವಾಗುತ್ತದೆ. ಆದ್ದರಿಂದ ಈಶ್ವರನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನಾಗಿದ್ದಾನೆ.

ಪ್ರ ೩೧ : **ಕರ್ತೃತ್ವಗಳು ಎಷ್ಟು ವಿಧ ?**

ಉ : ಕರ್ತೃತ್ವಗಳು ಮೂರು ವಿಧ :

೧) ಕರಣ ಕರ್ತೃತ್ವ
೨) ಸಂಕಲ್ಪ ಕರ್ತೃತ್ವ
೩) ಸನ್ನಿಧಾನ ಕರ್ತೃತ್ವ

ಪ್ರ ೩೨ : **ಕರಣ ಕರ್ತೃತ್ವವೆಂದರೇನು ?**

ಉ : ಕರಣವೆಂದರೆ ಸಾಧನ. ಒಂದು ಘಟವನ್ನು ಕುಂಬಾರನು ತನ್ನ ಕಾಲುಗಳು ಮತ್ತು ಚಕ್ರ–ದಂಡಾದಿಗಳೆಂಬ ಕರಣಗಳ ಸಹಾಯದಿಂದ ಮಾಡುವುದರಿಂದ ಕುಂಬಾರನು ಕರಣ ಕರ್ತನಾಗಿದ್ದಾನೆ.

ಹೀಗೆ ಈಶ್ವರನು ಜಗತ್ತಿಗೆ ಕರಣ ಕರ್ತನಾಗಿದ್ದಾನೆ ಎಂದು ಹೇಳಿದರೆ ಕುಂಬಾರನಂತೆ ಈಶ್ವರನೂ ಕರಚರಣಾದಿ ಅವಯುವ ಸಹಿತನಾದ ಮನುಷ್ಯ ನೆಂದು ಹೇಳಬೇಕಾಗುತ್ತದೆ. ಇದರಿಂದ ಈಶ್ವರನಿಗೂ ಜನನ ಮರಣಾದಿ ಸರ್ವ ದುಃಖಗಳನ್ನೂ ಒಪ್ಪಬೇಕಾಗುತ್ತದೆ. ಆದರೆ ಈಶ್ವರನಲ್ಲಿ ಈ ದೋಷಗಳಿಲ್ಲ ವಾದುದರಿಂದ ಅವನು ಜಗತ್ತಿಗೆ ಕರಣ ಕರ್ತನಾಗುವುದಿಲ್ಲ.

ಪ್ರ ೩೩ : **ಸಂಕಲ್ಪ ಕರ್ತೃತ್ವವೆಂದರೇನು ?**

ಉ : ಸಂಕಲ್ಪ ಮಾಡಿ ಯಾವುದಾದರೊಂದು ಕಾರ್ಯ ಮಾಡುವುದಕ್ಕೆ ಸಂಕಲ್ಪ ಕರ್ತೃತ್ವವೆನ್ನುತ್ತಾರೆ.

ಉದಾ : ವಿಶ್ವಾಮಿತ್ರಾದಿ ಮಹರ್ಷಿಗಳು ತಮ್ಮ ಸಂಕಲ್ಪ ಮಾತ್ರ ದಿಂದ ತ್ರಿಶಂಕು, ಸ್ವರ್ಗ ಇತ್ಯಾದಿಗಳ ಸೃಷ್ಟಿ ಮಾಡಿದರೆಂಬುದಾಗಿ ಪುರಾಣ ಗಳಿಂದ ತಿಳಿದುಬರುತ್ತದೆ. ಆದರೆ ಈ ಶಕ್ತಿ ಅವರ ಸಹಜ ಶಕ್ತಿಯಲ್ಲ. ತಪಶ್ಚರ್ಯಾದಿಗಳಿಂದ ಬಂದ ಆಗಂತುಕ ಶಕ್ತಿ. ಮತ್ತು ಸಂಕಲ್ಪ ಮಾಡ ಬೇಕಾದರೆ ಮನಸ್ಸಿರಬೇಕು. ಮನಸ್ಸಿದ್ದರೆ ಸುಖ–ದುಃಖಗಳಿರಬೇಕಾಗುತ್ತದೆ. ಇದರಿಂದ ಮನಸ್ಸಿರುವವನು ಜೀವನೆಂದು ಹೇಳಬೇಕಾಗುತ್ತದೆ. ಆದರೆ ಈಶ್ವರನು ತನ್ನ ಜಗತ್ಸೃಷ್ಟಿಗೆ ಸಹಜ ಶಕ್ತನೂ, ಅದಕ್ಕೆ ಅಭಿನ್ನನೂ ಆಗಿರು ವುದರಿಂದ ಅವನಿಗೆ ಸಂಕಲ್ಪ ಕರ್ತೃತ್ವ ಇಲ್ಲ.

ಶಂಕೆ : ಜಗತ್ತಿನ ಸೃಷ್ಟಿ ಕ್ರಮವನ್ನು ಹೇಳುವ ಶಾಸ್ತ್ರಗಳಲ್ಲಿ ಈಶ್ವರನು 'ಏಕೋಽಹಂ ಬಹುಶ್ಯಾಮ್' ಎಂಬುದಾಗಿ ಸೃಷ್ಟಿಗೆ ಪೂರ್ವ ಸಂಕಲ್ಪ ಮಾಡಿದ

ನೆಂಬುದಾಗಿ ಹೇಳುವುದರಿಂದ, ಈಶ್ವರನಲ್ಲಿ ಸಂಕಲ್ಪ ಕರ್ತೃತ್ವವನ್ನು ಏಕೆ ಒಪ್ಪಬಾರದು ?

ಸಮಾಧಾನ : ಈ ರೀತಿ ಹೇಳಿರುವ ಶಾಸ್ತ್ರಗಳು ದುರ್ಬಲ ಶ್ರುತಿಗಳೇ ಹೊರತು ಸಬಲ ಶ್ರುತಿ ವಾಕ್ಯಗಳಲ್ಲ. ಮಂದ ಮುಮುಕ್ಷುಗಳನ್ನು ಅಥವಾ ಈಶ್ವರನಿಗಿಂತ ಭಿನ್ನವಾದ ಜಡ ಪದಾರ್ಥಗಳನ್ನು ಜಗತ್ತಿಗೆ ಕಾರಣವೆಂದು ಹೇಳುವ ನಾಸ್ತಿಕರನ್ನು ಕುರಿತು 'ಈಶ್ವರನ ಸಂಕಲ್ಪದಿಂದ ಈ ಜಗತ್ತಾಗಿದೆ' ಎಂಬುದಾಗಿ ಅವರಲ್ಲಿ ಈಶ್ವರನ ಭಾವನೆ ಹುಟ್ಟಿಸಲು ಹೇಳಿರುವುದೇ ಹೊರತು ಉತ್ತಮಾಧಿಕಾರಿಗಳಿಗೆ ಹೇಳಿರುವುದಿಲ್ಲ. ಉತ್ತಮಾಧಿಕಾರಿಗಳಿಗೆ ಶಾಸ್ತ್ರಗಳು 'ಅಜಾತವಾದ' ಅಂದರೆ ಜಗತ್ತು ಹುಟ್ಟಿಯೇ ಇಲ್ಲವೆಂಬುದಾಗಿ ಹೇಳುವುದರಿಂದ ಈಶ್ವರನಲ್ಲಿ ಸಂಕಲ್ಪ ಕರ್ತೃತ್ವವನ್ನು ಒಪ್ಪಲಾಗುವುದಿಲ್ಲ.

ಪ್ರ ೩೪ : **ಸನ್ನಿಧಾನ ಕರ್ತೃತ್ವವೆಂದರೇನು ?**

ಉ : ಯತ್ನ, ಇಚ್ಛೆ, ಪ್ರಯತ್ನ, ಸಂಕಲ್ಪಗಳೇನೂ ಇಲ್ಲದೆ, ಕೇವಲ ಸನ್ನಿಧಾನ ಮಾತ್ರದಿಂದ ಎಲ್ಲಾ ಕಾರ್ಯಗಳು ನಡೆಯುವುದಕ್ಕೆ ಸನ್ನಿಧಾನ ಕರ್ತೃತ್ವವೆನ್ನುತ್ತಾರೆ.

ಉದಾ : ಸೂರ್ಯನು ಉದಯಿಸಿದ ಕೂಡಲೇ ಕನ್ನೈದಿಲೆಗಳು ಮುದುಡುತ್ತವೆ, ತಾವರೆಗಳು ಅರಳುತ್ತವೆ, ಮೇಣ ಕರಗುತ್ತದೆ, ಕೆಸರು ಒಣಗುತ್ತದೆ, ಪಕ್ಷಿಗಳು ಗೂಡಿನಿಂದ ಹೊರಬಂದು ಆಹಾರಕ್ಕಾಗಿ ತಿರುಗಾಡುತ್ತವೆ. ಮನುಷ್ಯರೆಲ್ಲಾ ತಮ್ಮ ತಮ್ಮ ದಿನಚರ್ಯೆಗಳನ್ನು ಆರಂಭಿಸುತ್ತಾರೆ. ಇದರಲ್ಲಿ ಸೂರ್ಯನ ಯತ್ನ, ಇಚ್ಛೆ, ಪ್ರೇರೇಪಣೆಗಳೇನೂ ಇರುವುದಿಲ್ಲ. ಅಯಸ್ಕಾಂತ ಶಿಲೆಯ ಸನ್ನಿಧಾನದಲ್ಲಿ ಸೂಜಿಗಳು ಚಲಿಸುತ್ತವೆ. ಇದೇ ಸನ್ನಿಧಾನ ಕರ್ತೃತ್ವ.

ಈ ದೃಷ್ಟಾಂತವು ಈಶ್ವರನಿಗೆ ಬಹುಮಟ್ಟಿಗೆ ಹೊಂದುತ್ತಾದರೂ ಒಂದು ಕೊರತೆಯಿದೆ. ಅದೇನೆಂದರೆ ಸೂರ್ಯನು ತನ್ನ ಸನ್ನಿಧಿಯಲ್ಲಿ ನಡೆಯುವ ಎಲ್ಲಾ ಕಾರ್ಯಗಳಿಗಿಂತ ತಾನು ಬೇರೆಯಾಗಿರುತ್ತಾನೆ. ಆದರೆ ಈಶ್ವರನು ಅಭಿನ್ನನಾಗಿರುತ್ತಾನೆ. ಇದನ್ನು ನಾವು ಮತ್ತೊಂದು ದೃಷ್ಟಾಂತದಿಂದ ತಿಳಿದುಕೊಳ್ಳಬಹುದು. ಅದು ಯಾವುದೆಂದರೆ ರಜ್ಜು–ಸರ್ಪ. ರಜ್ಜುವಿನಲ್ಲಿ ಕಲ್ಪಿತವಾದ ಸರ್ಪಕ್ಕೆ ರಜ್ಜು–ಉಪಹಿತ ಚೇತನವೇ ನಿಮಿತ್ತ ಕಾರಣ. ಈ

85529 Bill No ..............

ಚೇತನದ ಆಶ್ರಯದಲ್ಲಿರುವ ಅಜ್ಞಾನವೇ ಉಪಾದಾನ ಕಾರಣ. ರಜ್ಜುವಿಗಿಂತ ಸರ್ಪವು ಬೇರೆಯಾಗಿಲ್ಲ. ಮತ್ತು ರಜ್ಜು[illegible] ಇಚ್ಛೆಗಳೇನೂ ಇಲ್ಲದೆ ಸರ್ಪವು ತೋರಿದೆ. ಸರ್ಪವು ಏನೆಂದು ವಿಚಾರ ಮಾಡಿದ ಕೂಡಲೇ ಅದು ಭ್ರಾಂತಿ ಕಲ್ಪಿತವಾದದ್ದರಿಂದ ಮಿಥ್ಯೆಯಾಗಿ ಹೋಗಿ ಅಧಿಷ್ಠಾನವಾದ ರಜ್ಜುವೊಂದೇ ಉಳಿಯುತ್ತದೆ. ಕಲ್ಪಿತ ಪದಾರ್ಥಕ್ಕೆ ಅಧಿಷ್ಠಾನವೇ ಸ್ವರೂಪ. ಇದರಂತೆ ಕಲ್ಪಿತ ಜಗತ್ತಿಗೆ ಅಧಿಷ್ಠಾನನಾದ ಈಶ್ವರನೇ ಸ್ವರೂಪನಾಗಿದ್ದಾನೆ. ಹೀಗೆ ಈಶ್ವರನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನ ಕಾರಣನಾಗಿದ್ದಾನೆಂದು ಶೃತಿಗಳಲ್ಲಿ ಹೇಳಲ್ಪಟ್ಟಿದೆ.

ಪ್ರ ೩೫ : **ಈಶ್ವರನಿಗೂ ಜೀವನಿಗೂ ಇರುವ ವ್ಯತ್ಯಾಸವೇನು ?**

ಉ : ಈಶ್ವರನ ಉಪಾಧಿ ಶುದ್ಧ ಸತ್ವ ಮಾಯೆ; ಇದು ಏಕವೂ, ಸಾಪೇಕ್ಷಕವೂ, ವ್ಯಾಪಕವೂ ಆಗಿದೆ. ಉಪಾಧಿಯ ಧರ್ಮ ಪ್ರತಿಬಿಂಬದಲ್ಲಿ ತೋರುವುದರಿಂದ, ಈಶ್ವರನು ಏಕನೂ, ಸಾಪೇಕ್ಷಕ ವ್ಯಾಪಕನೂ ಆಗಿದ್ದಾನೆ. ಇನ್ನು ಜೀವನ ಉಪಾಧಿ ಅವಿದ್ಯೆ. ಇದು ಅನೇಕವೂ, ಪರಿಚ್ಛಿನ್ನವೂ ಆಗಿದೆ. ಉಪಾಧಿಯ ಧರ್ಮ ಜೀವನದಲ್ಲಿ ತೋರುವುದರಿಂದ ಜೀವರು ಅನೇಕರೆಂತಲೂ, ಪರಿಚ್ಛಿನ್ನರೆಂತಲೂ ಕಂಡುಬರುತ್ತದೆ. ಇದೇ ಈಶ್ವರನಿಗೂ ಜೀವನಿಗೂ ಇರುವ ವ್ಯತ್ಯಾಸ.

ಪ್ರ ೩೬ : **ಸಾಪೇಕ್ಷಕ ವ್ಯಾಪಕನೆಂದರೇನು ?**

ಉ : ಒಂದರ ಅಪೇಕ್ಷೆಯಿಂದ ದೊಡ್ಡದಾಗಿಯೂ, ಮತ್ತೊಂದರ ಅಪೇಕ್ಷೆಯಿಂದ ಚಿಕ್ಕದಾಗಿಯೂ ಇರುವುದು ಸಾಪೇಕ್ಷಕ ವ್ಯಾಪಕ. ಉದಾ : ಒಂದು ರೂಪಾಯಿಯು ಒಂದು ಪೈಸದ ದೃಷ್ಟಿಯಿಂದ ದೊಡ್ಡದು ; ಒಂದು ಸವರನ್ ದೃಷ್ಟಿಯಿಂದ ಚಿಕ್ಕದು. ಇದರಂತೆ ಒಂದು ಮನೆ ಅದರೊಳಗಿರುವ ಸಾಮಾನುಗಳ ದೃಷ್ಟಿಯಿಂದ ದೊಡ್ಡದಾದರೂ, ಆ ಊರಿಗಿಂತ ಚಿಕ್ಕದು. ಆದ್ದರಿಂದ ಇಲ್ಲಿ ಮನೆ ಸಾಪೇಕ್ಷಕ ವ್ಯಾಪಕ. ಇನ್ನು ಊರು ಮನೆಗಿಂತ ದೊಡ್ಡದಾದರೂ ದೇಶಕ್ಕಿಂತ ಚಿಕ್ಕದು. ಆದ್ದರಿಂದ ಊರು ಸಾಪೇಕ್ಷಕ ವ್ಯಾಪಕ. ದೇಶ ಊರಿಗಿಂತ ದೊಡ್ಡದಾದರೂ ಖಂಡಕ್ಕಿಂತ ಚಿಕ್ಕದು. ಆದ್ದರಿಂದ ದೇಶ ಸಾಪೇಕ್ಷಕ ವ್ಯಾಪಕ. ಖಂಡ ದೇಶಕ್ಕಿಂತ ದೊಡ್ಡದಾದರೂ ಪೃಥ್ವಿಗಿಂತ ಚಿಕ್ಕದು. ಆದ್ದರಿಂದ ಖಂಡವು ಸಾಪೇಕ್ಷಕ ವ್ಯಾಪಕ. ಇನ್ನು

ಪೃಥ್ವಿಯು ಖಂಡದ ದೃಷ್ಟಿಯಿಂದ ದೊಡ್ಡದಾದರೂ, ತನಗೆ ಕಾರಣವಾದ ಜಲ ತತ್ವಕ್ಕಿಂತ ಚಿಕ್ಕದಾಗಿರುವುದರಿಂದ ಪೃಥ್ವಿಯೂ ಸಾಪೇಕ್ಷಕ ವ್ಯಾಪಕ. ಜಲವು ಪೃಥ್ವಿಗಿಂತ ದೊಡ್ಡದಾದರೂ ತನಗೆ ಕಾರಣವಾದ ಅಗ್ನಿಗಿಂತ ಚಿಕ್ಕದಾಗಿರುವುದರಿಂದ ಜಲವೂ ಸಾಪೇಕ್ಷಕ ವ್ಯಾಪಕ. ಅಗ್ನಿಯು ಜಲಕ್ಕಿಂತ ದೊಡ್ಡದಾದರೂ ತನಗೆ ಕಾರಣವಾದ ವಾಯು ತತ್ವಕ್ಕಿಂತ ಚಿಕ್ಕದಾಗಿರುವುದರಿಂದ ಅಗ್ನಿಯೂ ಸಾಪೇಕ್ಷಕ ವ್ಯಾಪಕ. ಇನ್ನು ವಾಯುವು ಅಗ್ನಿಗಿಂತ ದೊಡ್ಡದಾಗಿದ್ದರೂ ತನಗೆ ಕಾರಣವಾದ ಆಕಾಶಕ್ಕಿಂತ ಚಿಕ್ಕದಾಗಿರುವುದರಿಂದ ವಾಯುವೂ ಸಾಪೇಕ್ಷಕ ವ್ಯಾಪಕ. ಇನ್ನು ಆಕಾಶವು ವಾಯುವಿಗಿಂತ ದೊಡ್ಡದಾದರೂ ತನಗೆ ಕಾರಣವಾದ ಮಾಯೆಗಿಂತ ಚಿಕ್ಕದಾದುದರಿಂದ ಆಕಾಶವೂ ಸಾಪೇಕ್ಷಕ ವ್ಯಾಪಕ. ಇನ್ನು ಮಾಯೆಯು ಆಕಾಶಕ್ಕಿಂತ ದೊಡ್ಡದಾದರೂ ಈಶ್ವರನಿಗಿಂತ ಚಿಕ್ಕದಾಗಿರುವುದರಿಂದ ಮಾಯೆಯೂ ಸಾಪೇಕ್ಷಕ ವ್ಯಾಪಕ. ಈಶ್ವರನು ಮಾಯೆಗಿಂತ ದೊಡ್ಡವನಾದರೂ ಪರಬ್ರಹ್ಮಕ್ಕಿಂತ ಚಿಕ್ಕವನಾಗಿರುವುದರಿಂದ ಈಶ್ವರನೂ ಸಹ ಸಾಪೇಕ್ಷಕ ವ್ಯಾಪಕ.

ಪರಬ್ರಹ್ಮಕ್ಕಿಂತ ದೊಡ್ಡ ವಸ್ತು ಮತ್ತಾವುದೂ ಇಲ್ಲವಾದುದರಿಂದ ಅದೊಂದೇ ನಿರಪೇಕ್ಷಕ ವ್ಯಾಪಕ. ಶಾಸ್ತ್ರಗಳಲ್ಲಿ ಬ್ರಹ್ಮವನ್ನು ಕುರಿತು 'ಭೂಮಾ' ಎಂದು ಸಂಬೋಧಿಸಿದೆ. 'ಭೂಮಾ' ಎಂದರೆ ದೊಡ್ಡ ವಸ್ತು. ಎಷ್ಟು ದೊಡ್ಡದೆಂದರೆ ನಾವು ಎಷ್ಟು ದೊಡ್ಡದೆಂದು ಕಲ್ಪನೆ ಮಾಡುತ್ತೇವೋ ಅದಕ್ಕಿಂತ ದೊಡ್ಡದೆಂದರ್ಥ. ಹೀಗಿರುವುದರಿಂದ ಬ್ರಹ್ಮವೊಂದೇ ಪರಿಪೂರ್ಣ ವಸ್ತುವಾದುದರಿಂದ ಅದು ನಿರಪೇಕ್ಷಕ ವ್ಯಾಪಕವಾಗಿದೆ.

ಪ್ರ ೩೭ : **ಈಶ್ವರನು ನಿತ್ಯಮುಕ್ತನು ಹೇಗೆ ?**

ಉ : ಈಶ್ವರನ ಉಪಾಧಿ ಶುದ್ಧ ಸತ್ವ ಮಾಯೆ. ಇದರ ಸ್ವಭಾವ ಹೀಗಿದೆ : 'ಸ್ವಾಶ್ರಯಾವ್ಯಾಮೋಹಕರೀ ಮಾಯಾ' ಅಂದರೆ ಈ ಶುದ್ಧ ಸತ್ವ ಪ್ರಕೃತಿಯಾದ ಮಾಯೆಯು ತನಗೆ ಆಶ್ರಯ ಕೊಟ್ಟ ಈಶ್ವರನಿಗೆ ಮೋಹವನ್ನುಂಟುಮಾಡುವುದಿಲ್ಲ. ಇದರಿಂದ ಈಶ್ವರನಿಗೆ ತನ್ನ ಸ್ವರೂಪದ ಆವರಣವಿರುವುದಿಲ್ಲ. ಆದ ಕಾರಣ ಬಂಧವೂ ಇಲ್ಲ. ಬಂಧವೇ ಇಲ್ಲವಾಗಿ ಮುಕ್ತಿಯನ್ನೂ ಪಡೆಯಬೇಕಾಗಿಲ್ಲ. ಜೀವನಂತೆ ಮೊದಲು ಬದ್ಧನಾಗಿ ನಂತರ ಗುರು ಶಾಸ್ತ್ರಾದಿಗಳಿಂದ ಜ್ಞಾನವನ್ನು ಹೊಂದಿ ಮುಕ್ತನಾಗಬೇಕಾಗಿಲ್ಲ.

ಉದಾ: ಶುದ್ಧವಾದ ಕನ್ನಡಿಯು ನಮ್ಮ ಮುಖವನ್ನು ಇದ್ದಕ್ಕಿದ್ದಂತೆ ತೋರಿಸುವುದರಿಂದ ಭ್ರಾಂತಿಗೆ ಅವಕಾಶವಿರದಂತೆ, ಈಶ್ವರನಿಗೆ ತನ್ನ ಸ್ವರೂಪದ ಯಥಾರ್ಥ ಜ್ಞಾನವಿರುವುದರಿಂದ ಅವನು ನಿತ್ಯಮುಕ್ತನಾಗಿದ್ದಾನೆ.

ಪ್ರ ೩೮: **ಈಶ್ವರನು ಸರ್ವಜ್ಞನು ಹೇಗೆ?**

ಉ: ಸರ್ವಜ್ಞನೆಂದರೆ ಎಲ್ಲವನ್ನೂ ತಿಳಿದವನು. ಈಶ್ವರನಿಗೆ ತೂಲಾವಿದ್ಯೆ ಇಲ್ಲ. ತೂಲಾವಿದ್ಯೆ ಎಂದರೆ ಘಟ ಪಟಾದಿ ಸಮಸ್ತ ನಾಮರೂಪಗಳನ್ನು ಆವರಿಸಿರುವ ಅವಿದ್ಯೆ. ಈಶ್ವರನು ಸರ್ವ ವ್ಯಾಪಕನೂ, ಸರ್ವಕ್ಕೂ ಅಧಿಷ್ಠಾನನೂ ಆಗಿರುವುದರಿಂದ ಅವನು ಸರ್ವಜ್ಞನಾಗಿದ್ದಾನೆ. ಆದ ಕಾರಣ ಜೀವನಂತೆ ಇವನು 'ಇದೇನು, ಇದೇನು' ಎಂದು ಕೇಳಿ ಹೊಸದಾಗಿ ಏನನ್ನೂ ತಿಳಿದುಕೊಳ್ಳಬೇಕಾಗಿಲ್ಲ.

ಪ್ರ ೩೯: **ಜೀವನು ಬದ್ಧನೂ, ಕಿಂಚಿಜ್ಞನೂ ಹೇಗೆ?**

ಉ: ಜೀವನ ಉಪಾಧಿ ಅವಿದ್ಯೆ. ಇದರ ಸ್ವಭಾವವೇನೆಂದರೆ– 'ಸ್ವಾಶ್ರಯ ವ್ಯಾಮೋಹ ಕರಿ ಅವಿದ್ಯಾ' ಅಂದರೆ ಇದು ತನಗೆ ಆಶ್ರಯ ಕೊಟ್ಟವನನ್ನೇ ಕಾಣದಂತೆ ಮರೆ ಮಾಡಿಬಿಡುತ್ತದೆ.

ಉದಾ: ಮೋಡವು ತನಗೆ ಆಶ್ರಯ ಕೊಟ್ಟ ಸೂರ್ಯನನ್ನೇ ಮುಚ್ಚುವಂತೆ, ಕತ್ತಲೆಯು ತನಗೆ ಆಶ್ರಯ ಕೊಟ್ಟ ಕೋಣೆಯನ್ನೇ ಮುಚ್ಚುವಂತೆ, ಈ ಅವಿದ್ಯೆಯು ಜೀವನಿಗೆ ತನ್ನ ಸ್ವರೂಪದ ಅರಿವುಂಟಾಗದಂತೆ ಆವರಿಸಿಬಿಟ್ಟಿದೆ. ಆದ್ದರಿಂದ ಜೀವನು ಬದ್ಧನಾಗಿದ್ದಾನೆ.

ಇನ್ನು ಜೀವನ ಉಪಾಧಿಯಾದ ಅವಿದ್ಯೆ ಪರಿಚ್ಛಿನ್ನವಾಗಿರುವುದರಿಂದಲೂ ಮತ್ತು ಇವನಿಗೆ ಮೂಲಾವಿದ್ಯೆ ಅಂದರೆ ಸ್ವರೂಪದ ಅಜ್ಞಾನವಿರುವುದರಿಂದಲೂ ಹೊರಗಿನ ಎಲ್ಲಾ ನಾಮರೂಪಗಳನ್ನು ಆವರಿಸಿರುವ ತೂಲಾವಿದ್ಯೆಯೂ ಈತನಿಗಿದೆ. ಆದ್ದರಿಂದ ಇವನು ಕಿಂಚಿಜ್ಞನಾಗಿದ್ದಾನೆ. ಅಂದರೆ ಪ್ರತಿಯೊಂದನ್ನೂ ಇದೇನು ಇದೇನೆಂಬುದಾಗಿ ವಿಚಾರಿಸಿ ತಿಳಿದುಕೊಳ್ಳಬೇಕಾಗಿದೆ. ಮತ್ತು ಮತ್ತೊಂದು ಕ್ಷಣಕ್ಕೆ ತನಗೆ ಏನಾಗುವುದೆಂಬುದೂ ಜೀವನಿಗೆ ತಿಳಿಯಲಾರದು.

ಪ್ರ ೪೦: **ಶುದ್ಧ ಬ್ರಹ್ಮದಲ್ಲಿ ಪ್ರಪಂಚದ ಆರೋಪವು ಹೇಗೆ ಆಯಿತು?**

ಉ: ಶ್ರುತಿಗಳಲ್ಲಿ "ಸದೇವ ಸೌಮ್ಯೇದಮಗ್ರಮಾಸೀತ್ । ಏಕಮೇ

ವಾದ್ವಿತೀಯಂ ಬ್ರಹ್ಮ ನೇಹನಾನಾಸ್ತಿಕಿಂಚನ" ಎಂದರೆ ಪ್ರಪಂಚವು ಸೃಷ್ಟಿಯಾಗುವುದಕ್ಕಿಂತ ಮೊದಲು ಸದ್ರೂಪವಾದ ಬ್ರಹ್ಮವೊಂದೇ ಇತ್ತೆಂದು ಹೇಳಿದೆ. ಪ್ರಳಯ ಕಾಲದಲ್ಲಿ ಜೀವರುಗಳ ಸಂಸ್ಕಾರವು ಅವಿದ್ಯೆಯಲ್ಲಿ ಲಯಿಸಿರುತ್ತದೆ.

ಉದಾ . ಕೋಳಿಯು ಸಂಜೆಯಾದ ಕೂಡಲೇ ತನ್ನ ಎಲ್ಲಾ ಸಣ್ಣ ಸಣ್ಣ ಮರಿಗಳನ್ನು ತನ್ನ ರೆಕ್ಕೆಯಲ್ಲಿ ಅಡಗಿಸಿಕೊಂಡು ಕುಳಿತಂತೆ, ಈ ಅವಿದ್ಯೆಯು ಮಾಯೆಯಲ್ಲಿ ಲಯಿಸುತ್ತದೆ. ಮಾಯೆಯು ಪರಬ್ರಹ್ಮದಲ್ಲಿ ಅಭಿನ್ನವಾಗಿರುತ್ತದೆ. ಹೇಗೆಂದರೆ ನಮಗೆ ಸುಷುಪ್ತಿಯಲ್ಲಿ ಆತ್ಮನಿದ್ದಾನೆ ಮತ್ತು ಅಲ್ಲಿ ಅವಿದ್ಯೆಯೂ ಇದೆ. ಆದರೆ ಅದು ಆತ್ಮನಲ್ಲಿ ಅಭಿನ್ನವಾಗಿರುತ್ತದೆ. ಇದರಂತೆ ಮಾಯೆಯು ಪರಬ್ರಹ್ಮದಲ್ಲಿ ಅಭಿನ್ನವಾಗಿರುತ್ತದೆ. ಇನ್ನು ಜೀವರುಗಳ ಕರ್ಮ ಪರಿಪಕ್ವವಾಗಿ ಫಲ ಕೊಡುವ ಕಾಲ ಬಂದಾಗ, ಈಶ್ವರನು "ಏಕೋಹಂ ಬಹುಶ್ಯಾಮ್" ಅಂದರೆ ನಾನೊಬ್ಬನೇ ಇದ್ದೇನೆ, ಬಹುರೂಪನಾಗಬೇಕು ಎಂದು ಸಂಕಲ್ಪ ಮಾಡಿದ ಕೂಡಲೇ, ಮಾಯೆಯಲ್ಲಿ ಕ್ಷೋಭೆ ಉಂಟಾಗಿ (ಅಂದರೆ ಕಾರಣವು ಕಾರ್ಯೋನ್ಮುಖವಾಗುವುದಕ್ಕೆ ಕ್ಷೋಭವೆಂದು ಹೆಸರು) ಇದರಿಂದ ಅಪಂಚೀಕೃತ ಪಂಚ ಮಹಾಭೂತಗಳು ಅಥವಾ ಪಂಚ ತನ್ಮಾತ್ರೆಗಳು ಉಂಟಾಗುತ್ತವೆ. ಇವುಗಳಿಂದ ಸಮಷ್ಟಿ ವ್ಯಷ್ಟಿ ಸೂಕ್ಷ್ಮ ದೇಹಗಳುಂಟಾಗುತ್ತವೆ. ಆದರೆ ಇವುಗಳಿಂದ ಜೀವರು ಕರ್ಮಭೋಗದಿಂದ ಮೋಕ್ಷ ಪಡೆಯಲಾಗುವುದಿಲ್ಲವಾದ ಕಾರಣ ಪುನಃ ಈಶ್ವರನ ಇಚ್ಛೆಯಂತೆ ಅಪಂಚೀಕೃತ ಪಂಚ ಮಹಾಭೂತಗಳು ಪಂಚೀಕೃತವಾಗಿ ಅಂದರೆ ಒಂದ ಕ್ಕೊಂದು ಸರಿಯಾಗಿ ಸೇರಿ, ಭೋಗಕ್ಕೆ ಯೋಗ್ಯವಾದ ಸಮಷ್ಟಿ ವ್ಯಷ್ಟಿ ಸ್ಥೂಲ ದೇಹಗಳೂ, ಭೋಗ್ಯ ಪದಾರ್ಥಗಳಿಂದ ಕೂಡಿದ ಭುವನ ಬ್ರಹ್ಮಾಂಡಗಳೂ ಉಂಟಾದವು. ಇದರಿಂದ ಎಲ್ಲಾ ಜೀವರುಗಳ ಭೋಗ ಮೋಕ್ಷಕ್ಕೆ ಅನುಕೂಲವಾಯಿತು. ಇದರಲ್ಲಿ ಸಮಷ್ಟಿ ಸ್ಥೂಲ ಸೂಕ್ಷ್ಮ ಕಾರಣ ದೇಹಗಳ ಅಭಿಮಾನಿ ಈಶ್ವರ, ವ್ಯಷ್ಟಿ ಸ್ಥೂಲ ಸೂಕ್ಷ್ಮ ಕಾರಣ ದೇಹಗಳ ಅಭಿಮಾನಿ ಜೀವ – ಈ ರೀತಿ ಶುದ್ಧ ಬ್ರಹ್ಮದಲ್ಲಿ ಪ್ರಪಂಚದ ಆರೋಪವಾಯಿತು. ಅಂದರೆ ಪ್ರಪಂಚವು ನಿಜವಾಗಿ ಸೃಷ್ಟಿಯಾಗಿಲ್ಲ. ಮಾಯೆಯಿಂದ ಆಗಿರುವುದರಿಂದ ಅದು ಮಿಥ್ಯೆ ಎಂದೇ ತಿಳಿದುಕೊಳ್ಳಬೇಕಾಗಿದೆ. ಆದುದರಿಂದಲೇ ಇಲ್ಲಿ ಶುದ್ಧ

ಬ್ರಹ್ಮದಲ್ಲಿ ಪ್ರಪಂಚವು ಹೇಗೆ ಆರೋಪಿಸಲ್ಪಟ್ಟಿದೆ ? ಎಂಬುದಾಗಿ ಪ್ರಶ್ನೆ ಮಾಡಿರುವರೇ ಹೊರತು ಬ್ರಹ್ಮದಿಂದ ಜಗತ್ತು ಹೇಗೆ ಹುಟ್ಟಿತೆಂಬುದಾಗಿ ಕೇಳಿಲ್ಲ. ಒಂದು ವೇಳೆ ನಿಜವಾಗಿ ಹುಟ್ಟಿದ್ದರೆ "ಬ್ರಹ್ಮಸತ್ಯಂ ಜಗನ್ಮಿಥ್ಯ" ಎಂದು ಹೇಳುತ್ತಿರಲಿಲ್ಲ.

ಪ್ರ ೪೧: **ಶುದ್ಧ ಬ್ರಹ್ಮದಲ್ಲಿ ಆರೋಪಿಸಿರುವ ಪ್ರಪಂಚ ಸತ್ಯವೋ ಅಥವಾ ಮಿಥ್ಯವೋ ? ಮಿಥ್ಯವಾದರೆ ಹೇಗೆ ?**

ಉ : ಶುದ್ಧ ಬ್ರಹ್ಮದಲ್ಲಿ ಆರೋಪಿಸಿರುವ ಜಗತ್ತು ಅಜ್ಞಾನದಿಂದ ಬ್ರಹ್ಮದಲ್ಲಿ ಕಾಣಬರುವುದರಿಂದ ಅದು ಮಿಥ್ಯೆಯೇ ಹೊರತು ಸತ್ಯವಾಗಿಲ್ಲ.

ಉದಾ : ಒಂದು ಸಾರಿ ಬಂಜೆಯ ಮಗ ಮತ್ತು ಮೋಟು ಮರದಲ್ಲಿ ತೋರಿದ ಮನುಷ್ಯ ಇಬ್ಬರೂ ಸ್ನೇಹಿತರಾಗಿ ಗಂಧರ್ವ ನಗರಕ್ಕೆ ವ್ಯಾಪಾರಕ್ಕಾಗಿ ಹೊರಟರು. ಇವರಿಗೆ ಕಾಮನ ಬಿಲ್ಲೇ ದಾರಿ. ಆಕಾಶ ಕುಸುಮಗಳ ಮಾಲೆಯನ್ನು ಮಾಡಿ ಅದನ್ನು ಹಾಕಿಕೊಂಡು ಅಲಂಕರಿಸಿಕೊಂಡು, ಕಪ್ಪೆ ಚಿಪ್ಪಿನಲ್ಲಿ ಕಂಡ ಬೆಳ್ಳಿಯಿಂದ ರೂಪಾಯಿಗಳನ್ನು ಮಾಡಿಸಿಕೊಂಡು, ಮೋಡಗಳಲ್ಲಿ ಕಾಣುವ ಆನೆಗಳ ಮೇಲೆ ಕೂತು ಗಂಧರ್ವ ನಗರಕ್ಕೆ ಹೋಗಿ, ಚೆನ್ನಾಗಿ ವ್ಯಾಪಾರ ಮಾಡಿದಾಗ ಅದರಿಂದ ಹೆಚ್ಚು ಲಾಭ ಬಂದಿತು. ಅದನ್ನು ಹಂಚಿಕೊಳ್ಳುವಾಗ ಇಬ್ಬರಿಗೂ ಜಗಳ ಬಂದು, ಮೊಲದ ಕೊಂಬಿನಿಂದ ಹೊಡೆದಾಡಿ ಕೆಳಗೆ ಬಿದ್ದಾಗ, ಹಗ್ಗದಲ್ಲಿ ಕಂಡ ಹಾವು ಕಚ್ಚಿ ವಿಷವೇರಿ, ಅವರಿಬ್ಬರೂ ಸತ್ತು ಪಿಶಾಚಿಗಳಾಗಿ ಈಗಲೂ ಅಜ್ಞಾನಿ ಜನಗಳನ್ನೆಲ್ಲಾ ಹಿಡಿದಿರುತ್ತಾರೆ. ಇದು ಒಂದು ಸುಳ್ಳು ಕಥೆ. ಇದರಲ್ಲಿ ಮುಖ್ಯವಾದ ಕಥಾ ನಾಯಕರಾದ ಬಂಜೆಯ ಮಗ, ಮೋಟು ಮರದ ಮನುಷ್ಯ—ಇವರೇ ಸುಳ್ಳಾಗಿರುವಾಗ ಬಾಕಿ ಎಲ್ಲವೂ ಸುಳ್ಳೇ ಆಗಿರುವಂತೆ, ಈ ಪ್ರಪಂಚವು ಮಾಯೆಯಿಂದ ಆಗಿದೆ ಎಂದ ಮೇಲೆ ಮಾಯೆಯೇ ಮಿಥ್ಯೆಯಾಗಿರುವುದರಿಂದ ಪ್ರಪಂಚವೂ ಮಿಥ್ಯೆ ಎಂದು ಬೇರೆ ಹೇಳಬೇಕಾಗಿಲ್ಲ.

ಪ್ರ ೪೨ : **ಈ ಆರೋಪಕ್ಕೆ ಕಾರಣವೇನು ?**

ಉ : ಬ್ರಹ್ಮದ ಅಜ್ಞಾನವೇ (ಅವಿದ್ಯೆ) ಕಾರಣ

ಪ್ರ ೪೩ : **ಈ ಆರೋಪವು ಏಕೆ ಆಯಿತು ? ಯಾವಾಗ ಆಯಿತು ?**

ಉ : ಈ ಪ್ರಶ್ನೆಗೆ ಸಮಾಧಾನವನ್ನು ಹುಡುಕಲು ಹೊರಟರೆ ಸಿಗುವುದೂ ಇಲ್ಲ ಮತ್ತು ಅದರಿಂದ ವೃಥಾ ಶ್ರಮವೇ ಹೊರತು ಪ್ರಯೋಜನವೇನೂ ಇಲ್ಲ. ಹೇಗೆಂದರೆ—ಒಬ್ಬ ಪ್ರಯಾಣಿಕನು ಬಿಸಿಲಿನಿಂದ ಬಳಲಿ, ವಿಶ್ರಾಂತಿಗಾಗಿ ಒಂದು ಮರದ ಕೆಳಗೆ ಕುಳಿತುಕೊಂಡಾಗ ಮರದ ಮೇಲಿನಿಂದ ಒಂದು ಹಾವು ಅವನ ತೊಡೆಯ ಮೇಲೆ ಬಿತ್ತು. ಆಗ ಅವನು ಇದು ಯಾವ ಜಾತಿಯ ಹಾವು ? ಇದು ಮರದ ಮೇಲೆ ಏಕೆ ಹೋಯಿತು? ಯಾವಾಗ ಹೋಯಿತು? ಏಕೆ ಬಿತ್ತು? ಎಂದು ವಿಚಾರ ಮಾಡುತ್ತಾ ಕುಳಿತುಕೊಳ್ಳುವುದು ಹೇಗೆ ಪ್ರಯೋಜನವಿಲ್ಲವೋ ಅದರಂತೆ, ಮತ್ತು ಮನೆಗೆ ಬೆಂಕಿ ಬಿದ್ದಾಗ ಅಥವಾ ನೀರಿನಲ್ಲಿ ಮುಳುಗಿದಾಗ ಮೊದಲು ಅಲ್ಲಿಂದ ಪಾರಾಗಬೇಕಲ್ಲದೆ ವಿಚಾರ ಮಾಡುತ್ತಾ ಕುಳಿತರೆ ಹೇಗೆ ಅನರ್ಥವಾಗುತ್ತದೋ ಅದರಂತೆ, ಈ ಮಾಯೆ ಅಥವಾ ಅಜ್ಞಾನ ಏಕೆ ಬಂತು ? ಯಾವಾಗ ಬಂತು ? ಈ ಜಗತ್ತು ಏಕೆ ಆರೋಪಿಸಲ್ಪಟ್ಟಿತು? ಎಂಬ ವಿಚಾರಗಳಿಂದ ಸ್ವಲ್ಪವೂ ಪ್ರಯೋಜನವಿಲ್ಲ.

ಪ್ರ ೪೪ : **ಈ ಆರೋಪದ ನಿವೃತ್ತಿಯು ಹೇಗೆ ಆಗುತ್ತದೆ?**

ಉ : ಅಪವಾದದಿಂದ ಆರೋಪದ ನಿವೃತ್ತಿಯಾಗುತ್ತದೆ.

ಪ್ರ ೪೪ : **ಅಪವಾದಕ್ಕೆ ಲಕ್ಷಣವೇನು ?**

ಉ : ಕಾರ್ಯವನ್ನು ಕಾರಣದಲ್ಲಿ ಲಯಿಸಿ, ಕಾರಣವನ್ನು ಉಳಿಸುವುದು ಅಂದರೆ ಕಾರ್ಯವು ಕಾರಣಕ್ಕಿಂತ ಬೇರೆಯಲ್ಲ, ಕಾರಣದ ಸ್ವರೂಪವೇ ಎಂದು ತಿಳಿಯುವುದೇ ಅಪವಾದದ ಸ್ವರೂಪ.

ಉದಾ : ಘಟ ಕಾರ್ಯ, ಮಣ್ಣು ಕಾರಣ ; ಒಡವೆ ಕಾರ್ಯ, ಬಂಗಾರ ಕಾರಣ; ಬಟ್ಟೆ ಕಾರ್ಯ, ನೂಲು ಕಾರಣ; ಕುರ್ಚಿ ಮೇಜು ಇತ್ಯಾದಿ ಕಾರ್ಯ, ಮರ ಕಾರಣ. ಇದರಂತೆ ನಮ್ಮ ಕಣ್ಣಿಗೆ ಕಾಣುವ ಸಮಷ್ಟಿ ವ್ಯಷ್ಟಿ ಸ್ಥೂಲ ದೇಹಗಳು, ಸಮಸ್ತ ನಾಮರೂಪ ಪ್ರಪಂಚವು ಕಾರ್ಯ, ಪಂಚೀಕೃತ ಪಂಚ ಮಹಾಭೂತಗಳು ಕಾರಣ. ಇನ್ನು ಈ ಪಂಚೀಕೃತ ಪಂಚ ಮಹಾಭೂತಗಳು ಕಾರ್ಯ, ಅಪಂಚೀಕೃತ ಪಂಚ ಮಹಾಭೂತಗಳು ಕಾರಣ. ಈ ಅಪಂಚೀಕೃತ ಪಂಚ ಭೂತಗಳೂ ಕಾರ್ಯ, ಮಾಯೆಯು ಕಾರಣ. ಇದು ಒಂದು ವಿಧಾನ. ಇನ್ನೊಂದು ವಿಧಾನವೇನೆಂದರೆ – ಪೃಥ್ವಿ ಕಾರ್ಯ, ಜಲ ಕಾರಣ. ಜಲ ಕಾರ್ಯ, ಅಗ್ನಿ ಕಾರಣ. ಅಗ್ನಿ

ಕಾರ್ಯ, ವಾಯು ಕಾರಣ. ವಾಯು ಕಾರ್ಯ, ಆಕಾಶ ಕಾರಣ. ಆಕಾಶ ಕಾರ್ಯ, ಮಾಯೆಯು ಕಾರಣ. ಹೀಗೆ ಕಾರ್ಯವಾದ ಪಂಚ ಮಹಾಭೂತ ಗಳಿಗೂ, ಚತುರ್ದಶ ಭುವನ ಬ್ರಹ್ಮಾಂಡಗಳಿಗೂ ಮಾಯೆಯೇ ಕಾರಣ. ಕಾರಣವಾದ ಮಾಯೆಗಿಂತ ಕಾರ್ಯವಾದ ಪಂಚ ಭೂತಗಳೂ, ಅವು ಗಳಿಂದಾದ ಸಮಸ್ತ ಭೌತಿಕ ಪ್ರಪಂಚವೂ ಬೇರೆಯಲ್ಲ. ಮಾಯೆ ಮಿಥ್ಯೆಯಾ ಗಿರುವುದರಿಂದ ಜಗತ್ತೂ ಮಿಥ್ಯೆ. ಹೀಗೆ ಮಾಯೆಯಿಂದ ಆರೋಪಿಸಿದ ಕಾರ್ಯವನ್ನೆಲ್ಲಾ ವಿಚಾರದಿಂದ ಕಳೆಯುವುದೇ ಅಪವಾದ.

ಪ್ರ ೪೬ : **ಮಾಯೆಯ ಲಕ್ಷಣವೇನು ?**

ಉ : ಮಾಯೆಯು ಸತ್ತಲ್ಲ, ಅಸತ್ತಲ್ಲ, ಸದಸತ್ತಲ್ಲ; ಭಿನ್ನವಲ್ಲ, ಅಭಿನ್ನವಲ್ಲ, ಭಿನ್ನಾಭಿನ್ನವೂ ಅಲ್ಲ; ಸಾವಯುವವಲ್ಲ, ನಿರವಯುವವೂ ಅಲ್ಲ, ಸಾವಯುವ ನಿರವಯುವವೂ ಅಲ್ಲ. ಹೀಗೆ ಒಂಭತ್ತು ವಿಧಗಳಿಂದಲೂ ಹೇಳ ಲಿಕ್ಕೆ ಬಾರದಾಗಿರುವುದರಿಂದ ಮಾಯೆಯು ಅನಿರ್ವಚನೀಯ. ಯಾವುದು ಅನಿರ್ವಚನೀಯವೋ ಅದು ಮಿಥ್ಯೆ ಅಥವಾ ಬಾಧಾಯೋಗ್ಯವಾದುದೆಂದು ಶಾಸ್ತ್ರಗಳಲ್ಲಿ ಹೇಳಿದೆ.

ಪ್ರ ೪೭ : **ಮಾಯೆಯು ಸದಸದ್ವಿಲಕ್ಷಣವಾದುದು ಹೇಗೆ ?**

ಉ : ಸತ್ ಪದಾರ್ಥವು ಮೂರು ಕಾಲದಲ್ಲೂ ಯಾವುದರಿಂದಲೂ ಬಾಧೆಯಾಗದೆ ಇರಬೇಕು. ಮೂರು ಕಾಲವೆಂದರೆ ಭೂತ, ಭವಿಷ್ಯತ್, ವರ್ತಮಾನ ಕಾಲಗಳು ಅಥವಾ ಸೃಷ್ಟಿಗೆ ಪೂರ್ವ, ಸ್ಥಿತಿ ಮತ್ತು ಲಯ ಕಾಲ ಗಳು. ಮಾಯೆಯು ಬ್ರಹ್ಮಜ್ಞಾನದಿಂದ ಬಾಧೆಯಾಗಿ ಹೋಗುವುದರಿಂದ ಇದು ಸತ್ತಲ್ಲ. ಇನ್ನು ಅಸತ್ ಪದಾರ್ಥಗಳಾದ ವಂಧ್ಯಾಪುತ್ರ, ಶಶವಿಷಾಣ, ಆಕಾಶ ಕುಸುಮ – ಇವುಗಳಂತೆ ಮಾಯೆಯು ತೋರದೇ ಇದ್ದಿದ್ದರೆ ಇದನ್ನು ಅಸದ್ವಸ್ತುವೆಂದು ಹೇಳಬಹುದಾಗಿತ್ತು. ಆದರೆ ಇದು ಜಗದ್ರೂಪವಾಗಿ ಪ್ರಸಿದ್ಧವಾಗಿ ತೋರುವುದರಿಂದ ಅಸತ್ತೂ ಅಲ್ಲ. ಸತ್ತು – ಅಸತ್ತುಗಳು ಒಂದು ಕಡೆ ಕೂಡುವುದಿಲ್ಲ. ಹೇಗೆಂದರೆ ಕತ್ತಲೆ–ಬೆಳಕುಗಳು ಒಂದು ಕಡೆ ಕೂಡದಂತೆ. ಮಾಯೆಯು ಸದಸದ್ವಿಲಕ್ಷಣವಾದುದು.

ಪ್ರ ೪೮ : **ಮಾಯೆಯು ಭಿನ್ನಾಭಿನ್ನವಲ್ಲವೆಂಬುದು ಹೇಗೆ?**

ಉ : ಮಾಯೆಗೆ ಸ್ವಂತ ಇರುವಿಕೆ ಇಲ್ಲ. ಬ್ರಹ್ಮದ ಆಶ್ರಯದಲ್ಲಿ ಇದು

ತೋರುತ್ತದೆ. ಹೇಗೆಂದರೆ — ಸೂರ್ಯನ ತೇಜಸ್ಸನ್ನು ಪಡೆದುಕೊಂಡು ಚಂದ್ರನು ಬೆಳಗಿದಂತೆ. ಮಾಯೆಯು ಪರಬ್ರಹ್ಮಕ್ಕಿಂತ ಭಿನ್ನವೂ ಅಲ್ಲ. ಇನ್ನು ಮಾಯೆಯು ಅಸಜ್ಜಡ ದುಃಖರೂಪವಾದುದು. ಬ್ರಹ್ಮವು ಸಚ್ಚಿದಾನಂದ ರೂಪವಾದುದು. ಇದರ ಲಕ್ಷಣವೇ ಬೇರೆ, ಬ್ರಹ್ಮದ ಲಕ್ಷಣವೇ ಬೇರೆ. ಆದ್ದರಿಂದ ಇದು ಅಭಿನ್ನವೂ ಅಲ್ಲ. ಭಿನ್ನಾಭಿನ್ನಗಳು ಕತ್ತಲೆ ಬೆಳಕುಗಳಂತೆ ಒಂದು ಕಡೆ ಸೇರುವುದಿಲ್ಲವಾದ್ದರಿಂದ ಮಾಯೆಯು ಭಿನ್ನಾಭಿನ್ನವೂ ಅಲ್ಲ.

ಪ್ರ ೪೯ : **ಮಾಯೆಯು ಸಾವಯವ ನಿರವಯವವಲ್ಲವೆಂಬುದು ಹೇಗೆ ?**

ಉ : ಸಾವಯವವೆಂದರೆ ಅದು ಕಣ್ಣಿಗೆ ಕಾಣಿಸಬೇಕು. ಮಾಯೆಯು ಅವ್ಯಕ್ತ ಅಂದರೆ ಕಣ್ಣಿಗೆ ಕಾಣಿಸುವುದಿಲ್ಲವಾಗಿ ಅದು ಸಾವಯವವಲ್ಲ.

ನಿರವಯವವಾದರೆ ಅದು ಜಗತ್ತನ್ನು ಹುಟ್ಟಿಸಬಾರದಿತ್ತು. ಆದರೆ ಅದರಲ್ಲಿ ಬೀಜದಲ್ಲಿ ವೃಕ್ಷವಾಗುವ ಶಕ್ತಿ ಅಡಗಿರುವಂತೆ, ಜಗತ್ತಾಗುವ ಶಕ್ತಿ ಅಡಗಿರುವುದರಿಂದ ಮಾಯೆಯು ನಿರವಯವವೂ ಅಲ್ಲ. ಸಾವಯವ ನಿರವಯವಗಳು ಒಂದು ಕಡೆ ಕೂಡುವುದಿಲ್ಲವಾಗಿ ಮಾಯೆಯು ಸಾವಯವ–ನಿರವಯವವೂ ಅಲ್ಲ.

ಹೀಗೆ ಒಂಭತ್ತು ವಿಧವಾಗಿ ವಿಚಾರ ಮಾಡಿದರೂ ಮಾಯೆಯ ಲಕ್ಷಣ ನಿರ್ಧಾರವಾಗುವುದಿಲ್ಲ. ಆದ್ದರಿಂದ ಇದು ಅನಿರ್ವಚನೀಯ ಅಂದರೆ ವಚನದಿಂದ ಹೇಳಲು ಆಗುವುದಿಲ್ಲ. ಇದು ಮಿಥ್ಯೆ ಅಂದರೆ ಇರುವಿಕೆ ಇಲ್ಲದೆ ತೋರುವುದು. ಬ್ರಹ್ಮದ ಅಜ್ಞಾನ ಕಾಲದಲ್ಲಿ ಮಾತ್ರ ತೋರಿ, ಜ್ಞಾನ ಕಾಲದಲ್ಲಿ ಇಲ್ಲವಾಗುವುದರಿಂದ ಇದು ಮಿಥ್ಯೆ ಎಂದು ಶಾಸ್ತ್ರಗಳು ತೀರ್ಮಾನಿಸಿರುತ್ತವೆ.

ಪ್ರ ೫೦: **ಭೇದಶೂನ್ಯ ದೆಶೆಯಲ್ಲಿ ಆಗುವ ಪ್ರಯೋಜನವೇನು ?**

**ಉ :** ಎಲ್ಲಾ ಭೇದಗಳೂ ಉಪಾಧಿಗಳಿಂದ ತೋರುವುದರಿಂದ ಮಿಥ್ಯೆ ಎಂದು ವಿಚಾರಮಾಡಿ ಕಳೆದ ಮೇಲೆ ಸತ್ಯವಾದ ಪರಬ್ರಹ್ಮ ಒಂದೇ ಉಳಿಯುತ್ತದೆ. ಇದೇ ಪ್ರಯೋಜನ.

ಪ್ರ ೫೧: **ಅಪವಾದದಿಂದ ಆಗುವ ಪ್ರಯೋಜನವೇನು ?**

**ಉ :** ಶುದ್ಧ ಬ್ರಹ್ಮದಲ್ಲಿ ಆರೋಪಿಸಿದ ಮಾಯೆ, ಈಶ್ವರ ಜೀವ ಮತ್ತು ಜಗತ್ತು – ಇವೆಲ್ಲಾ. ವಿಚಾರ ಮಾಡಿದ್ದರಿಂದ ಮಿಥ್ಯೆ ಎಂಬುದಾಗಿಯೂ,

ಕಳೆದುಳಿದ ಮೇಲೆ ಉಳಿದುದನ್ನು ಕಳೆಯಲಿಕ್ಕೆ ಬಾರದ ಪರಬ್ರಹ್ಮವೇ ನಾನೆಂದೂ ತಿಳಿಯುವುದೇ ಪ್ರಯೋಜನ.

ಪ್ರ ೫೨: **ಆರೋಪದ ನಿವೃತ್ತಿಯನ್ನು ಸಾಧಿಸುವ ಬ್ರಹ್ಮಜ್ಞಾನವು ಯಾವ ಉಪಾಯದಿಂದ ಉಂಟಾಗುತ್ತದೆ ?**

ಉ: ಬ್ರಹ್ಮಜ್ಞಾನವು 'ವಿಚಾರ' ವೆಂಬ ಸಾಧನದಿಂದ ಉಂಟಾಗುತ್ತದೆ.

ಪ್ರ ೫೩: **ವಿಚಾರಕ್ಕೆ ವಿಷಯಗಳೆಷ್ಟು ?**

ಉ: ೧. ಆತ್ಮನು ಮೂರು ದೇಹಗಳ ದ್ರಷ್ಟನು, ೨. ಪಂಚಕೋಶ ವಿಲಕ್ಷಣನು, ೩. ಅವಸ್ಥಾತ್ರಯ ಸಾಕ್ಷಿ– ಎಂಬಿವೇ ವಿಚಾರಕ್ಕೆ ವಿಷಯಗಳು.

ಓಂ ತತ್ಸತ್

ಇತಿ ಪ್ರಪಂಚಾರೋಪಾಪವಾದ ನಾಮ ದ್ವಿತೀಯ ಕಲಾ ಸಮಾಪ್ತಃ

ಓಂ

ನಮೋ ಭಗವತೇ ಶಿವಾನಂದಾಯ

## ತೃತೀಯ ಕಲಾ ಪ್ರಾರಂಭಃ

# ಆತ್ಮನು ಮೂರು ದೇಹಗಳ ದ್ರಷ್ಟ

ಪ್ರ ೧: **ಶಾಸ್ತ್ರಗಳಲ್ಲಿ ಆತ್ಮನ ಲಕ್ಷಣ ಹೇಗೆ ಹೇಳಿದೆ?**

ಉ: 'ಕಃಆತ್ಮ' – ಆತ್ಮನು ಯಾರು? ಎಂಬ ಪ್ರಶ್ನೆಗೆ ಶಾಸ್ತ್ರಗಳಲ್ಲಿ ೧. ಆತ್ಮನು ದೇಹತ್ರಯದ್ರಷ್ಟ, ೨. ಪಂಚಕೋಶವಿಲಕ್ಷಣ, ೩. ಅವಸ್ಥಾತ್ರಯಸಾಕ್ಷಿ, ಮತ್ತು ೪. ಸಚ್ಚಿದಾನಂದ ರೂಪನೆಂಬುದಾಗಿ ಹೇಳಿದೆ.

ಪ್ರ ೨: **ದೇಹಗಳೆಷ್ಟು? ಅವು ಯಾವುವು?**

ಉ: ದೇಹಗಳು ಸ್ಥೂಲದೇಹ, ಸೂಕ್ಷ್ಮದೇಹ ಮತ್ತು ಕಾರಣ ದೇಹವೆಂಬುದಾಗಿ ಮೂರು ವಿಧವಾಗಿವೆ.

ಪ್ರ ೩: **ಇವುಗಳನ್ನು ದೇಹನೆಂಬುದಾಗಿ ಕರೆಯಲು ಕಾರಣವೇನು?**

ಉ: 'ದಹ್ಯತೇ ಇತಿ ದೇಹ' ಅಂದರೆ ದಹಿಸಲ್ಪಡುವ ಸ್ವಭಾವವಿರುವುದರಿಂದ ದೇಹವೆಂದು ಕರೆಯುತ್ತಾರೆ. ದಹಿಸಲ್ಪಡುವುದೆಂದರೆ ಸತ್ತ ಮೇಲೆ ಹೆಣವನ್ನು ಜಡವಾದ ಅಗ್ನಿಯಿಂದ ಸುಡುವುದೆಂದರ್ಥವಲ್ಲ. ಏಕೆಂದರೆ ಹೆಣವನ್ನು ಕೆಲವರು ಸುಡಬಹುದು. ಆದರೆ ಕೆಲವರು ನೆಲದಲ್ಲಿ ಹೂಳುತ್ತಾರೆ. ಆದ್ದರಿಂದ 'ದಹ್ಯತೇ' ಎಂಬುದಕ್ಕೆ ಬದುಕಿರುವಾಗಲೇ ತಾಪತ್ರಯ ಅಥವಾ ಚಿಂತೆ ಎಂಬ ಅಗ್ನಿಯಿಂದ ದಹಿಸಲ್ಪಡುತ್ತಿರುವುದು ಎಂದರ್ಥ.

ಶಾಸ್ತ್ರದಲ್ಲಿ "ಚಿಂತಾಯಾಶ್ಚ ಚಿತಾಯಾಶ್ಚ ಬಿಂದುಮಾತ್ರೇಣ ವಿಶೇಷತಃ। ಚಿತಾದಹತಿ ನಿರ್ಜೀವ ಚಿಂತಾ ದಹತಿ ಜೀವಿನಮ್" – ಅಂದರೆ ಚಿತೆಯು ಸತ್ತ ಮನುಷ್ಯನನ್ನು ಒಂದೇ ಬಾರಿಗೆ ಸುಟ್ಟರೆ ಚಿಂತೆಯು ಬದುಕಿರುವ ಮನುಷ್ಯ

ನನ್ನೇ ನಿಧಾನವಾಗಿ ದಿನ ದಿನವೂ ಸ್ವಲ್ಪ ಸ್ವಲ್ಪವಾಗಿ ಸುಡುತ್ತಿರುತ್ತದೆ ಎಂದು ಹೇಳಿದೆ. ಆದುದರಿಂದ ಇವುಗಳನ್ನು 'ದೇಹ' ವೆಂದು ಕರೆದಿದೆ.

ಪ್ರ ೪ : **ಸ್ಥೂಲ ದೇಹವು ಎಷ್ಟು ವಸ್ತುಗಳಿಂದ ಕೂಡಿ ಆಗಿದೆ ?**

ಉ : ಸ್ಥೂಲ ದೇಹವು ಪಂಚೀಕೃತ ಪಂಚ ಮಹಾಭೂತಗಳ ಪಂಚ ವಿಂಶತಿ (ಇಪ್ಪತ್ತೈದು) ತತ್ವಗಳಿಂದ ಕೂಡಿ ಆಗಿದೆ

ಪ್ರ ೫ : **ಪಂಚ ಭೂತಗಳೆಂದರೆ ಯಾವುವು ?**

ಉ : ೧. ಆಕಾಶ, ೨. ವಾಯು, ೩. ಅಗ್ನಿ, ೪. ಜಲ, ಮತ್ತು ೫. ಪೃಥ್ವಿ – ಇವೇ ಪಂಚ ಮಹಾಭೂತಗಳು.

ಪ್ರ ೬ : **ಪಂಚ ಮಹಾಭೂತಗಳ ಇಪ್ಪತ್ತೈದು ತತ್ವಗಳು ಹೇಗೆ ಆದವೆಂಬುದನ್ನು ವಿವರಿಸಿ.**

ಉ : ಒಂದೊಂದು ಭೂತದಲ್ಲೂ ಐದೈದು ಭಾಗಗಳಾಗಿ ಒಟ್ಟು ಇಪ್ಪತ್ತೈದು ತತ್ವಗಳಾಗಿವೆ. ಹೇಗೆಂದರೆ –

೧. **ಆಕಾಶಭೂತದ ಪಂಚತತ್ವಗಳು**
ಶೋಕ, ಕಾಮ, ಕ್ರೋಧ, ಮೋಹ ಮತ್ತು ಭಯ.

೨. **ವಾಯುಭೂತದ ಪಂಚತತ್ವಗಳು**
ಪ್ರಸಾರಣ, ಧಾವನ, ವಲನ, ಚಲನ ಮತ್ತು ಆಕುಂಚನ.

೩. **ಅಗ್ನಿಭೂತದ ಪಂಚತತ್ವಗಳು**
ನಿದ್ರಾ, ತೃಷಾ, ಕ್ಷುಧಾ, ಕಾಂತಿ ಮತ್ತು ಆಲಸ್ಯ.

೪. **ಜಲಭೂತದ ಪಂಚತತ್ವಗಳು**
ಲಾಲಾರಸ, ಸ್ವೇದ, ಮೂತ್ರ, ಶುಕ್ಲ ಮತ್ತು ಶೋಣಿತ.

೫. **ಪೃಥ್ವಿಭೂತದ ಪಂಚತತ್ವಗಳು**
ರೋಮ, ತ್ವಚಾ, ನಾಡಿ, ಮಾಂಸ ಮತ್ತು ಅಸ್ಥಿ.

ಹೀಗೆ ಒಟ್ಟು ಇಪ್ಪತ್ತೈದು ತತ್ವಗಳಾಗಿವೆ.

## ಸ್ಥೂಲ ದೇಹದ ಪಂಚೀಕರಣ ನಕ್ಷೆ
### ಮುಖ್ಯ ಭಾಗಗಳು

ಉಪಮುಖ್ಯ ಭಾಗಗಳು

| | ಆಕಾಶ | ವಾಯು | ಅಗ್ನಿ | ಜಲ | ಪೃಥ್ವಿ |
|---|---|---|---|---|---|
| ಆಕಾಶ | ಶೋಕ ಶಿರಾಕಾಶ | ಪ್ರಸಾರಣ | ನಿದ್ರಾ | ಲಾಲಾರಸ | ರೋಮ |
| ವಾಯು | ಕಾಮ ಕಂಠಾ ಕಾಶ | ಧಾವನ | ತೃಷಾ | ಸ್ವೇದ | ಚರ್ಮ |
| ಅಗ್ನಿ | ಕ್ರೋಧ ಹೃದಯಾ ಕಾಶ | ವಲನಾ | ಕ್ಷುಧಾ | ಮೂತ್ರ | ನಾಡಿ |
| ಜಲ | ಮೋಹ ಉದರಾ ಕಾಶ | ಚಲನಾ | ಕಾಂತಿ | ಶುಕ್ಲ | ಮಾಂಸ |
| ಪೃಥ್ವಿ | ಭಯ ಕಟ್ಯಾ ಕಾಶ | ಆಕುಂಚನ | ಆಲಸ್ಯ | ಶೋಣಿತ | ಅಸ್ಥಿ |

ಪ್ರ ೭ : **ಪಂಚೀಕರಣವು ಯಾರಿಂದ ಆಯಿತು ಮತ್ತು ಏಕೆ ಆಯಿತು ?**

ಉ : ಪಂಚೀಕರಣವು ಈಶ್ವರನಿಂದಾಯಿತು. ಏಕೆಂದರೆ ಯಾವುದಾದರೂ ಒಂದು ವಸ್ತುವನ್ನು ತಯಾರುಮಾಡಬೇಕಾದರೆ ಮಾಡುವವರಿಗೆ ಆ ವಸ್ತುವಿನ ಸಂಪೂರ್ಣ ತಿಳುವಳಿಕೆ ಇರಬೇಕು. ಉದಾಹರಣೆಗೆ: ಎರಡು ಲೋಟ ಕಾಫಿ ಮಾಡಬೇಕಾದರೆ ಅದಕ್ಕೆ ಎಷ್ಟು ಸಕ್ಕರೆ, ಎಷ್ಟು ಕಾಫಿಪುಡಿ ಹಾಕಬೇಕೆಂಬುದನ್ನೆಲ್ಲಾ ತಿಳಿದವರು ಕಾಫಿ ಮಾಡಿದರೆ ಅದು ಚೆನ್ನಾಗಿರುತ್ತದೆ. ಇದರಂತೆ ಈ ಜಗತ್ತಿನ ಎಲ್ಲಾ ವ್ಯವಹಾರಗಳೂ ಇಷ್ಟು ಕ್ರಮವಾಗಿ

ನಡೆಯುವುದನ್ನು ಕಂಡು, ಇದು ಸರ್ವಜ್ಞನಾದ ಈಶ್ವರನಿಂದಲೇ ಸೃಷ್ಟಿಸಲ್ಪಟ್ಟಿದೆ ಎಂಬುದಾಗಿ ಹೇಳಬಹುದು. ಮತ್ತು ಈ ಸೃಷ್ಟಿಯು ಏಕೆ ಉಂಟಾಯಿತೆಂದರೆ ಜೀವರುಗಳು ಪ್ರಾರಬ್ಧವನ್ನು ಭೋಗಿಸಿ ಪುರುಷಾರ್ಥವನ್ನು ಅಂದರೆ ಮೋಕ್ಷವನ್ನು ಸಂಪಾದಿಸಿಕೊಳ್ಳುವುದಕ್ಕೋಸ್ಕರ ಉಂಟಾಗಿದೆ.

ಪ್ರ ೮ : **ಪಂಚೀಕೃತ ಪಂಚ ಮಹಾಭೂತಗಳೆಂದರೇನು ?**

ಉ : ಅಪಂಚೀಕೃತ ಪಂಚ ಮಹಾಭೂತಗಳು ಈಶ್ವರನ ಇಚ್ಛೆಯಂತೆ ಭಾಗಗಳಾಗಿರುವುದಕ್ಕೆ ಪಂಚೀಕೃತ ಪಂಚ ಮಹಾಭೂತಗಳೆನ್ನುತ್ತಾರೆ.

ಪ್ರ ೯ : **ಪಂಚೀಕರಣದ ಪದ್ಧತಿಗಳೆಷ್ಟು? ಅವುಗಳನ್ನು ಉದಾಹರಣೆ ಸಹಿತ ವಿವರಿಸಿ.**

ಉ : ಪಂಚೀಕರಣದಲ್ಲಿ ಎರಡು ಪದ್ಧತಿಗಳಿವೆ. ಮೊದಲನೇ ಪದ್ಧತಿಯ ಪ್ರಕಾರ, ಪಂಚ ಮಹಾಭೂತಗಳು ಪ್ರತಿಯೊಂದೂ ಎರಡು ಭಾಗವಾಗಿ, ಒಂದು ಭಾಗವನ್ನು ತನಗಾಗಿ ಇಟ್ಟುಕೊಂಡು, ಮತ್ತೊಂದು ಭಾಗದಲ್ಲಿ ಪುನಃ ನಾಲ್ಕು ಸಣ್ಣ ಭಾಗಗಳನ್ನು ಮಾಡಿ ಉಳಿದ ನಾಲ್ಕು ಭೂತಗಳಿಗೂ ಹಂಚಿದೆ. ಹೀಗೆ ಪ್ರತಿಯೊಂದು ಭೂತವೂ ಮಾಡಿದ್ದರಿಂದ ಪ್ರತಿಯೊಂದಕ್ಕೂ ತನ್ನದೇ ಆದ ದೊಡ್ಡ ಭಾಗ, ಮತ್ತು ಉಳಿದ ನಾಲ್ಕು ಭೂತಗಳ ನಾಲ್ಕು ಸಣ್ಣ ಭಾಗಗಳು ಸೇರಿ ಐದು ಭಾಗಗಳಾದವು. ಐದು ಭೂತಗಳ ಐದೈದು ಭಾಗಗಳು ಒಟ್ಟು ಸೇರಿ ಇಪ್ಪತ್ತೈದು ತತ್ವಗಳಾದವು.

ಉದಾ : ಐದು ಜನ ಸ್ನೇಹಿತರು ಐದು ವಿಧವಾದ ಹಣ್ಣುಗಳನ್ನು ತೆಗೆದುಕೊಂಡು ವಿಹಾರಾರ್ಥವಾಗಿ ವನದಲ್ಲಿ ಅಡ್ಡಾಡಲು ಹೋದರು. ಸ್ವಲ್ಪ ಹೊತ್ತು ಸುತ್ತಿದ ಮೇಲೆ ಒಂದು ಮರದ ಕೆಳಗೆ ಕುಳಿತು, ಪ್ರತಿಯೊಬ್ಬರೂ ತಮ್ಮ ಹಣ್ಣನ್ನು ಎರಡು ಸಮಭಾಗ ಮಾಡಿ, ಒಂದನ್ನು ತಮಗಾಗಿ ಇರಿಸಿಕೊಂಡು ಉಳಿದ ಅರ್ಧ ಭಾಗವನ್ನು ನಾಲ್ಕು ಚೂರು ಮಾಡಿ ಉಳಿದ ನಾಲ್ವರಿಗೂ ಹಂಚಿದರು. ಹೀಗೆ ಪ್ರತಿಯೊಬ್ಬರೂ ಮಾಡಿದ್ದರಿಂದ ಪ್ರತಿಯೊಬ್ಬರ ಹಣ್ಣಿನ ದೊಡ್ಡಭಾಗ ಮತ್ತು ಉಳಿದವರ ಹಣ್ಣುಗಳ ನಾಲ್ಕು ಚಿಕ್ಕಭಾಗಗಳು ಸೇರಿ ಐದು ಚೂರುಗಳಾದವು. ಐದು ಜನರ ಒಟ್ಟು ಚೂರುಗಳು ಸೇರಿ ಇಪ್ಪತ್ತೈದು ಚೂರುಗಳಾದವು.

ಪಂಚೀಕರಣದ ಎರಡನೇ ಪದ್ಧತಿಯ ಪ್ರಕಾರ, ಒಂದೊಂದು ಭೂತದಲ್ಲಿ

ನೂರು ಭಾಗಗಳಾಗಿ, ೮೦ ಭಾಗ ತನಗಾಗಿ ಇರಿಸಿಕೊಂಡು, ಉಳಿದ ೨೦ ಭಾಗವನ್ನು ಐದು ಭಾಗಗಳಾಗಿ ಮಾಡಿ, ನಾಲ್ಕು ಭೂತಗಳಿಗೆ ನಾಲ್ಕು ಭಾಗ ಕೊಟ್ಟು, ಉಳಿದ ಭಾಗವನ್ನು ತನಗೆ ಇಟ್ಟುಕೊಂಡಿದೆ.

ಉದಾ : ಐದು ಜನ ಸ್ನೇಹಿತರು ತಮ್ಮಲ್ಲಿದ್ದ ಬೇರೆ ಬೇರೆ ಬಗೆಯ ನೂರು ಹಣ್ಣುಗಳಲ್ಲಿ ತಮಗೆ ೮೦ ಇಟ್ಟುಕೊಂಡು ಉಳಿದ ೨೦ರಲ್ಲಿ ೫ ಭಾಗ ಮಾಡಿ, ನಾಲ್ಕು ಜನಗಳಿಗೂ ಒಂದೊಂದು ಭಾಗ ಅಂದರೆ ನಾಲ್ಕು ನಾಲ್ಕು ಹಣ್ಣುಗಳನ್ನು ಕೊಟ್ಟು, ಉಳಿದ ನಾಲ್ಕು ಹಣ್ಣುಗಳನ್ನು ತಾವೇ ತೆಗೆದು ಕೊಂಡರು. ಹೀಗೆ ಪ್ರತಿಯೊಬ್ಬರೂ ಮಾಡಿದ್ದರಿಂದ ಪುನಃ ಪ್ರತಿಯೊಬ್ಬರಿಗೂ ನೂರು ನೂರು ಹಣ್ಣುಗಳಾದವು.

ಪ್ರ ೧೦ : **ಎರಡು ವಿಧ ಪಂಚೀಕರಣದಲ್ಲಿರುವ ವ್ಯತ್ಯಾಸವೇನು?**

ಉ : ಮೊದಲನೇ ವಿಧ ಪಂಚೀಕರಣದಲ್ಲಿ ಪ್ರತಿಯೊಂದು ಭೂತವು ತನ್ನ ಮುಖ್ಯ ಭಾಗದಲ್ಲಿ ಅರ್ಧ ಭಾಗವನ್ನೂ, ಎರಡನೇ ವಿಧದಲ್ಲಿ ಪ್ರತಿಯೊಂದು ಭೂತವು ತನ್ನ ಮುಖ್ಯ ಭಾಗದಲ್ಲಿ ಹದಿನಾರು ಭಾಗವನ್ನೂ ಉಳಿದ ಭೂತಗಳಿಗೆ ಕೊಟ್ಟಿದೆ.

ಮೊದಲನೇ ಪದ್ಧತಿಯ ಪ್ರಕಾರ ಪಂಚೀಕರಣವಾಗಿದ್ದರೆ, ಪ್ರತಿ ಭೂತದಲ್ಲಿ ಅದರ ಮುಖ್ಯ ಭಾಗವೇ ಕಂಡು, ಉಳಿದ ಭೂತಗಳ ಅಂಶಗಳು ಎದ್ದು ಕಾಣುವುದಿಲ್ಲವಲ್ಲಾ!

ಉದಾ : ಪೃಥ್ವಿಯಲ್ಲಿ ಆದರ ಕಠಿಣ ಸ್ವಭಾವ ಮಾತ್ರ ಕಂಡುಬರುತ್ತದೆ, ಉಳಿದ ಭೂತಗಳ ಅಂಶ ಕಾಣುವುದಿಲ್ಲ ಎಂದು ಕೆಲವರು ಶಂಕೆ ಮಾಡುತ್ತಾರೆ. ಇದರ ಪರಿಹಾರಕ್ಕಾಗಿ ಎರಡನೇ ವಿಧವಾದ ಪಂಚೀಕರಣವನ್ನು ಹೇಳಿ, ಪ್ರತಿ ಭೂತದಲ್ಲಿ ಉಳಿದ ಭೂತಗಳ ಅಂಶ ಬಹಳ ಕಡಿಮೆ (ಅಂದರೆ ಶೇಕಡಾ ನಾಲ್ಕು) ಇರುವುದರಿಂದ ಅದು ವ್ಯಕ್ತವಾಗುವುದಿಲ್ಲವೆಂಬುದಾಗಿ ಹೇಳಿದೆ.

ಪ್ರ ೧೧ : **ಪಂಚೀಕರಣದ ವಿಶೇಷ ವಿಚಾರವೇನು ?**

ಉ : ಯಾವ ಯಾವ ಭೂತವು ಯಾವ ಯಾವ ಭೂತದಲ್ಲಿ ಎಷ್ಟೆಷ್ಟು ಸೇರಿ ಏನಾಗುತ್ತದೆ ಎಂಬುದನ್ನು ವಿವರವಾಗಿ ತಿಳಿದುಕೊಳ್ಳುವುದೇ ಪಂಚೀಕರಣದ ವಿಶೇಷ ವಿಚಾರ.

ಪ್ರ ೧೨ : **ಆಕಾಶ ಭೂತದ ಪಂಚೀಕರಣದ ಹೆಸರುಗಳೇನು ? ಅದರ ವಿಶೇಷ ವಿಚಾರವೇನು ?**

ಉ : ಶೋಕ, ಕಾಮ, ಕ್ರೋಧ, ಮೋಹ ಮತ್ತು ಭಯ – ಇವು ಆಕಾಶ ಭೂತದ ಪಂಚ ತತ್ವಗಳು.

ವಿವರಣೆ : ಆಕಾಶ ಭೂತವು ಎರಡು ಸಮಭಾಗಗಳಾಗಿ, ಒಂದು ಭಾಗ ವನ್ನು ತನಗಾಗಿ ಇಟ್ಟುಕೊಂಡಿದೆ. ಇದು ಆಕಾಶದ ಮುಖ್ಯ ಭಾಗ. ಉಳಿದ ಅರ್ಧ ಭಾಗದಲ್ಲಿ ನಾಲ್ಕು ಭಾಗ ಮಾಡಿ, ನಾಲ್ಕು ಭೂತಗಳಿಗೂ ಹಂಚಿದೆ.

ಆಕಾಶದ ಮುಖ್ಯ ಭಾಗವೇ 'ಶೋಕ'. ಆಕಾಶದ ಒಂದನೇ ಅಮುಖ್ಯ ಭಾಗವು ವಾಯುವಿನ ಮುಖ್ಯ ಭಾಗದಲ್ಲಿ ಸೇರಿ 'ಪ್ರಸಾರಣ'ವಾಯಿತು. ಆಕಾಶದ ಎರಡನೇ ಅಮುಖ್ಯ ಭಾಗವು ಅಗ್ನಿಯ ಮುಖ್ಯ ಭಾಗದಲ್ಲಿ ಸೇರಿ 'ನಿದ್ರೆ'ಯಾಯಿತು. ಆಕಾಶದ ಮೂರನೇ ಅಮುಖ್ಯ ಭಾಗವು ಜಲದ ಮುಖ್ಯ ಭಾಗದಲ್ಲಿ ಸೇರಿ 'ಲಾಲಾರಸ'ವಾಯಿತು. ಆಕಾಶದ ನಾಲ್ಕನೇ ಅಮುಖ್ಯ ಭಾಗವು ಪೃಥ್ವಿಯ ಮುಖ್ಯ ಭಾಗದಲ್ಲಿ ಸೇರಿ 'ರೋಮ'ವಾಯಿತು.

ಪ್ರ ೧೩ : **ವಾಯು ಭೂತದ ಪಂಚೀಕರಣದ ಹೆಸರುಗಳೇನು ? ಅವುಗಳ ವಿಶೇಷ ವಿಚಾರವೇನು ?**

ಉ : ಪ್ರಸಾರಣ, ಧಾವನ, ವಲನ, ಚಲನ ಮತ್ತು ಆಕುಂಚನ– ಇವು ವಾಯು ಭೂತದ ಪಂಚತತ್ವಗಳು.

ವಿವರಣೆ : ವಾಯು ಭೂತವು ಎರಡು ಭಾಗವಾಗಿ, ಒಂದು ಭಾಗ ವನ್ನು ತನಗಾಗಿ ಇರಿಸಿಕೊಂಡು, ಉಳಿದ ಅರ್ಧ ಭಾಗದಲ್ಲಿ ನಾಲ್ಕು ಭಾಗ ಮಾಡಿ ನಾಲ್ಕು ಭೂತಗಳಿಗೂ ಹಂಚಿದೆ.

ವಾಯುವಿನ ಮುಖ್ಯ ಭಾಗವೇ 'ಧಾವನ'. ವಾಯುವಿನ ಒಂದನೇ ಅಮುಖ್ಯ ಭಾಗವು ಆಕಾಶದ ಮುಖ್ಯ ಭಾಗದಲ್ಲಿ ಸೇರಿ 'ಕಾಮ'ವಾಯಿತು. ವಾಯುವಿನ ಎರಡನೇ ಅಮುಖ್ಯ ಭಾಗವು ಅಗ್ನಿಯ ಮುಖ್ಯ ಭಾಗದಲ್ಲಿ ಸೇರಿ 'ತೃಷೆ'ಯಾಯಿತು. ವಾಯುವಿನ ಮೂರನೇ ಅಮುಖ್ಯ ಭಾಗವು ಜಲದ ಮುಖ್ಯ ಭಾಗದಲ್ಲಿ ಸೇರಿ 'ಸ್ವೇದ'ವಾಯಿತು. ವಾಯುವಿನ ನಾಲ್ಕನೇ ಅಮುಖ್ಯ ಭಾಗವು ಪೃಥ್ವಿಯ ಮುಖ್ಯ ಭಾಗದಲ್ಲಿ ಸೇರಿ 'ತ್ವಚ'ವಾಯಿತು.

ಪ್ರ ೧೪ : **ಅಗ್ನಿ ಭೂತದ ಪಂಚೀಕರಣದ ಹೆಸರುಗಳೇನು? ಅವುಗಳ ವಿಶೇಷ ವಿಚಾರವೇನು ?**

ಉ : ನಿದ್ರೆ, ತೃಷೆ, ಕ್ಷುಧೆ, ಕಾಂತಿ ಮತ್ತು ಆಲಸ್ಯ - ಇವು ಅಗ್ನಿ ಭೂತದ ಪಂಚ ತತ್ವಗಳು.

ವಿವರಣೆ : ಅಗ್ನಿ ಭೂತದಲ್ಲಿ ಎರಡು ಭಾಗವಾಗಿ ಒಂದು ಭಾಗವನ್ನು ತನಗಾಗಿ ಇರಿಸಿಕೊಂಡು, ಉಳಿದ ಭಾಗವನ್ನು ನಾಲ್ಕು ಸಮಭಾಗಗಳಾಗಿ ಮಾಡಿ, ಉಳಿದ ನಾಲ್ಕು ಭೂತಗಳಿಗೂ ಒಂದೊಂದರಂತೆ ಹಂಚಿದೆ.

ಅಗ್ನಿಯ ಮುಖ್ಯ ಭಾಗವೇ 'ಕ್ಷುಧೆ'. ಅಗ್ನಿಯ ಒಂದನೇ ಅಮುಖ್ಯ ಭಾಗವು ಆಕಾಶದ ಮುಖ್ಯ ಭಾಗದಲ್ಲಿ ಸೇರಿ 'ಕ್ರೋಧ'ವಾಯಿತು. ಅಗ್ನಿಯ ಎರಡನೇ ಅಮುಖ್ಯ ಭಾಗವು ವಾಯುವಿನ ಮುಖ್ಯ ಭಾಗದಲ್ಲಿ ಸೇರಿ 'ವಲನ' ವಾಯಿತು. ಅಗ್ನಿಯ ಮೂರನೇ ಅಮುಖ್ಯ ಭಾಗವು ಜಲದ ಮುಖ್ಯ ಭಾಗದಲ್ಲಿ ಸೇರಿ 'ಮೂತ್ರ'ವಾಯಿತು. ಅಗ್ನಿಯ ನಾಲ್ಕನೇ ಅಮುಖ್ಯ ಭಾಗವು ಪೃಥ್ವಿಯ ಮುಖ್ಯ ಭಾಗದಲ್ಲಿ ಸೇರಿ 'ನಾಡಿ' ಯಾಯಿತು.

ಪ್ರ ೧೫ : **ಜಲಭೂತದ ಪಂಚೀಕರಣದ ಹೆಸರುಗಳೇನು ? ಅವುಗಳ ವಿಶೇಷ ವಿಚಾರವೇನು ?**

ಉ : ಲಾಲಾರಸ, ಸ್ವೇದ, ಮೂತ್ರ, ಶುಕ್ಲ ಮತ್ತು ಶೋಣಿತ— ಇವು ಜಲಭೂತದ ಪಂಚ ತತ್ವಗಳು.

ವಿವರಣೆ : ಜಲ ಭೂತವು ಎರಡು ಸಮಭಾಗಗಳಾಗಿ ಒಂದು ಭಾಗವನ್ನು ತನಗಾಗಿ ಇರಿಸಿಕೊಂಡು, ಉಳಿದ ಭಾಗವನ್ನು ನಾಲ್ಕು ಭಾಗಗಳಾಗಿ ಮಾಡಿ ನಾಲ್ಕು ಭೂತಗಳಿಗೂ ಹಂಚಿದೆ.

ಜಲಭೂತದ ಮುಖ್ಯ ಭಾಗವೇ 'ಶುಕ್ಲ'. ಜಲಭೂತದ ಒಂದನೇ ಅಮುಖ್ಯ ಭಾಗವು ಆಕಾಶದ ಮುಖ್ಯ ಭಾಗದಲ್ಲಿ ಸೇರಿ 'ಮೋಹ'ವಾಯಿತು. ಜಲಭೂತದ ಎರಡನೇ ಅಮುಖ್ಯ ಭಾಗವು ವಾಯುವಿನ ಮುಖ್ಯ ಭಾಗದಲ್ಲಿ ಸೇರಿ 'ಚಲನ'ವಾಯಿತು. ಜಲಭೂತದ ಮೂರನೇ ಅಮುಖ್ಯ ಭಾಗವು ಅಗ್ನಿಯ ಮುಖ್ಯ ಭಾಗದಲ್ಲಿ ಸೇರಿ 'ಕಾಂತಿ'ಯಾಯಿತು. ಜಲಭೂತದ ನಾಲ್ಕನೇ ಅಮುಖ್ಯ ಭಾಗವು ಪೃಥ್ವಿಯ ಮುಖ್ಯ ಭಾಗದಲ್ಲಿ ಸೇರಿ 'ಮಾಂಸ' ವಾಯಿತು.

ಪ್ರ ೧೬ : **ಪೃಥ್ವೀ ಭೂತದ ಪಂಚೀಕರಣದ ಹೆಸರುಗಳೇನು ? ಅವುಗಳ ವಿಶೇಷ ವಿಚಾರವೇನು ?**

ಉ : ರೋಮ, ತ್ವಚ, ನಾಡಿ, ಮಾಂಸ ಮತ್ತು ಅಸ್ಥಿ– ಇವು ಪೃಥ್ವೀ ಭೂತದ ಪಂಚ ತತ್ವಗಳು.

ವಿವರಣೆ : ಪೃಥ್ವೀ ಭೂತದಲ್ಲಿ ಎರಡು ಭಾಗಗಳಾಗಿ, ಒಂದು ಭಾಗ ವನ್ನು ತನಗಾಗಿ ಇರಿಸಿಕೊಂಡು, ಉಳಿದ ಭಾಗವನ್ನು ನಾಲ್ಕು ಭಾಗಗಳಾಗಿ ಮಾಡಿ ನಾಲ್ಕು ಭೂತಗಳಿಗೆ ಹಂಚಿಕೊಟ್ಟಿದೆ.

ಪೃಥ್ವೀ ಭೂತದ ಮುಖ್ಯ ಭಾಗವೇ 'ಅಸ್ಥಿ'. ಪೃಥ್ವೀ ಭೂತದ ಒಂದನೇ ಅಮುಖ್ಯ ಭಾಗವು ಆಕಾಶದ ಮುಖ್ಯ ಭಾಗದಲ್ಲಿ ಸೇರಿ 'ಭಯ'ವಾಯಿತು.

ಪೃಥ್ವೀ ಭೂತದ ಎರಡನೇ ಅಮುಖ್ಯ ಭಾಗವು ವಾಯುವಿನ ಮುಖ್ಯ ಭಾಗದಲ್ಲಿ ಸೇರಿ 'ಆಕುಂಚನ'ವಾಯಿತು.

ಪೃಥ್ವೀ ಭೂತದ ಮೂರನೇ ಅಮುಖ್ಯ ಭಾಗವು ಅಗ್ನಿ ಭೂತದ ಮುಖ್ಯ ಭಾಗದಲ್ಲಿ ಸೇರಿ 'ಆಲಸ್ಯ'ವಾಯಿತು.

ಪೃಥ್ವೀ ಭೂತದ ನಾಲ್ಕನೇ ಅಮುಖ್ಯ ಭಾಗವು ಜಲದ ಮುಖ್ಯ ಭಾಗ ದಲ್ಲಿ ಸೇರಿ 'ಶೋಣಿತ'ವಾಯಿತು.

ಪ್ರ ೧೭ : **ಮೇಲೆ ಹೇಳಿದ ಆಕಾಶದ ತತ್ವಗಳು ಸೂಕ್ಷ್ಮ ದೇಹ ದಲ್ಲಿ ತೋರಿ ಬರುತ್ತಿವೆ. ಇವನ್ನು ಸ್ಥೂಲ ದೇಹಕ್ಕೆ ಸೇರಿದ್ದೆಂದು ಹೇಳಲು ಕಾರಣವೇನು ?**

ಉ : ಶೋಕ, ಕಾಮ, ಕ್ರೋಧ, ಮೋಹ ಮತ್ತು ಭಯಗಳೆಂಬ ಆಕಾಶದ ತತ್ವಗಳು ಸೂಕ್ಷ್ಮ ದೇಹದ ಧರ್ಮಗಳಾದರೂ ಇವುಗಳ ಲಕ್ಷಣ ಗಳು ಸ್ಥೂಲದೇಹದಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತವೆ.

ಉದಾ : ಬೇಸಿಗೆ ಕಾಲದಲ್ಲಿ ಒಂದು ಮಣ್ಣಿನ ಹೊಸ ಗಡಿಗೆಯಲ್ಲಿ ನೀರು ತುಂಬಿಟ್ಟರೆ, ಅದರ ತಂಪು ಆ ಗಡಿಗೆಯ ಹೊರ ಭಾಗದಲ್ಲೂ ತೇವ ವಾಗುವುದರ ಮೂಲಕ ಹೊರಗೆ ವ್ಯಕ್ತವಾಗುತ್ತದೆ.

ಇದರಂತೆ ಮನುಷ್ಯನಿಗೆ ಅತಿಶೋಕ ಉಂಟಾದರೆ ಅವನ ಮುಖ ಸಪ್ಪೆ ಯಾಗಿ, ಕಣ್ಣುಗಳಿಂದ ನೀರು ಸುರಿಯುತ್ತದೆ. ಕ್ರೋಧ ಉಂಟಾದಾಗ

ಅವನು ಹುಬ್ಬು ಗಂಟುಹಾಕಿ ಕಣ್ಣು ಕೆಂಪಗೆ ಮಾಡುತ್ತಾನೆ. ಆಗ ಅವನಿಗೆ ಕೋಪ ಬಂದಿದೆ ಎಂದು ಬೇರೆಯವರು ತಿಳಿದುಕೊಳ್ಳಬಹುದು.

ಪ್ರ ೧೮ : **ಆಕಾಶ ಭೂತದ ಎರಡನೇ ಪಂಚೀಕರಣದ ಹೆಸರು ಮತ್ತು ಅದರ ವಿವರಣೆ ಏನು ?**

ಉ : ೧. ಶೀರ್ಷಾಕಾಶ, ೨. ಕಂಠಾಕಾಶ, ೩. ಹೃದಯಾಕಾಶ, ೪. ಉದರಾಕಾಶ, ೫. ಕಟ್ಯಾಕಾಶ – ಇವು ಆಕಾಶ ಭೂತದ ಎರಡನೇ ವಿಧವಾದ ಪಂಚೀಕರಣದ ಹೆಸರುಗಳು. ಮೇಲೆ ಹೇಳಿದ ಸಮಾಧಾನವನ್ನು ಒಪ್ಪದಿದ್ದವರಿಗೆ ಇದನ್ನು ಹೇಳಿದೆ.

ವಿವರಣೆ : ೧) ಶೀರ್ಷಾಕಾಶವು ಶಿರಸ್ಸಿನಲ್ಲಿದೆ. ಇದು ಅನಾಹತ ಧ್ವನಿಗೆ ಅವಕಾಶ ಕೊಟ್ಟಿದೆ ಇದು ಆಕಾಶದ ಮುಖ್ಯ ಭಾಗ.

೨) ಕಂಠಾಕಾಶವು ಕಂಠಸ್ಥಾನದಲ್ಲಿದೆ. ಇದು ಶ್ವಾಸೋಚ್ಛ್ವಾಸಗಳಿಗೆ ಅವಕಾಶ ಕೊಟ್ಟಿದೆ. ಇದು ಆಕಾಶದಲ್ಲಿ ಸೇರಿದ ವಾಯುವಿನ ಭಾಗ.

೩) ಹೃದಯಾಕಾಶವು ಹೃದಯದಲ್ಲಿದೆ. ಇದು ಪಿತ್ತಕ್ಕೆ ಅವಕಾಶ ಕೊಟ್ಟಿದೆ. ಇದು ಆಕಾಶದಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ.

೪) ಉದರಾಕಾಶವು ಹೊಟ್ಟೆಯಲ್ಲಿದೆ. ಇದು ಅನ್ನ–ನೀರುಗಳಿಗೆ ಅವಕಾಶ ಕೊಟ್ಟಿದೆ. ಇದು ಆಕಾಶದಲ್ಲಿ ಸೇರಿದ ಜಲದ ಭಾಗವಾಗಿದೆ.

೫) ಕಟ್ಯಾಕಾಶವು ಸೊಂಟದಲ್ಲಿದೆ. ಇದು ಗಂಧಕ್ಕೆ ಅವಕಾಶ ಕೊಟ್ಟಿರುವುದರಿಂದ ಇದು ಆಕಾಶದಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ.

ಆಕಾಶ ಭೂತದ ಈ ಐದು ತತ್ವಗಳನ್ನಾದರೂ ಗ್ರಹಿಸಬಹುದು.

ಪ್ರ ೧೯ : **ಮೇಲೆ ಹೇಳಿದ ಇಪ್ಪತ್ತೈದು ತತ್ವಗಳನ್ನೂ ಕ್ರಮವಾಗಿ ಬರೆದು ತೋರಿಸಿರಿ :**

## ಸ್ಥೂಲ ಪಂಚೀಕರಣದ ನಕ್ಷೆ

| ಭೂತಗಳು | ಆಕಾಶ | ವಾಯು | ಅಗ್ನಿ | ಜಲ | ಪೃಥ್ವಿ |
|---|---|---|---|---|---|
| ಆಕಾಶ | ಶೋಕ | ಕಾಮ | ಕ್ರೋಧ | ಮೋಹ | ಭಯ |
| ವಾಯು | ಪ್ರಸಾರಣ | ಧಾವನ | ವಲನ | ಚಲನ | ಆಕುಂಚನ |
| ಅಗ್ನಿ | ನಿದ್ರಾ | ತೃಷಾ | ಕ್ಷುಧಾ | ಕಾಂತಿ | ಆಲಸ್ಯ |
| ಜಲ | ಲಾಲಾರಸ | ಸ್ವೇದ | ಮೂತ್ರ | ಶುಕ್ಲ | ಶೋಣಿತ |
| ಪೃಥ್ವಿ | ರೋಮ | ತ್ವಚ | ನಾಡಿ | ಮಾಂಸ | ಅಸ್ಥಿ |

ಪ್ರ ೨೦ : ಈ ಇಪ್ಪತ್ತೈದು ತತ್ವಗಳು ಸ್ಥೂಲದೇಹದಲ್ಲಿ ಹೇಗೆ ತೋರಿಬರುತ್ತವೆ ?

ಶ್ಲೋಕ : "ಯತ್ ಕಠಿಣಂ ಸ್ಯಾತ್ಪೃಥ್ವಿಃ
ಯದ್ರವಂ ತದಾಪಃ
ಯದುಷ್ಣಂ ತತ್ತೇಜಃ
ಯಶ್ಚರತಿ ಸವಾಯುಃ
ಯತ್ ಸುಷಿರಂ ತದಾಕಾಶ ಮಿತ್ಯುಚ್ಯತೇ."

ಅವನು ಹುಬ್ಬು ಗಂಟುಹಾಕಿ ಕಣ್ಣು ಕೆಂಪಗೆ ಮಾಡುತ್ತಾನೆ. ಆಗ ಅವನಿಗೆ ಕೋಪ ಬಂದಿದೆ ಎಂದು ಬೇರೆಯವರು ತಿಳಿದುಕೊಳ್ಳಬಹುದು.

**ಪ್ರ ೧೮ : ಆಕಾಶ ಭೂತದ ಎರಡನೇ ಪಂಚೀಕರಣದ ಹೆಸರು ಮತ್ತು ಅದರ ವಿವರಣೆ ಏನು ?**

ಉ : ೧. ಶೀರ್ಷಾಕಾಶ, ೨. ಕಂಠಾಕಾಶ, ೩. ಹೃದಯಾಕಾಶ, ೪. ಉದರಾಕಾಶ, ೫. ಕಟ್ಯಾಕಾಶ – ಇವು ಆಕಾಶ ಭೂತದ ಎರಡನೇ ವಿಧವಾದ ಪಂಚೀಕರಣದ ಹೆಸರುಗಳು. ಮೇಲೆ ಹೇಳಿದ ಸಮಾಧಾನವನ್ನು ಒಪ್ಪದಿದ್ದವರಿಗೆ ಇದನ್ನು ಹೇಳಿದೆ.

ವಿವರಣೆ : ೧) ಶೀರ್ಷಾಕಾಶವು ಶಿರಸ್ಸಿನಲ್ಲಿದೆ. ಇದು ಅನಾಹತ ಧ್ವನಿಗೆ ಅವಕಾಶ ಕೊಟ್ಟಿದೆ ಇದು ಆಕಾಶದ ಮುಖ್ಯ ಭಾಗ.

೨) ಕಂಠಾಕಾಶವು ಕಂಠಸ್ಥಾನದಲ್ಲಿದೆ. ಇದು ಶ್ವಾಸೋಚ್ಛ್ವಾಸಗಳಿಗೆ ಅವಕಾಶ ಕೊಟ್ಟಿದೆ. ಇದು ಆಕಾಶದಲ್ಲಿ ಸೇರಿದ ವಾಯುವಿನ ಭಾಗ.

೩) ಹೃದಯಾಕಾಶವು ಹೃದಯದಲ್ಲಿದೆ. ಇದು ಪಿತ್ತಕ್ಕೆ ಅವಕಾಶ ಕೊಟ್ಟಿದೆ. ಇದು ಆಕಾಶದಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ.

೪) ಉದರಾಕಾಶವು ಹೊಟ್ಟೆಯಲ್ಲಿದೆ. ಇದು ಅನ್ನ–ನೀರುಗಳಿಗೆ ಅವಕಾಶ ಕೊಟ್ಟಿದೆ. ಇದು ಆಕಾಶದಲ್ಲಿ ಸೇರಿದ ಜಲದ ಭಾಗವಾಗಿದೆ.

೫) ಕಟ್ಯಾಕಾಶವು ಸೊಂಟದಲ್ಲಿದೆ. ಇದು ಗಂಧಕ್ಕೆ ಅವಕಾಶ ಕೊಟ್ಟಿರುವುದರಿಂದ ಇದು ಆಕಾಶದಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ.

ಆಕಾಶ ಭೂತದ ಈ ಐದು ತತ್ವಗಳನ್ನಾದರೂ ಗ್ರಹಿಸಬಹುದು.

**ಪ್ರ ೧೯ : ಮೇಲೆ ಹೇಳಿದ ಇಪ್ಪತ್ತೈದು ತತ್ವಗಳನ್ನೂ ಕ್ರಮವಾಗಿ ಬರೆದು ತೋರಿಸಿರಿ :**

ಉ : ಆಕಾಶ ಭೂತದ್ದು — ನೀಲಿ ಬಣ್ಣ
ವಾಯು ಭೂತದ್ದು — ಹಸುರು ಬಣ್ಣ
ಅಗ್ನಿ ಭೂತದ್ದು — ಕೆಂಪು ಬಣ್ಣ
ಜಲ ಭೂತದ್ದು — ಬಿಳಿ ಬಣ್ಣ
ಪೃಥ್ವೀ ಭೂತದ್ದು — ಹಳದಿ ಬಣ್ಣ

ಪ್ರ ೨೩ : **ಶೋಕವು ಯಾವುದರ ಯಾವ ಭಾಗ ? ಹಾಗೆನ್ನಲು ಕಾರಣವೇನು ? ಮತ್ತು ಇದಕ್ಕಿರುವ ಭಿನ್ನಾಭಿಪ್ರಾಯಗಳೇನು ?**

ಉ : ಶೋಕವು ಆಕಾಶದ ಮುಖ್ಯ ಭಾಗವಾಗಿದೆ. ಏಕೆಂದರೆ ಶೋಕ ಉಂಟಾದಾಗ ಮನುಷ್ಯರ ಬುದ್ಧಿ ಶೂನ್ಯವಾಗಿ ಯಾವುದೇ ಯೋಚನೆ, ನಿಶ್ಚಯ, ಏನನ್ನೂ ಮಾಡಲಾಗುವುದಿಲ್ಲ. ಇದರಿಂದ ದೇಹವೂ ಯಾವುದೇ ಕ್ರಿಯೆ ಮಾಡದೆ ತಟಸ್ಥವಾಗುತ್ತದೆ. ಆಕಾಶವೂ ಶೂನ್ಯವಾಗಿರುವುದರಿಂದ ಶೋಕವು ಆಕಾಶದ ಮುಖ್ಯ ಭಾಗ.

ಮತ್ತೆ ಕೆಲವರು ಲೋಭವು ಆಕಾಶದ ಮುಖ್ಯ ಭಾಗವೆನ್ನುತ್ತಾರೆ. ಏಕೆಂದರೆ ಲೋಭಿಯ ಆಶೆಯೂ ಆಕಾಶದಂತೆ ಅಪರಿಮಿತವಾಗಿರುತ್ತದೆ. ಅಂದರೆ ಲೋಭಿಗೆ ಎಷ್ಟು ಹಣ ಬಂದರೂ ಅವನ ಆಶೆಗೆ ಮಿತಿ ಇರುವುದಿಲ್ಲ. ಮತ್ತಷ್ಟು ಬರಲಿ ಎನ್ನುತ್ತಲೇ ಇರುತ್ತಾನೆ. ಆಕಾಶದಲ್ಲಿ ಎಷ್ಟೇ ವಸ್ತುಗಳನ್ನು ಹಾಕಿದರೂ ಅದು ತುಂಬುವುದಿಲ್ಲ. ಆದುದರಿಂದ ಲೋಭವು ಆಕಾಶದ ಮುಖ್ಯ ಭಾಗವೆನ್ನುತ್ತಾರೆ.

ಪ್ರ ೨೪ : **ಕಾಮವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಹಾಗೆನ್ನಲು ಕಾರಣವೇನು ?**

ಉ : ಕಾಮವು ಆಕಾಶದಲ್ಲಿ ಸೇರಿದ ವಾಯುವಿನ ಭಾಗ. ವಾಯುವು ಒಂದು ಕಡೆ ನಿಲ್ಲದೆ ಸದಾ ಚಲಿಸುತ್ತಿರುತ್ತದೆ. ಇದರಂತೆ ಕಾಮ ಉಳ್ಳವನು ಅಂದರೆ ಅಂತಃಕರಣದಲ್ಲಿ ಸದಾ 'ಅದು ಬೇಕು, ಇದು ಬೇಕು' ಎಂಬ ಕೋರಿಕೆಗಳುಳ್ಳವನು ಚಂಚಲನೂ ಅಶಾಂತನೂ ಆಗಿರುತ್ತಾನೆ. ಪಿತನ ಗುಣವು ಪುತ್ರನಲ್ಲಿ ಕಂಡು ಬರುವಂತೆ, ವಾಯುವಿನ ಈ ಚಂಚಲತ್ವವೆಂಬ ಗುಣವು ಅದರ ಕಾರ್ಯವಾದ 'ಕಾಮ'ದಲ್ಲಿ ಕಂಡುಬರುವುದರಿಂದ ಕಾಮವು ಆಕಾಶದಲ್ಲಿ ಸೇರಿದ ವಾಯುವಿನ ಭಾಗವಾಗಿದೆ.

ಪ್ರ ೨೫ : **ಕ್ರೋಧವು ಯಾವುದರಲ್ಲಿ ಯಾವುದು ಸೇರಿ ಆಗಿದೆ? ಕಾರಣವೇನು ?**

ಉ : ಕ್ರೋಧವು ಆಕಾಶದಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ. ಕ್ರೋಧ ಉಂಟಾದಾಗ ಮನಸ್ಸಿನಲ್ಲಿ ಹಾಗೂ ದೇಹದಲ್ಲೆಲ್ಲಾ ತಾಪ (ಬಿಸಿ) ಉಂಟಾಗಿ ಕಣ್ಣುಗಳು ಕೆಂಪಾಗುತ್ತವೆ. ಅಗ್ನಿಯಲ್ಲೂ ಸಹ ಈ ಉಷ್ಣತ್ವ ವಿರುವುದರಿಂದ ಪಿತನ ಗುಣವು ಪುತ್ರನಲ್ಲಿ ತೋರುವಂತೆ, ಅಗ್ನಿಯ ತಾಪ ಲಕ್ಷಣ ಕ್ರೋಧದಲ್ಲಿ ಕಂಡುಬರುವುದರಿಂದ ಕ್ರೋಧವು ಆಕಾಶದಲ್ಲಿ ಸೇರಿದ ಅಗ್ನಿಯ ಭಾಗ.

ಪ್ರ ೨೬ : **ಮೋಹವು ಯಾವ ಭೂತದಲ್ಲಿ ಯಾವ ಭೂತ ಸೇರಿ ಉಂಟಾಯಿತು ? ಕಾರಣವೇನು ?**

ಉ : ಮೋಹವು ಆಕಾಶದಲ್ಲಿ ಸೇರಿದ ಜಲದ ಭಾಗವಾಗಿದೆ. ಜಲವು ಹರಿಯುವ ಸ್ವಭಾವ ಉಳ್ಳದ್ದು. ಮೋಹವೂ ಸಹ ಧನ, ಕನಕ, ವಸ್ತು, ವಾಹನ, ಪುತ್ರ, ಮಿತ್ರ, ಕಳತ್ರ ಮೊದಲಾದ ಕಡೆ ಹರಿಯುತ್ತಿರುತ್ತದೆ. ಪಿತನ ಗುಣವು ಪುತ್ರನಲ್ಲಿ ತೋರುವಂತೆ ಜಲದ ಹರಿಯುವ ಸ್ವಭಾವ ಮೋಹದಲ್ಲಿ ತೋರುವುದರಿಂದ 'ಮೋಹ'ವು ಆಕಾಶದಲ್ಲಿ ಸೇರಿದ ಜಲದ ಭಾಗವಾಗಿದೆ.

ಪ್ರ ೨೭ : **ಭಯವು ಯಾವುದರಲ್ಲಿ ಸೇರಿದ ಯಾವುದರ ಭಾಗ? ಕಾರಣವೇನು ?**

ಉ: ಭಯವು ಆಕಾಶದಲ್ಲಿ ಸೇರಿದ ಪೃಥ್ವಿಯ ಭಾಗ. ಭಯ ಉಂಟಾದ ಮನುಷ್ಯನು ಅತ್ತಿತ್ತ ಕದಲದೆ ಕಲ್ಲಿನಂತೆ ಅಥವಾ ಮರದಂತೆ ಜಡವಾಗಿ ಬಿಡುತ್ತಾನೆ. ಪೃಥ್ವಿಯೂ ಜಡ ಸ್ವಭಾವವುಳ್ಳದ್ದಾಗಿರುವುದರಿಂದ ಭಯವು ಆಕಾಶದಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ.

ಪ್ರ ೨೮ : **ಪ್ರಸಾರಣವು ಯಾವುದರಲ್ಲಿ ಸೇರಿದ ಯಾವ ಭಾಗ? ಕಾರಣವೇನು ?**

ಉ : ಪ್ರಸಾರಣವು ವಾಯುವಿನಲ್ಲಿ ಸೇರಿದ ಆಕಾಶದ ಭಾಗ. ಪ್ರಸಾರಣವೆಂದರೆ ಪ್ರಸರಿಸುವುದು ಅಥವಾ ಹರಡುವುದು. ಈ ಪ್ರಸರಿಸುವ ಸ್ವಭಾವವು ನಮ್ಮ ದೇಹದಲ್ಲಿ ಕೈಕಾಲು ಚಾಚುವುದು, ಆಕಳಿಸುವುದು ಇತ್ಯಾದಿಗಳ

ಮೂಲಕ ವ್ಯಕ್ತವಾಗುತ್ತದೆ. ಆಕಾಶವೂ ಸಹ ಸರ್ವತ್ರ ಪ್ರಸರಿಸಿದೆ. ಆದುದರಿಂದ ಪ್ರಸಾರಣವು ವಾಯುವಿನಲ್ಲಿ ಸೇರಿದ ಆಕಾಶದ ಭಾಗವಾಗಿದೆ.

ಪ್ರ ೨೯ : **ಧಾವನವು ಯಾವುದರ ಯಾವ ಭಾಗ ? ಕಾರಣವೇನು ?**

ಉ : ಧಾವನವು ವಾಯುವಿನ ಮುಖ್ಯ ಭಾಗ. ಧಾವನವೆಂದರೆ ಧಾವಿಸುವುದು ಅಂದರೆ ವೇಗವಾಗಿ ಓಡುವುದು. ವಾಯುವೂ ಸಹ ಸದಾ ಓಡುತ್ತಲೇ ಇರುತ್ತದೆ. ಸಮಯ ಬಂದಾಗ ನಾವೂ ಓಡುತ್ತೇವೆ. ಆದ್ದರಿಂದ ಧಾವನವು ವಾಯುವಿನ ಮುಖ್ಯ ಭಾಗವಾಗಿದೆ.

ಪ್ರ ೩೦ : **ವಲನವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ಉ : ವಲನವು ವಾಯುವಿನಲ್ಲಿ ಸೇರಿದ ಅಗ್ನಿಯ ಭಾಗ. ವಲನವೆಂದರೆ ಬಳುಕುವುದು ಅಥವಾ ಅಲ್ಲಾಡುವುದು. ಅಗ್ನಿಯೂ ಸಹ ಉರಿಯುವಾಗ ಅದರ ಜ್ವಾಲೆಗಳು ಬಳುಕಾಡುತ್ತವೆ. ನಮ್ಮ ದೇಹದಲ್ಲೂ ಈ ಬಳುಕಾಡುವ ಕ್ರಿಯೆ ಕಂಡುಬರುತ್ತದೆ. ಆದ್ದರಿಂದ ವಲನವು ವಾಯುವಿನಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ.

ಪ್ರ ೩೧ : **ಚಲನವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ಉ : ಚಲನವು ವಾಯುವಿನಲ್ಲಿ ಸೇರಿದ ಜಲದ ಭಾಗ. ಚಲನವೆಂದರೆ ಮುಂದೆ ಮುಂದೆ ಹೋಗುವುದು. ಜಲವೂ ಸಹ ಒಂದೆಡೆ ನಿಲ್ಲದೆ ಚಲಿಸುತ್ತದೆ. ಆದ್ದರಿಂದ ಚಲನವು ವಾಯುವಿನಲ್ಲಿ ಸೇರಿದ ಜಲದ ಭಾಗವಾಗಿದೆ.

ಪ್ರ ೩೨ : **ಆಕುಂಚನವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ಉ : ಆಕುಂಚನವು ವಾಯುವಿನಲ್ಲಿ ಸೇರಿದ ಪೃಥ್ವಿಯ ಭಾಗ. ಆಕುಂಚನವೆಂದರೆ ಸಂಕುಚಿತವಾಗುವುದು ಅಥವಾ ಮುದುಡಿಕೊಳ್ಳುವುದು. ಚಳಿಯಾದಾಗ ನಾವು ನಮ್ಮ ಕೈ ಕಾಲುಗಳನ್ನು ಮುದುರಿಕೊಳ್ಳುತ್ತೇವೆ. ಇದು ಆಕುಂಚನಕ್ಕೆ ಸೇರಿದ್ದು. ಪೃಥ್ವಿಯೂ ಸಹ ಸಂಕುಚಿತವಾಗಿದೆ. ಹೇಗೆಂದರೆ ಮಣ್ಣನ್ನು ಸ್ವಲ್ಪ ನೀರಿನಿಂದ ಕಲಸಿದರೆ ಅದರ ಅಣುಗಳು ಪರಸ್ಪರ

ಸೇರಿಕೊಂಡು ಚಿಕ್ಕದಾಗುತ್ತವೆ. ಆದುದರಿಂದ ಆಕುಂಚನವು ವಾಯುವಿನಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ.

ಪ್ರ ೩೩ : **ನಿದ್ರೆಯು ಯಾವುದರಲ್ಲಿ ಸೇರಿದ ಯಾವ ಭಾಗ ? ಕಾರಣವೇನು ?**

ಉ : ನಿದ್ರೆಯು ಅಗ್ನಿಯಲ್ಲಿ ಸೇರಿದ ಆಕಾಶದ ಭಾಗವಾಗಿದೆ. ಏಕೆಂದರೆ ನಿದ್ರೆ ಬಂದರೆ ಬುದ್ಧಿ ಶೂನ್ಯವಾಗಿ, ದೇಹವೂ ನಿಷ್ಕ್ರಿಯವಾಗುತ್ತದೆ. 'ಆಕಾಶಂ ಗಗನಂ ಶೂನ್ಯಂ' – ಆಕಾಶವು ಶೂನ್ಯ ಸ್ವಭಾವ ಉಳ್ಳದ್ದು. ಆದ್ದರಿಂದ ನಿದ್ರೆಯು ಅಗ್ನಿಯಲ್ಲಿ ಸೇರಿದ ಆಕಾಶದ ಭಾಗ.

ಪ್ರ ೩೪ : **ತೃಷೆಯು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ತೃಷೆಯು ಅಗ್ನಿಯಲ್ಲಿ ಸೇರಿದ ವಾಯುವಿನ ಭಾಗ. ತೃಷೆ ಅಂದರೆ ಬಾಯಾರಿಕೆ ಉಂಟಾದಾಗ ಗಂಟಲು ಒಣಗುತ್ತದೆ. ವಾಯುವಿನಲ್ಲೂ ಸಹ ಈ ಒಣಗಿಸುವ ಸ್ವಭಾವವಿರುವುದರಿಂದ ತೃಷೆಯು ಅಗ್ನಿಯಲ್ಲಿ ಸೇರಿದ ವಾಯುವಿನ ಭಾಗವಾಗಿದೆ.

ಪ್ರ ೩೫ : **ಕ್ಷುಧೆಯು ಯಾವುದರ ಯಾವ ಭಾಗ ? ಕಾರಣವೇನು ?**

ಉ : ಕ್ಷುಧೆಯು ಅಗ್ನಿಯ ಮುಖ್ಯ ಭಾಗವಾಗಿದೆ. 'ಕ್ಷುಧೆ' ಎಂದರೆ ಹಸಿವು. ತುಂಬಾ ಹಸಿವುಂಟಾದವನಿಗೆ ಯಾವ ಪದಾರ್ಥ ಬಡಿಸಿದರೂ, ಅದು ಹೇಗಿದ್ದರೂ ತಿಂದುಬಿಡುತ್ತಾನೆ. ಅಗ್ನಿಯೂ ಸಹ ತನ್ನೊಳಗೆ ಏನನ್ನು ಹಾಕಿದರೂ ಸುಟ್ಟು ಭಸ್ಮಮಾಡಿಬಿಡುತ್ತದೆ. ಆದುದರಿಂದ ಕ್ಷುಧೆಯು ಅಗ್ನಿಯ ಮುಖ್ಯ ಭಾಗ.

ಪ್ರ ೩೬ : **ಕಾಂತಿಯು ಯಾವುದರಲ್ಲಿ ಸೇರಿದ ಯಾವ ಭಾಗ ? ಕಾರಣವೇನು ?**

ಉ : ಕಾಂತಿಯು ಅಗ್ನಿಯಲ್ಲಿ ಸೇರಿದ ಜಲದ ಭಾಗವಾಗಿದೆ. ಕಾಂತಿ ಎಂದರೆ ಕಳೆ ಅಥವಾ ತೇಜಸ್ಸು. ಬಿಸಿಲಿನಲ್ಲಿ ಸುತ್ತಾಡಿ ಬಂದರೆ ಮುಖದ ತೇಜವು ಕಡಿಮೆಯಾಗುತ್ತದೆ. ಇದರಂತೆ ನೀರನ್ನು ಕಾಯಿಸಿದರೆ ಅಂದರೆ ಅದಕ್ಕೆ ಅಗ್ನಿಯ ಸ್ಪರ್ಶವಾದರೆ ಅದು ಇಂಗಿಹೋಗುತ್ತದೆ. ಆದುದರಿಂದ ಕಾಂತಿಯು ಅಗ್ನಿಯಲ್ಲಿ ಸೇರಿದ ಜಲದ ಭಾಗ.

ಪ್ರ ೩೭ : **ಆಲಸ್ಯವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ಉ : ಆಲಸ್ಯವು ಅಗ್ನಿಯಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ. ಆಲಸ್ಯ ಉಂಟಾದಾಗ ಬುದ್ಧಿ, ದೇಹಗಳೆಲ್ಲವೂ ಜಡವಾಗಿಬಿಡುತ್ತವೆ. ಪೃಥ್ವಿಯೂ ಜಡವಾಗಿದೆ. ಆದುದರಿಂದ ಆಲಸ್ಯವು ಅಗ್ನಿಯಲ್ಲಿ ಸೇರಿದ ಪೃಥ್ವಿಯ ಭಾಗ.

ಪ್ರ ೩೮ : **ಲಾಲಾರಸವು ಹೇಗುಂಟಾಯಿತು ? ಕಾರಣವೇನು ?**

ಉ : ಲಾಲಾರಸ ಅಥವಾ ಶ್ಲೇಷ್ಮವು ಜಲದಲ್ಲಿ ಸೇರಿದ ಆಕಾಶದ ಭಾಗವಾಗಿದೆ. ಲಾಲಾರಸವು ಜೊಲ್ಲಿನ ರೂಪದಿಂದ ಶರೀರದಲ್ಲೆಲ್ಲಾ ವ್ಯಾಪಿಸಿದೆ. ಆಕಾಶವೂ ವ್ಯಾಪಕವಾಗಿದೆ. ಆದ್ದರಿಂದ ಲಾಲಾರಸವು ಜಲದಲ್ಲಿ ಸೇರಿದ ಆಕಾಶದ ಭಾಗವಾಗಿದೆ.

ಪ್ರ ೩೯ : **ಸ್ವೇದವು ಹೇಗಾಯಿತು ? ಕಾರಣವೇನು !**

ಉ : ಜಲಭೂತದಲ್ಲಿ ವಾಯುವು ಸೇರಿ ಸ್ವೇದ ಅಂದರೆ ಬೆವರುಂಟಾಯಿತು. ದೇಹದಿಂದ ತುಂಬಾ ಪರಿಶ್ರಮ ಮಾಡಿದಾಗ ಬೆವರುಂಟಾಗುತ್ತದೆ. ಇದರಂತೆ ಬೀಸಣಿಗೆ, ಊದುಗೊಳವೆ ಇತ್ಯಾದಿಗಳ ಸಹಾಯದಿಂದ ಪರಿಶ್ರಮ ಮಾಡಿದಾಗ ನಮಗೆ ಗಾಳಿ ಉಂಟಾಗುತ್ತದೆ. ಆದುದರಿಂದ ಸ್ವೇದವು ಜಲದಲ್ಲಿ ಸೇರಿದ ವಾಯುವಿನ ಭಾಗವೆನ್ನಬಹುದು.

ಪ್ರ ೪೦ : **ಮೂತ್ರವು ಹೇಗೆ ಆಯಿತು ? ಕಾರಣವೇನು ?**

ಉ : ಮೂತ್ರವು ಜಲಭೂತದಲ್ಲಿ ಅಗ್ನಿಯ ಅಮುಖ್ಯ ಭಾಗವು ಸೇರಿ ಉಂಟಾಯಿತು. ಮೂತ್ರವು ಬಿಸಿಯಾಗಿರುತ್ತದೆ. ಅಗ್ನಿಯೂ ಬಿಸಿಯಾಗಿರುತ್ತದೆ. ಆದ್ದರಿಂದ ಮೂತ್ರವು ಜಲಭೂತದಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ.

ಪ್ರ ೪೧ : **ಶುಕ್ಲವು ಯಾವುದರ ಯಾವ ಭಾಗ ? ಕಾರಣವೇನು ?**

ಉ : ಶುಕ್ಲವು ಜಲಭೂತದ ಮುಖ್ಯ ಭಾಗವಾಗಿದೆ. ಶುಕ್ಲವು ಶ್ವೇತ ಬಣ್ಣ ಉಳ್ಳದ್ದಾಗಿದೆ. ಜಲವೂ ಬಿಳುಪಾಗಿರುತ್ತದೆ. ಶುಕ್ಲ ಅಥವಾ ವೀರ್ಯದಲ್ಲಿ ಗರ್ಭವನ್ನು ಹುಟ್ಟಿಸುವ ಶಕ್ತಿ ಇರುತ್ತದೆ. ಜಲದಲ್ಲೂ ಸಹ ಭೂಮಿಯಲ್ಲಿ ಬಿತ್ತಿರುವ ಬೀಜಗಳನ್ನು ವೃಕ್ಷಗಳನ್ನಾಗಿ ಮಾಡುವ ಶಕ್ತಿ ಇದೆ. ಆದ್ದರಿಂದ ಶುಕ್ಲವು ಜಲತತ್ವದ ಮುಖ್ಯ ಭಾಗವಾಗಿದೆ.

ಪ್ರ ೪೨ : **ಶೋಣಿತವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ಉ : ಶೋಣಿತವು ಜಲದಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ. ಶೋಣಿತವು ಅಂದರೆ ರಕ್ತವು ಕೆಂಪಗಿರುತ್ತದೆ. ಭೂಮಿಯೂ ಹಲವು ಕಡೆ ಕೆಂಪಗಿರುತ್ತದೆ. ಮತ್ತು ಸ್ವಲ್ಪ ಮಣ್ಣನ್ನು ನೀರಿನಲ್ಲಿ ಹಾಕಿ ಕಲಸಿದರೆ ಅದು ಕೆಂಪಗಾಗುತ್ತದೆ. ಆದುದರಿಂದ ಶೋಣಿತವು ಜಲಭೂತದಲ್ಲಿ ಸೇರಿದ ಪೃಥ್ವಿಯ ಭಾಗವಾಗಿದೆ.

ಪ್ರ ೪೩ : **ರೋಮವು ಯಾವುದರಲ್ಲಿ ಸೇರಿದ ಯಾವುದರ ಭಾಗ ? ಕಾರಣವೇನು ?**

ಉ : ರೋಮವು ಪೃಥ್ವಿಯಲ್ಲಿ ಸೇರಿದ ಆಕಾಶದ ಭಾಗವಾಗಿದೆ. ರೋಮವೆಂದರೆ ಕೂದಲು. ಇದನ್ನು ಕತ್ತರಿಸುವಾಗ ನಮಗೆ ನೋವಾಗುವುದಿಲ್ಲ, ಅಂದರೆ ಇದರಲ್ಲಿ ಶೂನ್ಯ ಗುಣವಿದೆ. ಆಕಾಶವೂ ಸಹ ಶೂನ್ಯವಾಗಿರುವುದರಿಂದ ರೋಮವು ಪೃಥ್ವಿಯಲ್ಲಿ ಸೇರಿದ ಆಕಾಶದ ಭಾಗ.

ಪ್ರ ೪೪ : **ಚರ್ಮ ಹೇಗಾಯಿತು ? ಕಾರಣವೇನು ?**

ಉ : ಪೃಥ್ವಿಯ ಮುಖ್ಯ ಭಾಗಕ್ಕೆ ವಾಯುವಿನ ಅಮುಖ್ಯ ಭಾಗವು ಸೇರುವುದರಿಂದ 'ತ್ವಚ' ಅಥವಾ ಚರ್ಮವಾಗಿದೆ. ಜ್ವರವನ್ನು ಉಷ್ಣಮಾಪಕ ಯಂತ್ರವು ಅಳೆಯುವಂತೆ ಈ ತ್ವಚೆಯು ಶೀತ, ಉಷ್ಣ, ಮೃದು, ಕಠಿಣ ಮೊದಲಾದವುಗಳನ್ನು ತಿಳಿದುಕೊಳ್ಳುತ್ತದೆ. ವಾಯುವೂ ಸಹ ಸ್ಪರ್ಶ ಗುಣ ಉಳ್ಳದ್ದು. ಆದುದರಿಂದ ತ್ವಚೆಯು ಪೃಥ್ವಿಯಲ್ಲಿ ಸೇರಿದ ವಾಯುವಿನ ಭಾಗವಾಗಿದೆ.

ಪ್ರ ೪೫ : **ನಾಡಿಯು ಹೇಗುಂಟಾಯಿತು ? ಕಾರಣವೇನು ?**

ಉ : ನಾಡಿಯು ಪೃಥ್ವಿಯಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ. ನಾಡಿಯು ಉಷ್ಣದ ಪ್ರಮಾಣವನ್ನು ತಿಳಿಸುತ್ತದೆ. ಅಗ್ನಿಯೂ ಸಹ ಉಷ್ಣತ್ವದಿಂದ ಕೂಡಿದೆ. ಈ ಗುಣವು ನಾಡಿಯಲ್ಲಿ ತೋರುವುದರಿಂದ ನಾಡಿಯು ಪೃಥ್ವಿಯಲ್ಲಿ ಸೇರಿದ ಅಗ್ನಿಯ ಭಾಗವಾಗಿದೆ.

ಪ್ರ ೪೬ : **ಮಾಂಸವು ಹೇಗಾಯಿತು ? ಕಾರಣವೇನು ?**

ಪೃಥ್ವೀ ಭೂತದಲ್ಲಿ ಜಲಭೂತವು ಸೇರಿ ಮಾಂಸವಾಗಿದೆ. ಮಾಂಸವು

ಸದಾ ಹಸಿ ಅಥವಾ ತೇವವಾಗಿರುತ್ತದೆ. ಜಲವೂ ಸಹ ತೇವ ಗುಣ ಉಳ್ಳದ್ದು. ಆದ್ದರಿಂದ ಮಾಂಸವು ಪೃಥ್ವೀ ಭೂತದಲ್ಲಿ ಸೇರಿದ ಜಲದ ಭಾಗವಾಗಿದೆ.

ಪ್ರ ೪೭ : **ಅಸ್ಥಿಯು ಯಾವುದರ ಯಾವ ಭಾಗ ? ಕಾರಣವೇನು?**

ಉ : ಅಸ್ಥಿಯು ಪೃಥ್ವೀಭೂತದ ಮುಖ್ಯ ಭಾಗವಾಗಿದೆ. ಅಸ್ಥಿ ಅಂದರೆ ಮೂಳೆಯು ಅತಿ ಕಠಿಣವಾಗಿರುತ್ತದೆ. ಪೃಥ್ವಿಯೂ ಸಹ ಗಟ್ಟಿಯಾಗಿರುತ್ತದೆ. ಈ ಗುಣವು ಅಸ್ಥಿಯಲ್ಲಿ ತೋರಿಬರುವುದರಿಂದ ಇದು ಪೃಥ್ವಿಯ ಮುಖ್ಯ ಭಾಗವಾಗಿದೆ.

ಪ್ರ ೪೮ : **ಮೇಲೆ ಹೇಳಿದ ಇಪ್ಪತ್ತೈದು ತತ್ವಗಳನ್ನು ತಿಳಿದುಕೊಳ್ಳುವುದರಿಂದ ಉಂಟಾಗುವ ಜ್ಞಾನದ ಸ್ವರೂಪವೇನು ?**

ಉ : ಇದುವರೆಗೆ ವಿವರಿಸಿದ ಇಪ್ಪತ್ತೈದು ತತ್ವಗಳು ನಾನಲ್ಲ. ಅವು ನನ್ನವೂ ಅಲ್ಲ. ಇವು ಪಂಚಭೂತಗಳಿಗೆ ಸೇರಿದ್ದು, ನಾನು ಇವುಗಳನ್ನು ನೋಡುವ 'ಸಾಕ್ಷಿ' ಎಂಬ ತಿಳುವಳಿಕೆಯೇ ಜ್ಞಾನದ ಸ್ವರೂಪ.

ಪ್ರ ೪೯ : **ಇದಕ್ಕೆ ಪ್ರಮಾಣವೇನು ?**

ಉ : "ಘಟದ್ರಷ್ಟಾ ಘಟಾದ್ಭಿನ್ನಃ ಸರ್ವಥಾನಘಟೋ ಯಥಾ ।
ದೇಹದ್ರಷ್ಟಾ ತಥಾದೇಹೋ ನಾಹಮಿತ್ಯವಧಾರಯೇತ್ ॥

ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುತ್ತಾನಲ್ಲದೆ ಅವನು ಎಂದಿಗೂ ಹೇಗೆ ಘಟವಾಗಲಾರನೋ, ಅದರಂತೆ ದೇಹವನ್ನು ಇದಿರಿಟ್ಟು ನೋಡುವ ನಾನು ಎಂದಿಗೂ ದೇಹವಾಗುವುದಿಲ್ಲವೆಂಬುದೇ ಜ್ಞಾನದ ಸ್ವರೂಪಕ್ಕೆ ಪ್ರಮಾಣ.

ಪ್ರ ೫೦ : **ಹೀಗೆ ತಿಳಿಯುವುದರಿಂದಾಗುವ ಲಾಭವೇನು ?**

**ಉ :** ಈ ಇಪ್ಪತ್ತೈದು ತತ್ವಗಳಿಂದ ಕೂಡಿದ ದೇಹವು ನಾನಲ್ಲ. ಏಕೆಂದರೆ ಇದು ದೃಶ್ಯವಾಗಿದೆ. ನಾನು ದ್ರಷ್ಟನಾದ ಆತ್ಮನಾಗಿದ್ದೇನೆ. ಹೀಗೆ ತಿಳಿಯುವುದರಿಂದ ದೇಹದಲ್ಲಿದ್ದ 'ಅಹಂ ಬುದ್ಧಿಯು' ಹೋಗುತ್ತದೆ. ಇನ್ನು ಈ ದೇಹವು ನನ್ನದೂ ಅಲ್ಲ. ಏಕೆಂದರೆ ಇದು ಪಂಚೀಕೃತ ಪಂಚಭೂತಾತ್ಮಕವಾದದ್ದು. ಹೀಗೆ ತಿಳಿಯುವುದರಿಂದ ದೇಹದಲ್ಲಿದ್ದ 'ಮಮತಾಬುದ್ಧಿಯೂ' ಹೋಗುತ್ತದೆ. ಹೀಗೆ ದೇಹದಲ್ಲಿದ್ದ ಅಹಂಕಾರ ಮಮಕಾರಗಳು ಹೋಗುವುದೇ ಪರಮ ಲಾಭವಾಗಿದೆ.

ಪ್ರ ೫೧ : **ಆಕಾಶ ಭೂತದ ಪಂಚತತ್ವಗಳಲ್ಲಿ ಉದಾಹರಣೆಗಾಗಿ ಒಂದನ್ನು ವಿವರಿಸಿ.**

ಉ : ಶೋಕವು ಆಕಾಶಭೂತದ ಮುಖ್ಯ ಭಾಗವಾಗಿದೆ. ಶೋಕ ಉಂಟಾದರೂ ನಾನು ಅದನ್ನು ತಿಳಿದುಕೊಳ್ಳುತ್ತೇನೆ. ಉಂಟಾಗದಿದ್ದರೂ ನಾನು ಅದನ್ನು ಅರಿಯುತ್ತೇನೆ. ಹೀಗೆ ಶೋಕದ ಭಾವಾಭಾವಗಳನ್ನು ಅರಿಯುವ ನಾನು ಶೋಕಕ್ಕಿಂತ ಬೇರೆಯಾಗಿರುವುದರಿಂದ ಶೋಕವು ನಾನಲ್ಲ. ಮತ್ತು ಇದು ಆಕಾಶದ ಮುಖ್ಯ ಭಾಗವಾದುದರಿಂದ ನನ್ನದೂ ಅಲ್ಲ. ಇದರಂತೆ ಎಲ್ಲವನ್ನೂ ತಿಳಿಯಬೇಕು.

ಪ್ರ ೫೨ : **ಈ ವಿವೇಕಕ್ಕೆ ಸಾರಾಂಶವೇನು ?**

ಉ : ಈ ಇಪ್ಪತ್ತೈದು ತತ್ವಗಳನ್ನು ವಿಚಾರ ಮಾಡುವುದಕ್ಕೆ ಮೊದಲು ಈ ಸ್ಥೂಲ ದೇಹವೇ ನಾನು, ನನ್ನದೆಂದು ತಪ್ಪು ತಿಳಿದುಕೊಂಡಿದ್ದೆವು. ಈಗ ವಿಚಾರ ಮಾಡಿದ ಮೇಲೆ, ನಾನು ಈ ಸ್ಥೂಲ ದೇಹವನ್ನು ನೋಡುವವನಾದ್ದರಿಂದ ಇದು ನಾನಲ್ಲ, ಮತ್ತು ಪಂಚಭೂತಗಳಿಗೆ ಸೇರಿದ ವಸ್ತುವಾದ್ದರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನಾದ ಸಾಕ್ಷಿಯಾಗಿದ್ದೇನೆಂದು ಸರಿಯಾದ ತಿಳುವಳಿಕೆ ಉಂಟಾಗುವುದೇ ಈ ವಿವೇಕಕ್ಕೆ ಸಾರಾಂಶ.

ಪ್ರ ೫೩ : **ಆಗ ಉಂಟಾಗುವ ಮಾನಸಿಕ ಸ್ಥಿತಿ ಏನು ?**

ಉ : ಮೊದಲು ಮನಸ್ಸಿನಲ್ಲಿ ದೇಹ ನಾನು, ನನ್ನದು ಎಂಬ ಭಾವನೆ ಇತ್ತು. ಈಗ ಅದು ಹೋಗಿ, ದೇಹವನ್ನು ನೋಡುವ ದ್ರಷ್ಟನಾದ ಆತ್ಮನೇ ನಾನೆಂಬ ಭಾವನೆ ಮನಸ್ಸಿನಲ್ಲಿ ಉಂಟಾಗಿ, ದೇಹಾಭಿಮಾನ ಹೋಗಿ ಅದರಲ್ಲಿದ್ದ ಆಸಕ್ತಿಯು ಕಡಿಮೆಯಾಗಿ, ವೈರಾಗ್ಯ ಉಂಟಾಗುತ್ತದೆ.

ಪ್ರ ೫೪ : **ಸ್ಥೂಲ ದೇಹದ ಧರ್ಮಗಳೆಷ್ಟು? ಅವು ಯಾವುವು ?**

ಉ : ಸ್ಥೂಲ ದೇಹದ ಧರ್ಮಗಳು ಏಳು. ಅವು ಯಾವುವೆಂದರೆ –

೧. ನಾಮ, ೨. ಜಾತಿ, ೩. ಆಶ್ರಮ, ೪. ವರ್ಣ, ೫. ಸಂಬಂಧ, ೬ ಪರಿಮಾಣ, ೭. ಜನನ–ಮರಣ.

ಪ್ರ ೫೫ : **ನಾಮದ ವಿಚಾರವೇನು ? ಅದರ ಅಧ್ಯಾಸವನ್ನು ಬಿಡುವುದು ಹೇಗೆ ?**

ಉ : 'ನಾಮ'ವೆಂದರೆ ಹೆಸರು. ಇದು ಹುಟ್ಟುವುದಕ್ಕೆ ಮೊದಲೂ, ಹುಟ್ಟಿದ ಮೇಲೆ ಕೆಲವು ದಿವಸಗಳವರೆಗೂ ಇರಲಿಲ್ಲ. ನಂತರ ವ್ಯವಹಾರ ಕ್ಕೋಸ್ಕರ ಯಾವುದಾದರೂ ಹೆಸರನ್ನು ಇಡುತ್ತಾರೆ. ಈ ನಾಮದ ಅಧ್ಯಾಸ ವನ್ನು ಬಿಡಬೇಕಾದರೆ ವಿಚಾರ ಮಾಡಬೇಕು. ಈ ನಾಮವು ನಮ್ಮ ದೇಹ ದಲ್ಲಿ ಯಾವ ಭಾಗಕ್ಕೆ ಸೇರಿದ್ದೆಂದು ಹುಡುಕಲು ಹೊರಟರೆ, ಎಲ್ಲಾ ಭಾಗಕ್ಕೂ ಒಂದೊಂದು ಹೆಸರಿರುವುದರಿಂದ, ನಾಮವು ನುಡಿ ಮಾತ್ರ ವಾಗಿದೆ. 'ವಾಚಾರಂಭಣ'ವಾಗಿದೆ. ಈ ನಾಮವು ಕೇವಲ ಸ್ಥೂಲ ದೇಹಕ್ಕೆ ಸಂಬಂಧಿಸಿರುವುದೇ ಹೊರತು ಸೂಕ್ಷ್ಮ ದೇಹಕ್ಕೆ ಸಂಬಂಧವೇ ಇಲ್ಲ. ಇನ್ನು ಆತ್ಮನಿಗೆ ಇದರ ಸೋಂಕೂ ಇಲ್ಲವೆಂಬುದನ್ನು ಹೇಳಬೇಕಾಗಿಲ್ಲ. ಇದು ನಮಗೆ ಸುಷುಪ್ತಿಯಲ್ಲಿ ಅನುಭವಕ್ಕೆ ಬರುತ್ತದೆ. ಈ ರೀತಿ ವಿಚಾರ ಮಾಡಿ ನಾಮದ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕು.

**ಪ್ರ ೫೬ : ಜಾತಿಯ ವಿಚಾರವೇನು? ಅದರ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಮೊದಲಾದ ಜಾತಿಗಳು ವ್ಯವಹಾರಕ್ಕೋಸ್ಕರ ಸ್ಥೂಲ ದೇಹದಲ್ಲಿ ಕಲ್ಪಿಸಲ್ಪಟ್ಟಿವೆ. ಈ ಜಾತಿಗಳೂ ಸಹ ಸ್ಥೂಲ ದೇಹದಲ್ಲಿ ಯಾವ ಭಾಗದಲ್ಲಿ ಹುಡುಕಿದರೂ ಸಿಗುವುದಿಲ್ಲ. ಸೂಕ್ಷ್ಮ ದೇಹಕ್ಕೆ ಯಾವ ಜಾತಿಯೂ ಇಲ್ಲವೆಂಬುದು ಸುಷುಪ್ತಿಯಲ್ಲಿ ಅನುಭವಕ್ಕೆ ಬರುತ್ತದೆ. ಜಾತಿಯನ್ನು ತಿಳಿಯುವ ನಾನು ಜಾತಿಗಿಂತ ಬೇರೆಯಾಗಿದ್ದೇನೆ. ಈ ರೀತಿ ವಿಚಾರ ಮಾಡಿ ಜಾತಿಯ ಅಧ್ಯಾಸವನ್ನು ಬಿಡಬೇಕು.

**ಪ್ರ ೫೭ : ಆಶ್ರಮದ ವಿಚಾರವೇನು ? ಅದರ ಅಧ್ಯಾಸವನ್ನು ಬಿಡುವುದು ಹೇಗೆ ?**

ಉ : ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಿ ಎಂಬ ನಾಲ್ಕು ವಿಧದ ಆಶ್ರಮಗಳು ಸ್ಥೂಲ ದೇಹದಲ್ಲಿ ಆಯಾ ಕಾಲ ಕರ್ಮಕ್ಕನು ಸಾರವಾಗಿ ಕಲ್ಪಿಸಲ್ಪಟ್ಟಿವೆ. ಸೂಕ್ಷ್ಮ ದೇಹ ಹಾಗೂ ಆತ್ಮನಿಗೆ ಈ ಆಶ್ರಮಗಳ ಸಂಬಂಧವಿಲ್ಲ. ಇದು ನಮಗೆ ಸುಷುಪ್ತಿಯಲ್ಲಿ ಅನುಭವಕ್ಕೆ ಬರುತ್ತದೆ. ಅಲ್ಲದೆ ಸ್ಥೂಲ ದೇಹವೇ ನಾವಲ್ಲವಾದುದರಿಂದ ಅದರ ಧರ್ಮವಾದ

ಆಶ್ರಮವೂ ನಮಗಿಲ್ಲ. ಹೀಗೆ ತಿಳಿದು ನಾವು ಆಶ್ರಮದ ಅಧ್ಯಾಸವನ್ನು ಬಿಡಬೇಕು.

ಪ್ರ ೫೮ : **ವರ್ಣದ ವಿಚಾರವೇನು ? ವರ್ಣದ ಅಧ್ಯಾಸವನ್ನು ಬಿಡುವುದು ಹೇಗೆ ?**

ಉ : ವರ್ಣವೆಂದರೆ ಬಣ್ಣ. ಕೆಂಪು, ಕಪ್ಪು, ಬಿಳುಪು, ಮಿಶ್ರವರ್ಣ ಇತ್ಯಾದಿ ಬಣ್ಣಗಳು ಸ್ಥೂಲ ದೇಹದಲ್ಲಿ ಪ್ರತ್ಯಕ್ಷವಾಗಿ ಕಂಡುಬರುತ್ತವೆ. ಈ ಬಣ್ಣಗಳು ಜನರಿಗೆ ಬಹಳ ಅಭಿಮಾನ – ವಿಕ್ಷೇಪಗಳಿಗೆ ಕಾರಣವಾಗಿವೆ. ಆದರೆ ವಿಚಾರ ಮಾಡಿದರೆ ಇದು ಸ್ಥೂಲ ದೇಹಕ್ಕೆ ಮಾತ್ರ ಸಂಬಂಧಪಟ್ಟಿರುವುದೇ ಹೊರತು ಸೂಕ್ಷ್ಮ ದೇಹಕ್ಕೂ ಇಲ್ಲ, ಆತ್ಮನಿಗೂ ಇಲ್ಲ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಸ್ಥೂಲ ದೇಹದ ಧರ್ಮವಾದ ಈ ವರ್ಣವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ. ಹೀಗೆ ತಿಳಿದು ವರ್ಣದ ಅಧ್ಯಾಸವನ್ನು ಬಿಡಬೇಕು.

ಪ್ರ ೫೯ : **ಸಂಬಂಧದ ವಿಚಾರವೇನು ? ಇದರ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪ್ರಪಂಚದಲ್ಲಿ ಅನೇಕ ವಿಧವಾದ ಸಂಬಂಧಗಳಿವೆ. ಮುಖ್ಯವಾಗಿ ಗುರು–ಶಿಷ್ಯ, ಪಿತಾ–ಪುತ್ರ, ಸ್ತ್ರೀ–ಪುರುಷ, ಸ್ವಾಮಿ–ಸೇವಕ ಇತ್ಯಾದಿ ಸಂಬಂಧಗಳಿವೆ. ಅದೂ ಅಲ್ಲದೆ ಧನ ಉಳ್ಳವನು ಧನವಂತನೆಂದೂ, ವಿದ್ಯೆ ಉಳ್ಳವನು ವಿದ್ಯಾವಂತನೆಂದೂ ಮೊದಲಾದ ಸಂಬಂಧಗಳಿವೆ. ಆದರೆ ಇದೂ ಸಹ ಸ್ಥೂಲ ದೇಹಕ್ಕೆ ಸಂಬಂಧಿಸಿದ್ದೇ ವಿನಹ ಆತ್ಮನಿಗೆ ಸಂಬಂಧವಿಲ್ಲ ಈ ರೀತಿ ಆತ್ಮನಾದ ತನಗೆ ಸುಷುಪ್ತಿಯಲ್ಲಿ ಯಾವ ಸಂಬಂಧವೂ ಇಲ್ಲವೆಂಬುದು ಅನುಭವಕ್ಕೆ ಬರುತ್ತದೆ. ಈ ರೀತಿ ತಿಳಿದು ಸಂಬಂಧದ ಅಧ್ಯಾಸವನ್ನು ಬಿಡಬೇಕು.

ಪ್ರ ೬೦ : **ಪರಿಮಾಣದ ವಿಚಾರವೇನು ? ಅದರ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪರಿಮಾಣವೆಂದರೆ ಅಳತೆ. ಉದ್ದ, ಗಿಡ್ಡ, ದಪ್ಪ, ಸಣ್ಣ, ಡೊಂಕು, ನೆಟ್ಟಗೆ ಇತ್ಯಾದಿಗಳು ಸ್ಥೂಲ ದೇಹದಲ್ಲಿ ತೋರಿ ಬರುತ್ತವೆ. ಈ ಪರಿಮಾಣವೂ ಸಹ ಜನಗಳಿಗೆ ವಿಕ್ಷೇಪಕ್ಕೆ ಕಾರಣವಾಗಿದೆ. ಹೇಗೆಂದರೆ –

ಆಶ್ರಮವೂ ನಮಗಿಲ್ಲ. ಹೀಗೆ ತಿಳಿದು ನಾವು ಆಶ್ರಮದ ಅಧ್ಯಾಸವನ್ನು ಬಿಡಬೇಕು.

ಪ್ರ : ೫೮. **ವರ್ಣದ ವಿಚಾರವೇನು ? ವರ್ಣದ ಅಧ್ಯಾಸವನ್ನು ಬಿಡುವುದು ಹೇಗೆ ?**

ಉ : ವರ್ಣವೆಂದರೆ ಬಣ್ಣ. ಕೆಂಪು, ಕಪ್ಪು, ಬಿಳುಪು, ಮಿಶ್ರವರ್ಣ ಇತ್ಯಾದಿ ಬಣ್ಣಗಳು ಸ್ಥೂಲ ದೇಹದಲ್ಲಿ ಪ್ರತ್ಯಕ್ಷವಾಗಿ ಕಂಡುಬರುತ್ತವೆ. ಈ ಬಣ್ಣಗಳು ಜನರಿಗೆ ಬಹಳ ಅಭಿಮಾನ–ವಿಕ್ಷೇಪಗಳಿಗೆ ಕಾರಣವಾಗಿವೆ. ಆದರೆ ವಿಚಾರ ಮಾಡಿದರೆ ಇದು ಸ್ಥೂಲ ದೇಹಕ್ಕೆ ಮಾತ್ರ ಸಂಬಂಧಪಟ್ಟಿರುವುದೇ ಹೊರತು ಸೂಕ್ಷ್ಮದೇಹಕ್ಕೂ ಇಲ್ಲ, ಆತ್ಮನಿಗೂ ಇಲ್ಲ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಸ್ಥೂಲ ದೇಹದ ಧರ್ಮವಾದ ಈ ವರ್ಣವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ. ಹೀಗೆ ತಿಳಿದು ವರ್ಣದ ಅಧ್ಯಾಸವನ್ನು ಬಿಡಬೇಕು.

ಪ್ರ ೫೯ : **ಸಂಬಂಧದ ವಿಚಾರವೇನು ? ಇದರ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪ್ರಪಂಚದಲ್ಲಿ ಅನೇಕ ವಿಧವಾದ ಸಂಬಂಧಗಳಿವೆ. ಮುಖ್ಯವಾಗಿ ಗುರು–ಶಿಷ್ಯ, ಪಿತ–ಪುತ್ರ, ಸ್ತ್ರೀ–ಪುರುಷ, ಸ್ವಾಮಿ–ಸೇವಕ ಇತ್ಯಾದಿ ಸಂಬಂಧಗಳಿವೆ. ಅದೂ ಅಲ್ಲದೆ ಧನ ಉಳ್ಳವನು ಧನವಂತನೆಂದೂ, ವಿದ್ಯೆ ಉಳ್ಳವನು ವಿದ್ಯಾವಂತನೆಂದೂ ಮೊದಲಾದ ಸಂಬಂಧಗಳಿವೆ. ಆದರೆ ಇದೂ ಸಹ ಸ್ಥೂಲ ದೇಹಕ್ಕೆ ಸಂಬಂಧಿಸಿದ್ದೇ ವಿನಹ ಆತ್ಮನಿಗೆ ಸಂಬಂಧವಿಲ್ಲ. ಈ ರೀತಿ ಆತ್ಮನಾದ ತನಗೆ ಸುಷುಪ್ತಿಯಲ್ಲಿ ಯಾವ ಸಂಬಂಧವೂ ಇಲ್ಲವೆಂಬುದು ಅನುಭವಕ್ಕೆ ಬರುತ್ತದೆ. ಈ ರೀತಿ ತಿಳಿದು ಸಂಬಂಧದ ಅಧ್ಯಾಸವನ್ನು ಬಿಡಬೇಕು.

ಪ್ರ ೬೦ : **ಪರಿಮಾಣದ ವಿಚಾರವೇನು ? ಅದರ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪರಿಮಾಣವೆಂದರೆ ಅಳತೆ. ಉದ್ದ, ಗಿಡ್ಡ, ದಪ್ಪ, ಸಣ್ಣ, ಡೊಂಕು, ನೆಟ್ಟಗೆ ಇತ್ಯಾದಿಗಳು ಸ್ಥೂಲ ದೇಹದಲ್ಲಿ ತೋರಿಬರುತ್ತವೆ. ಈ ಪರಿಮಾಣವೂ ಸಹ ಜನಗಳಿಗೆ ವಿಕ್ಷೇಪಕ್ಕೆ ಕಾರಣವಾಗಿದೆ. ಹೇಗೆಂದರೆ—

ಬಹಳ ಉದ್ದವಾಗಿರುವವರು ಸ್ವಲ್ಪ ಕುಳ್ಳಾಗಿರಬೇಕಾಗಿತ್ತೆಂತಲೂ, ಬಹಳ ಗಿಡ್ಡನಾಗಿರುವವರು ಸ್ವಲ್ಪ ಉದ್ದವಾಗಿರಬೇಕಾಗಿತ್ತೆಂತಲೂ, ದಪ್ಪವಾಗಿರುವವರು ಸಣ್ಣಗಾಗಬೇಕೆಂತಲೂ, ಸಣ್ಣಗಿರುವವರು ದಪ್ಪವಾಗಬೇಕೆಂತಲೂ ಮೊದಲಾಗಿ ಬಯಸುತ್ತಾರೆ. ಆದರೆ ವಿಚಾರ ಮಾಡಿದರೆ ಈ ಪರಿಮಾಣವೂ ಸಹ ಸ್ಥೂಲ ದೇಹಕ್ಕೆ ಸಂಬಂಧಿಸಿದ್ದೇ ಹೊರತು ಸೂಕ್ಷ್ಮ ದೇಹಕ್ಕೆ ಯಾವ ಅಳತೆಯೂ ಇಲ್ಲ. ಆತ್ಮನಿಗಂತೂ ಇಲ್ಲವೇ ಇಲ್ಲ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಈ ಪರಿಮಾಣವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ. ಹೀಗೆಂದು ತಿಳಿದು ಪರಿಮಾಣದ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕು.

**ಪ್ರ ೬೧ : ಜನನ–ಮರಣಗಳ ವಿಚಾರವೇನು ? ಅದರ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಜನನ–ಮರಣಗಳೂ ಸಹ ಸ್ಥೂಲ ದೇಹಕ್ಕೆ ಸಂಬಂಧಿಸಿದ್ದೇ ಹೊರತು ಸೂಕ್ಷ್ಮ ದೇಹಕ್ಕೂ ಇಲ್ಲ, ಆತ್ಮನಿಗೂ ಇಲ್ಲ. ಜಗತ್ತು ಸೃಷ್ಟಿಯಾದಾಗ ಬಂದ ಸೂಕ್ಷ್ಮದೇಹವು ಜ್ಞಾನವಾಗುವ ಪರ್ಯಂತರವಿರುತ್ತದೆ. ಆದರೆ ಈ ಸ್ಥೂಲ ದೇಹವು ಜಾಯತೆ, ಅಸ್ತಿ, ವರ್ಧತೆ, ವಿಪರಿಣಮತೆ, ಅಪಕ್ಷೀಯತೆ ಮತ್ತು ನಶ್ಯತಿ ಎಂಬ ಆರು ವಿಕಾರಗಳಿಂದ ಕೂಡಿದೆ. ಈ ಆರು ವಿಕಾರಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ. ಈ ರೀತಿ ವಿಚಾರ ಮಾಡಿ ಜನನ–ಮರಣಗಳು ನನಗಿಲ್ಲವೆಂಬುದಾಗಿ ಅದರ ಅಧ್ಯಾಸವನ್ನು ಬಿಡಬೇಕು. ಇದನ್ನು ಬಿಡುವುದು ಬಹಳ ಕಷ್ಟವಾಗಿದೆ. ಏಕೆಂದರೆ ಸಾಮಾನ್ಯವಾಗಿ ಎಲ್ಲರೂ ನಾನು ಹುಟ್ಟುತ್ತೇನೆ, ನಾನು ಸಾಯುತ್ತೇನೆ ಎಂಬುದಾಗಿ ದೃಢವಾಗಿ ತಿಳಿದಿರುತ್ತಾರೆ.

**ಪ್ರ ೬೨ : ಜನನ-ಮರಣಗಳು ಆತ್ಮನಿಗೆ ಸಂಬಂಧಿಸಿವೆ ಎಂದು ಅಂಗೀಕರಿಸಿದರೆ ಬರತಕ್ಕ ದೋಷವೇನು ?**

ಉ : ಅಪರಾಧಿಯಲ್ಲದವನ ಮೇಲೆ ಅಪರಾಧ ಹೊರಿಸಿದಂತೆ, ಜನನ ಮರಣವಿಲ್ಲದ ಆತ್ಮನ ಮೇಲೆ ಜನನ–ಮರಣಗಳನ್ನು ಆರೋಪಿಸಿದರೆ, ಆತ್ಮನೂ ಸಹ ದೇಹದಂತೆ ವಿಕಾರಿ, ಅನಿತ್ಯನೆನ್ನಬೇಕಾಗುತ್ತದೆ. ಆತ್ಮನಿಗೆ

ಜನನ–ಮರಣಗಳುಂಟೆಂದರೆ ೧) ಅಕೃತಾಭ್ಯಾಗಮ ದೋಷ, ೨) ಕೃತ ಪ್ರಣಾಶ ದೋಷವೆಂಬ ಎರಡು ವಿಧವಾದ ದೋಷಗಳು ಬರುತ್ತವೆ.

ಪ್ರ ೬೩ : **ಅಕೃತಾಭ್ಯಾಗಮ, ಕೃ ತ ಪ್ರ ಣಾ ಶ ದೋಷಗಳೆಂದ ರೇನು ?**

ಉ : ನಾವು ಮಾಡದೆ ಇದ್ದರೂ ಅದರ ಫಲವನ್ನು ಅನುಭವಿಸ ಬೇಕೆಂಬುದು ಅಕೃತಾಭ್ಯಾಗಮ ದೋಷ. ನಾವು ಮಾಡಿದ ಕರ್ಮಗಳ ಫಲವು ಭೋಗಿಸದೆ ಹಾಗೇ ನಷ್ಟವಾಯಿತೆಂಬುದು ಕೃತಪ್ರಣಾಶ ದೋಷ. 'ನಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ' ಎಂದು ಹೇಳಿರುವ ಶೃತಿವಾಕ್ಯಕ್ಕೆ ವಿರೋಧ ಬರುತ್ತದೆ. ಸ್ಥೂಲದೇಹ ಹುಟ್ಟಿದಾಗ ಆತ್ಮನೂ ಹುಟ್ಟಿದ್ದೆ, ಅದು ಸತ್ತಾಗ ಆತ್ಮನೂ ಸತ್ತನೆಂದರೆ ಅವನು ಆ ದೇಹದಲ್ಲಿ ಮಾಡಿದ ಸಮಸ್ತ ಕರ್ಮಗಳ ಫಲವನ್ನು ಆ ದೇಹದಲ್ಲೇ ಇದ್ದು ಭೋಗಿಸಿ ಮುಗಿಸಲಾಗುವುದಿಲ್ಲ. ಅಂದ ಮೇಲೆ ಪೂರ್ತಿ ಭೋಗಿಸದೇ ಆತ್ಮನೂ ಸತ್ತುಹೋಗಿ, ಮತ್ತೊಂದು ದೇಹದಲ್ಲಿ ಬೇರೊಬ್ಬ ಹೊಸ ಆತ್ಮನು ಬರುತ್ತಾನೆಂದರೆ ಏನೂ ಕರ್ಮ ಮಾಡದ ಆ ಹೊಸ ಆತ್ಮನು ಸತ್ತುಹೋದ ಆತ್ಮನು ಮಾಡಿದ ಕರ್ಮಫಲ ಭೋಗಿಸ ಬೇಕಾಗುತ್ತದೆ. ಇದು ತರ್ಕಕ್ಕೆ ಒಪ್ಪದ ವಿಷಯ. ಮತ್ತು ಕರ್ಮವಾದಿ ಗಳೂ ಸಹ ಆತ್ಮನನ್ನು ಕರ್ತಾಭೋಕ್ತನೆಂಬುದಾಗಿ ಆತ್ಮನ ಮೇಲೆ ಕರ್ತೃತ್ವ ಭೋಕ್ತೃತ್ವಗಳನ್ನು ಆರೋಪಿಸಿದರೂ, ಆತ್ಮನು ನಿತ್ಯನೆಂದು ಹೇಳುತ್ತಾರೆ. ಆದುದರಿಂದ ಆತ್ಮನಿಗೆ ಜನನ–ಮರಣಗಳಿಲ್ಲ.

ಪ್ರ ೬೪ : **ಆತ್ಮನು ಹುಟ್ಟಲು ಯಾವ ಕಾರಣವೂ ಇಲ್ಲವೆಂಬು ದಕ್ಕೆ ಯುಕ್ತಿ ಏನು ?**

ಉ : ಪ್ರಪಂಚದಲ್ಲಿ ಯಾವುದಾದರೂ ಒಂದು ವಸ್ತು ಅಥವಾ ಒಂದು ಮಗು ಹುಟ್ಟಿತೆಂದರೆ ಅದನ್ನು ಹುಟ್ಟಿಸಿದ ತಂದೆಯು ಮಗನಿಗಿಂತ ಬೇರೆ ಯಾಗಿರಬೇಕು ಮತ್ತು ಅದಕ್ಕಿಂತ ಮೊದಲಿರಬೇಕು. ಇದರಂತೆ ಆತ್ಮನು ಹುಟ್ಟಿದನೆಂದರೆ ಹುಟ್ಟಿಸಿದ ಬೇರೆ ಯಾವ ವಸ್ತುವೂ ಅವನಿಗಿಂತ ಭಿನ್ನವಾಗಿಲ್ಲ ಮತ್ತು ಮೊದಲೂ ಇಲ್ಲ. "ಸದೇವ ಸೌಮ್ಯೇದಮಗ್ರಮಾಸಿತ್" ಎಂಬು ದಾಗಿ ಎಲ್ಲಕ್ಕಿಂತ ಮೊದಲು ಸದ್ರೂಪವಾದ ಪರಬ್ರಹ್ಮ ಒಂದಿತ್ತೆಂದು ಶೃತಿ ಹೇಳಿದೆಯಲ್ಲಾ ಎಂದು ಶಂಕಿಸಿದರೆ, ಆತ್ಮನು ಪರಬ್ರಹ್ಮಕ್ಕಿಂತ ಬೇರೆಯಲ್ಲ.

"ಜೀವೋ ಬ್ರಹ್ಮೈವನಾಪರಃ" ಎಂಬುದಾಗಿ ಹೇಳಿದೆ. ಮತ್ತು ಆತ್ಮನಿಗಿಂತ ಭಿನ್ನವಾದ ವಸ್ತುಗಳೆಲ್ಲವೂ ಅನಾತ್ಮಗಳೇ. ಆದ್ದರಿಂದ ಆತ್ಮನು ಹುಟ್ಟುವುದಕ್ಕೆ ಯಾವ ಕಾರಣವೂ ಸಿಗುವುದಿಲ್ಲವಾಗಿ ಆತ್ಮನು ಜನನ-ಮರಣರಹಿತನು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಪ್ರ ೬೫ : **ಇದಕ್ಕೆ ಭಗವದ್ಗೀತೆಯಲ್ಲಿ ಪ್ರಮಾಣವಿದೆಯೇ ?**

ಉ : ಇದೆ. ಭಗವದ್ಗೀತೆಯ ಎರಡನೇ ಅಧ್ಯಾಯದ ೨೦ನೇ ಶ್ಲೋಕದಲ್ಲಿ ಭಗವಂತನು—

**''ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ । ಅಜೋನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ॥"**

ಎಂದು ಹೇಳಿದ್ದಾನೆ. ಇದರ ಅರ್ಥ : ಈ ಆತ್ಮನು ಹುಟ್ಟುವುದಿಲ್ಲ; ಸಾಯುವುದಿಲ್ಲ. ಮತ್ತು ಈ ಆತ್ಮನು ಹಿಂದೆ ಯಾವಾಗಲಾದರೂ ಇಲ್ಲದೆ ಹೋಗಿ ಪುನಃ ಉತ್ಪತ್ತಿಯಾದವನೂ ಅಲ್ಲ. ಇವನು ಅಜನು (ಜನನ ರಹಿತನು), ನಿತ್ಯನು, ಶಾಶ್ವತನು, ಮತ್ತು ಅನಾದಿ ಕಾಲದಿಂದ ಇರುವವನು. ಆದ್ದರಿಂದಲೇ ಶರೀರವು ನಾಶವಾದರೂ ಇವನು ನಾಶವಾಗುವುದಿಲ್ಲ. ಘಟವು ಒಡೆದರೆ ಘಟಾಕಾಶವು ಒಡೆಯುದಂತೆ, ಕನ್ನಡಿ ಚೂರಾದರೆ ಅದರಲ್ಲಿದ್ದ ಪ್ರತಿಬಿಂಬ ಚೂರಾಗದಂತೆ, ದೇಹ ನಾಶವಾದರೆ ಆತ್ಮ ನಾಶವಾಗುವುದಿಲ್ಲ.

ಪ್ರ ೬೬ : **ಈ ವಿಚಾರದಿಂದಾಗುವ ನಿಶ್ಚಯವೇನು ?**

ಉ : ಸ್ಥೂಲ ದೇಹವೇ ನಾವಲ್ಲವಾದುದರಿಂದ, ಈ ದೇಹಕ್ಕೆ ಸಂಬಂಧಪಟ್ಟ ಮೇಲೆ ಹೇಳಿದ ಏಳು ಧರ್ಮಗಳೂ ನಮಗಿಲ್ಲವೆಂಬ ಅಸಂಗ ಭಾವನೆ ಉಂಟಾಗುತ್ತದೆ. ಇದೇ ನಿಶ್ಚಯ.

ಪ್ರ ೬೭ : **ಸ್ಥೂಲ ದೇಹದ ಏಳು ಧರ್ಮಗಳು ಆತ್ಮನಿಗಿಲ್ಲವೆಂಬುದಕ್ಕೆ ಭಾಷ್ಯಕಾರರ ಪ್ರಮಾಣವೇನು ?**

ಉ : ಸ್ಥೂಲ ದೇಹದ ಏಳು ಧರ್ಮಗಳು ಆತ್ಮನಿಗಿಲ್ಲವೆಂಬುದನ್ನು

ಭಾಷ್ಯಕಾರರಾದ ಶ್ರೀಮತ್ ಶಂಕರ ಭಗವತ್ಪಾದಾಚಾರ್ಯರು 'ಹಸ್ತಾಮಲಕ' ಸ್ತೋತ್ರದಲ್ಲಿ ಈ ರೀತಿ ಹೇಳಿದ್ದಾರೆ:

ಶ್ಲೋಕ : **''ನಾಹಂಮನುಷ್ಯೋ ನ ಚ ದೇವಯಕ್ಷೋ ನ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾಃ। ನ ಬ್ರಹ್ಮಚಾರಿ ನ ಗೃಹೀವನಸ್ಥೋ ಭಿಕ್ಷುರ್ನಚಾಹಂ ನಿಜಬೋಧರೂಪಃ ॥"**

ಅರ್ಥ : ನಾನು ಮನುಷ್ಯನಲ್ಲ, ದೇವತೆಯಲ್ಲ, ಯಕ್ಷನೂ ಅಲ್ಲ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನೂ ಅಲ್ಲ. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿಯೂ ಅಲ್ಲ. ನಾನು ಸ್ವಯಂ ಜ್ಞಾನಸ್ವರೂಪನು.

ಪ್ರ ೬೮ : **ಪಂಚಭೂತಗಳ ಅಧ್ಯಾಸವನ್ನು ಬಿಡಿಸಿಕೊಳ್ಳುವ ಉಪಾಯವೇನು ?**

ದೃಷ್ಟಾಂತ : ಒಬ್ಬಾನೊಬ್ಬ ಬ್ರಾಹ್ಮಣ ಯುವಕನಿಗೆ ಒಂದು ಮುಸ್ಲಿಂ ಜಾತಿಯ ಸ್ತ್ರೀ ಭೂತ ಅಥವಾ ದೆವ್ವ ಹಿಡಿಯಿತು. ಆಗ ಅವನು ತಾನು ಮುಸಲ್ಮಾನ ಸ್ತ್ರೀ ಎಂಬುದಾಗಿಯೂ, ತನ್ನ ಮನೆ ಅಲ್ಲಿದೆ–ಇಲ್ಲಿದೆ, ತನ್ನ ಸಂಬಂಧಿಕರು ಇಂತಹವರು, ತನಗೆ ಇಂತಹ ವಸ್ತು ಬೇಕಾಗಿದೆ ಎಂದೂ ಮೊದಲಾಗಿ ಉರ್ದು ಭಾಷೆಯಲ್ಲಿ ಯದ್ವಾತದ್ವಾ ಮಾತನಾಡತೊಡಗಿದನು. ಆಗ ಇವನಿಗೆ ದೆವ್ವ ಹಿಡಿದಿದೆ ಎಂಬುದಾಗಿ ತಿಳಿದುಕೊಂಡು ಅವನ ಸಂಬಂಧಿಕರು ಮಂತ್ರವಾದಿಯ ಬಳಿಗೆ ಕರೆದುಕೊಂಡು ಹೋದರು. ಆಗ ಮಂತ್ರವಾದಿಯು ಅವನನ್ನು ಎದುರಿಗೆ ಕೂರಿಸಿಕೊಂಡು ಮಂತ್ರಗಳನ್ನು ಹೇಳುತ್ತಾ, ಡಮರುಗ ಇತ್ಯಾದಿಗಳನ್ನು ಬಾರಿಸುತ್ತಾ, ಬೆಂಕಿಗೆ ಮೆಣಸಿನಕಾಯಿ ಹಾಕಿ ಘಾಟನ್ನು ಮಾಡಿ, ಬೇವಿನ ಸೊಪ್ಪಿನಿಂದ ಅವನ ಮುಖದ ಮೇಲೆ ಹೊಡೆದು ಅವನಿಗೆ ಹಿಡಿದ ಭೂತವನ್ನು ಬಿಡಿಸುತ್ತಾನೆ. ಆಗ ಅವನು ಮೊದಲಿನಂತೆ ಮಾತಾಡುತ್ತಾನೆ.

ದಾರ್ಷ್ಟಾಂತ : ಇದರಂತೆ ಸಚ್ಚಿದಾನಂದ, ನಿತ್ಯ ಪರಿಪೂರ್ಣ, ಶುದ್ಧ ಬುದ್ಧ ಮುಕ್ತ ಸ್ವಭಾವವುಳ್ಳ ಆತ್ಮನೇ ತಾನಾಗಿದ್ದರೂ, ಇಪ್ಪತ್ತೈದು ತತ್ವಗಳಿಂದ ಕೂಡಿದ ಪಂಚಭೂತಗಳ ಸ್ವತ್ತಾದ ದೇಹವೇ ನಾನೆನ್ನುತ್ತೇವೆ. ಹೀಗೆ ಹೇಳುವವರಿಗೆಲ್ಲಾ ಐದು ಭೂತಗಳು ಹಿಡಿದಿವೆ ಎಂದೇ ತಿಳಿಯಬೇಕು.

ಏಕೆಂದರೆ ತಾನಲ್ಲದ ದೇಹೇಂದ್ರಿಯಗಳನ್ನು ತಾನೆಂದಲೂ, ದೇಹದ ಧರ್ಮ ಗಳು ತನಗಿವೆ ಎಂತಲೂ, ದೇಹದ ಸಂಬಂಧಿಗಳೆಲ್ಲಾ ತನ್ನವರೆಂತಲೂ ಹುಚ್ಚು ಹುಚ್ಚಾಗಿ ವರ್ತಿಸುತ್ತೇವೆ. ಇದನ್ನು ನೋಡಿದ ಸತ್ಪುರುಷರು 'ಸದ್ಗುರು'ವೆಂಬ ಮಂತ್ರವಾದಿಯ ಬಳಿಗೆ ಕರೆದುಕೊಂಡು ಹೋಗಿ, ಅವನಿಗೆ ಸಾಧನ ಚತುಷ್ಟಯಗಳೆಂಬ ಸಂಪತ್ತನ್ನು ದಕ್ಷಿಣೆಯ ರೂಪದಲ್ಲಿ ಒಪ್ಪಿಸು ತ್ತಾರೆ. ಆಗ ಸದ್ಗುರುಗಳು ಆತ್ಮಾನಾತ್ಮಾ ವಿಚಾರ ವಿವೇಕಗಳೆಂಬ ಸದ್ವಾಸನೆಗಳನ್ನುಂಟುಮಾಡಿ, ಆತ್ಮಜ್ಞಾನ ಬೋಧೆ ಎಂಬ ಡಮರುಗವನ್ನು ಬಾರಿಸಿ, 'ಮಹಾವಾಕ್ಯ'ಗಳೆಂಬ ಮಂತ್ರವನ್ನು ಉಚ್ಚರಿಸಿ, ದೇಹಾತ್ಮಬುದ್ಧಿ ಎಂಬ ದೆವ್ವವನ್ನು ಬಿಡಿಸುತ್ತಾರೆ. ಆಗ ನಾನು ದೇಹವಲ್ಲ, ದೇಹಕ್ಕಿಂತ ವಿಲಕ್ಷಣನಾದ ಆತ್ಮ, ಎಂಬುದಾಗಿ ಸರಿಯಾದ ರೀತಿಯಲ್ಲಿ ವರ್ತಿಸುತ್ತೇವೆ.

ಓಂ ತತ್ಸತ್

ಸ್ಥೂಲ ದೇಹದ ವಿಚಾರ ಸಮಾಪ್ತಿ

ಉ : ಸೂಕ್ಷ್ಮ ದೇಹವಿದೆ ಎನ್ನುವುದಕ್ಕೆ ಸ್ಥೂಲ ದೇಹದಲ್ಲಿ ನಡೆಯುವ ಹದಿನೇಳು ಕ್ರಿಯೆಗಳೇ ಪ್ರಮಾಣವಾಗಿವೆ. ಹಾಗಾದರೆ ಆ ಹದಿನೇಳು ಕೆಲಸಗಳನ್ನು ಸ್ಥೂಲ ದೇಹವೇ ಮಾಡುತ್ತದೆಂದು ಏಕೆ ಹೇಳಬಾರದು? ಎಂದು ಶಂಕಿಸಿದರೆ, ಸ್ಥೂಲ ದೇಹವೇ ಮಾಡುವಂತಿದ್ದರೆ ಸುಷುಪ್ತಿ, ಮರಣ, ಮೂರ್ಛಾ ಅವಸ್ಥೆಗಳಲ್ಲಿಯೂ ಇದು ಕ್ರಿಯೆ ಮಾಡಬೇಕಾಗಿತ್ತು. ಆದರೆ ಆ ಅವಸ್ಥೆಗಳಲ್ಲಿ ಇದು ಕಲ್ಲಿನಂತೆ ಜಡವಾಗಿ ಬಿದ್ದಿರುತ್ತದೆ. ಆದ್ದರಿಂದ ಇದಕ್ಕೆ ಸೂಕ್ಷ್ಮ ದೇಹದ ಅವಶ್ಯಕತೆ ಬೇಕೇಬೇಕು. ಹೀಗಿರುವುದಾದರೆ ಸ್ಥೂಲ ದೇಹವೇಕೆ ಬೇಕು? ಸೂಕ್ಷ್ಮದೇಹವೊಂದೇ ಕ್ರಿಯೆ ಮಾಡಬಾರದೇಕೆ? ಎಂದು ಶಂಕಿಸಿದರೆ, ನೀರನ್ನು ಬಿಸಿ ಮಾಡುವುದು ಅಗ್ನಿಯೇ ಆದರೂ ಅದು ಕಟ್ಟಿಗೆಯ ಮೂಲಕ ಕಾಯಿಸುವಂತೆ, ಸೂಕ್ಷ್ಮ ದೇಹವೇ ಎಲ್ಲಾ ಕ್ರಿಯೆಗಳನ್ನು ಮಾಡುವುದಾದರೂ, ಅದಕ್ಕೆ ಸ್ಥೂಲ ದೇಹದ ಆಶ್ರಯವಿರಲೇಬೇಕು.

ಪ್ರ ೭೩ : **ಸೂಕ್ಷ್ಮ ದೇಹವು ಎಷ್ಟು ವಸ್ತುಗಳಿಂದ ಕೂಡಿಕೊಂಡಿದೆ?**

ಉ : ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚ ಪ್ರಾಣಗಳು, ಮನಸ್ಸು ಮತ್ತು ಬುದ್ಧಿ—ಇವೇ ಹದಿನೇಳು ತತ್ತ್ವಗಳು.

ಪಂಚ ಜ್ಞಾನೇಂದ್ರಿಯಗಳು : ಶ್ರೋತ್ರ, ತ್ವಚ, ನೇತ್ರ, ಜಿಹ್ವೆ ಮತ್ತು ಘ್ರಾಣ.

ಪಂಚ ಕರ್ಮೇಂದ್ರಿಯಗಳು : ವಾಕ್ಕು, ಪಾಣಿ, ಪಾದ, ಉಪಸ್ಥ ಮತ್ತು ಗುದ.

ಪಂಚಪ್ರಾಣಗಳು : ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನ.

ಪ್ರ ೭೪ : **ಮನಸ್ಸು ಬುದ್ಧಿಗಳೆಂದರೇನು ?**

ಉ : ಸಂಕಲ್ಪ ವಿಕಲ್ಪ ಮಾಡುವ ಅಂತಃಕರಣದ ವೃತ್ತಿಗೆ ಮನಸ್ಸೆಂತಲೂ, ನಿಶ್ಚಯ ಮಾಡುವ ವೃತ್ತಿಗೆ ಬುದ್ಧಿ ಎಂತಲೂ ಹೆಸರು.

ಪ್ರ ೭೫ : **ಅಪಂಚೀಕೃತ ಪಂಚ ಮಹಾಭೂತಗಳೆಂದರೇನು ?**

ಉ : ಪಂಚೀಕರಣವಾಗದಿರುವ ಪಂಚ ಮಹಾಭೂತಗಳಿಗೆ ಅಪಂಚೀಕೃತ ಪಂಚ ಮಹಾಭೂತಗಳೆಂದೂ, ಸೂಕ್ಷ್ಮ ಭೂತಗಳೆಂದೂ, ಪಂಚ ತನ್ಮಾತ್ರೆಗಳೆಂದೂ ಹೆಸರುಗಳಿವೆ.

ಪ್ರ ೭೬ : **ಸೂಕ್ಷ್ಮ ದೇಹದ ಹದಿನೇಳು ತತ್ವಗಳು ಅಪಂಚೀಕೃತ ಪಂಚ ಮಹಾಭೂತಗಳಿಗೆ ಯಾವ ವಿಧವಾಗಿ ಸಂಬಂಧಿಸಿವೆ ?**

ಉ : ಅಪಂಚೀಕೃತ ಪಂಚ ಮಹಾಭೂತಗಳ ಸಮಷ್ಟಿ ಸತ್ವಗುಣ ದಿಂದ ಅಂತಃಕರಣವೂ, ಅಪಂಚೀಕೃತ ಪಂಚ ಮಹಾಭೂತಗಳ ವ್ಯಷ್ಟಿ ಸತ್ವಗುಣದಿಂದ ಪಂಚ ಜ್ಞಾನೇಂದ್ರಿಯಗಳೂ, ಅಪಂಚೀಕೃತ ಪಂಚ ಮಹಾ ಭೂತಗಳ ಸಮಷ್ಟಿ ರಜೋಗುಣದಿಂದ ಪಂಚ ಪ್ರಾಣವಾಯುಗಳೂ, ಅಪಂಚೀಕೃತ ಪಂಚ ಮಹಾಭೂತಗಳ ವ್ಯಷ್ಟಿ ರಜೋಗುಣದಿಂದ ಪಂಚ ಕರ್ಮೇಂದ್ರಿಯಗಳೂ ಆಗಿವೆ.

ಪ್ರ ೭೭ : **ಪಂಚ ಜ್ಞಾನೇಂದ್ರಿಯಗಳಲ್ಲಿ ಮೊದಲನೇ ಇಂದ್ರಿಯದ ಸ್ವರೂಪವೇನು ?**

ಉ : ಪಂಚ ಜ್ಞಾನೇಂದ್ರಿಯಗಳಲ್ಲಿ "ಶ್ರೋತ್ರೇಂದ್ರಿಯ" ಅಥವಾ "ಕಿವಿ"ಯು ಮೊದಲನೇ ಇಂದ್ರಿಯ. ಇದು ಆಕಾಶ ಭೂತದ ವ್ಯಷ್ಟಿ ಸತ್ವ ಗುಣದಿಂದಾಗಿದೆ. ಇದು ಶಬ್ದಗಳನ್ನು ಅರಿಯುವ ಸಾಧನವಾಗಿದೆ. ಶಬ್ದ ಗಳು ಎರಡು ವಿಧ : ೧) ಲೌಕಿಕ ಮತ್ತು ೨) ವೈದಿಕ. ಪ್ರಾಪಂಚಿಕ ವಿಚಾರ, ಸಮಸ್ತ ಭಾಷೆಗಳೆಲ್ಲವೂ ಲೌಕಿಕ ಶಬ್ದಗಳ ಗುಂಪಿಗೆ ಸೇರಿವೆ. ರಾಮಾ ಯಣ, ಭಾರತ, ಭಾಗವತ, ಇತ್ಯಾದಿ ಪುರಾಣಗಳ, ಭಗವದ್ಗೀತೆ, ಉಪ ನಿಷತ್ತು ಇತ್ಯಾದಿ ಅದ್ವೈತ ಶಾಸ್ತ್ರಗಳ ವಾಙ್ಮಯವೆಲ್ಲಾ ವೈದಿಕ ಶಬ್ದಗಳ ಗುಂಪಿಗೆ ಸೇರಿವೆ. ಈ ಎರಡು ವಿಧವಾದ ಶಬ್ದಗಳನ್ನು ಸ್ಥೂಲ ದೇಹದಲ್ಲಿ ಕಂಡುಬರುವ 'ಕಿವಿ'ಯೇ ಕೇಳಲಾರದು. ಇದು ಕೇವಲ ಶ್ರೋತ್ರೇಂದ್ರಿ ಯದ ಗೋಳಕ ಮಾತ್ರವಾಗಿದೆ. ಏಕೆಂದರೆ ಇದು ಸುಷುಪ್ತಿ, ಮರಣ, ಮೂರ್ಛೆ ಮೊದಲಾದ ಅವಸ್ಥೆಗಳಲ್ಲಿದ್ದರೂ ತನ್ನ ಕ್ರಿಯೆಯನ್ನು ಮಾಡುವು ದಿಲ್ಲ. ಆದುದರಿಂದ ನಿಜವಾದ ಶ್ರೋತ್ರೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ ಎಂದು ಊಹಿಸಬಹುದು. ಇದೂ ಸಹ ಸ್ವಂತ ಶಕ್ತಿಯಿಂದ ಕೆಲಸ ಮಾಡುವುದಿಲ್ಲ. ತನಗೆ ಅಧಿದೇವತೆಯಾದ 'ದಿಗ್ದೇವತೆ'ಯಿಂದ ಪ್ರೇರಿತ ವಾಗಿ, ಸ್ಥೂಲ ದೇಹದಲ್ಲಿರುವ 'ಕಿವಿ' ಎಂಬ ಗೋಳಕದ ಮೂಲಕ ಶಬ್ದ ಗಳನ್ನು ಕೇಳುತ್ತದೆ.

ಪ್ರ ೭೮ : **ತ್ವಗೇಂದ್ರಿಯದ ಸ್ವರೂಪವೇನು ?**

ಉ : ಇದು ವಾಯುಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿದ್ದು. ಇದು ಸ್ಪರ್ಶಗಳನ್ನು ತಿಳಿಯುವ ಸಾಧನ. ಸ್ಪರ್ಶಗಳು ಶೀತ, ಉಷ್ಣ, ಶೀತೋಷ್ಣ, ಮೃದು, ಕಠಿಣವೆಂಬುದಾಗಿ ಐದು ವಿಧವಾಗಿವೆ. ಸ್ಥೂಲ ದೇಹದಲ್ಲಿ ತೋರಿ ಬರುವ ಚರ್ಮವು ನಿಜವಾದ ತ್ವಗೇಂದ್ರಿಯವಲ್ಲ. ಇದು ಕೇವಲ ತ್ವಗೇಂದ್ರಿಯದ ಗೋಳಕ ಮಾತ್ರವಾಗಿದೆ. ಏಕೆಂದರೆ ಸುಷುಪ್ತಿ, ಮರಣ, ಮೂರ್ಛೆ ಮೊದಲಾದ ಅವಸ್ಥೆಗಳಲ್ಲಿ ಇದು ಇದ್ದರೂ ತನ್ನ ಕೆಲಸ ಮಾಡಲಾರದು. ಆದುದರಿಂದ ನಿಜವಾದ ತ್ವಗೇಂದ್ರಿಯವಿರುವುದು ಸೂಕ್ಷ್ಮ ದೇಹದಲ್ಲಿ. ಇದೂ ಸಹ ಸ್ವತಃ ಶಕ್ತಿಯಿಂದ ತನ್ನ ಕೆಲಸ ಮಾಡದೆ ತನಗೆ ಅಧಿಷ್ಠಾನ ದೇವತೆಯಾದ ವಾಯುವಿನಿಂದ ಪ್ರೇರೇಪಿತವಾಗಿ, ಹೊರಗಿರುವ 'ಚರ್ಮ'ವೆಂಬ ಗೋಳಕದ ಮೂಲಕ ತನ್ನ ಕೆಲಸ ಮಾಡುತ್ತದೆ.

ಪ್ರ ೭೯ : **ನೇತ್ರೇಂದ್ರಿಯದ ಸ್ವರೂಪವೇನು ?**

ಉ : ನೇತ್ರೇಂದ್ರಿಯವು ಅಗ್ನಿಭೂತದ ವ್ಯಷ್ಟಿ ಸತ್ವಗುಣದಿಂದಾಗಿದೆ. ಇದು ರೂಪಗಳನ್ನು ನೋಡುವ ಸಾಧನವಾಗಿದೆ. ರೂಪಗಳು ಬಿಳುಪು, ಕಪ್ಪು, ಕೆಂಪು, ಹಳದಿ, ಹಸಿರು, ಶಬಲ (ಮಿಶ್ರ), ಹ್ರಸ್ವ, ದೀರ್ಘ, ಸ್ಥೂಲ ಮತ್ತು ಸೂಕ್ಷ್ಮವೆಂಬುದಾಗಿ ಹತ್ತು ಬಗೆಯಾಗಿವೆ. ಸ್ಥೂಲ ದೇಹದಲ್ಲಿರುವ ಕಣ್ಣುಗಳೇ ಈ ರೂಪವನ್ನು ನೋಡುವುದಿಲ್ಲ. ಅವು ಕೇವಲ ನೇತ್ರೇಂದ್ರಿಯದ ಗೋಳಕಗಳು. ಏಕೆಂದರೆ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಅವು ಇದ್ದರೂ ರೂಪಗಳನ್ನು ನೋಡಲಾರವು. ಆದುದರಿಂದ ನಿಜವಾದ ನೇತ್ರೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ. ಆದರೆ ಅದಕ್ಕೆ ತನ್ನ ಕೆಲಸ ಮಾಡಲು ಸ್ವತಃ ಶಕ್ತಿ ಇಲ್ಲ. ತನಗೆ ಅಧಿಷ್ಠಾನ ದೇವತೆಯಾದ ಸೂರ್ಯದೇವನಿಂದ ಪ್ರೇರೇಪಿತವಾಗಿ, ಕಣ್ಣುಗಳೆಂಬ ಗೋಳಕಗಳ ಮೂಲಕ ರೂಪಗಳನ್ನು ನೋಡುತ್ತದೆ.

ಪ್ರ ೮೦ : **ಜಿಹ್ವೇಂದ್ರಿಯದ ವಿಚಾರವೇನು ?**

ಉ : ರಸನೇಂದ್ರಿಯ ಅಥವಾ ಜಿಹ್ವೇಂದ್ರಿಯವು ಜಲಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿದೆ. ಇದು ರಸಗಳನ್ನು ತಿಳಿಯುವ ಸಾಧನ. ರಸಗಳು ಸಿಹಿ, ಕಾರ, ಉಪ್ಪು, ಹುಳಿ, ಕಹಿ ಮತ್ತು ಒಗರು ಎಂಬುದಾಗಿ ಆರು ವಿಧ. ಸ್ಥೂಲ ದೇಹದಲ್ಲಿರುವ "ನಾಲಿಗೆ"ಯೇ ನಿಜವಾದ ಜಿಹ್ವೇಂದ್ರಿಯವಲ್ಲ. ಅದು ಕೇವಲ ಗೋಳಕವಾಗಿರುವುದರಿಂದಲೇ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಅದು

ಇದ್ದರೂ ತನ್ನ ಕ್ರಿಯೆಯನ್ನು ಮಾಡಲಾರದು. ಅಂದ ಮೇಲೆ ನಿಜವಾದ ಜಿಹ್ವೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ. ಇದೂ ಸಹ ತನಗೆ ಅಧಿದೇವತೆಯಾದ ವರುಣನಿಂದ ಪ್ರೇರೇಪಿತವಾಗಿ ಹೊರಗಿರುವ 'ನಾಲಿಗೆ' ಎಂಬ ಗೋಳಕದ ಮೂಲಕ ರಸಗಳನ್ನು ಗ್ರಹಿಸುತ್ತದೆ.

ಪ್ರ ೮೧ : **ಘ್ರಾಣೇಂದ್ರಿಯದ ವಿಚಾರವೇನು ?**

ಉ : ಘ್ರಾಣೇಂದ್ರಿಯವು ಪೃಥ್ವೀಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿದೆ. ಇದು ವಾಸನೆಗಳನ್ನು ಗ್ರಹಿಸುವ ಸಾಧನವಾಗಿದೆ. ವಾಸನೆಗಳು ಸುಗಂಧ, ದುರ್ಗಂಧ, ಮಿಶ್ರಗಂಧವೆಂಬುದಾಗಿ ಮೂರು ವಿಧ. ಸ್ಥೂಲ ದೇಹದಲ್ಲಿ ಕಾಣಬರುವ 'ಮೂಗೇ' ನಿಜವಾದ ಘ್ರಾಣೇಂದ್ರಿಯವಲ್ಲ. ಇದೇ ನಿಜವಾದ ಇಂದ್ರಿಯವಾಗಿದ್ದರೆ ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿಯೂ ಸಹ ಇದು ತನ್ನ ಕೆಲಸ ಮಾಡಬಹುದಾಗಿತ್ತು. ಆದರೆ ಹಾಗೆ ಮಾಡುವುದಿಲ್ಲವಾಗಿ, ನಿಜವಾದ ಘ್ರಾಣೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ ಎಂದು ತಿಳಿಯಬಹುದು. ಇದಕ್ಕೂ ಸಹ ತನ್ನ ಕೆಲಸ ಮಾಡಲು ಸ್ವತಃ ಶಕ್ತಿ ಇಲ್ಲ. ತನಗೆ ಅಧಿದೇವತೆಯಾದ ಅಶ್ವಿನೀಕುಮಾರರಿಂದ ಶಕ್ತಿ ಪಡೆದು, ಹೊರಗಿನ ಮೂಗೆಂಬ ಗೋಳಕದ ಮೂಲಕ ವಾಸನೆಗಳನ್ನು ಗ್ರಹಿಸುತ್ತದೆ.

ಪ್ರ ೮೨ : **ಕರ್ಮೇಂದ್ರಿಯಗಳಲ್ಲಿ ಮೊದಲನೆಯದಾದ ವಾಗೇಂದ್ರಿಯದ ಸ್ವರೂಪವೇನು ?**

ಉ : ವಾಗೇಂದ್ರಿಯವು ಆಕಾಶಭೂತದ ವ್ಯಷ್ಟಿ ರಜೋಗುಣವಾಗಿದೆ. ಇದು ನಾಲಿಗೆ, ಕಿರುನಾಲಿಗೆ (ತಾಲುಮೂಲ), ದಂತ, ಎರಡು ತುಟಿಗಳು, ಕಂಠ, ಹೃದಯ ಮತ್ತು ಬ್ರಹ್ಮರಂಧ್ರ ಎಂಬ ಎಂಟು ಸ್ಥಳಗಳಿಂದ ಕೂಡಿ ಮಾತನಾಡುವ ಕ್ರಿಯೆಯನ್ನು ಮಾಡುತ್ತದೆ. ಈ ಎಂಟು ಸ್ಥಳಗಳಿಂದ ಕೂಡಿದ್ದೇ ನಿಜವಾದ ವಾಗೇಂದ್ರಿಯವಲ್ಲ. ಏಕೆಂದರೆ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಇವಿದ್ದರೂ ಮಾತನಾಡಲಾರದು. ಆದುದರಿಂದ ನಿಜವಾದ ವಾಗೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ. ಇದೂ ಸಹ ತನ್ನ ಸ್ವಂತ ಶಕ್ತಿಯಿಂದ ಮಾತನಾಡದೆ, ತನಗೆ ಅಧಿದೇವತೆಯಾದ 'ಅಗ್ನಿ'ಯಿಂದ ಶಕ್ತಿ ಪಡೆದುಕೊಂಡು ಮೇಲೆ ಹೇಳಿದ ಎಂಟು ಸ್ಥಳಗಳೆಂಬ ಗೋಳಕಗಳ ಮೂಲಕ ಮಾತನಾಡುವ ಕ್ರಿಯೆಯನ್ನು ಮಾಡುತ್ತದೆ.

ಪ್ರ ೮೩ : **ಪಾಣೀಂದ್ರಿಯದ ವಿಚಾರವೇನು ?**

ಉ : ಪಾಣೇಂದ್ರಿಯವು ವಾಯುಭೂತದ ವ್ಯಷ್ಟಿ ರಜೋಗುಣವಾಗಿದೆ. ಇದು 'ದಾನೋಪದಾನ' ಅಂದರೆ ಕೊಡುವ ತೆಗೆದುಕೊಳ್ಳುವ ಕೆಲಸವನ್ನು ಮಾಡುತ್ತದೆ. ಸ್ಥೂಲ ದೇಹದಲ್ಲಿ ಕಂಡುಬರುವ ಕೈಗಳೇ ನಿಜವಾದ ಪಾಣೇಂದ್ರಿಯವಲ್ಲ. ಇವು ಕೇವಲ ಪಾಣೇಂದ್ರಿಯದ ಗೋಳಕಗಳು. ಏಕೆಂದರೆ ಸುಷುಪ್ತಿ, ಮರಣ, ಮೂರ್ಛೆ, ಮೊದಲಾದ ಅವಸ್ಥೆಗಳಲ್ಲಿ ಈ ಕೈಗಳಿದ್ದರೂ ಕೆಲಸ ಮಾಡಲಾರವು. ಆದುದರಿಂದ ನಿಜವಾದ ಪಾಣೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ. ಇದೂ ಸಹ ಸ್ವತಃ ಕೆಲಸ ಮಾಡದೆ ತನಗೆ ಅಧಿದೇವತೆಯಾದ 'ಇಂದ್ರ'ನಿಂದ ಶಕ್ತಿ ಪಡೆದು, ಹೊರಗಿನ ಕೈಗಳೆಂಬ ಗೋಳಕಗಳ ಮೂಲಕ ಕೊಡುವ ತೆಗೆದುಕೊಳ್ಳುವ ಕ್ರಿಯೆ ಮಾಡುತ್ತದೆ.

ಪ್ರ ೮೪ : **ಪಾದೇಂದ್ರಿಯದ ಸ್ವರೂಪವೇನು ?**

ಉ : ಪಾದೇಂದ್ರಿಯವು ಅಗ್ನಿಭೂತ ವ್ಯಷ್ಟಿ ರಜೋಗುಣವಾಗಿದೆ. ಇದು 'ಗಮನಾಗಮನ' ಅಂದರೆ ಹೋಗುವಿಕೆ ಬರುವಿಕೆ ಎಂಬ ಕೆಲಸವನ್ನು ಮಾಡುತ್ತದೆ. ಆದರೆ ಹೊರಗೆ ಕಾಣುವ ಕಾಲುಗಳೇ ನಿಜವಾದ ಪಾದೇಂದ್ರಿಯವಲ್ಲ. ಇದು ಅದರ ಗೋಳಕ ಮಾತ್ರವಾಗಿದೆ. ಏಕೆಂದರೆ ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿ ಈ ಗೋಳಕವಿದ್ದರೂ ಓಡಾಡುವುದು ಕಂಡುಬರುವುದಿಲ್ಲ. ಆದುದರಿಂದ ನಿಜವಾದ ಪಾದೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ. ಇದೂ ಸಹ ಸ್ವತಃ ಶಕ್ತಿಯಿಂದ ಕೆಲಸ ಮಾಡದೆ ತನಗೆ ಅಧಿಷ್ಠಾನ ದೇವತೆಯಾದ ಉಪೇಂದ್ರ ಅಥವಾ ವಾಮನನಿಂದ ಪ್ರೇರೇಪಿತವಾಗಿ ಹೊರಗಿನ ಕಾಲುಗಳೆಂಬ ಗೋಳಕಗಳ ಮೂಲಕ ಗಮನಾಗಮನಗಳನ್ನು ಮಾಡುತ್ತದೆ.

ಪ್ರ ೮೫ : **ಉಪಸ್ಥೇಂದ್ರಿಯದ ವಿಚಾರವೇನು ?**

ಉ : ಉಪಸ್ಥೇಂದ್ರಿಯವು ಜಲಭೂತದ ವ್ಯಷ್ಟಿ ರಜೋಗುಣದಿಂದಾಗಿದೆ. ಇದು ಮೂತ್ರ, ಶುಕ್ಲ, ರಜಗಳನ್ನು ವಿಸರ್ಜಿಸುವ ಸಾಧನವಾಗಿದೆ. ಆದರೆ ಸ್ಥೂಲ ದೇಹದಲ್ಲಿರುವುದು ಉಪಸ್ಥೇಂದ್ರಿಯದ ಗೋಳಕ ಮಾತ್ರವಾಗಿದೆ. ಏಕೆಂದರೆ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಈ ಗೋಳಕವಿದ್ದರೂ ಅದು ತನ್ನ ಕ್ರಿಯೆ ಮಾಡಲಾರದು. ಆದುದರಿಂದ ನಿಜವಾದ ಉಪಸ್ಥೇಂದ್ರಿಯವು ಸೂಕ್ಷ್ಮದೇಹದಲ್ಲಿದೆ. ಇದೂ ಸಹ ತಾನೇ ಕೆಲಸ ಮಾಡದೆ ತನಗೆ ಅಧಿ

ದೇವತೆಯಾದ 'ಪ್ರಜಾಪತಿ'ಯಿಂದ ಶಕ್ತಿಯನ್ನು ಪಡೆದು ಹೊರಗಿನ ಗೋಳಕದ ಮೂಲಕ ತನ್ನ ಕ್ರಿಯೆಯನ್ನು ಮಾಡುತ್ತದೆ.

ಪ್ರ ೮೬ : **ಗುದೇಂದ್ರಿಯದ ವಿಚಾರವೇನು ?**

ಉ : ಗುದೇಂದ್ರಿಯವು ಪೃಥ್ವೀಭೂತದ ವ್ಯಷ್ಟಿ ರಜೋಗುಣದಿಂದಾಗಿದೆ. ಇದು ಮಲ ವಿಸರ್ಜನೆಯನ್ನು ಮಾಡುತ್ತದೆ. ಸ್ಥೂಲ ದೇಹದಲ್ಲಿರುವುದು ನಿಜವಾದ ಗುದೇಂದ್ರಿಯವಲ್ಲ. ಅದು ಗೋಳಕ ಮಾತ್ರ. ಏಕೆಂದರೆ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಈ ಗೋಳಕವಿದ್ದರೂ ತನ್ನ ಕ್ರಿಯೆ ಮಾಡದೆ ತಟಸ್ಥವಾಗಿರುತ್ತದೆ. ಆದುದರಿಂದ ನಿಜವಾದ ಗುದೇಂದ್ರಿಯವು ಸೂಕ್ಷ್ಮ ದೇಹದಲ್ಲಿದೆ. ಇದೂ ಸಹ ತನ್ನ ಸ್ವಂತ ಶಕ್ತಿಯಿಂದ ಕೆಲಸ ಮಾಡದೆ ತನಗೆ ಅಧಿಷ್ಠಾನ ದೇವತೆಯಾದ ಮೃತ್ಯು ದೇವತೆಯಿಂದ ಶಕ್ತಿ ಪಡೆದುಕೊಂಡು ಹೊರಗಿನ ಗೋಳಕದ ಮೂಲಕ ಮಲ ವಿಸರ್ಜನೆಯನ್ನು ಮಾಡುತ್ತದೆ.

ಪ್ರ ೮೭ : **ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗಿರುವ ಸಂಬಂಧವೇನು ?**

ಉ : (i) ಶ್ರೋತ್ರೇಂದ್ರಿಯವು ಆಕಾಶಭೂತದ ವ್ಯಷ್ಟಿ ಸತ್ವಗುಣದಿಂದಲೂ, ವಾಗೇಂದ್ರಿಯವು ವ್ಯಷ್ಟಿರಜೋಗುಣದಿಂದಲೂ ಆಗಿವೆ. ಶ್ರೋತ್ರವು ಶಬ್ದಗಳನ್ನು ಒಳಕ್ಕೆ ಎಳೆದುಕೊಂಡರೆ, ವಾಗೇಂದ್ರಿಯವು ಅದನ್ನು ಹೊರಕ್ಕೆ ಬಿಡುತ್ತದೆ. ಈ ಎರಡು ಇಂದ್ರಿಯಗಳು ಒಂದೇ ಆಕಾಶ ಭೂತದ ವ್ಯಷ್ಟಿ ಸತ್ವಗುಣ ಮತ್ತು ರಜೋಗುಣಗಳಾಗಿರುವುದರಿಂದ, ಈ ಎರಡರಲ್ಲಿ ಪರಸ್ಪರ ಮಿತ್ರತ್ವವಿದೆ. ಹೇಗೆಂದರೆ, ಒಬ್ಬ ತಂದೆಯ ಹಿರಿಯ ಮಗ, ಕಿರಿಯ ಮಗ ಇವರ ಸಂಬಂಧವಿದ್ದಂತೆ. ಅಲ್ಲದೆ ಶ್ರೋತ್ರೇಂದ್ರಿಯವು ಶಬ್ದವನ್ನು ಒಳಗೆ ತೆಗೆದುಕೊಳ್ಳುವುದರಿಂದ ಇದು ಮುಂದಿನ ಬಾಗಿಲಿದ್ದಂತೆ. ವಾಗೇಂದ್ರಿಯವು ಶಬ್ದವನ್ನು ಹೊರಗೆ ಕಳಿಸುವುದರಿಂದ ಇದು ಹಿಂದಿನ ಬಾಗಿಲಿದ್ದಂತೆ. ಈ ರೀತಿ ಜ್ಞಾನೇಂದ್ರಿಯಕ್ಕೂ ಕರ್ಮೇಂದ್ರಿಯಕ್ಕೂ ಪರಸ್ಪರ ಸಂಬಂಧವಿದೆ.

(ii) ಜ್ಞಾನೇಂದ್ರಿಯಗಳಲ್ಲಿ ಎರಡನೆಯದಾದ ತ್ವಗೇಂದ್ರಿಯವು ವಾಯುಭೂತದ ವ್ಯಷ್ಟಿ ಸತ್ವಗುಣವಾಗಿದೆ. ಕರ್ಮೇಂದ್ರಿಯಗಳಲ್ಲಿ ಎರಡನೆಯದಾದ ಪಾಣೇಂದ್ರಿಯವು ವಾಯುಭೂತದ ವ್ಯಷ್ಟಿ ರಜೋಗುಣವಾಗಿದೆ.

ತ್ವಗೇಂದ್ರಿಯವು ಸ್ಪರ್ಶಗಳನ್ನು ಒಳಕ್ಕೆ ಗ್ರಹಿಸಿದರೆ, ಪಾಣೇಂದ್ರಿಯವು ಅದನ್ನು ನಿವಾರಿಸುತ್ತದೆ. ಈ ಎರಡು ಇಂದ್ರಿಯಗಳು ಒಂದೇ ವಾಯು ಭೂತದ ವ್ಯಷ್ಟಿ ಸತ್ವಗುಣ ರಜೋಗುಣಗಳಾಗಿರುವುದರಿಂದ ಇವೆರಡರಲ್ಲಿ ಪರಸ್ಪರ ಮಿತ್ರತ್ವವಿದೆ. ಮತ್ತು ತ್ವಗೇಂದ್ರಿಯವು ಸ್ಪರ್ಶವನ್ನು ಒಳಕ್ಕೆ ಗ್ರಹಿಸುವುದರಿಂದ ಇದು ಮುಂದಿನ ಬಾಗಿಲಿದ್ದಂತೆ. ಪಾಣೇಂದ್ರಿಯವು ಅದನ್ನು ಹೋಗಲಾಡಿಸಿಕೊಳ್ಳುವುದರಿಂದ ಇದು ಹಿಂದಿನ ಬಾಗಿಲಿದ್ದಂತೆ. ಈ ರೀತಿ ಈ ಎರಡು ಇಂದ್ರಿಯಗಳಿಗೆ ಪರಸ್ಪರ ಸಂಬಂಧವಿದೆ.

(iii) ನೇತ್ರೇಂದ್ರಿಯವು ಅಗ್ನಿಭೂತದ ವ್ಯಷ್ಟಿ ಸತ್ವಗುಣವೂ, ಪಾದೇಂದ್ರಿಯವು ಅಗ್ನಿಭೂತದ ವ್ಯಷ್ಟಿ ರಜೋಗುಣವೂ ಆಗಿದೆ. ನೇತ್ರೇಂದ್ರಿಯವು ರೂಪಗಳನ್ನು ಗ್ರಹಿಸಿದರೆ, ಪಾದೇಂದ್ರಿಯವು ಆದು ಕಂಡ ರೂಪದ ಬಳಿಗೆ ಹೋಗಿ ಅದನ್ನು ನಿವಾರಿಸಿಕೊಳ್ಳುತ್ತದೆ. ಆದುದರಿಂದ ಈ ಎರಡು ಇಂದ್ರಿಯಗಳಿಗೂ ಒಂದೇ ತಂದೆಯ ಹಿರಿಯ ಕಿರಿಯ ಮಕ್ಕಳಿಗಿರುವ ಸಂಬಂಧದಂತೆ ಪರಸ್ಪರ ಮಿತ್ರತ್ವವಿದೆ. ನೇತ್ರೇಂದ್ರಿಯವು ರೂಪಗಳನ್ನು ಒಳಗೆ ಗ್ರಹಿಸುವುದರಿಂದ ಆದು ಮುಂದಿನ ಬಾಗಿಲಿದ್ದಂತೆ ; ಪಾದೇಂದ್ರಿಯವು ಅದನ್ನು ಹೊರಗೆ ಕಳಿಸುವುದರಿಂದ ಹಿಂದಿನ ಬಾಗಿಲಿದ್ದಂತೆ.

(iv) ಜಿಹ್ವೇಂದ್ರಿಯವು ಜಲಭೂತದ ವ್ಯಷ್ಟಿ ಸತ್ವಗುಣವೂ, ಉಪಸ್ಥೇಂದ್ರಿಯವು ಜಲಭೂತದ ವ್ಯಷ್ಟಿ ರಜೋಗುಣವೂ ಆಗಿದೆ. ಜಿಹ್ವೇಂದ್ರಿಯವು ರಸಗಳನ್ನು ಒಳಗೆ ತೆಗೆದುಕೊಳ್ಳುವ ಸಾಧನವಾಗಿದ್ದರೆ, ಉಪಸ್ಥೇಂದ್ರಿಯವು ಆದನ್ನು ಹೊರಕ್ಕೆ ಕಳಿಸುವ ಸಾಧನವಾಗಿದೆ. ಈ ಎರಡು ಇಂದ್ರಿಯಗಳು ಒಂದೇ ಜಲಭೂತದ ವ್ಯಷ್ಟಿ ಸತ್ವಗುಣ–ರಜೋಗುಣಗಳಾಗಿರುವುದರಿಂದ, ಇವೆರಡರಲ್ಲಿ ಒಬ್ಬನೇ ತಂದೆಯ ಇಬ್ಬರು ಮಕ್ಕಳಿಗಿರುವಂತೆ ಪರಸ್ಪರ ಮಿತ್ರತ್ವವಿದೆ. ಮತ್ತು ಜಿಹ್ವೇಂದ್ರಿಯವು ರಸಗಳನ್ನು ಗ್ರಹಣ ಮಾಡುವುದರಿಂದ ಇದು ಮುಂದಿನ ಬಾಗಿಲು ಮತ್ತು ಉಪಸ್ಥೇಂದ್ರಿಯವು ತ್ಯಾಗ ಮಾಡುವುದರಿಂದ ಇದು ಹಿಂದಿನ ಬಾಗಿಲಿನಂತಿದೆ.

(v) ಘ್ರಾಣೇಂದ್ರಿಯವು ಪೃಥ್ವೀಭೂತದ ವ್ಯಷ್ಟಿ ಸತ್ವಗುಣವೂ, ಗುದೇಂದ್ರಿಯವು ಪೃಥ್ವೀ ಭೂತದ ವ್ಯಷ್ಟಿ ರಜೋಗುಣವೂ ಆಗಿದೆ. ಘ್ರಾಣೇಂದ್ರಿಯ ಅಥವಾ ಮೂಗು, ಗಂಧಗಳನ್ನು ಒಳಕ್ಕೆ ಎಳೆದುಕೊಳ್ಳು

ತ್ತದೆ. ಗುದೇಂದ್ರಿಯವು ಹೊರಕ್ಕೆ ಬಿಡುತ್ತದೆ. ಈ ಎರಡು ಇಂದ್ರಿಯಗಳು ಒಂದೇ ಪೃಥ್ವೀಭೂತದ ವ್ಯಷ್ಟಿ ಸತ್ವಗುಣ ರಜೋಗುಣಗಳಾಗಿರುವುದರಿಂದ ಪರಸ್ಪರ ಮಿತ್ರತ್ವವಿದೆ. ಮತ್ತು ಘ್ರಾಣೇಂದ್ರಿಯವು ಗಂಧವನ್ನು ಗ್ರಹಿಸುವುದರಿಂದ ಅದು 'ಈ ಸ್ಥೂಲ ದೇಹವೆಂಬ ಭವನದ' ಮುಂದಿನ ಬಾಗಿಲಿನಂತಿದೆ ; ಗುದೇಂದ್ರಿಯವು ಗಂಧಗಳನ್ನು ಹೊರಗೆ ಬಿಡುವುದರಿಂದ ಇದು ಹಿಂದಿನ ಬಾಗಿಲಿನಂತಿದೆ.

## ಪಂಚವಾಯುಗಳ ವಿಚಾರ

ಪ್ರ ೮೮ : **ಪ್ರಾಣವಾಯುಗಳ ವಿಚಾರವನ್ನು ಅಮರ ನಿಘಂಟಿನಲ್ಲಿ ಹೇಗೆ ಹೇಳಿದೆ ?**

ಉ : "ಪ್ರಾಣೋಽಪಾನ ಸಮಾನಶ್ಚೋಽದಾನ ವ್ಯಾನೌಚವಾಯುವಃ। ಹೃದಿಪ್ರಾಣೋ ಗುದೇಪಾನ, ಸ್ಸಮಾನೋನಾಭಿ ಸಂಸ್ಥಿತಃ ಉದಾನಃ ಕಂಠ ದೇಶಸ್ಥೋವ್ಯಾನಃ ಸ್ಸರ್ವ ಶರೀರಃ" ಎಂಬುದಾಗಿ ಅಮರ ನಿಘಂಟಿನಲ್ಲಿ ಹೇಳಿದೆ. ಈ ಪಂಚವಾಯುಗಳು ಅಪಂಚೀಕೃತ ಪಂಚಮಹಾಭೂತಗಳ ಸಮಷ್ಟಿ ರಜೋಗುಣದಿಂದ ಆಗಿವೆ.

ಪ್ರ ೮೯ : **ಪ್ರಾಣವಾಯುವಿನ ಸ್ಥಾನ, ಕ್ರಿಯೆ, ಅಧಿದೇವತೆಗಳ ವಿಚಾರ ತಿಳಿಸಿ.**

ಉ : ಪ್ರಾಣವಾಯುವು ಹೃದಯ ಸ್ಥಾನದಲ್ಲಿದ್ದುಕೊಂಡು ತನಗೆ ಅಧಿಷ್ಠಾನ ದೇವತೆಯಾದ 'ವಿಶಿಷ್ಟ'ನೆಂಬ ದೇವತೆಯಿಂದ ಪ್ರೇರೇಪಿತವಾಗಿ ಒಂದು ದಿನಕ್ಕೆ ೨೧,೬೦೦ ಬಾರಿ ಉಚ್ಛ್ವಾಸ ಅಂದರೆ ಉಸಿರನ್ನು ಒಳಗೆ ತೆಗೆದುಕೊಳ್ಳುವ ಕ್ರಿಯೆಯನ್ನು ಮಾಡುತ್ತದೆ.

ಪ್ರ ೯೦ : **ಅಪಾನ ವಾಯುವಿನ ಸ್ಥಾನ, ಕ್ರಿಯೆ ಯಾವುದು? ಅಧಿದೇವತೆ ಯಾರು ?**

ಉ : ಅಪಾನ ವಾಯುವು ಗುದಸ್ಥಾನದಲ್ಲಿದ್ದುಕೊಂಡು ತನಗೆ ಅಧಿದೇವತೆಯಾದ 'ವಿಶ್ವಕರ್ತ'ನಿಂದ ಪ್ರೇರೇಪಿತವಾಗಿ ಇದು ದಿನಕ್ಕೆ ೨೧,೬೦೦ ಬಾರಿ ನಿಶ್ವಾಸ ಅಂದರೆ ಉಸಿರನ್ನು ಹೊರಗೆ ಬಿಡುವ ಕ್ರಿಯೆಯನ್ನೂ ಮತ್ತು ಮಲಮೂತ್ರ ವಿಸರ್ಜನಾದಿ ಕ್ರಿಯೆಯನ್ನೂ ಮಾಡುತ್ತದೆ.

ಪ್ರ ೯೧ : **ಸಮಾನ ವಾಯುವಿನ ಕ್ರಿಯೆ, ಸ್ಥಾನ, ಅಧಿದೇವತೆಗಳ ವಿಚಾರ ತಿಳಿಸಿ.**

ಉ : ಸಮಾನ ವಾಯುವು ನಾಭಿಸ್ಥಾನದಲ್ಲಿದ್ದುಕೊಂಡು ತನಗೆ ಅಧಿದೇವತೆಯಾದ 'ಜಯ'ನಿಂದ ಪ್ರೇರಿತವಾಗಿ ನಾವು ತಿಂದ 'ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಚೋಷ್ಯ'ಗಳೆಂಬ ನಾಲ್ಕು ವಿಧವಾದ ಆಹಾರಗಳನ್ನು ಜಠರಾಗ್ನಿಯ ಸಹಾಯದಿಂದ ಜೀರ್ಣ ಮಾಡುತ್ತದೆ.

ಪ್ರ ೯೨ : **ಉದಾನ ವಾಯುವಿನ ಸ್ಥಾನ ಯಾವುದು ? ಕ್ರಿಯೆ ಏನು ? ಅಧಿದೇವತೆ ಯಾರು ?**

ಉ : ಉದಾನ ವಾಯುವು ಕಂಠಸ್ಥಾನದಲ್ಲಿದ್ದುಕೊಂಡು, 'ಅಜ'ನೆಂಬ ಅಧಿದೇವತೆಯಿಂದ ಪ್ರೇರೇಪಿಸಲ್ಪಟ್ಟು, ನಾವು ತೆಗೆದುಕೊಂಡ ಅನ್ನ-ನೀರುಗಳನ್ನು ಬೇರ್ಪಡಿಸಿ ಆಯಾ ಸ್ಥಾನಕ್ಕೆ ಕಳಿಸುತ್ತದೆ. ಮತ್ತು ಜಾಗ್ರದಾವಸ್ಥೆಯಲ್ಲಿ ಎಲ್ಲಾ ಇಂದ್ರಿಯಗಳನ್ನು ಅದರದರ ಗೋಳಕಕ್ಕೆ ಕಳುಹಿಸಿ ಆಯಾ ಕ್ರಿಯೆಗಳನ್ನು ಮಾಡುವಂತೆ ಪ್ರೇರೇಪಿಸಿ ಪುನಃ ಸುಷುಪ್ತಿಯಲ್ಲಿ ಎಲ್ಲಾ ಇಂದ್ರಿಯಗಳನ್ನು ಒಳಗೆಳೆದುಕೊಂಡು ಬಿಡುತ್ತದೆ. ಸ್ವಪ್ನಕ್ಕೂ ಇದೇ ಕಾರಣವಾಗಿದೆ. ಮತ್ತು ಬಿಕ್ಕಳಿಕೆ, ತೇಗು, ಸೀನು, ವಾಂತಿ, ಆಕಳಿಕೆ—ಇತ್ಯಾದಿ ಊರ್ಧ್ವಮುಖ ಕ್ರಿಯೆಗಳಿಗೆಲ್ಲಾ ಈ ಉದಾನ ವಾಯುವೇ ಹೇತುವಾಗಿದೆ.

ಪ್ರ ೯೩ : **ವ್ಯಾನ ವಾಯುವಿನ ಸ್ಥಾನ ಯಾವುದು ? ಕ್ರಿಯೆ ಏನು ? ಅಧಿದೇವತೆ ಯಾರು ?**

ಉ : ವ್ಯಾನ ವಾಯುವು ಶರೀರದಲ್ಲೆಲ್ಲಾ ವ್ಯಾಪಕವಾಗಿದ್ದುಕೊಂಡು 'ವಿಶ್ವಯೋನಿ' ಎಂಬ ತನ್ನ ಅಧಿಷ್ಠಾನ ದೇವತೆಯಿಂದ ಪ್ರೇರೇಪಿತವಾಗಿ, ಕೀಲುಗಳನ್ನು ಮಡಿಸುವ-ಬಿಚ್ಚುವ ಕ್ರಿಯೆಯನ್ನು ಮಾಡುತ್ತದೆ.

ಪ್ರ ೯೪ : **ಉಪವಾಯುಗಳೆಷ್ಟು? ಅವು ಯಾವುವು ?**

ಉ : ಉಪವಾಯುಗಳು – ೧) ನಾಗ, ೨) ಕೂರ್ಮ, ೩) ಕೃಕರ, ೪) ದೇವದತ್ತ, ೫) ಧನಂಜಯ ಎಂಬುದಾಗಿ ಐದು ವಿಧವಾಗಿವೆ.

ಪ್ರ ೯೫ : **ಉಪವಾಯುಗಳ ಕ್ರಿಯೆ ಏನು ?**

ಉ : ನಾಗ ವಾಯುವು ಹೃದಯ ಸ್ಥಾನದಲ್ಲಿರುವ ಪ್ರಾಣ ವಾಯುವಿ

ನಲ್ಲಿ ಅಂತರ್ಗತವಾಗಿದ್ದುಕೊಂಡು 'ವಾಂತಿ' ಮಾಡುವ ಕ್ರಿಯೆಯನ್ನು ಮಾಡಿಸುತ್ತದೆ.

ಕೂರ್ಮ ವಾಯುವು ಗುದಸ್ಥಾನದಲ್ಲಿರುವ ಅಪಾನ ವಾಯುವಿನಲ್ಲಿ ಅಂತರ್ಗತವಾಗಿದ್ದುಕೊಂಡು, ಕಣ್ಣುರೆಪ್ಪೆ ಮುಚ್ಚುವ-ತೆರೆಯುವ, ತುಟಿಗಳನ್ನು ಅಲ್ಲಾಡಿಸುವ ಕೆಲಸವನ್ನು ಮಾಡುತ್ತದೆ. ಕೃಕರ ವಾಯುವು ನಾಭಿಸ್ಥಾನದಲ್ಲಿರುವ ಸಮಾನ ವಾಯುವಿನಲ್ಲಿ ಅಂತರ್ಗತವಾಗಿದ್ದುಕೊಂಡು ಸೀನುವ ಕೆಲಸವನ್ನು ಮಾಡುತ್ತದೆ.

ದೇವದತ್ತವೆಂಬ ಉಪವಾಯುವು ಕಂಠಸ್ಥಾನದಲ್ಲಿರುವ ಉದಾನ ವಾಯುವಿನಲ್ಲಿ ಅಂತರ್ಗತವಾಗಿದ್ದುಕೊಂಡು ಆಕಳಿಕೆಯನ್ನುಂಟು ಮಾಡುತ್ತದೆ.

ಧನಂಜಯ ವಾಯುವು ಶರೀರದಲ್ಲೆಲ್ಲಾ ವ್ಯಾಪಕವಾಗಿರುವ ವ್ಯಾನ ವಾಯುವಿನಲ್ಲಿ ಅಂತರ್ಗತವಾಗಿದ್ದುಕೊಂಡು, ಮನುಷ್ಯನು ಸತ್ತಮೇಲೂ ಸಹ ಇದ್ದು, ದೇಹವನ್ನು ನೆಲದಲ್ಲಿ ಹೂಳಿದರೆ ಅದು ಉಬ್ಬಿ ಬಾತು ಒಡೆದು ಪಂಚಭೂತಗಳಲ್ಲಿ ಲೀನವಾದ ಮೇಲೆ ಮಹಾಪ್ರಾಣದಲ್ಲಿ ಸೇರಿಹೋಗುತ್ತದೆ. ಒಂದು ವೇಳೆ ಶವವನ್ನು ಸುಟ್ಟರೆ, ತಲೆ ಬುರುಡೆ ಸಿಡಿಯುವವರೆಗೂ ಇದ್ದು ನಂತರ ಮಹಾಪ್ರಾಣದಲ್ಲಿ ಸೇರುತ್ತದೆ.

ಪ್ರ ೯೬ : **ಅಂತಃಕರಣದ ವಿಚಾರವೇನು ?**

ಉ : ಅಂತಃಕರಣವು ಆಯಾ ವೃತ್ತಿಗನುಸಾರವಾಗಿ ನಾಲ್ಕು ಭಾಗವಾಗಿ "ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ"ಗಳೆಂಬ ಹೆಸರುಗಳನ್ನು ಪಡೆದಿದೆ. ಇಲ್ಲಿ ಚಿತ್ತವನ್ನು ಮನಸ್ಸಿನಲ್ಲಿಯೂ, ಅಹಂಕಾರವನ್ನು ಬುದ್ಧಿಯಲ್ಲಿಯೂ ಅಂತರ್ಗತಗೊಳಿಸಿ, ಮುಖ್ಯವಾಗಿ ಮನಸ್ಸು, ಬುದ್ಧಿಗಳೆರಡನ್ನೇ ತೆಗೆದುಕೊಂಡಿದೆ. ಇದು ಅಪಂಚೀಕೃತ ಪಂಚಮಹಾಭೂತಗಳ ಸಮಷ್ಟಿ ಸತ್ವಗುಣದಿಂದ ಆಗಿದೆ.

ಪ್ರ ೯೭ : **ಮನಸ್ಸಿನ ಸ್ವರೂಪವೇನು ?**

ಉ : ಮನಸೋಃಚಂದ್ರಮಾಜಾತಾ – ಮನಸ್ಸು ಅಂತರ ಅಥವಾ ಕುತ್ತಿಗೆಯಲ್ಲಿದ್ದುಕೊಂಡು ತನಗೆ ಅಧಿದೇವತೆಯಾದ ಚಂದ್ರನಿಂದ ಪ್ರೇರಿತವಾಗಿ ಸಂಕಲ್ಪ-ವಿಕಲ್ಪಗಳನ್ನು ಮಾಡುತ್ತದೆ.

ಪ್ರ ೯೮ : **ಬುದ್ಧಿಯ ಸ್ವರೂಪವೇನು ?**

ಉ : ಬುದ್ಧಿಯು ಮುಖದಲ್ಲಿದ್ದುಕೊಂಡು ತನಗೆ ಅಧಿದೇವತೆಯಾದ ಬೃಹಸ್ಪತಿ ಅಥವಾ ಚತುರ್ಮುಖ ಬ್ರಹ್ಮನಿಂದ ಪ್ರೇರೇಪಿತವಾಗಿ ನಿಶ್ಚಯ ವನ್ನು ಮಾಡುತ್ತದೆ.

ಪ್ರ ೯೯ : **ನಾನು ಜಾಗ್ರದಾವಸ್ಥೆಯಲ್ಲಿ ಎಲ್ಲವನ್ನೂ ಹೇಗೆ ಬೆಳಗುತ್ತೇನೆ ?**

ಉ : ನಾನು ಜಾಗ್ರದಾವಸ್ಥೆಯಲ್ಲಿ ಮನಸ್ಸು, ಇಂದ್ರಿಯಗಳ ಸಹಾಯದಿಂದ ಎಲ್ಲವನ್ನೂ ಬೆಳಗುತ್ತೇನೆ.

ಪ್ರ ೧೦೦ : **ನಾನು ಸ್ವಪ್ನಾವಸ್ಥೆಯಲ್ಲಿ ಎಲ್ಲವನ್ನೂ ಹೇಗೆ ಪ್ರಕಾಶಿ ಸುತ್ತೇನೆ ?**

ಉ : ನಾನು ಸ್ವಪ್ನಾವಸ್ಥೆಯಲ್ಲಿ ಕೇವಲ ಅಂತಃಕರಣ ಉಪಾಧಿಯಿಂದ ಬೆಳಗುತ್ತೇನೆ.

ಪ್ರ ೧೦೧ : **ನಾನು ಸುಷುಪ್ತಿಯಲ್ಲಿ ಇರುವೆನೆಂಬ ಅನುಭವ ವೇನು ?**

ಉ : ನಾನು ಸುಷುಪ್ತಾವಸ್ಥೆಯಲ್ಲಿ ಅವಿದ್ಯಾ ಉಪಾಧಿಯಿಂದ ಸುಖ ವನ್ನು ಬೆಳಗುವುದರಿಂದಲೇ, ನಿದ್ರೆ ಮಾಡಿ ಎದ್ದ ನಂತರ 'ನಿದ್ರೆ ಹೇಗೆ ಮಾಡಿದೆ ?' ಎಂದು ಯಾರಾದರೂ ಪ್ರಶ್ನಿಸಿದರೆ, "ಸುಖವಾಗಿ, ಹಾಯಾಗಿ ಮಲಗಿದ್ದೆ, ಏನೊಂದೂ ಗೊತ್ತಾಗಲಿಲ್ಲ" ಎಂಬುದಾಗಿ ಸುಷುಪ್ತಿ ಅವಸ್ಥೆಯ ಅನುಭವವನ್ನು ಹೇಳುವುದರಿಂದ, ಸುಷುಪ್ತಿಯಲ್ಲಿ ನಾನಿದ್ದೇನೆ ಎಂಬುದು ಸಿದ್ಧವಾಗುತ್ತದೆ.

ಪ್ರ ೧೦೨ : **ಸೂಕ್ಷ್ಮ ದೇಹಕ್ಕೆ ಸಂಬಂಧಪಟ್ಟ ಹದಿನೇಳು ತತ್ವ ಗಳು ನಾನಲ್ಲ ಮತ್ತು ನನ್ನವಲ್ಲವೆಂದು ಹೇಗೆ ತಿಳಿದುಕೊಳ್ಳಬೇಕು ?**

ಉ : ಈ ಹದಿನೇಳು ತತ್ವಗಳು ನನಗೆ ದೃಶ್ಯವಾಗಿ ತೋರುವುದರಿಂದ ನಾನಲ್ಲ ; ಇವು ಅಪಂಚೀಕೃತ ಪಂಚ ಮಹಾಭೂತಗಳಿಗೆ ಸೇರಿರುವುದರಿಂದ ನನ್ನವೂ ಅಲ್ಲ. ನಾನು ಇದಕ್ಕೆ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ವಿಲಕ್ಷಣ ಹಾಗೂ ಬೇರೆಯಾಗಿರುತ್ತಾನೆ. ಎಂದಿಗೂ ಘಟವಾಗ ಲಾರ, ಇದರಂತೆ ಹದಿನೇಳು ತತ್ವಗಳಿಂದ ಕೂಡಿದ ಈ ಸೂಕ್ಷ್ಮದೇಹವನ್ನು

ನೋಡುವ ನಾನು ಎಂದಿಗೂ ಈ ದೇಹವಾಗುವುದಿಲ್ಲ. ಈ ರೀತಿ ವಿಚಾರ ಮಾಡಿ ಸೂಕ್ಷ್ಮದೇಹ ನಾನೂ ಅಲ್ಲ, ನನ್ನದೂ ಅಲ್ಲವೆಂಬುದಾಗಿ ತಿಳಿದುಕೊಳ್ಳಬೇಕು.

ಪ್ರ ೧೦೩ : **ಈ ರೀತಿ ತಿಳಿದುಕೊಳ್ಳುವುದರಿಂದ ಉಂಟಾಗುವ ಲಾಭವೇನು ?**

ಉ : ಈ ಹದಿನೇಳು ತತ್ವಗಳಿಂದ ಕೂಡಿದ ಸೂಕ್ಷ್ಮ ದೇಹವು ನಾನು ಮತ್ತು ನನ್ನದು ಎಂಬುದಾಗಿ ಭಾವಿಸಿದ್ದ ತಪ್ಪು ತಿಳುವಳಿಕೆ ಹೋಗುವುದೇ ಲಾಭವಾಗಿದೆ.

ಪ್ರ ೧೦೪ : **ಈ ವಿಷಯಕ್ಕೆ ದೃಷ್ಟಾಂತವೇನು ?**

ಉ : ಒಂದು ನಾಟಕ ಶಾಲೆಯಲ್ಲಿ ರಾಜ, ಮಂತ್ರಿ, ಸಭಿಕರು ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತು ನೃತ್ಯವು ಪ್ರಾರಂಭವಾಗುವುದನ್ನೇ ಎದುರು ನೋಡುತ್ತಿದ್ದಾರೆ. ಆಗ ನರ್ತಕಿಯು ಬಂದು ನೃತ್ಯ ಮಾಡುತ್ತಾಳೆ. ಅದಕ್ಕನುಸಾರವಾಗಿ ಪಕ್ಕ ವಾದ್ಯದವರು ವಾದ್ಯಗಳನ್ನು ಬಾರಿಸುತ್ತಾರೆ. ರಾಜ, ಮಂತ್ರಿ, ಸಭಿಕರೆಲ್ಲರೂ ಸಂತೋಷದಿಂದ ನೋಡುತ್ತಾ ಕುಳಿತಿದ್ದಾರೆ. ಇದೆಲ್ಲವನ್ನೂ ಆ ನೃತ್ಯಶಾಲೆಯ ದೀಪವು ಬೆಳಗುತ್ತದೆ. ಸ್ವಲ್ಪ ಹೊತ್ತಾದ ನಂತರ ನೃತ್ಯ ಮುಗಿದು ಹೋಗುತ್ತದೆ. ಅದನ್ನೂ ಆ ದೀಪವು ಬೆಳಗುತ್ತದೆ. ನಂತರ ಎಲ್ಲರೂ ಹೋದ ಮೇಲೆ ಉಳಿದ ಖಾಲಿ ಸ್ಥಳವನ್ನೂ ಪ್ರಕಾಶಿಸುತ್ತದೆ.

ಪ್ರ ೧೦೫ : **ದಾರ್ಷ್ಟಾಂತವೇನು ?**

ಉ : ಈ ಸ್ಥೂಲ ದೇಹವೇ ಒಂದು ನೃತ್ಯಶಾಲೆ. ಚಿದಾಭಾಸನೇ ರಾಜ, ಮನಸ್ಸೇ ಮಂತ್ರಿ, ಬುದ್ಧಿಯೇ ನರ್ತಕಿ, ದಶೇಂದ್ರಿಯಗಳೇ ವಾದ್ಯಗಾರರು ; ಪಂಚಪ್ರಾಣಗಳೇ ಅನುಚರರು ; ಶಬ್ದಾದಿ ಪಂಚ ವಿಷಯಗಳೇ ಸಭಿಕರು. 'ಬುದ್ಧಿ' ಎಂಬ ನರ್ತಕಿಯು ಜಾಗ್ರತ್, ಸ್ವಪ್ನಗಳಲ್ಲಿ ವಿಷಯಗಳೊಡನೆ ಕೂಡಿ ಅವುಗಳನ್ನು ಭೋಗಿಸುತ್ತಾ ಎಲ್ಲಾ ವ್ಯವಹಾರ ಮಾಡುತ್ತಾಳೆ, ಇಂದ್ರಿಯಗಳು ಬುದ್ಧಿಗನುಸಾರವಾಗಿ ಎಲ್ಲಾ ಕೆಲಸ ಮಾಡುತ್ತವೆ. ನಂತರ ಸುಷುಪ್ತಿಯಲ್ಲಿ ಬುದ್ಧಿಯು ತನಗೆ ಕಾರಣವಾದ ಅಜ್ಞಾನದಲ್ಲಿ ಲಯಿಸುತ್ತದೆ. ಆಗ ಯಾವ ವ್ಯವಹಾರವೂ ನಡೆಯುವುದಿಲ್ಲ. ಇಲ್ಲಿ ಆತ್ಮನೇ ದೀಪ. ಜಾಗ್ರತ್ಸ್ವಪ್ನಗಳಲ್ಲಿ ಎಲ್ಲಾ ವ್ಯವಹಾರಗಳು ನಡೆದರೂ,

ಸುಷುಪ್ತಿಯಲ್ಲಿ ಏನೂ ನಡೆಯದಿದ್ದರೂ, ಆತ್ಮನು ನಿರ್ವಿಕಾರವಾಗಿದ್ದು, ಅಸಂಗವಾಗಿದ್ದು, ಸಾಕ್ಷಿಯಾಗಿದ್ದು ಬೆಳಗುತ್ತಾನೆ.

ಪ್ರ ೧೦೬ : ದೃಷ್ಟಾಂತ ದ್ರಾಷ್ಟಾಂತಗಳ ವಿವರಣೆ ಏನು ?

ಉ : ನಾಟಕ ಶಾಲೆಯಲ್ಲಿನ ದೀಪವು ಅಲ್ಲಿ ನಡೆಯುವ ವ್ಯವಹಾರ ಗಳೆಲ್ಲವನ್ನೂ, ಎಲ್ಲವೂ ಮುಗಿದ ಮೇಲೆ ಅದರ ಅಭಾವವನ್ನೂ ನಿರ್ವಿಕಾರ ವಾಗಿದ್ದು ಬೆಳಗಿದಂತೆ, ದೇಹದಲ್ಲಿರುವ ಸಾಕ್ಷಿಯಾದ ಆತ್ಮನು ನಿರ್ವಿಕಾರ ವಾಗಿದ್ದುಕೊಂಡು, ದೇಹೇಂದ್ರಿಯಾದಿಗಳಿಂದ ನಡೆಯುವ ಎಲ್ಲಾ ಕ್ರಿಯೆ ಗಳನ್ನೂ ಬೆಳಗುತ್ತಾನೆ.

ಪ್ರ ೧೦೭ : ಇದಕ್ಕೆ ಮತ್ತೊಂದು ದೃಷ್ಟಾಂತವೇನು ?

ಉ : ಶ್ರೀ ಶಂಕರಾಚಾರ್ಯರು ಶ್ರೀ ದಕ್ಷಿಣಾಮೂರ್ತಿ ಸ್ತೋತ್ರ ದಲ್ಲಿ ಈ ರೀತಿ ಹೇಳಿದ್ದಾರೆ :-

**ಶ್ಲೋಕ : ನಾನಾಛಿದ್ರ ಘಟೋದರಸ್ಥಿತ ಮಹಾದೀಪ ಪ್ರಭಾಭಾಸ್ವರಂ |**
**ಜ್ಞಾನಂ ಯಸ್ಯತು ಚಕ್ಷುರಾದಿಕರಣ ದ್ವಾರಾಬಹಿಸ್ಪಂದತೇ ||**
**ಜಾನಾಮೀತಿ ತಮೇವ ಭಾಂತ ಮನುಭಾತ್ಯೇತತ್ಸಮಸ್ತಂ**
**ಜಗತ್ | ತಸ್ಮೈಶ್ರೀ ಗುರು ಮೂರ್ತಯೇ ನಮ ಇದಂ ಶ್ರೀ**
**ದಕ್ಷಿಣಾಮೂರ್ತಿಯೇ ||**

ಅರ್ಥ : ಅನೇಕ ಛಿದ್ರಗಳುಳ್ಳ ಒಂದು ಕೊಡವಿದೆ. ಅದರೊಳಗೆ ಒಂದು ಹಣತೆಯನ್ನು ಹಚ್ಚಿ ಇಟ್ಟಿದೆ. ಆ ದೀಪವು ತನ್ನ ಬೆಳಕಿನಲ್ಲಿ ತಾನು ಬೆಳಗಿ, ತನ್ನ ಬೆಳಕಿಗೆ ಸಂಬಂಧಪಟ್ಟ ಹಣತೆ, ಎಣ್ಣೆ, ಬತ್ತಿ ಮೊದಲಾದು ವನ್ನೆಲ್ಲಾ ಬೆಳಗಿ, ಕೊಡದ ಒಳಭಾಗವನ್ನೆಲ್ಲಾ ಪ್ರಕಾಶಿಸುವುದಲ್ಲದೆ, ಆ ಅನೇಕ ಛಿದ್ರಗಳ ದ್ವಾರ ಹೊರಬಂದು ಹೊರಗಿನ ಎಲ್ಲಾ ವಸ್ತುಗಳನ್ನೂ ಬೆಳಗುತ್ತದೆ. ಮತ್ತು ಸೂರ್ಯರೂಪದಿಂದ ಸಮಸ್ತ ಜಗತ್ತನ್ನೂ, ಸಾಮಾನ್ಯ ರೂಪದಿಂದ ಸಮಸ್ತ ಬ್ರಹ್ಮಾಂಡವನ್ನೂ ಬೆಳಗುತ್ತದೆ .

ಪ್ರ ೧೦೮ : ದ್ರಾಷ್ಟಾಂತವೇನು ?

ಉ : ಸ್ಥೂಲ ದೇಹವೇ ಕೊಡ, ಪಂಚ ಜ್ಞಾನೇಂದ್ರಿಯಗಳೇ ಐದು ಛಿದ್ರಗಳು, ಹೃದಯವೇ ಹಣತೆ, ಮನಸ್ಸೇ ಎಣ್ಣೆ, ಬುದ್ಧಿಯೇ ಬತ್ತಿ.

ಇದರಲ್ಲಿ ಆರೂಢವಾಗಿರುವ ಜ್ಯೋತಿಯೇ ಆತ್ಮ. ಈ ಆತ್ಮಜ್ಯೋತಿಯು ತನ್ನ ಬೆಳಕಿನಲ್ಲಿ ತಾನು ಬೆಳಗುತ್ತಾ, ತನ್ನ ಬೆಳಕಿಗೆ ಸಂಬಂಧಪಟ್ಟ ಹೃದಯ ವೆಂಬ ಹಣತೆಯನ್ನೂ, ಮನಸ್ಸೆಂಬ ಎಣ್ಣೆಯನ್ನೂ, ಬುದ್ಧಿಯೆಂಬ ಬತ್ತಿ ಯನ್ನೂ, ಹೀಗೆ ದೇಹದ ಒಳಭಾಗವನ್ನೆಲ್ಲಾ ಬೆಳಗಿ, ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯಗಳ ದ್ವಾರ ಹೊರಬಂದು ಶಬ್ದಾದಿ ಪಂಚವಿಷಯಗಳನ್ನೂ ಬೆಳಗುತ್ತದೆ. ಈ ಆತ್ಮಜ್ಯೋತಿಯೇ ಈಶ್ವರ ರೂಪದಿಂದ ಜಗತ್ತನ್ನೂ, ಅಸ್ತಿ, ಭಾತಿ, ಪ್ರಿಯರೂಪವೆಂಬ ಸಾಮಾನ್ಯ ರೂಪದಿಂದ ಸಮಸ್ತ ಬ್ರಹ್ಮಾಂಡ ವನ್ನೂ ಬೆಳಗುತ್ತದೆ.

ಪ್ರ ೧೦೯ : **ಮೇಲಿನ ಎರಡು ದೃಷ್ಟಾಂತಗಳಿಂದ ತಿಳಿದುಕೊಳ್ಳ ಬೇಕಾದ ಎರಡು ಅಂಶಗಳೇನು ?**

ಉ : ನೃತ್ಯಶಾಲೆಯ ದೀಪವು ನೃತ್ಯ ನಡೆದಾಗಲೂ, ಅದು ಮುಗಿದು ಎಲ್ಲರೂ ಎದ್ದು ಹೋದ ಮೇಲೂ ಹೇಗೆ ನಿರ್ವಿಕಾರವಾಗಿದ್ದು ಪ್ರಕಾಶ ಮಾಡಿತೋ, ಅದರಂತೆ ಆತ್ಮಜ್ಯೋತಿಯು ಈ ದೇಹದಲ್ಲಿ ಜಾಗ್ರತ್ ಸ್ವಪ್ನ ಗಳಲ್ಲಿ ದೇಹ, ಇಂದ್ರಿಯಗಳಿಂದ ವ್ಯವಹಾರ ನಡೆದರೂ, ಸುಷುಪ್ತಿಯಲ್ಲಿ ನಡೆಯದಿದ್ದರೂ, ಇದರ ಭಾವಾಭಾವಗಳನ್ನು ನಿರ್ವಿಕಾರವಾಗಿದ್ದು ಬೆಳಗು ತ್ತದೆ. ಮತ್ತು ಘಟದೊಳಗಿನ ದೀಪವು ಘಟದ ಒಳಹೊರಗೆಲ್ಲಾ ಪ್ರಕಾಶ ಮಾಡಿದಂತೆ, ಆತ್ಮಜ್ಯೋತಿಯು ದೇಹದ ಒಳಹೊರಗೆಲ್ಲಾ ಸಾಕ್ಷಿರೂಪದಿಂದ ಸ್ವಯಂಪ್ರಕಾಶದಿಂದ ಬೆಳಗುತ್ತದೆ. ಈ ಎರಡು ಅಂಶಗಳನ್ನು ಮೇಲೆ ಹೇಳಿದ ಎರಡು ದೃಷ್ಟಾಂತಗಳಿಂದ ತಿಳಿದುಕೊಳ್ಳಬೇಕು.

ಪ್ರ ೧೧೦ : **ಇಲ್ಲಿಯವರೆಗೂ ಮಾಡಿದ ವರ್ಣನೆಯ ಸಾರಾಂಶ ವೇನು ?**

ಉ : ದೀಪಕ್ಕೆ ಬೆಳಗುವುದು ಹೇಗೆ ಸ್ವಭಾವವೋ ಹಾಗೆ ಆತ್ಮನಿಗೆ ಅರಿಯುವುದೇ ಸ್ವಭಾವ. ಆದ್ದರಿಂದ ಸ್ವಯಂ ಪ್ರಕಾಶನಾದ ಆತ್ಮನು ಚೇತನನಾಗಿದ್ದಾನೆ. ಸೂಕ್ಷ್ಮ ದೇಹವು ತನ್ನನ್ನು ತಾನೂ ಅರಿಯುವುದಿಲ್ಲ, ಅನ್ಯವನ್ನೂ ತಿಳಿಯುವುದಿಲ್ಲವಾದ್ದರಿಂದ ಜಡವಾಗಿದೆ.

ಪ್ರ ೧೧೧ : **ಸೂಕ್ಷ್ಮ ದೇಹ ನಾನೂ ಅಲ್ಲ, ನನ್ನದೂ ಅಲ್ಲ, ನಾನು ಇದಕ್ಕೆ ವಿಲಕ್ಷಣನು ಎಂದು ಹೇಗೆ ತಿಳಿದುಕೊಳ್ಳಬೇಕು ?**

ಉ : ಈ ಸೂಕ್ಷ್ಮ ದೇಹವು ದೃಶ್ಯ, ಜಡ, ವಿಕಾರಿಯಾಗಿದೆ. ಆತ್ಮನಾದ ನಾನು ಇದನ್ನು ನೋಡುವ ದ್ರಷ್ಟನೂ, ಚೇತನನೂ, ನಿರ್ವಿಕಾರಿಯೂ ಆಗಿದ್ದೇನೆ. ಇದು ದೃಶ್ಯವಾದುದರಿಂದ ನಾನಲ್ಲ ಮತ್ತು ಇದು ಅಪಂಚೀಕೃತ ಪಂಚ ಮಹಾಭೂತಗಳ ಕಾರ್ಯವಾದುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಸೂಕ್ಷ್ಮ ದೇಹವನ್ನೂ, ಇದರ ಭಾವಾಭಾವಗಳನ್ನೂ ತಿಳಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೧೨ : **ಶ್ರೋತ್ರೇಂದ್ರಿಯವು ನಾನೂ ಅಲ್ಲ, ನನ್ನದೂ ಅಲ್ಲ, ನಾನು ಇದಕ್ಕಿಂತ ವಿಲಕ್ಷಣನು ಎಂದು ಹೇಗೆ ತಿಳಿದುಕೊಳ್ಳಬೇಕು ?**

ಉ : ಶ್ರೋತ್ರೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ಶಬ್ದವನ್ನು ಕೇಳಿದರೂ ನಾನು ತಿಳಿಯುತ್ತೇನೆ. ಸುಷುಪ್ತಿಯಲ್ಲಿ ಅದು ಕೇಳದಿರುವ ಅಭಾವವನ್ನೂ ನಾನು ತಿಳಿಯುತ್ತೇನೆ. ಆದ್ದರಿಂದ ಇದು ನಾನಲ್ಲ. ಇದು ಆಕಾಶ ಭೂತದ ವ್ಯಷ್ಟಿ ಸತ್ವಗುಣವಾಗಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಶ್ರೋತ್ರೇಂದ್ರಿಯದ ಭಾವಾಭಾವಗಳನ್ನು ತಿಳಿಯುವ ನಾನು ಬೇರೆಯಾಗಿದ್ದೇನೆ.

ಪ್ರ ೧೧೩ : **ತ್ವಗೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ತ್ವಗೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ಸ್ಪರ್ಶವನ್ನು ಗ್ರಹಿಸಿದರೂ, ಸುಷುಪ್ತಿಯಲ್ಲಿ ಗ್ರಹಿಸದಿದ್ದರೂ ನಾನು ತಿಳಿಯುತ್ತೇನೆ. ಆದುದರಿಂದ ಇದು ನಾನಲ್ಲ. ಇದು ವಾಯು ಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ತ್ವಗೇಂದ್ರಿಯದ ಭಾವಾಭಾವಗಳನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿರುತ್ತೇನೆ.

ಪ್ರ ೧೧೪ : **ನೇತ್ರೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ನೇತ್ರೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ರೂಪಗಳನ್ನು

ನೋಡಿದರೂ, ಸುಷುಪ್ತಿಯಲ್ಲಿ ಅದು ನೋಡದಿದ್ದರೂ, ನನಗೆ ಗೊತ್ತಾಗುತ್ತದೆ. ಆದುದರಿಂದ ನೇತ್ರೇಂದ್ರಿಯವು ನಾನಲ್ಲ. ಮತ್ತು ಅದು ಅಗ್ನಿಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ನೇತ್ರೇಂದ್ರಿಯಕ್ಕಿಂತ ವಿಲಕ್ಷಣನು. ಹೇಗೆಂದರೆ ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ನೇತ್ರೇಂದ್ರಿಯದ ಭಾವಾಭಾವಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೧೫ : **ಜಿಹ್ವೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಜಿಹ್ವೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ರಸವನ್ನು ಗ್ರಹಿಸಿದರೂ ನಾನು ತಿಳಿಯುತ್ತೇನೆ. ಸುಷುಪ್ತಿಯಲ್ಲಿ ಗ್ರಹಿಸದಿದ್ದರೂ ನಾನು ತಿಳಿಯುತ್ತೇನೆ. ಆದ್ದರಿಂದ ಇದು ನಾನಲ್ಲ. ಇದು ಜಲಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಜಿಹ್ವೇಂದ್ರಿಯದ ಭಾವಾಭಾವಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೧೬ : **ಘ್ರಾಣೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಜಾಗ್ರತ್, ಸ್ವಪ್ನಗಳಲ್ಲಿ ಘ್ರಾಣೇಂದ್ರಿಯವು ಗಂಧವನ್ನು ಗ್ರಹಿಸಿದರೂ, ಸುಷುಪ್ತಿಯಲ್ಲಿ ಗ್ರಹಿಸದಿದ್ದರೂ ನನಗೆ ಗೊತ್ತಾಗುವುದರಿಂದ ಘ್ರಾಣೇಂದ್ರಿಯವು ನನಗೆ ದೃಶ್ಯವಾಯಿತು. ಆದುದರಿಂದ ಇದು ನಾನಲ್ಲ. ಮತ್ತು ಇದು ಪೃಥ್ವೀಭೂತದ ವ್ಯಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಘ್ರಾಣೇಂದ್ರಿಯದ ಭಾವಾಭಾವಗಳನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಹೀಗೆ ವಿಚಾರ ಮಾಡಿ ಜ್ಞಾನೇಂದ್ರಿಯಗಳು ನಾನಲ್ಲ, ನನ್ನವೂ **ಅಲ್ಲವೆಂಬುದಾಗಿ ಅವುಗಳ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕು.**

ಪ್ರ ೧೧೭ : **ವಾಗೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ವಾಗೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ಮಾತನಾಡಿದರೂ, ಸುಷುಪ್ತಿಯಲ್ಲಿ ಮಾತನಾಡದಿದ್ದರೂ ನಾನು ಅರಿಯುತ್ತೇನೆ. ಆದುದರಿಂದ ವಾಗೇಂದ್ರಿಯವು ನಾನಲ್ಲ. ಇದು ಆಕಾಶಭೂತದ ವ್ಯಷ್ಟಿ ರಜೋಗುಣವಾಗಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ ವಾಗೇಂದ್ರಿಯದ ಭಾವಾಭಾವಗಳನ್ನು ಅರಿಯುವ ನಾನು ಅದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೧೮ : **ಪಾಣೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪಾಣೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ಕೊಡುವ ತೆಗೆದುಕೊಳ್ಳುವ ಕೆಲಸವನ್ನು ಮಾಡಿದರೂ, ಸುಷುಪ್ತಿಯಲ್ಲಿ ಮಾಡದಿದ್ದರೂ ನನಗೆ ಗೊತ್ತಾಗುತ್ತದೆ. ಆದುದರಿಂದ ಇದು ನಾನಲ್ಲ. ಇದು ವಾಯುಭೂತದ ವ್ಯಷ್ಟಿ ರಜೋಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ಬೇರೆಯಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಪಾಣೇಂದ್ರಿಯದ ಭಾವಾಭಾವಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೧೯ : **ಪಾದೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪಾದೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ಗಮನಾಗಮನಗಳನ್ನು ಮಾಡಿದರೂ, ಸುಷುಪ್ತಿಯಲ್ಲಿ ಮಾಡದಿದ್ದರೂ ನನಗೆ ಗೊತ್ತಾಗುವುದರಿಂದ ಇದು ನಾನಲ್ಲ. ಇದು ಅಗ್ನಿಭೂತದ ವ್ಯಷ್ಟಿ ರಜೋಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಪಾದೇಂದ್ರಿಯದ ಭಾವಾಭಾವಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೨೦ : **ಉಪಸ್ಥೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಈ ಇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ತನ್ನ ಕೆಲಸವನ್ನು ಮಾಡಿದರೂ, ಸುಷುಪ್ತಿಯಲ್ಲಿ ಮಾಡದಿದ್ದರೂ ನನಗೆ ತಿಳಿಯುವುದರಿಂದ, ಇದು ನಾನಾಗುವುದಿಲ್ಲ. ಮತ್ತು ಇದು ಜಲಭೂತದ ವ್ಯಷ್ಟಿ ರಜೋಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ ಉಪಸ್ಥೇಂದ್ರಿಯವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೨೧ : **ಗುದೇಂದ್ರಿಯದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಗುದೇಂದ್ರಿಯವು ಜಾಗ್ರತ್, ಸ್ವಪ್ನಗಳಲ್ಲಿ ತನ್ನ ಕ್ರಿಯೆ ಮಾಡಿದರೂ, ಸುಷುಪ್ತಿಯಲ್ಲಿ ಮಾಡದಿದ್ದರೂ, ನನಗೆ ಗೊತ್ತಾಗುವುದರಿಂದ ಇದು ನಾನಲ್ಲ. ಮತ್ತು ಗುದೇಂದ್ರಿಯವು ಪೃಥ್ವೀಭೂತದ ವ್ಯಷ್ಟಿ ರಜೋಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಗುದೇಂದ್ರಿಯದ ಭಾವಾಭಾವಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಹೀಗೆ ವಿಚಾರ ಮಾಡಿ ಕರ್ಮೇಂದ್ರಿಯಗಳ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕು.

ಪ್ರ ೧೨೨ : **ಪಂಚಪ್ರಾಣಗಳ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಪಂಚಪ್ರಾಣಗಳು ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ಮಾಡಿದರೂ ನನಗೆ ತಿಳಿಯುತ್ತದೆ. ಒಂದು ವೇಳೆ ಅವು ಸರಿಯಾಗಿ ಮಾಡದಿದ್ದರೂ ನನಗೆ ಗೊತ್ತಾಗುತ್ತದೆ. ಆದುದರಿಂದ ಪ್ರಾಣಗಳು ನಾನಲ್ಲ. ಇವು ಅಪಂಚೀಕೃತ ಪಂಚ ಮಹಾಭೂತಗಳ ಸಮಷ್ಟಿ ರಜೋಗುಣಕ್ಕೆ ಸೇರಿರುವುದರಿಂದ ನನ್ನವೂ ಅಲ್ಲ. ನಾನು ಇವುಗಳಿಗಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಪಂಚಪ್ರಾಣಗಳನ್ನು ಅರಿಯುವ ನಾನು ಇವುಗಳಿಗಿಂತ ಬೇರೆಯಾಗಿದ್ದೇನೆ.

ಪ್ರ ೧೨೩ : **ನಾನು ಮನಸ್ಸಿನ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಈ ಮನಸ್ಸು ಜಾಗ್ರತ್–ಸ್ವಪ್ನಗಳಲ್ಲಿ ಸಂಕಲ್ಪ ವಿಕಲ್ಪಗಳನ್ನು ಮಾಡಿದರೂ, ಸುಷುಪ್ತಿಯಲ್ಲಿ ಮಾಡದಿದ್ದರೂ, ಮನಸ್ಸಿನ ಭಾವಾಭಾವಗಳು ನನಗೆ ಸ್ಪಷ್ಟವಾಗಿ ಗೋಚರವಾಗುವುದರಿಂದ ನಾನು ಮನಸ್ಸಲ್ಲ. ಮತ್ತು ಇದು ಅಪಂಚೀಕೃತ ಪಂಚಮಹಾಭೂತಗಳ ಸಮಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಮನಸ್ಸಿಗಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಮನಸ್ಸಿನ ಭಾವಾಭಾವಗಳನ್ನೂ, ಅದರ ಎಲ್ಲಾ ವಿಕಾರಗಳನ್ನೂ ತಿಳಿಯುವ ನಾನು ಅದಕ್ಕಿಂತ ಬೇರೆಯಾಗಿದ್ದೇನೆ.

**ಪ್ರ ೧೨೪ : ಬುದ್ಧಿಯೇ ನಾನೆಂಬ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ಬುದ್ಧಿಯು ಜಾಗ್ರತ್, ಸ್ವಪ್ನಗಳಲ್ಲಿ ನಿಶ್ಚಯ ಮಾಡಿದರೂ, ಸುಷುಪ್ತಿಯಲ್ಲಿ ತನ್ನ ಕೆಲಸ ಮಾಡದಿದ್ದರೂ, ನಾನು ಅದನ್ನು ತಿಳಿಯುವುದರಿಂದ ಬುದ್ಧಿಯು ನಾನಲ್ಲ. ಮತ್ತು ಇದು ಅಪಂಚೀಕೃತ ಪಂಚಮಹಾಭೂತಗಳ ಸಮಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಬುದ್ಧಿಯ ಭಾವಾಭಾವಗಳನ್ನು ಅರಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

**ಪ್ರ ೧೨೫ : ಈ ವರ್ಣನೆಗೆ ತಾತ್ಪರ್ಯವೇನು ?**

ಉ : ಇದುವರೆಗೂ ಅಂದರೆ ಅವಿಚಾರ ಕಾಲದಲ್ಲಿ ಈ ಲಿಂಗದೇಹವೇ ನಾನು, ನನ್ನದು ಎಂದು ತಪ್ಪು ತಿಳಿದುಕೊಂಡಿದ್ದೆ. ಈಗ ವಿಚಾರ ಮಾಡಿದ ಮೇಲೆ ಇದು ನನಗೆ ದೃಶ್ಯವಾಯಿತಾದ್ದರಿಂದ ಲಿಂಗದೇಹವು ನಾನಲ್ಲ. ಮತ್ತು ಇದು ಅಪಂಚೀಕೃತ ಪಂಚಮಹಾಭೂತಗಳಿಗೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಲಿಂಗದೇಹವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ. ಹೀಗೆ ತಿಳಿಯುವುದೇ ಇದುವರೆಗೆ ಮಾಡಿದ ವರ್ಣನೆಯ ತಾತ್ಪರ್ಯ.

**ಪ್ರ ೧೨೬ : ಲಿಂಗದೇಹದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ ?**

ಉ : ವಿವೇಕದಿಂದ ವಿಚಾರ ಮಾಡುವುದೇ ಇದರ ಅಧ್ಯಾಸವನ್ನು ಬಿಡಿಸಿಕೊಳ್ಳಲು ಇರುವ ಸುಲಭೋಪಾಯ.

ವಿಚಾರ ಮಾಡಿದರೆ ಸೂಕ್ಷ್ಮ ದೇಹವು ದೃಶ್ಯವೆಂತಲೂ, ಇದನು ನೋಡುವ ಆತ್ಮನಾದ ನಾನು ದ್ರಷ್ಟನೆಂತಲೂ, ಇದು ವಿಕಾರಿ, ಆತ್ಮನಾದ ನಾನು ನಿರ್ವಿಕಾರಿ, ಸೂಕ್ಷ್ಮ ದೇಹವು ಪರಿಚ್ಛಿನ್ನ, ನಾನು ಪರಿಪೂರ್ಣನೆಂಬುದಾಗಿಯೂ ತಿಳಿದು ಲಿಂಗದೇಹದ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕು.

**ಪ್ರ ೧೨೭ : ಅಧ್ಯಾಸವನ್ನು ಬಿಡಿಸಿಕೊಂಡ ಮೇಲೆ ಉಂಟಾಗುವ ನಿಶ್ಚಯವೇನು ?**

ಉ : ಈ ಸೂಕ್ಷ್ಮ ದೇಹವು ನಾನಲ್ಲವಾದುದರಿಂದ ಇದರ ಧರ್ಮಗಳಾದ ಕರ್ತೃತ್ವ–ಭೋಕ್ತೃತ್ವಗಳೂ, ಅದರಿಂದುಂಟಾಗುವ ಸುಖ–ದುಃಖಗಳೂ ನನಗಿಲ್ಲವೆಂಬುದಾಗಿ ನಿಶ್ಚಯವಾಯಿತು.

**ಪ್ರ ೧೨೮: ಪುಣ್ಯ ಪಾಪಗಳಿಗೆ ನಾನು ಕರ್ತನೂ ಅಲ್ಲ, ಭೋಕ್ತನೂ ಅಲ್ಲ ಎಂಬುದನ್ನು ಹೇಗೆ ತಿಳಿದುಕೊಳ್ಳಬೇಕು ?**

ಉ : ಪುಣ್ಯ–ಪಾಪ ಕರ್ಮಗಳು ನಡೆಯುವುದು ಕ್ರಿಯಾಶೀಲವಾದ, ಸಾವಯವ, ವಿಕಾರ ಪದಾರ್ಥಗಳಲ್ಲಿ. ದೇಹೇಂದ್ರಿಯಾದಿಗಳು ಮತ್ತು ಅಂತಃಕರಣವು ವಿಕಾರಿಗಳಾಗಿರುವುದರಿಂದ ಕ್ರಿಯೆಗಳು ನಡೆಯುತ್ತವೆ. ಆತ್ಮನಾದ ನಾನು ನಿಷ್ಕ್ರಿಯನೂ, ನಿರವಯವನೂ, ನಿರ್ವಿಕಾರಿಯೂ ಆಗಿರುವುದರಿಂದ ಪುಣ್ಯ–ಪಾಪಗಳಿಗೆ ಕರ್ತನೂ ಅಲ್ಲ. ಕರ್ತನೇ ಅಲ್ಲವಾದ್ದರಿಂದ ಪುಣ್ಯ–ಪಾಪ ಕರ್ಮಗಳ ಫಲಗಳಾದ ಸುಖ–ದುಃಖಗಳ ಭೋಕ್ತನೂ ಅಲ್ಲ. ಕರ್ತೃತ್ವವು ವಿಜ್ಞಾನಮಯ ಕೋಶಕ್ಕೂ, ಭೋಕ್ತೃತ್ವವು ಆನಂದಮಯ ಕೋಶಕ್ಕೂ ಸೇರಿದೆ. ಆತ್ಮನಾದ ನಾನು "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಅಂದರೆ ಚೇತನನೂ, ಅಸಂಗನೂ ಆದ ಸಾಕ್ಷಿಯೂ, ನಿರ್ಗುಣನೂ ಆಗಿದ್ದೇನೆ.

**ಪ್ರ ೧೨೯ : ಈ ಲೋಕಕ್ಕೆ ಬರುವಿಕೆ, ಪರಲೋಕಕ್ಕೆ ಹೋಗುವಿಕೆ ಎಂಬ ಲೋಕಾಂತರ ಗಮನಾಗಮನಗಳು ನನಗಿಲ್ಲವೆಂದು ಹೇಗೆ ತಿಳಿದುಕೊಳ್ಳಬೇಕು?**

ಉ : ಗಮನಾಗಮನಗಳು ಪರಿಚ್ಛಿನ್ನ ಪದಾರ್ಥಗಳಲ್ಲಿ ಉಂಟೇ ಹೊರತು ಎಲ್ಲೆಲ್ಲೂ ವ್ಯಾಪಕವಾದ ಪೂರ್ಣ ವಸ್ತುವಿನಲ್ಲಿಲ್ಲ. ಹೇಗೆಂದರೆ– ಆಕಾಶವು ವ್ಯಾಪಕ, ಘಟವು ಪರಿಚ್ಛಿನ್ನ. ಘಟವು ಆಕಾಶದಲ್ಲಿ ಓಡಾಡಿದರೂ ಆಕಾಶವು ಓಡಾಡುವುದಿಲ್ಲ. ಇದರಂತೆ ಆತ್ಮನು ಆಕಾಶದಂತೆ ಸರ್ವವ್ಯಾಪಕನೂ ಪೂರ್ಣನೂ ಆಗಿದ್ದಾನೆ. ಘಟದಂತೆ ಸೂಕ್ಷ್ಮ ದೇಹವು ಪರಿಚ್ಛಿನ್ನವಾಗಿದೆ. ಆದುದರಿಂದ ಗಮನಾಗಮನಗಳು ಪರಿಚ್ಛಿನ್ನವಾದ ಲಿಂಗದೇಹಕ್ಕೇ ಹೊರತು ಆತ್ಮನಾದ ನನಗೆ ಅವುಗಳ ಸಂಬಂಧವಿಲ್ಲ. ಲಿಂಗ ದೇಹವು ತಾನು ಮಾಡಿದ ಪುಣ್ಯ ಪಾಪ ಕರ್ಮಗಳಿಗನುಸಾರವಾಗಿ, ಸ್ವರ್ಗ ನರಕಗಳಿಗೆ ಓಡಾಡುತ್ತದೆ. ಅಕರ್ತಾ, ಅಭೋಕ್ತನಾದ ಆತ್ಮನು ಎಲ್ಲಿಗೂ ಹೋಗುವುದಿಲ್ಲ, ಎಲ್ಲಿಗೂ ಬರುವುದೂ ಇಲ್ಲ.

**ಪ್ರ ೧೩೦ : ಸಾತ್ವಿಕೀ, ರಾಜಸೀ, ತಾಮಸೀ ವೃತ್ತಿಗಳು ನಾನೂ ಅಲ್ಲ, ನನ್ನವೂ ಅಲ್ಲವೆಂದು ಹೇಗೆ ತಿಳಿಯಬೇಕು?**

ಉ : ಅಂತಃಕರಣದಲ್ಲಿ ಸಾತ್ವಿಕ ವೃತ್ತಿ ಉಂಟಾದಾಗ ಶಮ, ದಮ, ಸತ್ಯ, ಅಹಿಂಸೆ, ಕರುಣೆ ಮೊದಲಾದ ಸದ್ಗುಣಗಳೂ, ಅವುಗಳ ಕ್ರಿಯೆಗಳೂ ಕಂಡುಬರುತ್ತವೆ. ರಾಜಸೀ ವೃತ್ತಿ ಉಂಟಾದಾಗ ಕಾಮ ಕ್ರೋಧಾದಿಗಳೂ, ರಾಗ, ದ್ವೇಷ, ಸ್ವಾರ್ಥ ಇತ್ಯಾದಿ ರಾಜಸ ಗುಣಗಳೂ, ತತ್ಕಾರ್ಯಗಳೂ ಕಂಡುಬರುತ್ತವೆ. ತಾಮಸೀ ವೃತ್ತಿ ಉಂಟಾದಾಗ ನಿದ್ರಾ, ಆಲಸ್ಯ, ಪ್ರಮಾದ, ಮೋಹ ಇತ್ಯಾದಿ ತಮೋಗುಣವೂ, ಆ ಗುಣಗಳಿಗನುಸಾರವಾದ ಕ್ರಿಯೆಗಳೂ ಸ್ಥೂಲ ಸೂಕ್ಷ್ಮ ದೇಹಗಳಲ್ಲಿ ತೋರಿಬರುತ್ತವೆ. ಮತ್ತು ಜಾಗ್ರತ, ಸ್ವಪ್ನಗಳಲ್ಲಿ ಈ ವೃತ್ತಿಗಳು ತೋರಿದರೂ ನನಗೆ ಗೊತ್ತಾಗುತ್ತದೆ. ಗಾಢ ನಿದ್ರೆಯಲ್ಲಿ ಯಾವ ವೃತ್ತಿಯೂ ಇಲ್ಲದ ಅಭಾವವೂ ನನ್ನ ಅನುಭವಕ್ಕೆ ಬರುತ್ತದೆ. ಈ ರೀತಿ ವೃತ್ತಿಗಳು ನನಗೆ ದೃಶ್ಯವಾಗಿರುವುದರಿಂದ ಅವು ನಾನಲ್ಲ. ಮತ್ತು ಇವು ಅಂತಃಕರಣಕ್ಕೆ ಸೇರಿದವುಗಳಾದ್ದರಿಂದ ನನ್ನವೂ ಅಲ್ಲ. ನಾನು ಇವಕ್ಕಿಂತ ವಿಲಕ್ಷಣನು ಅಂದರೆ ನನ್ನಲ್ಲಿ ಯಾವ ಗುಣವೂ ಇಲ್ಲದ ನಿರ್ಗುಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ ಈ ವೃತ್ತಿಗಳ ಭಾವಾಭಾವಗಳನ್ನು ತಿಳಿಯುವ ನಾನು ಇವಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೩೧ : **ಈ ವಿಷಯಕ್ಕೆ ದೃಷ್ಟಾಂತವೇನು ?**

ಉ : ಒಬ್ಬ ರಾಜನು ಉದ್ಯಾನವನದಲ್ಲಿ ಕುಳಿತಿರುತ್ತಾನೆ. ಅವನ ವಿನೋದಾರ್ಥವಾಗಿ ಒಬ್ಬ ಕಾರಾಗಾರನು ಮೂರು ಕೊಳವೆಗಳುಳ್ಳ ಒಂದು ಕಾರಂಜಿಯನ್ನು ನಿರ್ಮಿಸಿ, ಅದರಿಂದ ಮೂರು ವಿಧವಾದ ಬಣ್ಣಗಳ ನೀರಿನ ಧಾರೆಯು ಚಿಮ್ಮುವಂತೆ ಮಾಡಿರುತ್ತಾನೆ. ಆ ಧಾರೆಗಳಿಂದ ಅನೇಕ ಸಣ್ಣ ಸಣ್ಣ ಧಾರೆಗಳು ಹೊರಡುತ್ತವೆ. ಸ್ವಲ್ಪ ಹೊತ್ತಾದ ಮೇಲೆ ಆ ಕೊಳವೆಗಳನ್ನು ಬಿರಟೆಗಳಿಂದ ಮುಚ್ಚಿದರೆ ಜಲಧಾರೆಗಳು ನಿಂತುಹೋಗುತ್ತವೆ. ಜಲಧಾರೆಗಳು ಹೊರಡುತ್ತಿದ್ದಾಗಲೂ, ಅವು ನಿಂತು ಹೋದಾಗಲೂ, ರಾಜನು ನೋಡುತ್ತಲೇ ಇರುತ್ತಾನೆ. ಇದು ದೃಷ್ಟಾಂತ.

ದ್ರಾಷ್ಟಾಂತ : ಈ ಸ್ಥೂಲ ಶರೀರವೇ ಒಂದು ಉದ್ಯಾನವನ. ಆತ್ಮನೇ ರಾಜ. ಮಾಯೆ ಅಥವಾ ಅವಿದ್ಯೆ ಎಂಬ ಕಾರಾಗಾರನು ಸಾತ್ವಿಕೀ, ರಾಜಸೀ, ತಾಮಸೀ ಎಂಬ ಮೂರು ವೃತ್ತಿಗಳುಳ್ಳ ಅಂತಃಕರಣವೆಂಬ ಕಾರಂಜಿಯನ್ನು ನಿರ್ಮಿಸಿರುತ್ತಾನೆ. ಜಾಗ್ರತ, ಸ್ವಪ್ನಗಳಲ್ಲಿ ಇವುಗಳ ಬಿರಟೆ ತೆಗೆದಿರುವುದರಿಂದ, ಸಾತ್ವಿಕೀ, ರಾಜಸೀ, ತಾಮಸೀ ವೃತ್ತಿಗಳು ಅನೇಕ ರೀತಿಯಾಗಿ ಹೊರಡುತ್ತಲೇ ಇರುತ್ತವೆ. ಸುಷುಪ್ತಿ ಅವಸ್ಥೆ ಬಂದ ಕೂಡಲೇ ಅಂತಃಕರಣ ಮತ್ತು ಅದರ ಎಲ್ಲಾ ವೃತ್ತಿಗಳೂ ತನಗೆ ಕಾರಣವಾದ ಅವಿದ್ಯೆಯಲ್ಲಿ ಅಡಗುವುದರಿಂದ ಅಲ್ಲಿ ಯಾವ ವೃತ್ತಿಗಳೂ ಇಲ್ಲ. ಆಗ ಆತ್ಮನೊಬ್ಬನೇ ಪ್ರಕಾಶಿಸುತ್ತಾನೆ. ಈ ರೀತಿ ಅಂತಃಕರಣದ ಸತ್ವಗುಣ, ರಜೋಗುಣ, ತಮೋಗುಣ ವೃತ್ತಿಗಳ ಭಾವಾಭಾವಗಳನ್ನು ಆತ್ಮನು ನಿರ್ವಿಕಾರವಾಗಿ ಸಾಕ್ಷಿಯಾಗಿದ್ದು ನೋಡುವವನಾದ್ದರಿಂದ ಈ ವೃತ್ತಿಗಳು ನಾನಲ್ಲ ಮತ್ತು ಇವು ಅಂತಃಕರಣಕ್ಕೆ ಸೇರಿರುವುದರಿಂದ ನನ್ನವೂ ಅಲ್ಲ. ಈ ರೀತಿ ನಿಶ್ಚಯಿಸಬೇಕು.

ಪ್ರ ೧೩೨ : **ಅಂಧತ್ವ, ಮಂದತ್ವ, ಪಟುತ್ವಗಳು ನಾನಲ್ಲ ಮತ್ತು ನನ್ನವೂ ಅಲ್ಲ ಎಂಬ ನಿಶ್ಚಯವಾಗುವುದು ಹೇಗೆ ?**

ಉ : ಇದನ್ನೂ ಸಹ ವಿಚಾರದಿಂದ ನಿರ್ಧರಿಸಬಹುದು. ನನ್ನ ಕಣ್ಣು ಕಾಣಿಸುವುದೇ ಇಲ್ಲ ಅಥವಾ ನನ್ನ ಕಿವಿ ಕಿವುಡಾಗಿದೆ ಎಂಬುದು ಅಂಧತ್ವ. ನನ್ನ ಕಣ್ಣು ಸ್ವಲ್ಪ ಸ್ವಲ್ಪ ಕಾಣಿಸುತ್ತದೆ ಎಂಬುದು ಮಂದತ್ವ. ನನ್ನ ಕಣ್ಣು

ಚೆನ್ನಾಗಿ ಕಾಣುತ್ತದೆ ಎನ್ನುವುದು ಪಟುತ್ವ. ಹೀಗೆ ಎಲ್ಲಾ ಇಂದ್ರಿಯಗಳಲ್ಲೂ ಈ ಮೂರು ಲಕ್ಷಣಗಳಿವೆ. ಅಂಧತ್ವ, ಮಂದತ್ವ, ಪಟುತ್ವಾದಿಗಳು ನನ್ನಿಂದ ಅರಿಸಿಕೊಳ್ಳುವುದರಿಂದ ಇವು ನಾನಲ್ಲ; ಇವು ಇಂದ್ರಿಯಗಳ ಧರ್ಮಗಳಾಗಿರುವುದರಿಂದ ನನ್ನವೂ ಅಲ್ಲ. ನಾನು ಇವಕ್ಕಿಂತ ವಿಲಕ್ಷಣನಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಇಂದ್ರಿಯಗಳ ಅಂಧತ್ವ, ಮಂದತ್ವ, ಪಟುತ್ವಾದಿಗಳನ್ನು ತಿಳಿಯುವ ನಾನು ಇವುಗಳಿಗಿಂತ ಬೇರೆಯಾಗಿದ್ದೇನೆ.

ಪ್ರ ೧೩೩ : **ಈ ಸೂಕ್ಷ್ಮದೇಹದ ವಿಚಾರದಿಂದ ಜಿಜ್ಞಾಸುಗಳಿಗೆ ಆಗುವ ನಿಶ್ಚಯವೇನು ?**

ಉ : **ವಿಚಾರ** ಮಾಡುವ ಮೊದಲು ಹದಿನೇಳು ತತ್ವಗಳಿಂದ ಕೂಡಿದ ಸೂಕ್ಷ್ಮದೇಹವೇ ನಾನು, ನನ್ನದು ಎಂದು ತಪ್ಪು ತಿಳಿದುಕೊಂಡಿದ್ದೆ. ವಿಚಾರ ಮಾಡಲಾಗಿ ಆ ತಪ್ಪು ತಿಳುವಳಿಕೆ ಹೋಗಿ, ಸೂಕ್ಷ್ಮದೇಹವೂ ಅದರ ಧರ್ಮಗಳೂ ನನಗೆ ದೃಶ್ಯವಾಗಿರುವುದರಿಂದ ಅದು ನಾನಲ್ಲವೆಂತಲೂ, ಅದು ಅಪಂಚೀಕೃತ ಪಂಚಮಹಾಭೂತಗಳ ಕಾರ್ಯವಾದದ್ದರಿಂದ ನನ್ನದೂ ಅಲ್ಲವೆಂತಲೂ ಅರಿತುಕೊಂಡೆ. ಸೂಕ್ಷ್ಮದೇಹವು ಜಡ, ನಾನು ಚೇತನ; ಅದು ದೃಶ್ಯ, ನಾನು ದ್ರಷ್ಟ; ಅದು ವಿಕಾರಿ, ನಾನು ನಿರ್ವಿಕಾರಿ; ಅದು ಪರಿಚ್ಛಿನ್ನ, ನಾನು ಪರಿಪೂರ್ಣ; ಅದು ಕರ್ತೃತ್ವ ಭೋಕ್ತೃತ್ವ ಧರ್ಮ ಉಳ್ಳದ್ದು; ಸುಖ ದುಃಖಗಳನ್ನು ಅನುಭವಿಸುವಂತಹದ್ದು; ಇಹಲೋಕ ಪರಲೋಕಗಳಿಗೆ ಗಮನಾಗಮನಗಳನ್ನು ಮಾಡುವಂಥಾದ್ದು. ಆತ್ಮನಾದ ನಾನು ಅಕರ್ತೃ, ಅಭೋಕ್ತೃ, ಸುಖದುಃಖಗಳ ಲೇಪವಿಲ್ಲದವನು, ಗಮನಾಗಮನರಹಿತನೂ ಆಗಿರುವೆನು. ಲಿಂಗದೇಹವು ಆತ್ಮಜ್ಞಾನದಿಂದ ಭಂಗ ಅಂದರೆ ನಾಶವಾಗಿ ಹೋಗುತ್ತದೆ. ನಾನು ಅವಿನಾಶಿ. ಈ ರೀತಿ ನಾನು ಲಿಂಗದೇಹಕ್ಕಿಂತ ವಿಲಕ್ಷಣ ಅಂದರೆ ವಿರುದ್ಧ ಲಕ್ಷಣಗಳುಳ್ಳವನಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ವಿಲಕ್ಷಣ ಹಾಗೂ ಬೇರೆಯಾಗಿರುವಂತೆ, ಘಟದಂತಿರುವ ಜಡವಾದ ಈ ಸೂಕ್ಷ್ಮದೇಹವನ್ನು ನೋಡುವ ನಾನು ಇದಕ್ಕಿಂತ ವಿಲಕ್ಷಣನಾಗಿ ಬೇರೆಯಾಗಿದ್ದೇನೆ.

'ಸೂಕ್ಷ್ಮದೇಹಕ್ಕೆ ನಾನು ದ್ರಷ್ಟನು' ಎಂಬ ವಿಚಾರವು ಮುಗಿಯಿತು.

ಓಂ ತತ್ಸತ್

# ಕಾರಣದೇಹದ ವಿಚಾರ

ಪ್ರ ೧೩೪ : **ಕಾರಣದೇಹವೆಂದರೇನು ?**

ಉ : ಸ್ಥೂಲ ಸೂಕ್ಷ್ಮ ದೇಹಗಳಿಗೆ ಕಾರಣವಾಗಿರುವುದೇ ಕಾರಣ ದೇಹ.

ಪ್ರ ೧೩೫ : **ಕಾರಣದೇಹವಿದೆ ಎಂಬುದಕ್ಕೆ ಅನುಭವವೇನು ?**

ಉ : ಹೊಗೆಯನ್ನು ನೋಡಿ ಬೆಂಕಿ ಇದೆ ಎಂದು ಊಹಿಸುವಂತೆ, ಕಾರ್ಯವನ್ನು ನೋಡಿ ಕಾರಣವನ್ನು ಊಹಿಸಬಹುದು. ಕಾರ್ಯಗಳಾದ ಸ್ಥೂಲ ಸೂಕ್ಷ್ಮದೇಹಗಳನ್ನು ನೋಡಿ ಕಾರಣವಿದೆ ಎಂದು ತಿಳಿಯಬಹುದು. ಹೇಗೆಂದರೆ, ಒಬ್ಬ ಬಾಲಕನು ಆಟದ ಸಾಮಾನುಗಳನ್ನಿಡುವುದಕ್ಕೆ ಒಂದು ಪೆಟ್ಟಿಗೆಯನ್ನು ಮಾಡಿಕೊಂಡಿರುತ್ತಾನೆ. ಆಟವಾಡುವಾಗ ಪೆಟ್ಟಿಗೆಯಿಂದ ಸಾಮಾನುಗಳನ್ನು ಹೊರಕ್ಕೆ ತೆಗೆದು, ಸ್ವಲ್ಪ ಹೊತ್ತು ಆಟವಾಡಿ, ಆಟ ಮುಗಿದ ಕೂಡಲೇ ಆ ಸಾಮಾನುಗಳನ್ನು ಪುನಃ ಪೆಟ್ಟಿಗೆಯೊಳಗೆ ಹಾಕಿಬಿಡುತ್ತಾನೆ. ಇದರಂತೆ ಅಜ್ಞಾನಿ ಬಾಲಕನು ಜಾಗ್ರತ್–ಸ್ವಪ್ನಗಳಲ್ಲಿ ಸ್ಥೂಲ ಸೂಕ್ಷ್ಮದೇಹಗಳೆಂಬ ಆಟದ ಸಾಮಾನಿನೊಂದಿಗೆ ಎಲ್ಲಾ ವ್ಯವಹಾರಗಳನ್ನೂ ಮಾಡಿ, ಬೇಸರವಾದಾಗ ಆ ಸ್ಥೂಲ ಸೂಕ್ಷ್ಮ ದೇಹಗಳನ್ನು ಸುಷುಪ್ತಿ ಅವಸ್ಥೆಯಲ್ಲಿ 'ಅವಿದ್ಯೆ' ಎಂಬ ಪೆಟ್ಟಿಗೆಯಲ್ಲಿ ಸೇರಿಸಿಬಿಡುತ್ತಾನೆ. ಪುನಃ ಜಾಗ್ರದಾವಸ್ಥೆ ಬಂದ ಕೂಡಲೇ ಅವು ಹೊರಬರುತ್ತವೆ.

ಪ್ರ ೧೩೬ : **ಜಾಗ್ರದಾವಸ್ಥೆಯಲ್ಲಿರುವ ಕಾರಣದೇಹದ ಸ್ವರೂಪವೇನು ?**

ಉ : ಜಾಗ್ರದಾವಸ್ಥೆಯಲ್ಲಿ ಯಾರಾದರೂ ಮಹನೀಯರು 'ನೀನು ಯಾರು ?' ಎಂದು ಪ್ರಶ್ನಿಸಿದರೆ, ದೇಹವನ್ನು ತೋರಿಸಿಯೋ ಅಥವಾ ಸ್ಥೂಲ ದೇಹದ ಹೆಸರನ್ನೋ ಅಥವಾ ಸ್ಥೂಲ ದೇಹಕ್ಕೆ ಸಂಬಂಧಪಟ್ಟ ತಂದೆ ತಾಯಿಗಳ ಹೆಸರನ್ನೋ ಹೇಳಿ ನಾನು ಇಂತಹವರ ಮಗನೆಂಬುದಾಗಿಯೋ ಹೇಳುತ್ತೇವೆ. ಆಗ ಪ್ರಶ್ನೆ ಮಾಡಿದವರು, 'ಅಯ್ಯಾ, ನಿನ್ನ ಸ್ಥೂಲದೇಹದ ಪರಿಚಯವನ್ನು ನಾನು ಕೇಳಲಿಲ್ಲ. ನಿನ್ನ ನಿಜ ಸ್ವರೂಪವೇನು ?' ಎಂಬುದಾಗಿ ಪ್ರಶ್ನಿಸಿದರೆ, ನನಗೆ ಗೊತ್ತಿಲ್ಲ ಎಂಬುದಾಗಿ ಉತ್ತರ ಕೊಡುತ್ತೇವೆ.

ಜಾಗ್ರದಾವಸ್ಥೆಯಲ್ಲಿ ನನ್ನ ಸ್ವರೂಪವೇನೋ ನನಗೆ ತಿಳಿಯದು ಎಂಬ ರೂಪ ದಲ್ಲಿ ಕಾರಣದೇಹವಿರುತ್ತದೆ.

ಪ್ರ ೧೩೭ : **ಸ್ವಪ್ನಾವಸ್ಥೆಯಲ್ಲಿರುವ ಕಾರಣದೇಹದ ಸ್ವರೂಪ ವೇನು ?**

ಉ : ಸ್ವಪ್ನ ತೋರಬೇಕಾದರೆ ಮೊದಲು ನಿದ್ರೆ ಬರಬೇಕು. ಕತ್ತಲಲ್ಲೇ ಸಿನಿಮಾ ಕಾಣುವಂತೆ, ಸ್ವಪ್ನ ಪ್ರಪಂಚ ಕಾಣಲು ನಿದ್ರೆಯೇ ಹೇತುವಾಗಿ ರುವುದರಿಂದ ಸ್ವಪ್ನಾವಸ್ಥೆಯಲ್ಲಿ ಕಾರಣದೇಹವು ನಿದ್ರಾರೂಪವಾಗಿದೆ.

ಪ್ರ ೧೩೮ : **ಸುಷುಪ್ತಿ ಅವಸ್ಥೆಯಲ್ಲಿ ಕಾರಣದೇಹದ ಸ್ವರೂಪ ವೇನು ?**

ಉ : ಗಾಢ ನಿದ್ರೆಯಿಂದ ಎಚ್ಚತ್ತ ಮನುಷ್ಯನನ್ನು ಕುರಿತು ಹೇಗೆ ನಿದ್ರೆ ಮಾಡಿದೆ ಎಂದು ಪ್ರಶ್ನಿಸಿದರೆ, ಸುಖವಾಗಿ ಮಲಗಿದ್ದೆ, ಏನೊಂದೂ ಗೊತ್ತಾಗಲಿಲ್ಲ ಎಂಬುದಾಗಿ ಹೇಳುತ್ತಾನೆ. ಆದ್ದರಿಂದ ಏನೊಂದೂ ಗೊತ್ತಾ ಗಲಿಲ್ಲ ಎಂಬ ರೂಪದಲ್ಲಿ ಸುಷುಪ್ತಿಯಲ್ಲಿ ಕಾರಣದೇಹವಿರುತ್ತದೆ.

ಪ್ರ ೧೩೯ : **ಕಾರಣದೇಹಕ್ಕೆ ಮತ್ತೊಂದು ಹೆಸರೇನು ?**

ಉ : ಅವಿದ್ಯೆ ಅಥವಾ ಅಜ್ಞಾನವೆಂಬ ಮತ್ತೊಂದು ಹೆಸರಿದೆ.

ಪ್ರ ೧೪೦ : **ಅಜ್ಞಾನದ ಸ್ವರೂಪವೇನು ?**

ಉ : ಅಜ್ಞಾನವು "ಸ್ವ ಆಶ್ರಯ ಸ್ವ ವಿಷಯ" ಎಂದು ಹೇಳಲ್ಪಡುವು ದರಿಂದ, ಇದು ಸ್ವತಃ ಪ್ರಕಾಶಹೀನವಾಗಿದ್ದರೂ ತನಗೆ ಆಶ್ರಯಕೊಟ್ಟ ಆತ್ಮನನ್ನೇ ಕಾಣದಂತೆ ಆವರಿಸಿಬಿಟ್ಟಿದೆ. ಹೇಗೆಂದರೆ, ಮೋಡವು ತನಗೆ ಆಶ್ರಯಕೊಟ್ಟ ಸೂರ್ಯನನ್ನೇ ಮುಚ್ಚುವಂತೆ, ಕತ್ತಲೆಯು ತನಗೆ ಆಶ್ರಯ ಕೊಟ್ಟ ಮನೆಯನ್ನೇ ಮುಚ್ಚುವಂತೆ, ಈ ಅಜ್ಞಾನವು ತನಗೆ ಆಶ್ರಯಕೊಟ್ಟ ಆತ್ಮನನ್ನೇ ಮುಚ್ಚಿಬಿಟ್ಟಿದೆ.

ಪ್ರ ೧೪೧ : **ಅಜ್ಞಾನಕ್ಕೆ ಕಾರಣವೆಂದು ಏಕೆ ಹೇಳಬೇಕು ?**

ಉ : ಏಕೆಂದರೆ ಒಂದು ಮರ ಹುಟ್ಟಲು ಬೀಜವೇ ಹೇತುವಾಗಿದೆ. ಆದುದರಿಂದ ಮರಕ್ಕೆ ಬೀಜವೇ ಕಾರಣ. ಇದರಂತೆ ಸ್ಥೂಲ ಸೂಕ್ಷ್ಮದೇಹ ಗಳು ತೋರುವುದಕ್ಕೆ ಅಜ್ಞಾನವೇ ಕಾರಣವಾಗಿದೆ.

ಪ್ರ ೧೪೨ : **ಇದಕ್ಕೆ ದೇಹವೆನ್ನಲು ಕಾರಣವೇನು ?**

ಉ : "ದಹ್ಯತೇ ಇತಿ ದೇಹ" – ದಹಿಸಲ್ಪಡುವುದರಿಂದ ದೇಹವೆನ್ನುತ್ತಾರೆ. ಈ ಕಾರಣ ದೇಹವು ಜಡವಾದ ಹೊರಗಿನ ಅಗ್ನಿಯಿಂದಾಗಲೀ, ತಾಪತ್ರಯ ಚಿಂತೆಗಳೆಂಬ ಒಳಗಿನ ಅಗ್ನಿಯಿಂದಾಗಲೀ ಸುಡಲ್ಪಡುವುದಿಲ್ಲ. "ಆತ್ಮಜ್ಞಾನ"ವೆಂಬ ಜ್ವಾಜಲ್ಯಮಾನ ಅಗ್ನಿಯಿಂದ ಸುಟ್ಟು ಭಸ್ಮವಾಗುವುದರಿಂದ ಇದಕ್ಕೆ ದೇಹವೆಂಬ ಹೆಸರು ಬಂದಿದೆ.

ಪ್ರ ೧೪೩ : **ಕಾರಣ ದೇಹವು ಅಜ್ಞಾನಕ್ಕೆ ಸೇರಿದ್ದು ಎಂದರೆ ಬರುವ ದೋಷವೇನು ?**

ಉ : ಕಾರಣ ದೇಹವು ಅಜ್ಞಾನಕ್ಕೆ ಸೇರಿದ್ದು ಎಂದರೆ ಅಜ್ಞಾನ ಬೇರೆ, ಕಾರಣ ದೇಹ ಬೇರೆ ಎಂದು ಎರಡಾಗುತ್ತದೆ. ಆದರೆ ಎರಡಿಲ್ಲ. ಕಾರಣ ದೇಹವೇ ಅಜ್ಞಾನ. ಅಜ್ಞಾನವೇ ಕಾರಣ ದೇಹದ ಸ್ವರೂಪವಾಗಿದೆ.

ಪ್ರ ೧೪೪ : **ಇದಕ್ಕೆ ಉದಾಹರಣೆ ಏನು ?**

ಉ : "ರಾಹೋಃಶಿರಃ" ಅಂದರೆ ರಾಹುವಿನ ತಲೆ ಎಂದರ್ಥ. ಆದರೆ ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ರಾಹುವೇ ತಲೆ, ತಲೆಯೇ ರಾಹುವಾಗಿದೆ. ಇದರಂತೆ ಅಜ್ಞಾನವೇ ಕಾರಣ ದೇಹವಾಗಿದೆಯೇ ಹೊರತು ಅಜ್ಞಾನಕ್ಕೆ ಸೇರಿದೆ ಎಂದು ಹೇಳಲಾಗದು.

ಪ್ರ ೧೪೫ : **ಕಾರಣ ದೇಹವು ನಾನಲ್ಲ, ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನೆಂದು ಹೇಗೆ ತಿಳಿದುಕೊಳ್ಳಬೇಕು ?**

ಉ : "ನಾನು ಪುಸ್ತಕವನ್ನು ನೋಡುತ್ತೇನೆ" ಎಂಬ ವಾಕ್ಯದಲ್ಲಿರುವ 'ನಾನು' ಎಂಬುದು ಪ್ರಮಾತೃ, 'ಪುಸ್ತಕವನ್ನು' ಎಂಬುದು ಪ್ರಮೇಯ, 'ನೋಡುತ್ತೇನೆ' ಎಂಬುದು ಪ್ರಮಾಣವಾಗಿದೆ. 'ನಾನು ಪುಸ್ತಕವನ್ನು ನೋಡಲಿಲ್ಲ' ಎಂಬ ವಾಕ್ಯದಲ್ಲಿಯೂ ಸಹ ಮೇಲೆ ಹೇಳಿದಂತೆ ಪ್ರಮಾತೃ, ಪ್ರಮಾಣ, ಪ್ರಮೇಯಗಳಿವೆ. ಪ್ರಮಾತೃವೆಂದರೆ ಚಿದಾಭಾಸ ಅಥವಾ ಜೀವ. ಯಥಾರ್ಥ ಜ್ಞಾನಕ್ಕೆ ಯಾವುದು ಕಾರಣವೋ ಅದು ಪ್ರಮಾಣ. ಪ್ರಮಾಣದಿಂದ ಸಿದ್ಧವಾಗುವುದು ಪ್ರಮೇಯ. ಈ ರೀತಿ ತ್ರಿಪುಟಿಗಳಿಂದ ನಡೆಯುವ,

ನಡೆಯದಿರುವ ವ್ಯವಹಾರಗಳೆರಡನ್ನೂ ತಿಳಿಯುವುದರಿಂದ, ಅರಿವು ಮರೆವು ಸ್ವರೂಪವಾದ ಅಜ್ಞಾನವನ್ನು ತಿಳಿದಂತಾಯಿತು. ಮೂರು ಅವಸ್ಥೆಗಳಲ್ಲೂ ಈ ಅಜ್ಞಾನವು ನನ್ನಿಂದ ಅರಿಸಿಕೊಳ್ಳುವುದರಿಂದಲೂ, ಇದು ಆತ್ಮಜ್ಞಾನ ದಿಂದ ಬಾಧೆಯಾಗಿ ಹೋಗುವುದರಿಂದಲೂ ಇದು ನಾನಲ್ಲ. ಕಾರಣ ದೇಹವು ಆನಂದಮಯ ಕೋಶ ಅಥವಾ ಅಜ್ಞಾನರೂಪವಾಗಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕಿಂತ ವಿಲಕ್ಷಣನಾಗಿದ್ದೇನೆ. ಘಟವನ್ನು ನೋಡು ವವನು ಘಟಕ್ಕಿಂತ ಬೇರೆಯಾಗಿರುವಂತೆ, ಈ ಕಾರಣ ದೇಹದ ಸ್ವರೂಪ ವನ್ನೂ, ಇದರ ಭಾವಾಭಾವಗಳನ್ನೂ ತಿಳಿಯುವ ನಾನು ಇದಕ್ಕಿಂತ ಬೇರೆ ಯಾಗಿದ್ದೇನೆ.

**ಪ್ರ ೧೪೬ : ನಾನು ಸ್ಥೂಲ, ಸೂಕ್ಷ್ಮ, ಕಾರಣ – ಈ ಮೂರು ದೇಹಗಳಿಗೂ ದ್ರಷ್ಟನು ಹೇಗೆ ?**

**ಉ :** ಆತ್ಮನಾದ ನಾನು ತ್ರಿಕಾಲಾಬಾಧಿತನಾದುದರಿಂದ ಸದ್ರೂ ಪನು. ಈ ದೇಹಗಳು ಒಂದು ಕಾಲದಲ್ಲಿ ತೋರಿ ಮತ್ತೊಂದು ಕಾಲದಲ್ಲಿ ತೋರದೆ ಹೋಗುವುದರಿಂದ ಅಥವಾ ಇರುವಿಕೆ ಇಲ್ಲದೆ ತೋರಿ, ಜ್ಞಾನದಿಂದ ಬಾಧೆಯಾಗಿ ಹೋಗುವುದರಿಂದ ಅಸತ್ತಾಗಿವೆ. ನಾನು ಸ್ವಯಂ ಪ್ರಕಾಶ ನಾಗಿ ಈ ಮೂರು ದೇಹಗಳನ್ನು ಇದಿರಿಟ್ಟು ಅರಿಯುವುದರಿಂದ ಚಿದ್ರೂಪನು. ಈ ದೇಹಗಳು ತಮ್ಮನ್ನು ತಾವೂ ತಿಳಿಯುವುದಿಲ್ಲ, ಅನ್ಯವನ್ನೂ ತಿಳಿಯು ವುದಿಲ್ಲವಾಗಿ ಜಡವಾಗಿವೆ. ನಾನು ನಿರ್ವಿಕಾರ ಸ್ವರೂಪನಾದುದರಿಂದ ಆನಂದ ರೂಪನು. ಈ ದೇಹಗಳು ವಿಕಾರಿಗಳಾದುದರಿಂದ ದುಃಖ ರೂಪ ವಾಗಿವೆ. ಆದ್ದರಿಂದ ಆತ್ಮನಾದ ನಾನು ಸಚ್ಚಿದಾನಂದ ರೂಪನೂ, ಮೂರು ದೇಹಗಳು ಅಸಜ್ಜಡ ದುಃಖ ರೂಪಗಳೂ ಆಗಿರುವುದರಿಂದ ನಾನು ದೇಹ ಗಳಿಗಿಂತ ವಿಲಕ್ಷಣನಾಗಿದ್ದೇನೆ. ಆದ್ದರಿಂದ ಇವು ನಾನಲ್ಲ. ಸ್ಥೂಲ ದೇಹವು ಪಂಚೀಕೃತ ಪಂಚ ಮಹಾಭೂತಗಳ ಕಾರ್ಯ; ಸೂಕ್ಷ್ಮ ದೇಹವು ಅಪಂಚೀಕೃತ ಪಂಚ ಮಹಾಭೂತಗಳ ಕಾರ್ಯ. ಕಾರಣ ದೇಹವು ಅಜ್ಞಾನಕ್ಕೆ ಸೇರಿದೆ ಅಥವಾ ಅಜ್ಞಾನ ರೂಪವಾಗಿದೆ. ಆದ್ದರಿಂದ ಈ ದೇಹಗಳು ನನ್ನವೂ ಅಲ್ಲ. ನಾನು ಇವಕ್ಕೆ ವಿಲಕ್ಷಣನು. ಘಟವನ್ನು

ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಈ ದೇಹಗಳನ್ನೂ, ಇವುಗಳ ಧರ್ಮಗಳನ್ನೂ, ವಿಕಾರಗಳನ್ನೂ ತಿಳಿಯುವ ಆತ್ಮನಾದ ನಾನು ಇವುಗಳಿಗಿಂತ ಬೇರೆ. ಈ ರೀತಿ ನಾನು ದೇಹತ್ರಯದ ದ್ರಷ್ಟನಾಗಿದ್ದೇನೆ.

ಓಂ ತತ್ಸತ್

ಇತಿ "ಆತ್ಮನು ಮೂರು ದೇಹಗಳ ದ್ರಷ್ಟ" ನಾಮ
ತೃತೀಯ ಕಲಾ ಸಮಾಪ್ತಃ

ಓಂ

ನಮೋ ಭಗವತೇ ಶಂಕರಾನಂದಾಯ

## ಚತುರ್ಥ ಕಲಾ ಪ್ರಾರಂಭಃ

# "ನಾನು ಪಂಚಕೋಶಾತೀತನು"

ಪ್ರ ೧ : **ಪಂಚಕೋಶಗಳ ವಿಚಾರದ ಅವಶ್ಯಕತೆ ಏನು ?**

ಉ : ಪಂಚಕೋಶಗಳನ್ನು ವಿಚಾರ ಮಾಡುವುದರಿಂದ ಮೊದಲನೆಯದಾಗಿ ನಮ್ಮ ನಿಜ ಸ್ವರೂಪದ ಪರಿಚಯ ನಮಗುಂಟಾಗುತ್ತದೆ. ಲೌಕಿಕ ವಿಚಾರದಿಂದ ಇಂಥ ಪ್ರಯೋಜನವಾಗುವುದಿಲ್ಲ. ಅಲ್ಲದೆ ಇದು 'ತತ್ವಮಸಿ' ಮಹಾವಾಕ್ಯದಲ್ಲಿನ ತ್ವಂಪದ ಶೋಧವಾಗಿದೆ. ಮತ್ತು ಮೂರನೆಯದಾಗಿ ಪಂಚಕೋಶಗಳು ನಾನು ನನ್ನದೆಂಬುದಾಗಿ ತಿಳಿದುಕೊಂಡಿರುವ ಅಧ್ಯಾಸ ಅಥವಾ ತಪ್ಪು ತಿಳುವಳಿಕೆ ಹೋಗಬೇಕಾದರೆ ವಿಚಾರವು ಅತ್ಯಾವಶ್ಯಕ. ಏಕೆಂದರೆ "ಅವಿಚಾರೇಣ ಕೃತೋಬಂಧಃ ವಿಚಾರೇಣ ನಿವರ್ತತೇ"–ಅವಿಚಾರದಿಂದ ಉಂಟಾಗಿರುವ ಬಂಧದ ನಿವೃತ್ತಿಯು ವಿಚಾರ ಒಂದರಿಂದಲೇ ಸಾಧ್ಯ. ಶೋಕದಿಂದ ಬಿಡುಗಡೆ ಹೊಂದಬೇಕಾದರೆ ಆತ್ಮನನ್ನು ತಿಳಿಯಬೇಕೆಂಬುದಾಗಿ ಶೃತಿಗಳಲ್ಲಿ "ಆತ್ಮವಿಚ್ಛೋಕಂತರತಿ" ಎಂಬುದಾಗಿ ಹೇಳಿದೆ. ಆದುದರಿಂದ ಆತ್ಮನ ಯಥಾರ್ಥ ಸ್ವರೂಪದ ಅರಿವುಂಟಾಗಬೇಕಾದರೆ ಪಂಚಕೋಶಗಳನ್ನು ವಿಚಾರ ಮಾಡುವುದು ಅತಿ ಅವಶ್ಯವಾಗಿದೆ.

ಪ್ರ ೨ : **ಆತ್ಮನು ಪಂಚಕೋಶಾತೀತನು ಎಂದರೇನು ?**

ಉ : ಆತ್ಮನು ಪಂಚಕೋಶಾತೀತನೆಂದರೆ ಪಂಚಕೋಶಗಳಿಗಿಂತ ಬೇರೆಯಾಗಿಯೂ, ಅಸಂಗನಾಗಿಯೂ ಇರುವನೆಂದರ್ಥ. ಬೇರೆಯಾಗಿರುವನೆಂದರೆ ಜೀವನು ಬೇರೆಯಾಗಿರುವಂತಲ್ಲ. ಜೀವನು ಬೇರೆಯಾಗಿದ್ದರೂ ಸುಖದುಃಖಗಳನ್ನು ಅನುಭವಿಸುತ್ತಾನೆ. ಹೇಗೆಂದರೆ, ಪಕ್ಕದ ಊರಿಗೆ ಹೋದ

ಒಬ್ಬ ಮನುಷ್ಯನಿಗೆ ತನ್ನ ಮನೆಯಲ್ಲಿ ಏನೋ ಕೆಟ್ಟದ್ದಾಯಿತೆಂಬ ಸಮಾಚಾರ ತಿಳಿದರೆ, ಅವನು ತನ್ನ ಮನೆಗಿಂತ ದೂರವಿದ್ದರೂ ದುಃಖಪಡುತ್ತಾನೆ. ಒಳ್ಳೆಯದಾಯಿತೆಂದರೆ ಸಂತೋಷ ಪಡುತ್ತಾನೆ. ಆದರೆ ಆತ್ಮನು ಈ ಪಂಚಕೋಶಗಳಲ್ಲೇ ಇದ್ದರೂ, ತಾವರೆ ಎಲೆಯು ನೀರಿನಲ್ಲೇ ಇದ್ದರೂ ಅದಕ್ಕೆ ಅಂಟದಿರುವಂತೆ, ಆಕಾಶದಲ್ಲಿ ಎಷ್ಟೇ ಮಳೆ ಸುರಿದರೂ ಅದು ನಿರ್ಲೇಪವಾಗಿರುವಂತೆ, ಆತ್ಮನು ಅಸಂಗನೂ, ನಿರ್ಲೇಪನೂ ಆಗಿದ್ದಾನೆ. ಹೀಗಿರುವುದರಿಂದ ಆತ್ಮನು ಪಂಚಕೋಶಾತೀತನೆಂಬುದಾಗಿ ಹೇಳಿದೆ.

ಪ್ರ ೩ : **ಕೋಶಗಳೆಂದರೇನು ?**

ಉ : ಕೋಶಗಳೆಂದರೆ ಆವರಣಗಳು ಅಥವಾ ಚೀಲಗಳು.

ಉದಾ : ಒರೆಯು ಕತ್ತಿಯನ್ನು ಮುಚ್ಚಿರುವಂತೆಯೂ, ಸಿಪ್ಪೆಯು ಹುಣಸೆಹಣ್ಣನ್ನು ಮುಚ್ಚಿರುವಂತೆಯೂ, ಧನವನ್ನು ಪೆಟ್ಟಿಗೆಯು ಮುಚ್ಚಿರುವಂತೆಯೂ, ಈ ಪಂಚಕೋಶಗಳು ಆತ್ಮನನ್ನು ಮುಚ್ಚಿಕೊಂಡಿವೆ.

ಶಂಕಾ : ಕತ್ತಿಯನ್ನು ಮುಚ್ಚಿರುವ ಒರೆಯು ಕತ್ತಿಯ ರಕ್ಷಣೆ ಮಾಡುತ್ತದೆ. ಆದರೆ ಆತ್ಮನನ್ನು ಆವರಿಸಿರುವ ಪಂಚಕೋಶಗಳು ಆತ್ಮನನ್ನು ರಕ್ಷಣೆ ಮಾಡದೆ, ಅಧ್ಯಾಸವನ್ನುಂಟುಮಾಡಿ ಅಧೋಗತಿಗೆ ತೆಗೆದುಕೊಂಡು ಹೋಗಲು ಕಾರಣವೇನು ?

ಸಮಾಧಾನ : ಉದಾಹರಣೆಯಲ್ಲಿ ಹೇಳಿದ ಕತ್ತಿಯೂ ಜಡ, ಒರೆಯೂ ಜಡ. ಆದುದರಿಂದ ಜಡವಾದ ಕತ್ತಿಯು ಒರೆಯನ್ನು ನಾನು – ನನ್ನದು ಎಂದು ಅಧ್ಯಾಸ ಮಾಡಿಕೊಳ್ಳುವುದಿಲ್ಲ. ಆದರೆ ಜೀವನು ಚೇತನನಾಗಿರುವುದರಿಂದ, ಈ ಪಂಚಕೋಶಗಳಲ್ಲಿ ನಾನು–ನನ್ನದು ಎಂದು ಅಧ್ಯಾಸ ಹೊಂದುವುದರಿಂದ, ಜನನ-ಮರಣ ರೂಪ ಸಂಸಾರವೆಂಬ ಅಧೋಗತಿಯನ್ನು ಹೊಂದಬೇಕಾಯಿತು. ಹೇಗೆಂದರೆ, ಕೋಶಾಕಾರ ಕೀಟವು ಮುಳ್ಳಿನಿಂದ ಗೂಡನ್ನು ಕಟ್ಟಿಕೊಂಡು, ತಾನು ಅದರೊಳಗೆ ಸೇರಿಕೊಂಡು ತಾನೇ ತೊಂದರೆ ಪಡುವಂತೆ, ಈ ಜೀವಾತ್ಮನು ಅಜ್ಞಾನದಿಂದ ಪಂಚಕೋಶಗಳಲ್ಲಿ ಬಂಧಿತನಾಗಿ ತೊಂದರೆ ಅನುಭವಿಸುತ್ತಾನೆ.

ಪ್ರ ೪ : **ಪಂಚಕೋಶಗಳ ಹೆಸರುಗಳೇನು ?**

ಉ : ೧) ಅನ್ನಮಯ ಕೋಶ.

೨) ಪ್ರಾಣಮಯ ಕೋಶ
೩) ಮನೋಮಯ ಕೋಶ
೪) ವಿಜ್ಞಾನಮಯ ಕೋಶ
೫) ಆನಂದಮಯ ಕೋಶ

ಎಂಬುದಾಗಿ ಶ್ರೀ ಶಂಕರಾಚಾರ್ಯರು ಹೇಳಿರುತ್ತಾರೆ. ವಿದ್ಯಾರಣ್ಯ ಸ್ವಾಮಿಗಳು ಅನ್ನ, ಪ್ರಾಣ, ಮನ, ಕರ್ತಾ, ಭೋಕ್ತ ಎಂಬುದಾಗಿ ಹೇಳಿರುತ್ತಾರೆ.

ಪ್ರ ೫ : **ಅನ್ನಮಯ ಕೋಶವೆಂದರೇನು ?**

ಉ: ಅನ್ನದ ಸ್ವರೂಪ ಅಥವಾ ಅನ್ನದ ವಿಕಾರವಾಗಿರುವುದಕ್ಕೆ ಅನ್ನಮಯ ಕೋಶವೆಂದು ಹೆಸರು.

ಪ್ರ : ೬ **ಅದಕ್ಕೆ ಆ ಹೆಸರು ಬರಲು ಕಾರಣವೇನು ?**

ಉ : ಪೈಂಗಲೋಪನಿಷತ್ತಿನಲ್ಲಿ ಈ ರೀತಿ ಹೇಳಿದೆ :

ಶ್ಲೋಕ : ಅನ್ನರಸೇನೈವ ಭೂತ್ವಾಅನ್ನರ ಸೇನಾಭಿವೃದ್ಧಿಂ
ಪ್ರಾಪ್ಯನ್ನರಸಮಯ ಪೃಥಿವ್ಯಾಂ ಯದ್ವಿಲೀಯತೇ
ಸೋನ್ನಮಯಕೋಶಸ್ತದೇವ ಸ್ಥೂಲಶರೀರಂ.

ಅರ್ಥ : ಅನ್ನರಸದಿಂದಲೇ ಹುಟ್ಟಿ, ಅನ್ನರಸದಿಂದಲೇ ವೃದ್ಧಿಯಾಗಿ, ಕೊನೆಗೆ ಅನ್ನರಸಮಯ ಪೃಥ್ವಿಯಲ್ಲಿ ಯಾವುದು ಲೀನವಾಗುವುದೋ ಅದಕ್ಕೆ ಅನ್ನಮಯ ಕೋಶವೆಂದೂ, ಅದೇ ಸ್ಥೂಲದೇಹವೆಂಬುದಾಗಿಯೂ ಹೇಳಿದ್ದಾರೆ. ಹೇಗೆಂದರೆ, ಮಾತಾಪಿತರು ಉಂಡಂಥ ಅನ್ನವು ಮೂವತ್ತು ದಿನಗಳಲ್ಲಿ ಶುಕ್ಲ, ರಜಗಳಾಗಿ ಒಂದು ಕಡೆ ಸಂಯೋಗವಾಗುವುದರಿಂದ ತಾಯಿಯ ಗರ್ಭದಲ್ಲಿ ಮೊದಲು ಪಿಂಡವಾಗಿ ನಂತರ ಮಗುವಾಗಿ ಜನಿಸಿ, ಅನಂತರ ಹಾಲು ಅನ್ನ ರಸದಿಂದಲೇ ವೃದ್ಧಿಹೊಂದಿ, ಕಡೆಗೆ ಅನ್ನಮಯ ಪೃಥ್ವಿಯಲ್ಲಿ ಲಯವಾಗುತ್ತದೆ. ಆದುದರಿಂದ ಈ ಸ್ಥೂಲ ಹೇಹಕ್ಕೆ ಅನ್ನಮಯ ಕೋಶವೆನ್ನುತ್ತಾರೆ.

ಪ್ರ ೭ : **ಅನ್ನಮಯ ಕೋಶಕ್ಕೆ ಮತ್ತೊಂದು ಹೆಸರೇನು ?**

ಉ : ಅನ್ನಮಯ ಕೋಶಕ್ಕೆ ಸ್ಥೂಲ ಶರೀರ ಅಥವಾ ಭೋಗಾಯತನ ದೇಹವೆಂದು ಹೆಸರಿದೆ. ಕಣ್ಣಿಗೆ ಕಂಬದಂತೆ ಕಾಣುವುದರಿಂದ ಸ್ಥೂಲ

ದೇಹವೆಂತಲೂ, ಜೀವಿಗಳ ಕರ್ಮ ಫಲ ಭೋಗಕ್ಕೆ ಸಾಧನವಾಗಿರುವುದರಿಂದ ಭೋಗಾಯತನ ದೇಹವೆಂದೂ ಹೆಸರು ಬಂದಿದೆ.

ಪ್ರ ೮ : **ಅನ್ನಮಯ ಕೋಶಕ್ಕೆ ನಾನು ವಿಲಕ್ಷಣನು ಎಂಬ ವಿಷಯವನ್ನು ಹೇಗೆ ಗ್ರಹಿಸಬೇಕು ?**

ಉ : ಅನ್ನಮಯ ಕೋಶವು ಉತ್ಪತ್ತಿ, ನಾಶವೇ ಮೊದಲಾದ ಷಡ್ಭಾವ ವಿಕಾರ ಉಳ್ಳದ್ದು. ಮೊದಲು ತೋರದೆ ಇದ್ದು ಆ ಮೇಲೆ ತೋರುವುದಕ್ಕೆ ಉತ್ಪತ್ತಿ ಎಂತಲೂ, ತೋರುತ್ತಿದ್ದು ತೋರದಂತಾಗುವುದಕ್ಕೆ ನಾಶವೆಂತಲೂ ಅರ್ಥ. ಈ ಅನ್ನಮಯ ಕೋಶವು ಜನಿಸುವುದಕ್ಕೆ ಮೊದಲು ತೋರುವುದಿಲ್ಲ; ಸತ್ತ ಮೇಲೆ ತೋರದಂತಾಗುತ್ತದೆ. ಆದ್ದರಿಂದ ಇದು ಉತ್ಪತ್ತಿ ನಾಶಗಳಿಂದ ಕೂಡಿ, ಘಟದಂತೆ ಕಾರ್ಯವಾಗಿದೆ. ಕಾರ್ಯವಾಗಿರುವುದರಿಂದ ದೃಶ್ಯವೂ, ಜಡವೂ ಆಗಿದೆ. ಆತ್ಮನಾದ ನಾನು ಉತ್ಪತ್ತಿ ನಾಶ ರಹಿತನಾಗಿದ್ದೇನೆ ಮತ್ತು ದ್ರಷ್ಟನೂ, ಚೇತನನೂ ಆಗಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಈ ಅನ್ನಮಯ ಕೋಶವನ್ನೂ, ಅದರ ವಿಕಾರಗಳನ್ನೂ ತಿಳಿಯುವ ನಾನು ಅದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೯ : **ಅನ್ನಮಯ ಕೋಶವನ್ನು ತಿಳಿಯುವುದರಿಂದ ಆಗುವ ಪ್ರಯೋಜನವೇನು ?**

ಉ : ಈ ಅನ್ನಮಯ ಕೋಶದ ಸ್ವರೂಪವನ್ನು ತಿಳಿಯುವ ಮೊದಲು ಇದೇ ನಾನು ಮತ್ತು ನನ್ನದು ಎಂದು ತಪ್ಪು ತಿಳಿದುಕೊಂಡಿದ್ದೆವು. ಈಗ ಆ ತಪ್ಪು ತಿಳುವಳಿಕೆ ಹೋಗಿ, ದೃಶ್ಯವಾಗಿ, ಸ್ಥೂಲವಾಗಿ ತೋರುವ ಈ ಅನ್ನಮಯ ಕೋಶವು ನಾನಲ್ಲವೆಂತಲೂ, ಇದರ ಧರ್ಮಗಳಾದ ಜನನ ಮರಣಗಳೇ ಮೊದಲಾದ ಆರು ವಿಕಾರಗಳೂ ನನಗಿಲ್ಲವೆಂತಲೂ ತಿಳಿದುಕೊಂಡು, ದೇಹದಲ್ಲಿದ್ದ ಅಹಂಕಾರ ಮಮಕಾರಗಳು ಹೋದದ್ದೇ ದೊಡ್ಡ ಪ್ರಯೋಜನವಾಗಿದೆ. ಇದಕ್ಕೆ ಶ್ರೀ ಶಂಕರಾಚಾರ್ಯರು "ನಾऽಹಂಜಾತಾ ಜನ್ಮಮೃತ್ಯುಕುತೋಮೆ? '' – ನಾನು ಈ ಸ್ಥೂಲ ದೇಹವಲ್ಲವಾದುದರಿಂದ ನನಗೆ ಜನ್ಮ ಮೃತ್ಯುವೆಲ್ಲಿದೆ ? ಎಂಬುದಾಗಿ ಹೇಳಿದ್ದಾರೆ

ಪ್ರ ೧೦ : **ಪ್ರಾಣಮಯ ಕೋಶದ ವಿಚಾರವೇನು ?**

ಉ : ಪ್ರಾಣಮಯ ಕೋಶವು ಅನ್ನಮಯ ಕೋಶಕ್ಕಿಂತಲೂ ಸೂಕ್ಷ್ಮ ವಾಗಿದೆ, ವ್ಯಾಪಕವಾಗಿದೆ ಮತ್ತು ಅಂತರದಲ್ಲಿದೆ. ಗಾಳಿಪಟವು ಗಾಳಿಯ ಆಧಾರದಿಂದ ಆಕಾಶದಲ್ಲಿ ಹಾರಾಡುವಂತೆ, ಈ ಸ್ಥೂಲ ದೇಹ ರೂಪವಾದ ಅನ್ನಮಯ ಕೋಶವಿರುವುದಕ್ಕೂ, ಇದರ ಚಲನ ವಲನಾದಿ ಕ್ರಿಯೆಗಳಿಗೂ, ಪ್ರಾಣಮಯ ಕೋಶವೇ ಆಧಾರವಾಗಿದೆ. ಅಲ್ಲದೆ ಇದು ಕ್ಷುತ್ ಪಿಪಾಸಾ ಧರ್ಮವುಳ್ಳದ್ದಾಗಿದೆ. ಪ್ರಾಣಮಯ ಕೋಶವು ನಾನು, ನನ್ನದು ಎಂಬ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕಾದರೆ ಇದನ್ನು ವಿಚಾರ ಮಾಡಬೇಕು.

ಪ್ರ ೧೧ : **ಪ್ರಾಣಮಯ ಕೋಶವು ಎಷ್ಟು ವಸ್ತುಗಳಿಂದ ಕೂಡಿದೆ ?**

ಉ : "ಕರ್ಮೇಂದ್ರಿಯೈಸ್ಸಹ ಪ್ರಾಣಾದಿ ಪಂಚಕಂ ಪ್ರಾಣಮಯ ಕೋಶಂ" – ಪಂಚ ಕರ್ಮೇಂದ್ರಿಯಗಳೂ, ಪಂಚಪ್ರಾಣಗಳೂ, ಪಂಚ ಉಪ ಪ್ರಾಣಗಳೂ ಸೇರಿ ಪ್ರಾಣಮಯ ಕೋಶವಾಗಿದೆ ಎಂದು ಪೈಂಗಲೋಪನಿಷತ್ತಿನಲ್ಲಿ ಹೇಳಿದೆ.

ಪ್ರ ೧೨ : **ಪ್ರಾಣಮಯ ಕೋಶಕ್ಕೆ ಸ್ಥಾನ ಯಾವುದು ? ಅಧಿಷ್ಠಾನ ದೇವತೆ ಯಾರು ? ಅದು ಮಾಡುವ ಕೆಲಸವೇನು ?**

ಉ : ಪ್ರಾಣಮಯ ಕೋಶವು ಒಂದೇ ಆಗಿದ್ದರೂ, ಸ್ಥಾನಭೇದ ದಿಂದಲೂ, ಕ್ರಿಯಾಭೇದದಿಂದಲೂ ಐದು ವಿಧವಾಗಿದೆ. ಇವುಗಳ ಸ್ಥಾನ ಗಳನ್ನೂ, ಅಧಿದೇವತೆಗಳನ್ನೂ, ಕ್ರಿಯೆಗಳನ್ನೂ ಅಮರ ನಿಘಂಟಿನಲ್ಲಿ ಹೇಳಿರುವ ಪ್ರಕಾರ ಹಿಂದಿನ ಕಲಾದಲ್ಲಿ ತಿಳಿದುಕೊಂಡಿದ್ದೇವೆ. ಆದ್ದರಿಂದ ಇಲ್ಲಿ ವಿವರಿಸಬೇಕಾದ ಅಗತ್ಯವಿಲ್ಲವಲ್ಲವೇ ? ಈ ಪ್ರಾಣವು ಈಶ್ವರನ ದೂತ ನಿದ್ದಂತೆ. ಏಕೆಂದರೆ, ನಮ್ಮ ಪ್ರಾರಬ್ಧ ಕರ್ಮಾನುಸಾರವಾಗಿ ಅನುಭವಿಸ ಬೇಕಾದ ಭೋಗಗಳಿಗೆ ಸಹಾಯಕವಾಗಿದ್ದು, ಸ್ವರೂಪ ಜ್ಞಾನವಾದ ಮೇಲೆ ಬ್ರಹ್ಮಸ್ವರೂಪವಾಗುತ್ತದೆ.

ಪ್ರ ೧೩ : **ಪ್ರಾಣಮಯ ಕೋಶಕ್ಕೆ ನಾನು ವಿಲಕ್ಷಣನು ಎಂಬ ವಿಷಯವನ್ನು ಹೇಗೆ ತಿಳಿಯಬೇಕು ?**

ಉ : ಪ್ರಾಣಮಯ ಕೋಶವು ಕ್ರಿಯಾಶೀಲವಾಗಿದ್ದರೂ ಜಡ ವಾಗಿದೆ ಮತ್ತು ದೃಶ್ಯವಾಗಿದೆ. ಹೇಗೆಂದರೆ, ನಾವು ಮಲಗಿ ನಿದ್ರಿಸುತ್ತಿದ್ದರೂ,

ಪ್ರಾಣವು ತಾನು ಮಲಗದೆ ಕೆಲಸ ಮಾಡುತ್ತಲೇ ಇರುತ್ತದೆ ಆದರೆ ಆಗ ನಮ್ಮ ಮಿತ್ರರು ಯಾರಾದರೂ ಬಂದರೆ ಈ ಪ್ರಾಣವು ಎಚ್ಚರವಾಗಿದ್ದರೂ ಅವರನ್ನು ಸನ್ಮಾನಿಸುವುದಿಲ್ಲ ಅಥವಾ ಯಾರಾದರೂ ಕಳ್ಳರು ಬಂದರೆ ನಮ್ಮನ್ನು ಎಚ್ಚರಿಸುವುದಿಲ್ಲ. ಈ ರೀತಿ ಪ್ರಾಣಮಯ ಕೋಶವು ಜಡವಾಗಿ, ದೃಶ್ಯವಾಗಿ ನಮ್ಮಿಂದ ತಿಳಿಸಿಕೊಳ್ಳುವುದರಿಂದ ಇದು ನಾನಲ್ಲ. ಮತ್ತು ಇದು ಅಪಂಚೀಕೃತ ಪಂಚ ಮಹಾಭೂತಗಳ ಸಮಷ್ಟಿ ರಜೋಗುಣಕ್ಕೆ ಸೇರಿರುವುದ ರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನು. ಅಂದರೆ ಪ್ರಾಣಮಯ ಕೋಶದ ಹಸಿವು ತೃಷೆಗಳು ನನಗಿಲ್ಲ. ಘಟವನ್ನು ನೋಡುವವನು ಘಟ ಕ್ಕಿಂತ ಬೇರೆಯಾಗಿರುವಂತೆ ಈ ಪ್ರಾಣಮಯ ಕೋಶವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೧೪ : **ಮನೋಮಯ ಕೋಶ ವಿಚಾರದ ಅವಶ್ಯಕತೆ ಏನು ?**

ಉ : ಮನೋಮಯ ಕೋಶವು ಅನ್ನಮಯ, ಪ್ರಾಣಮಯ ಕೋಶ ಗಳಿಗಿಂತ ಅಂತರದಲ್ಲಿದೆ, ಸೂಕ್ಷ್ಮವಾಗಿದೆ ಮತ್ತು ವ್ಯಾಪಕವಾಗಿದೆ. ಮನಸ್ಸು ಸರಿಯಾಗಿದ್ದರೆ ನಾವು ಯಾವುದಾದರೂ ಒಂದು ಕಾರ್ಯ ಮಾಡಬಹುದು. "ಇಂದ್ರಿಯಾಣಾಂ ಮನೋನಾಥಃ" – ಮನಸ್ಸು ದಶೇಂದ್ರಿಯಗಳಿಗೂ ಒಡೆ ಯನು. ಮನಸ್ಸಿನ ಸಹಾಯವಿಲ್ಲದೆ ಯಾವ ಇಂದ್ರಿಯಗಳೂ ತಮ್ಮ ಕೆಲಸ ವನ್ನು ಮಾಡಲಾರವು, ಮತ್ತು ಈ ಮನಸ್ಸು ಸುಖದುಃಖಗಳೆಂಬ ಧರ್ಮಗ ಳಿಂದ ಕೂಡಿಕೊಂಡಿದೆ. ಮರಗಿಡಗಳಲ್ಲಿ ಈ ಮನೋಮಯ ಕೋಶವಿರುವು ದಿಲ್ಲವಾಗಿ ಅವುಗಳಿಗೆ ಸುಖ–ದುಃಖಗಳ ಅನುಭವವುಂಟಾಗುವುದಿಲ್ಲ. ಶ್ರೀ ಮನುಭಗವಂತನು "ಮನಏವಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಅಂದರೆ ಬಂಧ ಮೋಕ್ಷಗಳಿಗೆ ಮನಸ್ಸೇ ಕಾರಣವೆಂಬುದಾಗಿ ಹೇಳಿರುತ್ತಾನೆ. ಇಷ್ಟು ಮಹತ್ವ ಉಳ್ಳದ್ದಾಗಿರುವ ಮನೋಮಯ ಕೋಶದ ಅಧ್ಯಾಸವನ್ನು ಬಿಡಿಸಿಕೊಳ್ಳಬೇಕಾಗಿರುವುದರಿಂದ ಇದರ ವಿಚಾರ ಮಾಡುವುದು ಅವಶ್ಯಕ ವಾಗಿದೆ.

ಪ್ರ ೧೫ : **ಮನೋಮಯ ಕೋಶವು ಎಷ್ಟು ವಸ್ತುಗಳಿಂದ ಕೂಡಿಕೊಂಡಿದೆ ?**

ಉ : "ಜ್ಞಾನೇಂದ್ರಿಯೈಸ್ಸಹ ಮನಃ ಮನೋಮಯಕೋಶಃ" – ಪಂಚ

ಜ್ಞಾನೇಂದ್ರಿಯಗಳೂ, ಮನಸ್ಸೂ ಸೇರಿ ಮನೋಮಯ ಕೋಶವಾಗಿದೆ ಎಂಬುದಾಗಿ ಪೈಂಗಲೋಪನಿಷತ್ತಿನಲ್ಲಿ ಹೇಳಿದೆ

ಪ್ರ ೧೬ : **ಮನಸ್ಸಿನ ಸ್ವಭಾವವೇನು ?**

ಉ : ದೇಹದಲ್ಲಿ ಅಹಂಬುದ್ಧಿ, ದೇಹಕ್ಕೆ ಸಂಬಂಧಿಸಿದ ವಸ್ತುಗಳಲ್ಲಿ ಮಮತಾ ಬುದ್ಧಿ ಮತ್ತು ಇಂದ್ರಿಯಗಳ ಮೂಲಕ ಹೊರಗೆ ಹೋಗಿ ಶಬ್ದಾದಿ ವಿಷಯಗಳಲ್ಲಿ ಕೂಡುವುದು. ಇದೇ ಮನಸ್ಸಿನ ಸ್ವಭಾವ.

ಪ್ರ ೧೭ : **ಮನೋಮಯ ಕೋಶಕ್ಕೂ ನನಗೂ ಸಂಬಂಧ ವೇನು ?**

ಉ : ಮನೋಮಯ ಕೋಶವು ವಿಕಾರಿ, ನಾನು ನಿರ್ವಿಕಾರಿ. ಆದ್ದರಿಂದ ಮನೋಮಯ ಕೋಶಕ್ಕೂ ನನಗೂ ಯಾವ ವಿಧವಾದ ಸಂಬಂಧವೂ ಇಲ್ಲ. ಆದರೆ ತಪ್ಪು ತಿಳುವಳಿಕೆಯಿಂದ ಸಂಬಂಧ ಉಂಟಾದಂತೆ ಆಗಿದೆ.

ಪ್ರ ೧೮ : **ಮನೋಮಯ ಕೋಶದ ವಿಶೇಷ ವಿಚಾರವೇನು ?**

ಉ : ಈ ಮನಸ್ಸು
೧) ಸಂಕಲ್ಪ ವಿಕಲ್ಪ ವೃತ್ತಿಗಳುಳ್ಳದ್ದು.
೨) ಸಂಶಯಾತ್ಮಕವಾದದ್ದು.
೩) ಯೋಚನಾತ್ಮಕವಾದದ್ದು.
೪) ಕಾಮಾದಿ ಅರಿಷಡ್ವರ್ಗ ಸಹಿತವಾದದ್ದು.
೫) ಇದವಾಕಾರವಾದದ್ದು.

೧) ಯಾವುದಾದರೊಂದು ಕೆಲಸ ಮಾಡಬೇಕೆಂದು ಮನಸ್ಸಿನಲ್ಲಿ ಇಚ್ಛಿಸುವುದೇ ಸಂಕಲ್ಪ. ಅದು ಬೇಡವೆಂದು ಬೇರೆ ಕಲ್ಪನೆ ಮಾಡುವುದೇ ವಿಕಲ್ಪ

೨) ಯಾವುದಾದರೊಂದು ಕಾರ್ಯ ಮಾಡುವಾಗ, ಮಾಡಬೇಕೋ ಬೇಡವೋ ಎಂಬುದಾಗಿ ಅಥವಾ ಏನಾದರೂ ತಿಳಿಯುವಾಗ ಇದು ಹೌದೋ ಅಲ್ಲವೋ ಎಂಬುದಾಗಿ ಕಳವಳ ಪಡುವುದೇ ಸಂಶಯ.

೩) ಒಂದು ಕಾರ್ಯ ಆಗಲಿ, ಬಿಡಲಿ, ಈ ಮನಸ್ಸು ವೃಥಾ ಚಿಂತೆ ಮಾಡುವ ಸ್ವಭಾವವುಳ್ಳದ್ದು.

ಹೇಗೆಂದರೆ— ದಾರಕ್ಕೆ ಗಂಟು ಹಾಕದೆ ಎಷ್ಟು ಹೊತ್ತು ಹೊಲಿದರೂ

ಹೇಗೆ ಪ್ರಯೋಜನವಿಲ್ಲವೋ ಅದರಂತೆ ಮನಸ್ಸು ವ್ಯರ್ಥವಾಗಿ ಯೋಚನೆ ಮಾಡುತ್ತಿರುತ್ತದೆ.

೪) ೧. ಕಾಮ, ೨. ಕ್ರೋಧ, ೩. ಲೋಭ, ೪. ಮೋಹ, ೫. ಮದ, ಮತ್ತು ೬. ಮಾತ್ಸರ್ಯಗಳೆಂಬ ಆರು ವಿಧವಾದ ಒಳಗಿನ ಶತ್ರುಗಳಿಂದ ಈ ಮನಸ್ಸು ಕೂಡಿದೆ. ಇವುಗಳನ್ನು ಕಳ್ಳರೆಂದೂ ಸಹ ಶ್ರೀ ಶಂಕರಾಚಾರ್ಯರು ಕರೆದಿದ್ದಾರೆ. ಏಕೆಂದರೆ ಮನುಷ್ಯನ "ಜ್ಞಾನ ರತ್ನ"ವನ್ನು ಇವುಗಳು ಅಪಹರಿಸಿಬಿಡುತ್ತವೆ.

೧) ಕಾಮವೆಂದರೆ ಆಸೆ, ಇಚ್ಛೆ ಅಥವಾ ಬಯಕೆ.

೨) ಕ್ರೋಧವೆಂದರೆ ತಮ್ಮ ಇಚ್ಛಿತ ವಸ್ತು ದೊರೆಯದಿದ್ದರೆ ಅಥವಾ ಅದು ದೊರೆಯದಂತೆ ಯಾರಾದರೂ ಅಡ್ಡಿಮಾಡಿದರೆ, ಆಗ ಉಂಟಾಗುವ ಅಂತಃಕರಣದ ವೃತ್ತಿ.

೩) ಲೋಭವೆಂದರೆ ತಾನು ಗಳಿಸಿದ್ದನ್ನು ತಾನೂ ತಿನ್ನದೆ, ಇತರರಿಗೂ ಕೊಡದೆ ಮುಚ್ಚಿಟ್ಟುಕೊಳ್ಳುವುದು.

೪) ಮೋಹವೆಂದರೆ ತಾನು ಬಚ್ಚಿಟ್ಟ ಹಣದಲ್ಲಾಗಲೀ, ಅಥವಾ ತನ್ನ ದೇಹ ಸಂಬಂಧಿಗಳಲ್ಲಾಗಲೀ ಅತ್ಯಂತ ಆಸಕ್ತಿ ಉಳ್ಳವರಾಗಿ ಪುನಃ ಪುನಃ ಅದನ್ನೇ ಸ್ಮರಿಸುತ್ತಿರುವುದು.

೫) ಮದವೆಂದರೆ ನನ್ನ ಸಮಾನರು ಯಾರೂ ಇಲ್ಲವೆಂದು ಗರ್ವಪಡುವುದು. ಈ ಮದಗಳು ಅನೇಕ ವಿಧವಾಗಿದ್ದರೂ ಮುಖ್ಯವಾಗಿ ಅಷ್ಟ ಮದಗಳಿವೆ : ರೂಪಮದ, ಯೌವನ ಮದ, ಜಾತಿಮದ, ಗುಣಮದ, ಧನಮದ, ವಿದ್ಯಾಮದ, ಜನಮದ ಮತ್ತು ಕೀರ್ತಿಮದ – ಈ ಎಂಟು ವಿಧವಾದ ಮದಗಳಲ್ಲಿ ಯಾವುದಾದರೂ ಒಂದಿದ್ದರೆ ಸಾಕು, ನನ್ನ ಸಮಾನರಿಲ್ಲವೆಂದು ಅಭಿಮಾನ ಪಡುವುದಕ್ಕೆ ಗರ್ವವೆಂದು ಹೆಸರು.

೬) ಮಾತ್ಸರ್ಯವೆಂದರೆ ಹೊಟ್ಟೆಕಿಚ್ಚು. ತನಗಿಂತಲೂ ಯಾರಾದರೂ ಯಾವ ವಿಧದಲ್ಲಾದರೂ ಚೆನ್ನಾಗಿದ್ದರೆ ಕಳವಳಪಡುವುದು.

೫) ಇದಮಾಕಾರವೆಂದರೆ – ಭಾವಿಯಲ್ಲಿರುವ ನೀರು ಕಪಿಲೆಯಿಂದ ಕಾಲುವೆಯಲ್ಲಿ ಬಿಟ್ಟಾಗ, ಆ ನೀರು ಕಾಲುವೆಯ ಆಕಾರವಾಗುತ್ತದೆ. ನಂತರ ಅದು ಪಾತಿಗಳಿಗೆ ಹೋದಾಗ ಅದರ ಆಕಾರವಾಗುತ್ತದೆ. ಇದರಂತೆ

ಮನಸ್ಸಿಗೆ ಸ್ವಂತ ಆಕಾರವಿಲ್ಲ. ಇದು ಪ್ರಾಣದ ಸಹಾಯದಿಂದ ಇಂದ್ರಿಯಗಳ ಮೂಲಕ ವಿಷಯಗಳಲ್ಲಿ ಹರಿದಾಗ ತದಾಕಾರವಾಗುತ್ತದೆ. ಅಲ್ಲದೆ ಈ ಮನಸ್ಸು ಇದಂ ವೃತ್ತಿಗೆ ವಿಷಯವಾಗಿರುವುದರಿಂದ ಇದು ಇದಮಾಕಾರವಾಗಿದೆ.

ಪ್ರ ೧೯ : **ಮನೋಮಯ ಕೋಶದ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಹೇಗೆ?**

ಉ : ಜಾಗ್ರತ, ಸ್ವಪ್ನಗಳಲ್ಲಿ ಮನೋಮಯ ಕೋಶವಿದ್ದರೂ ನನಗೆ ಗೊತ್ತಾಗುತ್ತದೆ. ಸುಷುಪ್ತಿಯಲ್ಲಿ ಇದು ಇಲ್ಲದಿದ್ದರೂ ನನಗೆ ತಿಳಿಯುತ್ತದೆ. ಹೀಗೆ ಭಾವಾಭಾವಗಳಿಂದ ಅರಿಸಿಕೊಳ್ಳುವುದರಿಂದ ಇದು ದೃಶ್ಯವಾಗಿದೆ; ಆದ್ದರಿಂದ ಇದು ನಾನಲ್ಲ. ಇದು ಅಪಂಚೀಕೃತ ಪಂಚ ಮಹಾಭೂತಗಳ ಸಮಷ್ಟಿ ಸತ್ವಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ ಮನೋಮಯ ಕೋಶದ ಸ್ವರೂಪ, ಇದರ ಭಾವಾಭಾವಗಳನ್ನು ತಿಳಿಯುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೨೦ : **ನಾನು ಮನೋಮಯ ಕೋಶಕ್ಕಿಂತ ಬೇರೆಯಾದರೆ ತೊಲಗುವ ಬಾಧೆಗಳಾವುವು ?**

ಉ : ಮನೋಮಯ ಕೋಶವೇ ನಾನು ಮತ್ತು ನನ್ನದು ಎಂಬುದಾಗಿ ತಿಳಿದುಕೊಂಡಿದ್ದ ಅಧ್ಯಾಸವು ನಿವೃತ್ತಿಯಾಗಿ ಹೋಗುವುದರಿಂದ ಅದರ ಧರ್ಮಗಳಾದ ಅಥವಾ ವಿಕಾರಗಳಾದ ಸುಖದುಃಖಗಳೂ ನನಗಿಲ್ಲವೆಂಬುದಾಗಿ ನಿಶ್ಚಯವಾಗುತ್ತದೆ. ಈ ರೀತಿ ವಿಚಾರದಿಂದ ಮನೋಮಯ ಕೋಶದಲ್ಲಿದ್ದ ಅಹಂಕಾರ ಮಮಕಾರಗಳೂ, ಅದರ ವಿಕಾರಗಳಾದ ಸುಖದುಃಖಗಳೂ ತೊಲಗಿಹೋಗುತ್ತವೆ.

ಪ್ರ ೨೧ : **ವಿಜ್ಞಾನಮಯ ಕೋಶ ವಿಚಾರದ ಅವಶ್ಯಕತೆ ಏನು?**

ಉ : ವಿಜ್ಞಾನಮಯ ಕೋಶವು ಅನ್ನಮಯ, ಪ್ರಾಣಮಯ, ಮತ್ತು ಮನೋಮಯ ಕೋಶಗಳಿಗಿಂತ ಅಂತರದಲ್ಲಿದೆ, ಸೂಕ್ಷ್ಮವಾಗಿದೆ ಮತ್ತು ವ್ಯಾಪಕವಾಗಿದೆ. ಈ ವಿಜ್ಞಾನಮಯ ಕೋಶವು ಇಲ್ಲದಿದ್ದರೆ ಮನೋಮಯ ಕೋಶದ ಯಾವ ವ್ಯಾಪಾರವೂ ನಡೆಯುವುದಿಲ್ಲ. ಹೇಗೆಂದರೆ

ಕೆರೆಯಲ್ಲಿ ನೀರು ತುಂಬಿದ್ದರೇ ತೂಬಿನ ಮೂಲಕ ಗದ್ದೆ ಮೊದಲಾದುವುಗಳಿಗೆ ಹರಿಯುತ್ತದೆ. ವಿಜ್ಞಾನಮಯ ಕೋಶವು ಕೆರೆಯಲ್ಲಿರುವ ನೀರಿನಂತೆ; ಮನೋಮಯ ಕೋಶವು ತೂಬಿನ ನೀರಿನಂತೆ. ದೇವರು ಮಾನವರಿಗೆ ಕೊಟ್ಟಿರುವ ಅತಿ ಅಮೂಲ್ಯ ವಸ್ತುವೆಂದರೆ 'ಬುದ್ಧಿ' ಅಥವಾ ವಿಜ್ಞಾನ ಮಯ ಕೋಶ. ಇದು ಕೆಟ್ಟುಹೋದವನನ್ನು ಹುಚ್ಚನೆನ್ನುತ್ತಾರೆ. ವಿಜ್ಞಾನ ಮಯ ಕೋಶವು ಕರ್ತೃತ್ವ ಧರ್ಮ ಉಳ್ಳದ್ದಾಗಿದೆ. ಇದರ ಧರ್ಮವನ್ನು ತನ್ನ ಮೇಲೆ ಆರೋಪಿಸಿಕೊಂಡು 'ಅಹಂಕರ್ತಾ' ಎಂದು ಅಧ್ಯಾಸ ಹೊಂದಿದ್ದೇವೆ. ಇದನ್ನು ಬಿಡಿಸಿಕೊಳ್ಳಬೇಕಾದರೆ ವಿಜ್ಞಾನಮಯ ಕೋಶದ ಸ್ವರೂಪ ವನ್ನು ವಿಚಾರ ಮಾಡಬೇಕು.

ಪ್ರ ೨೨ : **ವಿಜ್ಞಾನಮಯ ಕೋಶವು ಎಷ್ಟು ವಸ್ತುಗಳಿಂದ ಕೂಡಿಕೊಂಡಿದೆ?**

ಉ : ವಿಜ್ಞಾನಮಯ ಕೋಶದ ಸ್ವರೂಪವನ್ನು ಪೈಂಗಲೋಪ ನಿಷತ್ತಿನಲ್ಲಿ "ಜ್ಞಾನೇಂದ್ರಿಯೈಸ್ಸಹ ಬುದ್ಧಿ ವಿಜ್ಞಾನಮಯ ಕೋಶಃ, ಏತತ್ ಕೋಶತ್ರಯಂ ಲಿಂಗ ಶರೀರಂ" – ಪಂಚ ಜ್ಞಾನೇಂದ್ರಿಯಗಳೂ, ಬುದ್ಧಿಯೂ ಸೇರಿ ವಿಜ್ಞಾನಮಯ ಕೋಶವಾಗಿದೆ ಎಂಬುದಾಗಿ ಹೇಳಿದೆ.

ಪ್ರ ೨೩ : **ವಿಜ್ಞಾನಮಯ ಕೋಶವಿರುವುದೆಲ್ಲಿ ?**

ಉ : ಪೆಟ್ಟಿಗೆಯೊಳಗೆ ಧನವಿರುವಂತೆ, ಮನೋಮಯ ಕೋಶವೆಂಬ ಪೆಟ್ಟಿಗೆಯೊಳಗೆ 'ವಿಜ್ಞಾನಮಯ ಕೋಶ'ವೆಂಬ ಧನವಿರುತ್ತದೆ.

ಪ್ರ ೨೪ : **ಬುದ್ಧಿಯ ಸ್ವರೂಪವೇನು ? ಅದರ ಧರ್ಮಗಳಾವುವು?**

ಉ : ಬುದ್ಧಿಯು ಸುಷುಪ್ತಿಯಲ್ಲಿ ತನಗೆ ಕಾರಣವಾದ ಅವಿದ್ಯೆಯಲ್ಲಿ ಲಯಿಸಿರುತ್ತದೆ. ಜಾಗ್ರತಾವಸ್ಥೆ ಬಂದ ಕೂಡಲೇ, ಈ ವಿಜ್ಞಾನಮಯ ಕೋಶವು ಅಹಂವೃತ್ತಿ ರೂಪದಿಂದ ದೇಹದ ನಖಶಿಖ ಪರ್ಯಂತರ ವ್ಯಾಪಿಸುತ್ತದೆ. ನಂತರ ಮನೋಮಯ ಕೋಶದೊಡನೆ ಇದು ವ್ಯಕ್ತಿ ರೂಪದಿಂದ ಕೂಡಿ ವಿಷಯಾದಿಗಳ ಕಡೆಗೆ ಹರಿಯುತ್ತದೆ. ನಿಶ್ಚಯ ಮಾಡುವುದು, ಕರ್ತೃತ್ವ – ಇವೇ ಇದರ ಧರ್ಮಗಳಾಗಿವೆ

ಪ್ರ ೨೫ : **ಬುದ್ಧಿಯು ನಿಶ್ಚಯ ಮಾಡುವುದು ಯಾರ ಶಕ್ತಿಯಿಂದ?**

ಉ : ಬುದ್ಧಿಯು ಭೌತಿಕವಾಗಿರುವುದರಿಂದ ಜಡವಾಗಿದೆ. ಇದು

ತನ್ನ ಸ್ವಂತ ಶಕ್ತಿಯಿಂದ ತನಗಿಂತ ಭಿನ್ನವಾದ ವಸ್ತುಗಳನ್ನು ಕುರಿತು ನಿಶ್ಚಯ ಮಾಡಲಾರದು. ತನಗೆ ಅಧಿಷ್ಠಾನವಾದ ಆತ್ಮನ ಅಣುಮಾತ್ರ ಶಕ್ತಿಯನ್ನು ಪಡೆದು ನಿಶ್ಚಯವನ್ನು ಮಾಡುತ್ತದೆ.

**ಪ್ರ ೨೬ : ಈ ಬುದ್ಧಿಯು ತನಗೆ ಶಕ್ತಿಯನ್ನು ಕೊಟ್ಟ ಆತ್ಮನನ್ನು ಏಕೆ ತಿಳಿಯಲಾರದು ?**

ಉ : ಈ ಬುದ್ಧಿಗೆ ಬಹಿರ್ಮುಖವಾಗಿರುವುದೇ ಸ್ವಭಾವವಾಗಿರುವುದ ರಿಂದ, ಯಾವಾಗಲೂ ಹೊರಗಿನ ಶಬ್ದ ಸ್ಪರ್ಶಾದಿ ಸಂಘ ವಿಷಯಾತ್ಮಕವಾದ ಜಗತ್ತನ್ನು ನೋಡುವುದೇ ಹೊರತು ತನಗೆ ಶಕ್ತಿ ಕೊಟ್ಟ ಅಂತರಾತ್ಮನನ್ನು ನೋಡುವುದಿಲ್ಲ. ಇದೇ ವಿಷಯವನ್ನು ಕಠೋಪನಿಷತ್ತಿನಲ್ಲಿ, 'ಪರಾನ್ ಪಶ್ಯತಿ ನಾಂತರಾತ್ಮನ್' ಎಂಬುದಾಗಿ ಹೇಳಿದೆ. ಕಮ್ಮಾರನ ಇಕ್ಕಳವು ತನ್ನ ಮುಂದಿರುವ ಕಾದ ಕಬ್ಬಿಣದ ತುಂಡುಗಳನ್ನೆಲ್ಲಾ ಹಿಡಿದರೂ, ತನ್ನನ್ನು ಹಿಡಿದಿರುವ ಕಮ್ಮಾರನ ಕೈಯನ್ನು ಹಿಂದಿರುಗಿ ಹೇಗೆ ಹಿಡಿಯಲಾರದೋ ಅದರಂತೆ ಬುದ್ಧಿಯು ತನ್ನ ಹಿಂದಿರುವ ಆತ್ಮನನ್ನು ತಿಳಿಯಲಾರದು.

**ಪ್ರ ೨೭ : ವಿಜ್ಞಾನಮಯ ಕೋಶಕ್ಕಿಂತ ನಾನು ಬೇರೆ ಎಂಬು ದನ್ನು ಹೇಗೆ ತಿಳಿಯಬೇಕು ?**

ಉ : ಜಾಗ್ರತ್, ಸ್ವಪ್ನಗಳಲ್ಲಿ ಈ ವಿಜ್ಞಾನಮಯ ಕೋಶದ ಭಾವ ವನ್ನೂ, ಸುಷುಪ್ತಿಯಲ್ಲಿ ಇದರ ಅಭಾವವನ್ನೂ ನಾನು ತಿಳಿಯುವುದರಿಂದ, ಈ ವಿಜ್ಞಾನಮಯ ಕೋಶವು ನಾನಲ್ಲ. ಇದು ಅಪಂಚೀಕೃತ ಪಂಚ ಮಹಾ ಭೂತಗಳ ಸಮಷ್ಟಿ ಸತ್ವ ಗುಣಕ್ಕೆ ಸೇರಿರುವುದರಿಂದ ನನ್ನದೂ ಅಲ್ಲ. ಇದು ವಿಕಾರಿ, ನಾನು ನಿರ್ವಿಕಾರಿ. ಆದುದರಿಂದ ನಾನು ಇದಕ್ಕಿಂತ ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಈ ವಿಜ್ಞಾನಮಯ ಕೋಶದ ಭಾವಾಭಾವಗಳನ್ನು ಅರಿಯುವ ನಾನು ಇದ ಕ್ಕಿಂತಲೂ ಬೇರೆಯಾಗಿದ್ದೇನೆ.

**ಪ್ರ ೨೮ : ಇದಕ್ಕೆ ಯುಕ್ತಿ ಏನು ?**

ಉ : ಭಾಸಕ ಭಾಸ್ಯ ಭಾವ ಸಂಬಂಧದಿಂದ ಇದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಹೇಗೆಂದರೆ, ಸೂರ್ಯನು ಭಾಸಕ. ಅವನ ಪ್ರಕಾಶ ದಿಂದ ತೋರುವ ವಸ್ತುಗಳೆಲ್ಲವೂ ಭಾಸ್ಯ ಪದಾರ್ಥಗಳು. ಭಾಸಕನಾದ

ಸೂರ್ಯನಿಗಿಂತ ಭಾಸ್ಯ ಪದಾರ್ಥಗಳು ಬೇರೆಯಾಗಿರುತ್ತವೆ. ಮತ್ತು ಭಾಸ್ಯ ವಸ್ತುಗಳ ಗುಣ ಧರ್ಮಗಳು ಭಾಸಕನಾದ ಸೂರ್ಯನಿಗೆ ತ್ರಿಕಾಲ ದಲ್ಲೂ ಅಂಟುವುದಿಲ್ಲ. ಇದರಂತೆ ಆತ್ಮನು ಭಾಸಕ, ವಿಜ್ಞಾನಮಯ ಕೋಶವು ಭಾಸ್ಯ. ನನ್ನಿಂದ ಈ ವಿಜ್ಞಾನಮಯ ಕೋಶವು ಅರಿಸಿಕೊಳ್ಳು ವುದರಿಂದ ನಾನು ಈ ವಿಜ್ಞಾನಮಯ ಕೋಶಕ್ಕಿಂತ ಬೇರೆಯಾಗಿದ್ದೇನೆ ಮತ್ತು ಈ ವಿಜ್ಞಾನಮಯ ಕೋಶದ ಕರ್ತೃತ್ವ, ಭಾವಾಭಾವಗಳೇ ಮೊದ ಲಾದ ವಿಕಾರಗಳು, ನಿಶ್ಚಯ ಮಾಡುವುದೆಂಬ ಕ್ರಿಯೆ– ಇವುಗಳ ಸಂಬಂಧ ಆತ್ಮನಾದ ನನಗಿಲ್ಲ.

ಪ್ರ ೨೯ : **ಮೇಲೆ ಹೇಳಿದ ಕೋಶತ್ರಯಗಳಿಂದ ಕೂಡಿದ ಲಿಂಗ ದೇಹಕ್ಕೂ, ಆತ್ಮನಿಗೂ, ಬೇರ್ಪಡಿಸಲಿಕ್ಕಾಗದಂತೆ ಉಂಟಾಗಿರುವ ಸಂಬಂಧವನ್ನು ಯಾವ ಯುಕ್ತಿಗಳಿಂದ ಬಿಡಿಸಿಕೊಳ್ಳಬೇಕು ?**

ಉ : ಆತ್ಮನಿಗೂ ಅಂತಃಕರಣಕ್ಕೂ ಬಹಳ ಕಾಲದಿಂದ ಪರಸ್ಪರ ಸಂಬಂಧ ಉಂಟಾಗಿದೆ. ಇದಕ್ಕೆ ಚಿಜ್ಜಡ ಗ್ರಂಥಿ ಎಂಬುದಾಗಿಯೂ ಹೇಳಿದೆ. ಇದನ್ನು ಮುಂದೆ ಹೇಳುವ ಐದು ವಿಧವಾದ ಯುಕ್ತಿಗಳಿಂದ ಬಿಡಿಸಿಕೊಳ್ಳ ಬಹುದು.

(೧) ದೀಪದ ಪ್ರಕಾಶ ಮತ್ತು ಆಕಾಶ– ಇವೆರಡೂ ಬೇರೆ ಬೇರೆ ಯಾಗಿ ಕಾಣದಂತೆ ಕೂಡಿಕೊಂಡಿವೆ. ಆಕಾಶವನ್ನು ನೋಡಿದೆವೆಂದರೆ, ಹಗಲಿ ನಲ್ಲಿ ಪ್ರಕಾಶ ಸಹಿತವಾದ ಆಕಾಶವನ್ನೇ ನೋಡುತ್ತೇವೆ. ರಾತ್ರಿಯಲ್ಲಿ ಕತ್ತಲು ಸಹಿತವಾದ ಆಕಾಶವನ್ನೇ ನೋಡುತ್ತೇವೆ. ಯಾವ ಸಂಬಂಧವೂ ಇಲ್ಲದ ಆಕಾಶವನ್ನು ನೋಡಲಾಗುವುದಿಲ್ಲ. ಹಾಗಾದರೆ ಇದನ್ನು ಬೇರ್ಪಡಿ ಸುವುದು ಹೇಗೆ ಎಂದರೆ ಶಬ್ದ ಪ್ರಮಾಣದಿಂದ ಬೇರ್ಪಡಿಸಿ ತಿಳಿದುಕೊಳ್ಳ ಬಹುದು. ಹೇಗೆಂದರೆ ಶೃತಿಗಳಲ್ಲಿ– "ಸದೇವ ಸೌಮ್ಯೇದಮಗ್ರಮಾಸೀತ್" ಅಂದರೆ ಇದಂ ರೂಪವಾಗಿ ಅರಿಸಿಕೊಳ್ಳುವ ದೃಶ್ಯವಾದ ಈ ಜಗತ್ತಿನ ಸೃಷ್ಟಿಗೆ ಮೊದಲು ಸದ್ರೂಪವಾದ ಆತ್ಮ ಅಥವಾ ಬ್ರಹ್ಮ ಒಂದೇ ಇತ್ತೆಂಬು ದಾಗಿ ಹೇಳಿ, ನಂತರ ಸೃಷ್ಟಿ ಕ್ರಮವನ್ನು ಹೇಳುತ್ತಾ, "ಆತ್ಮನಃ ಆಕಾಶ ಸಂಭೂತಃ" ಅಂದರೆ ಮೊದಲು ಆತ್ಮನಿಂದ ಆಕಾಶ ಹುಟ್ಟಿತೆಂಬುದಾಗಿ ಹೇಳಿದೆ. ಆಕಾಶ ಹುಟ್ಟಿದಾಗ ಇನ್ನೂ ಅಗ್ನಿಯು ಹುಟ್ಟಿರಲಿಲ್ಲವಾಗಿ,

ಪ್ರಕಾಶ ಅಥವಾ ಅಂಧಕಾರ ರಹಿತವಾದ ಆಕಾಶವಿದೆ ಎಂಬುದಾಗಿ ಬೇರ್ಪಡಿಸಿ ತಿಳಿದುಕೊಳ್ಳಬಹುದು. ಇದರಂತೆ ಶೃತಿ, ಯುಕ್ತಿ, ಅನುಭವಗಳಿಂದ ಕೂಡಿದ ವಿಚಾರದಿಂದ ಆತ್ಮನೇ ಬೇರೆ, ಅಂತಃಕರಣವೇ ಬೇರೆ ಎಂಬುದಾಗಿ ಬೇರ್ಪಡಿಸಿ ತಿಳಿದುಕೊಳ್ಳಬಹುದು.

(೨) ಬಿಸಿನೀರು ಅಥವಾ ತಣ್ಣೀರು ಎಂಬುದನ್ನು ತಿಳಿಯಬೇಕಾದರೆ ತ್ವಗೇಂದ್ರಿಯ ಒಂದರಿಂದಲೇ ಸಾಧ್ಯವೇ ಹೊರತು ಮಿಕ್ಕ ಯಾವ ಇಂದ್ರಿಯ ಗಳಿಂದಲೂ ಸಾಧ್ಯವಿಲ್ಲ. ಇದರಂತೆ ಆತ್ಮನಿಗೂ ಅಂತಃಕರಣಕ್ಕೂ ಉಂಟಾ ಗಿರುವ ಅನ್ಯೋನ್ಯ ಅಧ್ಯಾಸವನ್ನು ವಿಚಾರ ಒಂದರಿಂದಲೇ ಕಳೆದುಕೊಳ್ಳ ಬೇಕಾಗಿದೆ.

(೩) ಗೋಡೆಯ ಮೇಲೆ ಬರೆದಿರುವ ಚಿತ್ರಗಳನ್ನು ಬೇರ್ಪಡಿಸಿ ತಿಳಿದು ಕೊಳ್ಳಬೇಕಾದರೆ ನೇತ್ರೇಂದ್ರಿಯ ಒಂದರಿಂದಲೇ ಸಾಧ್ಯ. ಇದರಂತೆ ಆತ್ಮ ನಿಗೂ ಅಂತಃಕರಣಕ್ಕೂ ಉಂಟಾಗಿರುವ ತಾದಾತ್ಮ್ಯ ಸಂಬಂಧವನ್ನು ವಿಚಾರವೆಂಬ ಕಣ್ಣಿನಿಂದಲೇ ಬೇರ್ಪಡಿಸಿಕೊಳ್ಳಬೇಕಾಗಿದೆ.

(೪) ಉಪ್ಪು ನೀರು ಅಥವಾ ಸಿಹಿ ನೀರು ಎಂಬುದಾಗಿ ಗೊತ್ತಾಗು ವುದು ಜಿಹ್ವೇಂದ್ರಿಯದಿಂದಲೇ ಹೊರತು ಮಿಕ್ಕ ಯಾವ ಇಂದ್ರಿಯಗಳಿಂದಲೂ ಗೊತ್ತಾಗುವುದಿಲ್ಲ. ಇದರಂತೆ ಆತ್ಮನನ್ನು ಅಂತಃಕರಣದಿಂದ ಬೇರ್ಪಡಿಸಿ ತಿಳಿದುಕೊಳ್ಳಬೇಕಾದರೆ ವಿಚಾರ ಒಂದರಿಂದಲೇ ಸಾಧ್ಯ.

(೫) ಕರವಸ್ತ್ರಕ್ಕೆ ಅಂಟಿಕೊಂಡಿರುವ ಸುಗಂಧವನ್ನಾಗಲೀ, ಹೂವಿನಲ್ಲಿ ಸುಗಂಧವಿದೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸುವುದಕ್ಕಾಗಲೀ, ನಾಸಿ ಕೇಂದ್ರಿಯ ಒಂದರಿಂದಲೇ ಸಾಧ್ಯವೇ ಹೊರತು ಉಳಿದ ಇಂದ್ರಿಯಗಳಿಂದ ಸಾಧ್ಯವಿಲ್ಲ. ಇದರಂತೆ ಆತ್ಮನಿಗೂ ಅಂತಃಕರಣಕ್ಕೂ ಇರುವ ಕಲ್ಪಿತ ತಾದಾತ್ಮ್ಯ ಸಂಬಂಧದ ಬಿಡುಗಡೆಯು ವಿಚಾರ ಒಂದರಿಂದಲೇ ಸಾಧ್ಯ ವಾಗುತ್ತದೆ.

**ಪ್ರ ೩೦ : ಆನಂದಮಯ ಕೋಶ ವಿಚಾರದ ಅವಶ್ಯಕತೆ ಏನು ?**

ಉ : ಆನಂದಮಯ ಕೋಶವು ಅನ್ನಮಯ, ಪ್ರಾಣಮಯ, ಮನೋಮಯ ಮತ್ತು ವಿಜ್ಞಾನಮಯ ಕೋಶಗಳಿಗಿಂತ ಸೂಕ್ಷ್ಮವಾಗಿದೆ, ಮತ್ತು ಅಂತರದಲ್ಲಿದೆ ಹಾಗೂ ವ್ಯಾಪಕವಾಗಿದೆ. ಈ ಆನಂತಮಯ

ಕೋಶವು ಉಳಿದ ನಾಲ್ಕು ಕೋಶಗಳಿಗೂ ಆಧಾರವಾಗಿದೆ ಮತ್ತು ಆಶ್ರಯು ವಾಗಿದೆ. ಹೇಗೆಂದರೆ ಮರಕ್ಕೆ ಬೇರೇ ಆಧಾರವಾಗಿರುವಂತೆ ಮತ್ತು ಜೀವನು ಜಾಗ್ರತ, ಸ್ವಪ್ನಗಳಲ್ಲಿ ಉಳಿದ ನಾಲ್ಕು ಕೋಶಗಳಲ್ಲಿ ಸೇರಿಕೊಂಡು ಎಲ್ಲಾ ವ್ಯವಹಾರಗಳನ್ನೂ ಮಾಡಿ ಬೇಸತ್ತು, ಸುಷುಪ್ತಿಯಲ್ಲಿ ತನ್ನ ಸ್ವಧಾಮದಂತಿರುವ ಆನಂದಮಯ ಕೋಶದಲ್ಲಿ ಲಯಿಸುವುದರಿಂದ ಅವನಿಗೆ ಶಾಂತಿ ಉಂಟಾಗುತ್ತದೆ. ಆದರೆ ಆನಂದಮಯ ಕೋಶವೇ ಆತ್ಮನಲ್ಲ. ಆನಂದಮಯ ಕೋಶವು ಭೋಕ್ತೃತ್ವ ಧರ್ಮ ಉಳ್ಳದ್ದಾಗಿದೆ. ಇದರ ಅಧ್ಯಾಸವನ್ನು ಬಿಡಿಸಿಕೊಳ್ಳದೆ ಉಳಿದ ನಾಲ್ಕು ಕೋಶಗಳ ಅಧ್ಯಾಸವನ್ನು ಮಾತ್ರ ಬಿಡಿಸಿಕೊಂಡರೆ, ಬೇರನ್ನು ಹಾಗೇ ಬಿಟ್ಟು ಮೇಲೆ ಮೇಲೆ ಗಿಡವನ್ನು ಕತ್ತರಿಸಿದರೆ ಅದು ಪುನಃ ಚಿಗುರುವಂತೆ, ಅಧ್ಯಾಸವು ತಾತ್ಕಾಲಿಕವಾಗಿ ನಿವೃತ್ತಿಯಾಗುತ್ತದೆಯೇ ಹೊರತು ಪೂರ್ಣವಾಗಿ ಮತ್ತು ಆತ್ಯಂತಿಕವಾಗಿ ನಿವೃತ್ತಿಯಾಗುವುದಿಲ್ಲ. ಆದುದರಿಂದ ಈ ಆನಂದಮಯ ಕೋಶವನ್ನೂ ವಿಚಾರ ಮಾಡುವುದು ಅತ್ಯಾವಶ್ಯಕವಾಗಿದೆ.

ಪ್ರ ೩೧ : **ಆನಂದಮಯ ಕೋಶದ ಸ್ವರೂಪವೇನು ?**

ಉ : ಆನಂದಮಯ ಕೋಶದ ಸ್ವರೂಪವನ್ನು ಪೈಂಗಲೋಪನಿಷತ್ತಿನಲ್ಲಿ ಈ ರೀತಿ ಹೇಳಿದೆ :

**"ಸ್ವರೂಪಾಜ್ಞಾನಮಾನಂದಮಯ ಕೋಶಃ"**

**"ತತ್ಕಾರಣ ಶರೀರಂ"**—ಅಂದರೆ ಸ್ವರೂಪದ (ಆತ್ಮನ) ಅಜ್ಞಾನವೇ ಆನಂದಮಯ ಕೋಶವೆಂದೂ, ಇದೇ ಕಾರಣ ಶರೀರವೆಂದೂ ಹೇಳಿದೆ

ಪ್ರ ೩೨ : **ಆನಂದಮಯ ಕೋಶದ ವಿಶೇಷ ವಿಚಾರವೇನು ?**

ಉ : ಆನಂದಮಯ ಕೋಶವು ಮೂರು ವಿಧವಾದ ಸ್ವರೂಪಗಳಿಂದ ಕೂಡಿಕೊಂಡಿದೆ.

ಪ್ರ ೩೩ : **ಆನಂದಮಯ ಕೋಶದ ಮೊದಲನೇ ಸ್ವರೂಪವೇನು ?**

ಉ : ಪುಣ್ಯ ಕರ್ಮಗಳಿಂದ ಅಂದರೆ ಅವು ಸಕಾಮವಾಗಿರಲಿ ಅಥವಾ ನಿಷ್ಕಾಮವಾಗಿರಲಿ, ಅವುಗಳಿಂದ ಬಂದ ಸುಖವನ್ನು ಭೋಗಿಸುವಾಗ ಅಥವಾ ಶಬ್ದ ಸ್ಪರ್ಶಾದಿ ಪಂಚವಿಷಯಗಳಿಂದ ಉಂಟಾಗುವ ಸುಖವನ್ನು ಭೋಗಿಸು

ವಾಗ, ಬುದ್ಧಿ ವೃತ್ತಿಯು ಅಂತರ್ಮುಖವಾಗುತ್ತದೆ. ಆಗ ಆತ್ಮನ ಪ್ರತಿ ಬಿಂಬವು ಅದರಲ್ಲಿ ಬಿದ್ದು ನಮಗೆ ಆನಂದವುಂಟಾಗುತ್ತದೆ. ಇದೇ ಆನಂದ ಮಯ ಕೋಶದ ಮೊದಲನೇ ಸ್ವರೂಪ.

ಪ್ರ ೩೪ : **ಆನಂದಮಯ ಕೋಶದ ಎರಡನೇ ಸ್ವರೂಪವೇನು ?**

ಉ : ಜಾಗ್ರದಾವಸ್ಥೆಯು ಪ್ರಾರಬ್ಧ ಕರ್ಮಾನುಸಾರ ಮುಗಿದು ಸುಷುಪ್ತಿ ಅವಸ್ಥೆ ಬಂದಾಗ, ಬುದ್ಧಿ ವೃತ್ತಿಯು ತನಗೆ ಕಾರಣವಾದ ಅವಿದ್ಯೆ ಯಲ್ಲಿ ಲಯಿಸುತ್ತದೆ. ಈ ಅವಿದ್ಯೆಯಲ್ಲಿ ಆತ್ಮನ ಪ್ರತಿಬಿಂಬ ಬೀಳುವುದ ರಿಂದ ನಮಗೆ ಸುಖವಾಗುತ್ತದೆ. ಇದೇ ಆನಂದಮಯ ಕೋಶದ ಎರಡನೇ ಸ್ವರೂಪ.

ಪ್ರ ೩೫ : **ಆನಂದಮಯ ಕೋಶದ ಮೂರನೇ ಸ್ವರೂಪ ವೇನು ?**

ಉ : ಈ ಆನಂದಮಯ ಕೋಶವು ಜಾಗ್ರದಾವಸ್ಥೆಯಲ್ಲಿ ಪ್ರಿಯ, ಮೋದ, ಪ್ರಮೋದ ವೃತ್ತಿಗಳ ರೂಪವಾಗಿದೆ.

ನಾವು ಯಾವುದಾದರೂ ಒಂದು ವಸ್ತುವನ್ನು ಬಯಸಿದಾಗ, ಅದು ನಮ್ಮ ಕಣ್ಣೆದುರಿಗೆ ಬಂದಾಗ ಉಂಟಾಗುವ ಬುದ್ಧಿ ವೃತ್ತಿಗೆ ಪ್ರಿಯವೃತ್ತಿ ಎನ್ನುತ್ತಾರೆ.

ನಮ್ಮ ಇಚ್ಛಿತ ವಸ್ತುವು ಕರಗತವಾದಾಗ ಉಂಟಾಗುವ ಆನಂದಕ್ಕೆ ಮೋದವೃತ್ತಿ ಎನ್ನುತ್ತಾರೆ.

ನಾವು ಬಯಸಿದ ವಸ್ತುವನ್ನು ಭೋಗಿಸುವಾಗ ಉಂಟಾಗುವ ಹೆಚ್ಚಿನ ಸಂತೋಷಕ್ಕೆ ಪ್ರಮೋದ ವೃತ್ತಿ ಎಂದು ಹೆಸರು ಈ ಮೂರು ವೃತ್ತಿಗಳಿಂದ ಕೂಡಿದುದೇ ಆನಂದಮಯ ಕೋಶದ ಮೂರನೇ ಸ್ವರೂಪ.

ಪ್ರ ೩೬ : **ಈ ವೃತ್ತಿಗಳಿಗೆ ಉದಾಹರಣೆ ಏನು ?**

ಒಂದನೇ ದೃಷ್ಟಾಂತ: ಒಬ್ಬ ಮನುಷ್ಯನಿಗೆ ಮಾವಿನ ಹಣ್ಣಿನ ಮೇಲೆ ಬಹಳ ಪ್ರೇಮವಿದ್ದಿತು. ಒಂದಾನೊಂದು ದಿನ ಅವನು ಪಕ್ಕದ ಊರಿಗೆ ನಡೆದು ಹೋಗುತ್ತಿದ್ದಾಗ, ದೂರದಲ್ಲಿ ಮಾವಿನ ತೋಪು ಮತ್ತು ಅದರಲ್ಲಿ ಪಕ್ವವಾದ ಮಾವಿನ ಹಣ್ಣುಗಳಿಂದ ತುಂಬಿದ ಮರಗಳು ಅವನ ಕಣ್ಣಿಗೆ ಕಂಡವು ಮಾಗಿದ ಮಾವಿನ ಹಣ್ಣನ್ನು ಕಂಡಾಕ್ಷಣ ಅವನಿಗೆ ಉಂಟಾದ

ಆನಂದಕ್ಕೆ ಪ್ರಿಯವೆಂದು ಹೆಸರು. ಅವನು ಆ ತೋಪಿನ ಬಳಿ ಹೋಗಿ, ಆ ತೋಪಿನ ಮಾಲೀಕನನ್ನು ಒಂದೆರಡು ಹಣ್ಣುಗಳನ್ನು ಕೇಳಲಾಗಿ ಅವನು ಕಿತ್ತುಕೊಟ್ಟನು. ಆಗ ಉಂಟಾದ ಸ್ವಲ್ಪ ಹೆಚ್ಚಿನ ಸಂತೋಷಕ್ಕೆ ಮೋದ ವೆಂದೂ, ಆ ಹಣ್ಣುಗಳನ್ನು ತಿನ್ನುವಾಗ ಉಂಟಾದ ಅತಿ ಹೆಚ್ಚಿನ ಆನಂದಕ್ಕೆ ಪ್ರಮೋದವೆಂದೂ ಹೆಸರು.

ಎರಡನೇ ದೃಷ್ಟಾಂತ : ಒಬ್ಬಾನೊಬ್ಬ ಮನುಷ್ಯನು ಬೇಸಿಗೆಯ ಮಧ್ಯಾಹ್ನ ದಾರಿ ನಡೆಯುತ್ತಿರುವಾಗ ಬಹಳ ಬಾಯಾರಿಕೆ ಉಂಟಾಗಿ, ನೀರಿಗಾಗಿ ಅತ್ತಿತ್ತ ಹುಡುಕುತ್ತಾ ಹೊರಟನು. ಆಗ ದೂರದಲ್ಲಿ ಒಂದು ಭಾವಿ ಕಂಡು ಅವನಿಗೆ ಸ್ವಲ್ಪ ಸಂತೋಷವಾಯಿತು. ಇದೇ ಪ್ರಿಯವೃತ್ತಿ. ಆ ಭಾವಿಯ ಬಳಿಗೆ ಹೋದಾಗ ಅದರೊಳಗಿದ್ದ ನೀರು ತಿಳಿಯಾಗಿ, ಸ್ವಚ್ಛವಾಗಿದ್ದಿತು ಮತ್ತು ಆ ಕಟ್ಟೆಯ ಬಳಿ ಒಂದು ಗಡಿಗೆ, ಸೇದುವ ಹಗ್ಗ ಸಹ ಇದ್ದಿತು. ಇದರಿಂದ ಆ ಮನುಷ್ಯನು ಬೇಗ ಬೇಗ ನೀರನ್ನು ಸೇದಿಕೊಂಡನು. ನೀರು ಅವನ ಕರಗತವಾದಾಗ ಉಂಟಾದ ಸಂತೋಷಕ್ಕೆ ಮೋದವೆಂದೂ ಆ ನೀರನ್ನು ಕುಡಿದಾಗ ಉಂಟಾದ ಹೆಚ್ಚಿನ ಸಂತೋಷಕ್ಕೆ ಪ್ರಮೋದವೆಂದೂ ಹೆಸರು.

ಪ್ರ ೩೭ : **ತೈತ್ತರೀಯೋಪನಿಷತ್ತಿನಲ್ಲಿ ಆನಂದಮಯ ಕೋಶವನ್ನು ಯಾವ ಉಪಮಾನದಿಂದ ವರ್ಣಿಸಿದೆ ?**

ಉ : ಈ ಆನಂದಮಯ ಕೋಶವನ್ನು ಒಂದು ಪಕ್ಷಿಗೆ ಹೋಲಿಸಿದೆ. ಹೇಗೆಂದರೆ, ಪ್ರಿಯವೃತ್ತಿಯೇ ಪಕ್ಷಿಯ ಶಿರ. ಮೋದ ವೃತ್ತಿಯೇ ಪಕ್ಷಿಯ ಬಲರೆಕ್ಕೆ. ಪ್ರಮೋದ ವೃತ್ತಿಯೇ ಪಕ್ಷಿಯ ಎಡರೆಕ್ಕೆ. ಸುಷುಪ್ತಿಯಲ್ಲಿ ತೋರುವ ಆನಂದವೇ ಪಕ್ಷಿಯ ಸ್ವರೂಪ. ಸುಷುಪ್ತಿಯಲ್ಲಿ ತೋರಿದ ಆನಂದಕ್ಕೆ ಬಿಂಬ ರೂಪವಾದ ಆತ್ಮನೇ ಪಕ್ಷಿಗೆ ಆಧಾರವಾದ ಪುಚ್ಛವೆಂಬುದಾಗಿ ಉಪನಿಷತ್ತಿನಲ್ಲಿ ವರ್ಣಿಸಿದೆ.

ಪ್ರ ೩೮ : **ಆತ್ಮನಾದ ನಾನು ಆನಂದಮಯ ಕೋಶಕ್ಕಿಂತ ವಿಲಕ್ಷಣನೆಂಬುದನ್ನು ಹೇಗೆ ತಿಳಿಯಬೇಕು ?**

ಉ : ಮಳೆಗಾಲದಲ್ಲಿ ಆಕಾಶದಲ್ಲಿ ಎಷ್ಟೋ ಮೋಡಗಳು ಬರುತ್ತವೆ, ಬೇಸಗೆಯಲ್ಲಿ ಹೊರಟು ಹೋಗುತ್ತವೆ. ಅಂದರೆ ಮೋಡಗಳು ಕ್ಷಣಿಕ. ಆದರೆ ಆಕಾಶವು ಮೋಡಗಳಂತೆ ಬಂದು ಹೋಗುವ ಸ್ವಭಾವದ್ದಲ್ಲ. ಅದು ನಿತ್ಯ

ವಾಗಿದೆ. ಇದರಂತೆ ಈ ಆನಂದಮಯ ಕೋಶವು ಜಾಗ್ರದಾವಸ್ಥೆಯಲ್ಲಿ ಪ್ರಿಯ, ಮೋದ, ಪ್ರಮೋದ ವೃತ್ತಿಗಳ ಮೂಲಕ ತೋರುತ್ತಲೂ, ಅಡಗುತ್ತಲೂ ಇರುತ್ತದೆ. ಸುಷುಪ್ತಿಯಲ್ಲಿ ಸ್ವಲ್ಪ ಕಾಲ ಆನಂದವು ತೋರಿ, ಎಚ್ಚರವಾದ ಕೂಡಲೇ ಇಲ್ಲವಾಗುತ್ತದೆ. ಆದುದರಿಂದ ಈ ಆನಂದಮಯ ಕೋಶವು ಕ್ಷಣಿಕವೂ, ಭಾವಾಭಾವಗಳಿಂದ ನಮ್ಮಿಂದ ಅರಿಸಿಕೊಳ್ಳುವ ದೃಶ್ಯ ವಸ್ತುವೂ ಆಗಿರುವುದರಿಂದ ಇದು ನಾನಲ್ಲ. ಇದು ಕಾರಣ ದೇಹಕ್ಕೆ ಸೇರಿದ್ದಾಗಿರುವುದರಿಂದ ನನ್ನದೂ ಅಲ್ಲ. ನಾನು ಇದಕ್ಕೆ ವಿಲಕ್ಷಣನಾಗಿದ್ದೇನೆ. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾಗಿರುವಂತೆ, ಈ ಆನಂದಮಯ ಕೋಶವನ್ನು ನೋಡುವ ನಾನು ಇದಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೩೯ : **ಪಂಚಕೋಶಗಳಿಗೂ ಆತ್ಮನಿಗೂ ಬೇರ್ಪಡಿಸುವ ಯುಕ್ತಿ ಯಾವುದು ?**

ಉ : ಪಂಚಕೋಶಗಳು ಒಂದರೊಳಗೊಂದಿಲ್ಲ ಮತ್ತು ಒಂದು ಕಾಲದಲ್ಲಿದ್ದರೆ ಮತ್ತೊಂದು ಕಾಲದಲ್ಲಿರುವುದಿಲ್ಲವಾದುದರಿಂದ ಇವು ಅಸತ್ತು. ಆತ್ಮನು ಈ ಪಂಚಕೋಶಗಳಲ್ಲಿ ಅನುಸ್ಯೂತನಾಗಿ, ಎಲ್ಲಾ ಕಾಲಗಳಲ್ಲೂ ಇರುವವನಾದ್ದರಿಂದ ಸತ್ತು. ಪಂಚಕೋಶಗಳು ಸ್ವಯಂ ಇತರ ಜ್ಞಪ್ತಿ ಶೂನ್ಯವಾದವುಗಳು. ಅಂದರೆ ತಮ್ಮನ್ನೂ ತಾವು ತಿಳಿಯಲಾರವು, ಅನ್ಯವನ್ನೂ ತಿಳಿಯಲಾರವು. ಆದುದರಿಂದ ಜಡ. ಆತ್ಮನು ತನ್ನನ್ನು ತಾನು ತಿಳಿದು, ಅನ್ಯವನ್ನೂ ಅಂದರೆ ಈ ಪಂಚಕೋಶಗಳನ್ನೂ ತಿಳಿಯುವುದರಿಂದ ಚೇತನನು. ಪಂಚಕೋಶಗಳು ವಿಕಾರಿಗಳಾದುದರಿಂದ ದುಃಖರೂಪವಾಗಿವೆ. ಆತ್ಮನು ನಿರ್ವಿಕಾರಿಯಾದುದರಿಂದ ಆನಂದರೂಪನು. ಹೀಗೆ ಆತ್ಮನು ಸಚ್ಚಿದಾನಂದ ರೂಪನೆಂದೂ, ಪಂಚಕೋಶಗಳು ಅಸಜ್ಜಡ ದುಃಖರೂಪಗಳೆಂದೂ ವಿಚಾರ ಮಾಡಿ ತಿಳಿದುಕೊಂಡು, ಪಂಚಕೋಶಗಳಿಂದ ಆತ್ಮನನ್ನು ಬೇರ್ಪಡಿಸಿ ತಿಳಿದುಕೊಳ್ಳಬಹುದು.

ಪ್ರ ೪೦ : **ಆತ್ಮನು ಅನ್ನಮಯ ಕೋಶಕ್ಕಿಂತ ಬೇರೆ ಎಂಬುದು ಹೇಗೆ ?**

ಉ : ಅನ್ನಮಯ ಕೋಶವು ಉತ್ಪತ್ತಿ ನಾಶವೇ ಮೊದಲಾದ ಷಡ್ಭಾವ ವಿಕಾರಗಳಿಂದ ಕೂಡಿದೆ ಮತ್ತು ಜಾಗ್ರದಾವಸ್ಥೆಯಲ್ಲಿ

ಭಾವವಾಗಿಯೂ, ಸ್ವಪ್ನ ಸುಷುಪ್ತಿಗಳಲ್ಲಿ ಅಭಾವವಾಗಿಯೂ ಇದೆ. ಇದು ಭೌತಿಕವಾದದ್ದು. ಆತ್ಮನಾದ ನಾನು ಷಡ್ಭಾವ ವಿಕಾರ ರಹಿತನೂ, ನಿರ್ವಿಕಾರನೂ, ಸದಾ ಭಾವರೂಪನೂ, ಅಭೌತಿಕನೂ ಆಗಿರುವುದರಿಂದ ನಾನು ಈ ಅನ್ನಮಯ ಕೋಶಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೪೧ : **ಆತ್ಮನು ಪ್ರಾಣಮಯ ಕೋಶಕ್ಕಿಂತ ಬೇರೆ ಎಂಬುದು ಹೇಗೆ ?**

ಉ : ಪ್ರಾಣಮಯ ಕೋಶವು ಯಂತ್ರದಂತೆ ಕ್ರಿಯಾಶೀಲವಾಗಿದ್ದರೂ, ಸ್ವಯಂ ಇತರ ಜ್ಞಪ್ತಿ ಇಲ್ಲದ ಜಡ ವಸ್ತುವಾಗಿದೆ. ಮತ್ತು ಹಸಿವು, ತೃಷೆಗಳೆಂಬ ಧರ್ಮಗಳಿಂದ ಕೂಡಿದೆ. ಆತ್ಮನಾದ ನಾನು ನಿಷ್ಕ್ರಿಯನೂ, ಚೇತನನೂ, ಕ್ಷುತ್ಪಿಪಾಸಾಧರ್ಮ ರಹಿತನೂ ಆಗಿರುವುದರಿಂದ, ನಾನು ಈ ಪ್ರಾಣಮಯ ಕೋಶಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೪೨ : **ಆತ್ಮನು ಮನೋಮಯ ಕೋಶಕ್ಕಿಂತ ಬೇರೆ ಎಂಬುದು ಹೇಗೆ ?**

ಉ : ಈ ಮನೋಮಯ ಕೋಶವು ಚಂಚಲವಾದದ್ದು, ವಿಕಾರಿಯಾದದ್ದು ಮತ್ತು ಸುಖದುಃಖ ರೂಪ ಧರ್ಮ ಉಳ್ಳದ್ದು. ಆತ್ಮನಾದ ನಾನು ಕೂಟಸ್ಥನಾಗಿಯೂ, ನಿರ್ವಿಕಾರಿಯಾಗಿಯೂ, ಸುಖದುಃಖಗಳನ್ನು ಅರಿಯುವ ಸಾಕ್ಷಿಯಾಗಿಯೂ ಇರುವುದರಿಂದ, ಈ ಮನೋಮಯ ಕೋಶಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೪೩ : **ಆತ್ಮನು ವಿಜ್ಞಾನಮಯ ಕೋಶಕ್ಕಿಂತ ಬೇರೆ ಎಂಬುದು ಹೇಗೆ ?**

ಉ : ಈ ವಿಜ್ಞಾನಮಯ ಕೋಶವು ಕರ್ತಾ-ಭೋಕ್ತೃವಾಗಿದೆ. ಮತ್ತು ಇದು ಸುಷುಪ್ತಿಯಲ್ಲಿ ಅಭಾವವಾಗುತ್ತದೆ. ಶೋಕ–ಮೋಹಗಳಿಂದಲೂ, ತೀಕ್ಷ್ಣತ್ವ, ಮಂದತ್ವ ಮೊದಲಾದುವುಗಳಿಂದಲೂ ಅರಿಸಿಕೊಳ್ಳುವುದರಿಂದ ಆತ್ಮನಾದ ನಾನು ಅಂದರೆ ಇದನ್ನು ಅರಿಯುವ ನಾನು ಈ ವಿಜ್ಞಾನಮಯ ಕೋಶಕ್ಕಿಂತ ಬೇರೆಯಾಗಿದ್ದೇನೆ.

ಪ್ರ ೪೪: **ಆತ್ಮನು ಆನಂದಮಯ ಕೋಶಕ್ಕಿಂತ ಬೇರೆ ಎಂಬುದು ಹೇಗೆ ?**

ಉ : ಈ ಆನಂದಮಯ ಕೋಶವು ಭೋಕ್ತಾ ಸ್ವರೂಪವಾಗಿದೆ ಮತ್ತು ಕ್ಷಣಿಕವಾಗಿದೆ. ಆತ್ಮನಾದ ನಾನು ಅಭೋಕ್ತನಾಗಿದ್ದೇನೆ. ಅಂದರೆ ಆನಂದವನ್ನಾಗಲೀ, ಸುಖವನ್ನಾಗಲೀ ಭೋಗಿಸುವವನಲ್ಲ. ನಾನು ಸುಖ ಸ್ವರೂಪನೇ ಆಗಿದ್ದೇನೆ ಮತ್ತು ಈ ಆನಂದಮಯ ಕೋಶದ ಭಾವಾಭಾವ ಗಳನ್ನು ತಿಳಿಯುವ ನಾನು ನಿತ್ಯನಾಗಿದ್ದೇನೆ. ಆದ್ದರಿಂದ ನಾನು ಈ ಆನಂದ ಮಯ ಕೋಶಕ್ಕಿಂತ ಬೇರೆಯಾಗಿದ್ದೇನೆ.

**ಪ್ರ ೪೫ : ವಿಚಾರದಿಂದ ಪಂಚಕೋಶಗಳು ಆತ್ಮನಲ್ಲನೆಂದು ತೆಗೆದು ಹಾಕಿದ ಮೇಲೆ ಏನೂ ಉಳಿಯುವುದಿಲ್ಲ. ಹಾಗಾದರೆ ಆತ್ಮ ನಾರು?**

ಉ : ಆತ್ಮ-ಅನಾತ್ಮಗಳನ್ನು ಬೇರ್ಪಡಿಸಿ, ಅನಾತ್ಮವಾದ ಈ ಪಂಚ ಕೋಶಗಳನ್ನು ತೆಗೆದು ಹಾಕಿದ ಮೇಲೆ, ತೆಗೆದು ಹಾಕಲಿಕ್ಕೆ ಬಾರದ ಸತ್ಯ ಸ್ವರೂಪನಾದ ಆತ್ಮನು ಉಳಿಯುತ್ತಾನೆ. ಆತ್ಮನನ್ನು ಕಳೆದು ಹಾಕಲು ಆಗುವು ದಿಲ್ಲ. ಏಕೆಂದರೆ ಅದು ಸದಾ ಸಿದ್ಧನಾಗಿರುವ ಬಾಧಾರಹಿತವಾದ ವಸ್ತು. ಉದಾ : ಒಂದು ರೂಮನ್ನು ಖಾಲಿ ಮಾಡೆಂದರೆ ಅದರೊಳಗಿರುವ ಸಾಮಾನು ಗಳನ್ನೆಲ್ಲಾ ತೆಗೆದು ಹಾಕಬಹುದು. ಆದರೆ ಆಕಾಶವನ್ನು ಖಾಲಿ ಮಾಡಲಾ ಗುವುದಿಲ್ಲ. ಮತ್ತು ಮನೆಯಲ್ಲಿ ಯಾರಿದ್ದಾರೆ ಎಂದು ಯಾರಾದರೂ ಪ್ರಶ್ನಿಸಿ ದಾಗ, ಯಾರೂ ಇಲ್ಲ ಎನ್ನುವಾಗ ಯಾರೂ ಇಲ್ಲವೆಂದು ಹೇಳುವವನೊಬ್ಬನಿರ ಬೇಕಲ್ಲವೆ! ಇದರಂತೆ ಅನಾತ್ಮ ವಸ್ತುಗಳಾದ ಪಂಚಕೋಶಗಳನ್ನು ವಿಚಾರ ಮಾಡಿ ಬೇರ್ಪಡಿಸಿಕೊಂಡ ಮೇಲೆ ಕಳೆಯಲಿಕ್ಕೆ ಬಾರದ ಉಳಿವ ವಸ್ತುವೇ ಆತ್ಮನಾಗಿದ್ದಾನೆ.

**ಪ್ರ ೪೬ : ಪಂಚಕೋಶಗಳು ಅನುಭವಕ್ಕೆ ಬರುವಂತೆ ಅವುಗಳಿಗೆ ವಿಲಕ್ಷಣವಾದ ಆತ್ಮನು ಅನುಭವಕ್ಕೆ ಬರುವುದಿಲ್ಲವಾದ್ದರಿಂದ ಪಂಚ ಕೋಶಗಳಿಗೆ ಆತ್ಮನು ವಿಲಕ್ಷಣನೆಂದು ಹೇಗೆ ತಿಳಿಯಬೇಕು?**

ಉ : ಪಂಚಕೋಶಗಳಿಗಿಂತ ಆತ್ಮನು ವಿಲಕ್ಷಣನಾಗಿರುವುದರಿಂದಲೇ ಸುಲಭವಾಗಿ ಅನುಭವಕ್ಕೆ ಬರುವುದಿಲ್ಲ. ಪಂಚಕೋಶಗಳು ಭೌತಿಕ, ಜಡ, ದೃಶ್ಯ. ಆತ್ಮನಾದ ನಾನು ಅಭೌತಿಕ, ಚೇತನ ಮತ್ತು ಸದಾ ದ್ರಷ್ಟನೂ ಆಗಿ

ರುವುದರಿಂದ ಪಂಚಕೋಶಗಳು ನನ್ನ ಅನುಭವಕ್ಕೆ ಬರುತ್ತವೆ. ಆದುದ ರಿಂದ ನಾನು ಅನುಭವ ಸ್ವರೂಪನೇ ಆಗಿದ್ದೇನೆ. ಶಮದಮಾದಿಗಳಿಂದ ಸುಸಂಸ್ಕೃತವಾದ, ಶುದ್ಧವಾದ ಅಂತಃಕರಣಕ್ಕೆ ಆತ್ಮನ ಅನುಭವ ಸುಲಭ ವಾಗಿ ಹಾಗೂ ಶೀಘ್ರವಾಗಿ ಉಂಟಾಗುತ್ತದೆ

ಪ್ರ ೪೭ : **ಆತ್ಮನಿಗೂ, ಪಂಚಕೋಶಗಳಿಗೂ ಸಂಬಂಧ ಏಕೆ ಉಂಟಾಯಿತು?**

ಉ : ನಿಜವಾಗಿ ಸಂಬಂಧ ಉಂಟಾಗಿಲ್ಲದಿದ್ದರೂ ಅನ್ಯೋನ್ಯಾ ಧ್ಯಾಸದಿಂದ ಸಂಬಂಧ ಉಂಟಾದಂತೆ ಆಗಿದೆ.

ಪ್ರ ೪೮ : **ಅನ್ಯೋನ್ಯಾಧ್ಯಾಸವೆಂದರೇನು?**

ಉ : ಇದರ ಧರ್ಮವನ್ನು ಅದರಲ್ಲಿಯೂ, ಅದರ ಧರ್ಮವನ್ನು ಇದರಲ್ಲಿಯೂ ತಿಳಿಯುವುದೇ ಅನ್ಯೋನ್ಯಾಧ್ಯಾಸ.

ಪ್ರ ೪೯ : **ಅನ್ನಮಯ ಕೋಶಕ್ಕೂ ಆತ್ಮನಿಗೂ ಕೂಡುವಿಕೆಯ ಪ್ರಕಾರವೇನು?**

ಉ : ಅನ್ನಮಯ ಕೋಶಕ್ಕೂ ಆತ್ಮನಿಗೂ ೧೨ ವಿಧವಾದ ಕೂಡುವಿಕೆ ಆಗಿದೆ.

| | |
|---|---|
| ೧. ಜೀವಾಧ್ಯಾಸ | ೭. ಆಶ್ರಮಾಧ್ಯಾಸ |
| ೨. ಸಾಮಾನ್ಯಜಾತಿ ಅಧ್ಯಾಸ | ೮. ನಾಮಾಧ್ಯಾಸ |
| ೩. ವಿಕಾರಾಧ್ಯಾಸ | ೯. ರೂಪಾಧ್ಯಾಸ |
| ೪. ಲಿಂಗಾಧ್ಯಾಸ | ೧೦. ಸಂಸಾರಾಧ್ಯಾಸ |
| ೫. ವರ್ಣಾಧ್ಯಾಸ | ೧೧. ವೇಷಾಧ್ಯಾಸ |
| ೬. ವಿಶೇಷ ಜಾತಿ ಅಧ್ಯಾಸ | ೧೨. ಕ್ರಿಯಾಧ್ಯಾಸ |

ಪ್ರ ೫೦ : **ನಾನು ಜೀವನೆಂಬುದು ಯಾವ ಅಧ್ಯಾಸ?**

ಉ : ಅಂತಃಕರಣ ವಿಶಿಷ್ಟ ಚೇತನಕ್ಕೆ ಜೀವನೆಂದು ಹೆಸರು. ಯಾವ ಉಪಾಧಿಗೂ ಸಂಬಂಧಿಸದ ಚೇತನಕ್ಕೆ ಆತ್ಮನೆಂದು ಹೆಸರು. ನಿರುಪಾಧಿಕವಾದ ಶುದ್ಧ ಚೇತನವೇ ತಾನಾಗಿದ್ದರೂ, ಉಪಾಧಿಗತವಾದ, ಚೇತನವಾದ ಜೀವನೇ ತಾನೆಂದುಕೊಂಡಿರುವುದೇ ಜೀವಾಧ್ಯಾಸ

ಪ್ರ ೫೧ : **ನಾನು ಸಾಮಾನ್ಯ ಜಾತಿಗೆ ಸೇರಿದವನೆಂಬುದು ಯಾವ ಅಧ್ಯಾಸ?**

ಉ : ಸಜಾತೀಯ ವಿಜಾತೀಯ ಸ್ವಗತ ಭೇದ ಶೂನ್ಯನಾದ ಆತ್ಮನೇ ತಾನಾಗಿದ್ದರೂ, ದೇಹವನ್ನು ನೋಡಿಕೊಂಡು ನಾನು ನರ ಅಥವಾ ಮನುಷ್ಯ ಜಾತಿಗೆ ಸೇರಿದವನೆಂದು ತಿಳಿಯುವುದೇ ಸಾಮಾನ್ಯ ಜಾತಿ ಅಧ್ಯಾಸವಾಗಿದೆ.

ಪ್ರ ೫೨ : **ನಾನು ವಿಕಾರ ಉಳ್ಳವನೆಂಬುದು ಯಾವ ಅಧ್ಯಾಸ ?**

ಉ : ನಿರ್ವಿಕಾರನಾದ ಆತ್ಮನೇ ತಾನಾಗಿ, ಷಡ್ಭಾವ ವಿಕಾರಗಳಿಂದ ಕೂಡಿದ ದೇಹದ ಧರ್ಮವನ್ನು ತನ್ನ ಮೇಲೆ ಆರೋಪಿಸಿಕೊಂಡು, ನನಗೆ ಜನನ ಮರಣಾದಿ ವಿಕೃತಿಗಳಿವೆ ಎಂದು ತಿಳಿದುಕೊಂಡಿರುವುದಕ್ಕೆ ವಿಕಾರ ಧ್ಯಾಸವೆಂದು ಹೆಸರು.

ಪ್ರ ೫೩ : **ನಾನು ಸ್ತ್ರೀ, ನಾನು ಪುರುಷನೆಂಬುದು ಯಾವ ಅಧ್ಯಾಸ?**

ಉ : ಯಾವ ಲಿಂಗ ಭೇದವೂ ಇಲ್ಲದ ಆತ್ಮನೇ ತಾನಾಗಿದ್ದರೂ, ಸ್ಥೂಲ ದೇಹದಲ್ಲಿ ತೋರುವ ಲಿಂಗ ಭೇದವನ್ನು ತನ್ನ ಮೇಲೆ ಆರೋಪಿಸಿ ಕೊಂಡು, ನಾನು ಸ್ತ್ರೀ, ನಾನು ಪುರುಷನೆಂದು ತಪ್ಪಾಗಿ ತಿಳಿದುಕೊಂಡಿರು ವುದಕ್ಕೆ ಲಿಂಗಾಧ್ಯಾಸವೆಂದು ಹೆಸರು.

ಪ್ರ ೫೪ : **ನಾನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ನೆಂಬುದು ಯಾವ ಅಧ್ಯಾಸ ?**

ಉ : ಇದು ವರ್ಣಾಧ್ಯಾಸವಾಗಿದೆ. ಯಾವ ವರ್ಣಕ್ಕೂ ಸೇರದ ಆತ್ಮನೇ ತಾನಾಗಿದ್ದರೂ, ಸ್ಥೂಲ ದೇಹದಲ್ಲಿ ಆಯಾ ಗುಣ ಕರ್ಮಗಳಿಗನು ಸಾರವಾಗಿ ಕಲ್ಪಿಸಲ್ಪಟ್ಟ ಈ ಜಾತಿಗಳನ್ನು ತನ್ನ ಮೇಲೆ ಆರೋಪಿಸಿಕೊಂಡಿರು ವುದಕ್ಕೆ ವರ್ಣಾಧ್ಯಾಸವೆನ್ನುತ್ತಾರೆ.

ಪ್ರ ೫೫ : **ನಾನು ವಿಶೇಷ ಜಾತಿಗೆ ಸೇರಿದವನೆಂಬುದು ಯಾವ ಅಧ್ಯಾಸ ?**

ಉ : ಯಾವ ಜಾತಿಗೂ ಸೇರದ ಆತ್ಮನೇ ತಾನಾಗಿದ್ದರೂ, ಸ್ಥೂಲ ದೇಹದಲ್ಲಿ ಕ್ರಿಯಾಭೇದದಿಂದ ತೋರುವ ಕುರುಬ, ಕುಂಬಾರ, ಗಾಣಿಗ,

ನೇಯ್ಗೆಯವನು ಮುಂತಾದ ಜಾತಿಗಳೇ ತಾನೆಂದೂ, ತನ್ನದೆಂದೂ ತಪ್ಪು ತಿಳಿದುಕೊಂಡಿರುವುದಕ್ಕೆ ವಿಶೇಷ ಜಾತಿ ಅಧ್ಯಾಸವೆಂದು ಹೆಸರು.

ಪ್ರ ೫೬ : **ನಾನು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಿ ಎಂಬುದು ಯಾವ ಅಧ್ಯಾಸ ?**

ಉ : ಯಾವ ಆಶ್ರಮಕ್ಕೂ ಸೇರದ ಆತ್ಮನಾದ ತನ್ನಲ್ಲಿ ಸ್ಥೂಲ ದೇಹಕ್ಕೆ ಸಂಬಂಧಪಟ್ಟ ಬ್ರಹ್ಮಚಾರಿ ಮೊದಲಾದ ಆಶ್ರಮ ಧರ್ಮಗಳನ್ನು ಆರೋಪಿಸಿಕೊಂಡಿರುವುದೇ ಆಶ್ರಮಾಧ್ಯಾಸವಾಗಿದೆ.

ಪ್ರ ೫೭ : **ನಾನು ಇಂತಹ ಹೆಸರುಳ್ಳವನೆಂಬುದು ಯಾವ ಅಧ್ಯಾಸ ?**

ಉ : ಯಾವ ಹೆಸರೂ ಇಲ್ಲದ ಆತ್ಮನಾಗಿ, ವ್ಯವಹಾರಕ್ಕೋಸ್ಕರ ಸ್ಥೂಲ ದೇಹದಲ್ಲಿ ಕಲ್ಪಿಸಲ್ಪಟ್ಟ ಹೆಸರುಗಳನ್ನು ತನ್ನದೆಂದು ತಿಳಿದುಕೊಂಡಿರುವುದು ನಾಮಾಧ್ಯಾಸವಾಗಿದೆ.

ಪ್ರ ೫೮ : **ನಾನು ಕಪ್ಪಗಿದ್ದೇನೆ, ಕೆಂಪಗಿದ್ದೇನೆ, ಎಂಬುದು ಯಾವ ಅಧ್ಯಾಸ ?**

ಉ : ಯಾವ ಬಣ್ಣವೂ ಇಲ್ಲದ ಆತ್ಮನೇ ತಾನಾಗಿ, ಸ್ಥೂಲದೇಹ ಅಥವಾ ಅನ್ನಮಯ ಕೋಶದಲ್ಲಿ ತೋರುವ ಕಪ್ಪು, ಕೆಂಪು, ಬಿಳುಪು ಇತ್ಯಾದಿ ಬಣ್ಣಗಳನ್ನು ತನ್ನ ಮೇಲೆ ಆರೋಪಿಸಿಕೊಂಡಿರುವ ಈ ಅಧ್ಯಾಸವು ವರ್ಣಾಧ್ಯಾಸವಾಗಿದೆ.

ಪ್ರ ೫೯ : **ನಾನು ಸಂಸಾರಿ ಎಂಬುದು ಯಾವ ಅಧ್ಯಾಸ ?**

ಉ : ಅಸಂಸಾರಿಯಾದ ಆತ್ಮ ತಾನಾಗಿ, ಸ್ಥೂಲದೇಹಕ್ಕೆ ಸಂಬಂಧಿಸಿದ ಸಂಸಾರವನ್ನು ತನ್ನ ಮೇಲೆ ಆರೋಪಿಸಿಕೊಂಡಿರುವ ಈ ಅಧ್ಯಾಸಕ್ಕೆ ಸಂಸಾರಾಧ್ಯಾಸವೆಂದು ಹೆಸರು.

ಪ್ರ ೬೦ : **ನಾನು ತಪಸ್ವಿ, ಯೋಗಿ, ಎಂಬುದು ಯಾವ ಅಧ್ಯಾಸ ?**

ಉ : ಏನೊಂದೂ ಆಗದಿರುವ ಆತ್ಮನೇ ತಾನಾಗಿದ್ದರೂ, ಜಟೆ ಇತ್ಯಾದಿ ಬೆಳೆಸಿಕೊಂಡು ನಾನು ತಪಸ್ವಿ, ಯೋಗಿ ಎಂದು ತಪ್ಪಾಗಿ ಭಾವಿಸಿರುವುದಕ್ಕೆ ವೇಷಾಧ್ಯಾಸವೆಂದು ಹೆಸರು.

ಪ್ರ ೬೧ : **ನಾನು ಇಂತಹ ಕರ್ಮ ಮಾಡುವವನೆಂಬುದು ಯಾವ ಅಧ್ಯಾಸ ?**

ಉ : ನಿಷ್ಕ್ರಿಯನಾದ ಆತ್ಮನೇ ತಾನಾಗಿದ್ದರೂ, ಸ್ಥೂಲದೇಹದಲ್ಲಿ ನಡೆಯುವ ಕರ್ಮಗಳನ್ನು ಭ್ರಾಂತಿಯಿಂದ ತನ್ನ ಮೇಲೆ ಆರೋಪಿಸಿ ಕೊಂಡಿರುವ ಈ ಅಧ್ಯಾಸವು ಕ್ರಿಯಾಧ್ಯಾಸವಾಗಿದೆ.

ಪ್ರ ೬೨ : **ಅನ್ನಮಯ ಕೋಶಕ್ಕೂ ಆತ್ಮನಿಗೂ ಸಂಬಂಧ ವನ್ನುಂಟುಮಾಡಿದ ಅನ್ಯೋನ್ಯಾಧ್ಯಾಸವನ್ನು ಉದಾಹರಣೆ ಸಹಿತ ವಿವರಿಸಿ.**

ಉ : ಆರು ವಿಧವಾದ ಅಧ್ಯಾಸಗಳಲ್ಲಿ ಅನ್ಯೋನ್ಯಾಧ್ಯಾಸವೇ ಮುಖ್ಯ ವಾಗಿದೆ. ಆದ್ದರಿಂದ ಇದನ್ನು ಚೆನ್ನಾಗಿ ವಿಚಾರ ಮಾಡಿ, ಬಿಡಿಸಿ ಕೊಳ್ಳಬೇಕಾಗಿದೆ.

ಉದಾ : ಒಂದು ಕಬ್ಬಿಣದ ಗುಂಡಿನಲ್ಲಿ ಕಪ್ಪಗಿರುವುದು, ತಣ್ಣಗಿರು ವುದು ಮತ್ತು ಭಾರವಾಗಿರುವುದು ಎಂಬ ಮೂರು ಗುಣಗಳಿರುತ್ತವೆ. ಬೆಂಕಿ ಯಲ್ಲಿ ಕೆಂಪಗಿರುವುದು, ಬಿಸಿಯಾಗಿರುವುದು ಮತ್ತು ಹಗುರವಾಗಿರುವುದು ಎಂಬ ಮೂರು ಗುಣಗಳಿವೆ. ಕಬ್ಬಿಣದ ಗುಂಡನ್ನು ಅಗ್ನಿಯಲ್ಲಿ ಹಾಕಿ ಚೆನ್ನಾಗಿ ಕಾಯಿಸಿದಾಗ, ಕಾದ ಕಬ್ಬಿಣದ ತುಂಡನ್ನು ನೋಡಿ, ಕಬ್ಬಿಣ ಕೆಂಪಗಿದೆ ಮತ್ತು ಬಿಸಿಯಾಗಿದೆ ಎನ್ನುತ್ತೇವೆ. ಅಥವಾ ಬೆಂಕಿಯು ಗುಂಡಗಿದೆ ಮತ್ತು ಭಾರವಾಗಿದೆ ಎಂತಲೂ ಹೇಳುತ್ತೇವೆ. ಹೀಗೆ ಅಗ್ನಿಯ ಧರ್ಮವಾದ ಕೆಂಪು ಬಣ್ಣ ಮತ್ತು ಬಿಸಿಯಾಗಿರುವಿಕೆ ಇವುಗಳನ್ನು ಕಬ್ಬಿಣದ ಮೇಲೂ, ಕಬ್ಬಿಣದ ಧರ್ಮಗಳಾದ ಗುಂಡಾಗಿರುವಿಕೆ ಮತ್ತು ಭಾರವಾಗಿರು ವಿಕೆ ಎಂಬಿವುಗಳನ್ನು ಅಗ್ನಿಯ ಮೇಲೂ ಪರಸ್ಪರ ಆರೋಪಿಸಿ ಹೇಳುವುದೇ ಅನ್ಯೋನ್ಯಾಧ್ಯಾಸದ ಸ್ವರೂಪವಾಗಿದೆ. ಕಾದ ಕಬ್ಬಿಣವನ್ನು ಚಮ್ಮಟಿಗೆ ಯಿಂದ ಹೊಡೆದಾಗ ಕಬ್ಬಿಣದ ಚೂರುಗಳು ಸಿಡಿಯುತ್ತವೆ. ಆದರೂ ನೋಡುವವರು ಬೆಂಕಿ ಸಿಡಿಯುತ್ತಿದೆ ಎನ್ನುತ್ತಾರೆ.

ದ್ರಾಷ್ಟಾಂತ : ಇದರಂತೆ ಆತ್ಮನ ಧರ್ಮಗಳು ಸತ್ತು, ಚಿತ್ತು, ಆನಂದ ಮತ್ತು ಅದ್ವೈತ; ಅನಾತ್ಮವಾದ ಪಂಚಕೋಶಗಳ ಧರ್ಮಗಳು ಅಸತ್ತು, ಜಡ, ದುಃಖ ಮತ್ತು ದ್ವೈತಗಳಾಗಿವೆ. ಇದೆ, ತೋರುತ್ತಿದೆ ಎಂಬುದು

ಆತ್ಮನ ಧರ್ಮಗಳು. ನಾನು ದುಃಖಿ ಮತ್ತು ಪರಬ್ರಹ್ಮಕ್ಕಿಂತ ನಾನು ಬೇರೆ ಎಂಬುದಾಗಿ ತಿಳಿದುಕೊಂಡಿರುವುದು ಪಂಚಕೋಶಗಳ ಧರ್ಮಗಳಾಗಿವೆ. ಹೀಗೆ ಆತ್ಮನ ಧರ್ಮಗಳಾದ ಸತ್ತು, ಚಿತ್ತುಗಳನ್ನು ಅನಾತ್ಮವಾದ ಪಂಚ ಕೋಶಗಳಲ್ಲೂ, ಅನಾತ್ಮ ಧರ್ಮಗಳಾದ ದುಃಖ, ದ್ವೈತಗಳನ್ನು ಆತ್ಮನಲ್ಲೂ ಆರೋಪಿಸಿಕೊಂಡಿರುವುದೇ ಅನ್ಯೋನ್ಯಾಧ್ಯಾಸದ ಸ್ವರೂಪವಾಗಿದೆ.

ಪ್ರ ೬೩ : **ಪ್ರಾಣಮಯ ಕೋಶಕ್ಕೂ, ಆತ್ಮನಿಗೂ ಅನ್ಯೋನ್ಯಾಧ್ಯಾಸ ಹೇಗೆ ಉಂಟಾಯಿತು ?**

ಉ : ಪ್ರಾಣಮಯ ಕೋಶವು ಇದೆ, ತೋರುತ್ತಿದೆ ಎಂಬುದು ಆತ್ಮನ ಧರ್ಮವಾಗಿದೆ. ಪ್ರಾಣಮಯ ಕೋಶದ ಕ್ರಿಯಾಶೀಲತ್ವ, ಹಸಿವು-ತೃಷೆ ಮೊದಲಾದ ಧರ್ಮಗಳು ಆತ್ಮನಲ್ಲಿ ಆರೋಪಿಸಲ್ಪಟ್ಟಿವೆ. ಹೀಗೆ ಪ್ರಾಣ ಮಯ ಕೋಶಕ್ಕೂ, ಆತ್ಮನಿಗೂ ಅನ್ಯೋನ್ಯಾಧ್ಯಾಸ ಉಂಟಾಗಿದೆ.

ಪ್ರ ೬೪ : **ಮನೋಮಯ ಕೋಶಕ್ಕೂ, ಆತ್ಮನಿಗೂ ಅನ್ಯೋನ್ಯಾಧ್ಯಾಸ ಹೇಗೆ ಉಂಟಾಯಿತು ?**

ಉ : ಮನೋಮಯ ಕೋಶವು ತ್ರಿಗುಣಗಳಿಂದ ಕೂಡಿ ವಿಕಾರಿಯಾಗಿದೆ; ಸುಖದುಃಖ ಧರ್ಮವುಳ್ಳದ್ದಾಗಿದೆ. ಆತ್ಮನಾದ ನಾನು ನಿರ್ಗುಣನಾಗಿಯೂ, ನಿರ್ವಿಕಾರಿಯಾಗಿಯೂ, ಸುಖದುಃಖಗಳಿಗೆ ಸಾಕ್ಷಿಯಾಗಿಯೂ ಇದ್ದೇನೆ. ಹೀಗಿದ್ದರೂ ನಾನು ಸುಖಿ, ದುಃಖಿ, ಸತ್ವಾದಿ ಗುಣದಿಂದ ಕೂಡಿರುವವನು ಇತ್ಯಾದಿಯಾಗಿ ತಪ್ಪು ತಿಳಿದುಕೊಂಡಿರುವುದಕ್ಕೆ ಕಾರಣ ಮನೋಮಯ ಕೋಶದ ಧರ್ಮವನ್ನು ಆತ್ಮನ ಮೇಲೆ ಆರೋಪಿಸಿಕೊಂಡಿರುವುದು. ಇನ್ನು ಇಲ್ಲಿನ ಮನೋಮಯ ಕೋಶವು ಇದೆ, ತೋರುತ್ತಿದೆ ಎನ್ನುವುದಕ್ಕೆ ಕಾರಣ ಆತ್ಮನ ಸತ್ತು, ಚಿತ್ತುಗಳ ಧರ್ಮಗಳನ್ನು ಮನೋಮಯ ಕೋಶದ ಮೇಲೆ ಆರೋಪಿಸಿಕೊಂಡಿರುವುದು. ಹೀಗೆ ಮನೋಮಯ ಕೋಶಕ್ಕೂ ಆತ್ಮನಿಗೂ ಪರಸ್ಪರ ಅಧ್ಯಾಸ ಉಂಟಾಗಿದೆ.

ಪ್ರ ೬೫ : **ವಿಜ್ಞಾನಮಯ ಕೋಶಕ್ಕೂ ಆತ್ಮನಿಗೂ ಉಂಟಾಗಿರುವ ಅನ್ಯೋನ್ಯಾಧ್ಯಾಸದ ಲಕ್ಷಣವೇನು ?**

ವಿಜ್ಞಾನಮಯ ಕೋಶವು ಜಾಗ್ರತ್ಸ್ವಪ್ನಗಳಲ್ಲಿ ಭಾವರೂಪವಾಗಿಯೂ, ಸುಷುಪ್ತಿಯಲ್ಲಿ ಅಭಾವರೂಪವಾಗಿಯೂ, ಕರ್ತಾರೂಪ

ವಾಗಿಯೂ ಇದೆ. ಆತ್ಮನಾದ ನಾನು ಸದಾ ಭಾವರೂಪನೂ, ಅಕರ್ತನೂ ಆಗಿದ್ದೇನೆ. ಹೀಗಿದ್ದರೂ 'ಅಹಂಕರ್ತಾ' ಎಂಬುದಾಗಿ ಅಧ್ಯಾಸ ಮಾಡಿಕೊಂಡಿದ್ದೇನೆ. ಮತ್ತು ವಿಜ್ಞಾನಮಯ ಕೋಶವು ಇದೆ, ತೋರುತ್ತಿದೆ ಎನ್ನುವುದು ಆತ್ಮನ ಸತ್ತು-ಚಿತ್ತುಗಳಾಗಿವೆ. ಹೀಗೆ ಆತ್ಮನಿಗೂ, ವಿಜ್ಞಾನಮಯ ಕೋಶಕ್ಕೂ ಅನ್ಯೋನ್ಯಾಧ್ಯಾಸ ಉಂಟಾಗಿದೆ.

**ಪ್ರ ೬೬ : ಆನಂದಮಯ ಕೋಶಕ್ಕೂ, ಆತ್ಮನಿಗೂ ಅನ್ಯೋನ್ಯಾಧ್ಯಾಸ ಹೇಗಾಯಿತು ?**

ಆನಂದಮಯ ಕೋಶವು ಭೋಕ್ತಾರೂಪವಾಗಿಯೂ, ಕ್ಷಣಿಕವಾಗಿಯೂ ಇದೆ. ಆತ್ಮನಾದ ನಾನು ಅಭೋಕ್ತನೂ, ನಿತ್ಯನೂ ಆಗಿದ್ದೇನೆ. ಆನಂದಮಯ ಕೋಶವು ಇದೆ, ತೋರುತ್ತಿದೆ ಎಂಬುದು ಆತ್ಮನ ಲಕ್ಷಣ. ಆತ್ಮನ ಸತ್ತು, ಚಿತ್ತು ಧರ್ಮಗಳನ್ನು ಆನಂದಮಯ ಕೋಶದಲ್ಲೂ, ಆನಂದಮಯಕೋಶದ ಭೋಕ್ತೃತ್ವ, ಕ್ಷಣಿಕತ್ವ ಮೊದಲಾದ ಧರ್ಮಗಳನ್ನು ಆತ್ಮನಲ್ಲೂ ಆರೋಪಿಸಿದ್ದೇವೆ. ಹೀಗೆ ಆತ್ಮನಿಗೂ ಆನಂದಮಯಕೋಶಕ್ಕೂ ಪರಸ್ಪರ ಅನ್ಯೋನ್ಯಾಧ್ಯಾಸ ಉಂಟಾಗಿದೆ.

**ಪ್ರ ೬೭ : ಪಂಚಕೋಶಗಳಿಗೆ ಆತ್ಮನಾದ ನಾನು ಅತೀತನೆಂದು ತಿಳಿಯುವುದು ಹೇಗೆ ?**

ಉ : ಅನ್ನಮಯಕೋಶದ ಜನನ ಮರಣಾದಿ ಷಡ್ಭಾವ ವಿಕಾರಗಳನ್ನೂ, ಪ್ರಾಣಮಯ ಕೋಶದ ಹಸಿವು-ತೃಷೆ, ಚಲನವಲನಾದಿ ಕ್ರಿಯೆಗಳನ್ನೂ, ಮನೋಮಯ ಕೋಶದ ಸುಖದುಃಖಾದಿ ಧರ್ಮಗಳನ್ನೂ, ಸತ್ವಾದಿ ಗುಣಗಳನ್ನೂ ಮತ್ತು ಅದರ ವಿಕಾರಗಳನ್ನೂ, ವಿಜ್ಞಾನಮಯ ಕೋಶದ ಕರ್ತೃತ್ವ, ಭಾವಾಭಾವಗಳನ್ನೂ, ಆನಂದಮಯ ಕೋಶದ ಭೋಕ್ತೃತ್ವವೇ ಮೊದಲಾದ ಧರ್ಮಗಳನ್ನೂ ಆತ್ಮನಾದ ನಾನು ತಿಳಿಯುವವನಾದ್ದರಿಂದ ನಾನು ಈ ಪಂಚಕೋಶಗಳಿಗೆ ಅತೀತನು. ಅಂದರೆ ಈ ಪಂಚಕೋಶಗಳು ನಾನಲ್ಲ. ಏಕೆಂದರೆ :

"ಘಟದ್ರಷ್ಟಾಘಟಾದ್ಭಿನ್ನಸರ್ವಥಾನ ಘಟೋಯಥಾ" – ಘಟವನ್ನು ನೋಡುವವನು ಹೇಗೆ ಎಂದಿಗೂ ಘಟವಾಗದೆ ಅದಕ್ಕಿಂತ ಬೇರೆ ಇರುವನೋ, ಅದರಂತೆ ಪಂಚಕೋಶಗಳನ್ನು ಇದಿರಿಟ್ಟು ನೋಡುವ ನಾನು ಪಂಚಕೋಶ

ಗಳಿಂದಿಗೂ ಆಗುವುದಿಲ್ಲ. ಮತ್ತು ಈ ಪಂಚಕೋಶಗಳು ನನ್ನವೂ ಅಲ್ಲ; ಏಕೆಂದರೆ ಅನ್ನಮಯ ಕೋಶವು ಪಂಚೀಕೃತ ಪಂಚ ಮಹಾಭೂತಗಳಿಗೆ ಸೇರಿದ್ದು. ಪ್ರಾಣಮಯ, ಮನೋಮಯ ಮತ್ತು ವಿಜ್ಞಾನಮಯ ಕೋಶಗಳು ಅಪಂಚೀಕೃತ ಪಂಚ ಮಹಾಭೂತಗಳಿಗೆ ಸೇರಿದವುಗಳ. ಆನಂದಮಯ ಕೋಶವು ಅಜ್ಞಾನ ರೂಪವಾಗಿದೆ. ಆದ್ದರಿಂದ ಈ ಪಂಚಕೋಶಗಳಿಗೂ ನನಗೂ ಯಾವ ಸಂಬಂಧವೂ ಇಲ್ಲ. ಇವುಗಳ ವಿಕಾರಗಳನ್ನೂ, ಭಾವಾಭಾವ ಗಳನ್ನೂ ಅರಿಯುವ ನಾನು ಇವುಗಳಿಗಿಂತ ಬೇರೆಯಾಗಿದ್ದೇನೆ.

ಪ್ರ ೬೮ : **ಆತ್ಮನ ಲಕ್ಷಣವೇನು ?**

ಉ : ಆತ್ಮನು ಸಚ್ಚಿದಾನಂದ ನಿತ್ಯ ಪರಿಪೂರ್ಣ ಅದ್ವೈತ ರೂಪ ನಾಗಿದ್ದಾನೆ.

ಪ್ರ ೬೯ : **ಪಂಚಕೋಶಗಳೂ, ಆತ್ಮನೂ ಬೇರೆ ಬೇರೆ ಎಂಬು ದಕ್ಕೆ ಉದಾಹರಣೆ ಏನು ?**

ಉ : ಅಧಿಷ್ಠಾನವಾದ ಹಗ್ಗದಲ್ಲಿ ಕಲ್ಪಿತವಾದ ಸರ್ಪ, ಮಾಲ, ದಂಡಾದಿಗಳು ಹಗ್ಗಕ್ಕಿಂತ ಬೇರೆಯಾಗಿ ತೋರಿದಂತೆ, ಆತ್ಮನಲ್ಲಿ ಕಲ್ಪಿತವಾದ ಈ ಪಂಚಕೋಶಗಳು ಆತ್ಮನಿಗಿಂತ ಬೇರೆಯಾಗಿ ತೋರುತ್ತವೆ.

ಪ್ರ ೭೦ : **ರಜ್ಜುವಿನ ಜ್ಞಾನವಾದ ಮೇಲೆ ಕಲ್ಪಿತ ಸರ್ಪ, ಮಾಲ, ದಂಡಾದಿಗಳು ತೋರುವುದಿಲ್ಲ. ಆದರೆ ಆತ್ಮನ ಜ್ಞಾನವಾದ ಮೇಲೂ ಈ ಪಂಚಕೋಶಗಳು ತೋರಲು ಕಾರಣವೇನು ?**

ಉ : ರಜ್ಜುವಿನಲ್ಲಿ ಕಲ್ಪಿತವಾದ ಸರ್ಪಾದಿಗಳು ರಜ್ಜುವಿನಲ್ಲಿ ಅತ್ಯಂತಾಭಾವ (ಅಸತ್ತು)ವಾಗಿರುವುದರಿಂದ, ಅಧಿಷ್ಠಾನ ಜ್ಞಾನವಾದ ನಂತರ ಇವು ತೋರುವುದಿಲ್ಲ. ಆದರೆ ಆತ್ಮನಲ್ಲಿ ಕಲ್ಪಿತವಾದ ಈ ಪಂಚ ಕೋಶಗಳು ಸರ್ಪದಂತೆ ಅಸತ್ತಲ್ಲ; ಮಿಥ್ಯೆಯಾಗಿವೆ. ಆದ್ದರಿಂದ ಆತ್ಮನನ್ನು ತಿಳಿದ ಮೇಲೂ ಅವು ತೋರಬಹುದು. ಇದಕ್ಕೆ ಮತ್ತೊಂದು ದೃಷ್ಟಾಂತ: ಮರು-ಮರೀಚಿಕೆ ಅಥವಾ ಮೃಗಜಲವು ಕಲ್ಪಿತವಾಗಿದೆ ಮತ್ತು ಅದು ಕಲ್ಪಿತ ವೆಂದು ತಿಳಿದ ಮೇಲೂ ಅದು ಮೊದಲಿನಂತೆ ತೋರಿಬರುತ್ತದೆ. ಇದರಂತೆ ಆತ್ಮನ ಜ್ಞಾನವಾದ ನಂತರವೂ ಈ ಪಂಚಕೋಶಗಳು ತೋರಿಬರುತ್ತವೆ.

**ಪ್ರ ೭೧ : ಮೃಗಜಲವು ಕಲ್ಪಿತವೆಂದು ತಿಳಿದ ಮೇಲೆಯೂ ತೋರಿ ಬರುತ್ತದೇನೋ ನಿಜ. ಆ ಜಲವು ಯಾವ ಕೆಲಸಕ್ಕೂ ಬರುವುದಿಲ್ಲ, ಸರಿಯೆ. ಆದರೆ ಪಂಚಕೋಶಗಳು ಉಪಯೋಗಕ್ಕೆ ಬರುವವಲ್ಲಾ?**

ಉ : ಇದಕ್ಕೆ ಸಮಾಧಾನ ಹೇಳಬೇಕಾದರೆ ಮತ್ತೊಂದು ದೃಷ್ಟಾಂತ ವನ್ನು ತಿಳಿದುಕೊಳ್ಳಬೇಕು. ಏನೆಂದರೆ, ಮಣ್ಣಿನಲ್ಲಿ ಘಟವು ಮಿಥ್ಯೆ ಯೆಂದು ತಿಳಿದ ಮೇಲೂ ಎಲ್ಲಾ ಕೆಲಸಕ್ಕೂ ಬರುವಂತೆ, ಪಂಚಕೋಶಗಳು ಆತ್ಮನಲ್ಲಿ ಕಲ್ಪಿತವೆಂದು ತಿಳಿದನಂತರವೂ ಘಟದಂತೆ ಉಪಯೋಗಕ್ಕೆ ಬರು ತ್ತವೆ. ಆದರೆ ಉಪಯೋಗಿಸುವಾಗ ಮೊದಲಿನಂತೆ ಪಂಚಕೋಶಗಳಲ್ಲಿ ನಾನು ನನ್ನದೆಂಬ ಅಹಂಕಾರ ಮಮಕಾರಗಳಿರುವುದಿಲ್ಲ. ಆದ ಕಾರಣ ಅವುಗಳನ್ನು ಉಪಯೋಗಿಸಿದರೂ ಬಂಧ ಉಂಟಾಗುವುದಿಲ್ಲ.

**ಪ್ರ ೭೨ : ಪಂಚಕೋಶಗಳಿಗೆ ನಾನು ಅತೀತನೆಂಬುದಾಗಿ ತಿಳಿದ ಮಹಾ ಪುರುಷನ ಸ್ಥಿತಿ ಏನು ?**

ಉ : ಪಂಚಕೋಶಗಳು ಅನಾತ್ಮಗಳೆಂದು ತಿಳಿದು ಅದನ್ನು ಬೇರ್ಪಡಿಸಿ, ಅದಕ್ಕೆ ವಿಲಕ್ಷಣವಾದ ಆತ್ಮನೇ ತಾನೆಂದು ತಿಳಿದು ತನ್ನ ಸ್ವರೂಪ ಸ್ಥಿತಿಯಲ್ಲಿ ನೆಲೆನಿಂತ ಮಹಾಪುರುಷನು "ಬ್ರಹ್ಮವಿದ್ ಬ್ರಹ್ಮೈವಭವತಿ" ಎಂಬಂತೆ ಬ್ರಹ್ಮವನ್ನು ತಿಳಿದವನು ಸಾಕ್ಷಾತ್ ಪರಬ್ರಹ್ಮವೇ ಆಗುತ್ತಾನೆ. ಆತನು ಮನುಷ್ಯನಂತೆ ಕಂಡರೂ ಮನುಷ್ಯನಲ್ಲ. ಹೇಗೆಂದರೆ – "ಸುರತರುವು ಮರನಲ್ಲ ಸುರಭಿವೊಂದಾವಲ್ಲ, ಪರುಷ ಪಾಷಾಣವಲ್ಲ ಗುರುರಾಯ ನರ ರೊಳಗಲ್ಲ ಸರ್ವಜ್ಞ" ಎಂದು ಸರ್ವಜ್ಞಮುನಿಯು ಹೇಳಿರುವಂತೆ, ವಸ್ತುತಃ ಕಪಿ ಗಳಲ್ಲಿ ಆಂಜನೇಯನೂ ಒಂದು ಸಾಮಾನ್ಯ ಕಪಿಯಾಗಿ ತೋರಿದರೂ ಅವನು ಸಾಮಾನ್ಯ ಕಪಿಯಲ್ಲದೆ ಶ್ರೀರಾಮನ ಭಕ್ತರಲ್ಲಿ ಅಗ್ರಗಣ್ಯನೂ, ನವವ್ಯಾಕರಣ ಪಂಡಿತನೂ, ಜ್ಞಾನಿಗಳಲ್ಲಿ ಅಗ್ರಗಣ್ಯನೂ ಆಗಿದ್ದಂತೆ, ಪಂಚ ಕೋಶಗಳಿಗೆ ನಾನು ಅತೀತನೆಂಬುದಾಗಿ ದೃಢವಾಗಿ ಅನುಭವ ಮಾಡಿ ಕೊಂಡ ಜ್ಞಾನಿ ಮಹಾಪುರುಷನು ಜಗದ್ವಂದ್ಯನಾಗಿರುತ್ತಾನೆ.

ಹೀಗೆ ಪಂಚಕೋಶಗಳಿಗೆ ನಾನು ಅತೀತನೆಂಬುದಾಗಿ ತಿಳಿದು, ಅಸಂಗ ಸ್ಥಿತಿಯಲ್ಲಿ ನೆಲೆ ನಿಲ್ಲುವ ಸದವಕಾಶವನ್ನು ಸದ್ಗುರುನಾಥನು ಸಾಧಕರಾದ ನಿಮಗೆಲ್ಲರಿಗೂ ದಯಪಾಲಿಸಲಿ !

ಓಂ ತತ್ಸತ್

ಇತಿ "ನಾನು ಪಂಚಕೋಶಾತೀತನು"
ಎಂಬ ಚತುರ್ಥ ಕಲಾ ಸಮಾಪ್ತಃ

ಓಂ

ನಮೋ ಭಗವತೇ ಶಂಕರಾನಂದಾಯ

**ಪಂಚಮ ಕಲಾ ಪ್ರಾರಂಭಃ**

# ಆತ್ಮನು ಅವಸ್ಥಾತ್ರಯಗಳಿಗೆ ಸಾಕ್ಷಿ

ಪ್ರ ೧ : **ಅವಸ್ಥೆಯೆಂದರೇನು ?**

ಉ : ಅವ + ಸ್ಥಾ = ಅವಸ್ಥಾ. ಅಂದರೆ ಎದ್ದು ನಿಲ್ಲು, ಅಥವಾ ಇರುವಿಕೆ ಇಲ್ಲದೆ ತೋರುವಿಕೆ ಎಂಬರ್ಥವನ್ನು ಸೂಚಿಸುತ್ತದೆ.

ಪ್ರ ೨ : **ಅವುಗಳ ಹೆಸರೇನು ? ಉಪ ಅವಸ್ಥೆಗಳೆಷ್ಟು?**

ಉ : (೧) ಜಾಗ್ರತ್ (೨) ಸ್ವಪ್ನ (೩) ಸುಷುಪ್ತಿಗಳೆಂದು ಮೂರು ವಿಧ. ಇವುಗಳಲ್ಲಿ ಉಪ ಅವಸ್ಥೆಗಳು ೧೧ :

(೧) ಮನೋವಿಕಲ್ಪಾವಸ್ಥೆ (೨) ಮದಾವಸ್ಥೆ (೩) ಮೂರ್ಛಾವಸ್ಥೆ (೪) ಸನ್ನಿಪಾತಾವಸ್ಥೆ (೫) ಉನ್ಮಾದಾವಸ್ಥೆ (೬) ವಶ್ಯಾವಸ್ಥೆ (೭) ಜಡಾವಸ್ಥೆ (೮) ತೂಷ್ಣೀಂ ಅವಸ್ಥೆ ಅಥವಾ ಉದಾಸೀನಾವಸ್ಥೆ (೯) ಸಮಾಧಿ ಅವಸ್ಥೆ (೧೦) ತುರ್ಯಾವಸ್ಥೆ ಮತ್ತು (೧೧) ಮರಣಾವಸ್ಥೆ ಎಂದು ಉಪ ಅವಸ್ಥೆಗಳು ಹನ್ನೊಂದು ವಿಧ.

ಪ್ರ ೩ : **ಮನೋವಿಕಲ್ಪಾವಸ್ಥೆ ಅಂದರೇನು ?**

ಉ : ಕಾರ್ಯರೂಪದಲ್ಲಿ ಪರಿಣಮಿಸದೆ ಹಾಗೆ ಮಾಡಬೇಕು, ಹೀಗೆ ಮಾಡಬೇಕು ಎಂದು ಮನಸ್ಸಿನಲ್ಲಿ ಉಂಟಾಗುವ ವಿಕಲ್ಪಕ್ಕೆ ಮನೋವಿಕಲ್ಪಾವಸ್ಥೆಯೆಂದು ಹೆಸರು.

ಪ್ರ ೪ : **ಮದಾವಸ್ಥೆ ಅಂದರೇನು ?**

ಉ : ಅಮಲು ಪದಾರ್ಥಗಳಾದ ಹೆಂಡ, ಸಾರಾಯಿ ಮೊದಲಾದುವುಗಳನ್ನು ಸೇವಿಸಿದಾಗ ಉಂಟಾಗುವ ಅವಸ್ಥೆಗೆ ಮದಾವಸ್ಥೆ ಎಂದು ಹೆಸರು.

ಪ್ರ ೫ : ಮೂರ್ಛಾವಸ್ಥೆ ಅಂದರೇನು ?

ಉ : ದೇಹಕ್ಕೆ ಅಪಾಯವು ಸಂಭವಿಸಿದಾಗ ಅಥವಾ ರೋಗಾದಿಗಳು ಉಲ್ಬಣವಾದಾಗ ಉಂಟಾಗುವ ಅವಸ್ಥೆಗೆ ಮೂರ್ಛಾವಸ್ಥೆ ಎಂದು ಹೆಸರು.

ಪ್ರ ೬ : ಸನ್ನಿಪಾತಾವಸ್ಥೆ ಅಂದರೇನು ?

ಉ : ವಿಷಮ ಶೀತಜ್ವರ ಇತ್ಯಾದಿ ಕಾಯಿಲೆಗಳು ಬಂದಾಗ ಮನಸ್ಸಿಗೆ ಬಂದಂತೆ ಮಾತಾಡುವಿಕೆಗೆ ಸನ್ನಿಪಾತಾವಸ್ಥೆ ಎಂದು ಹೆಸರು.

ಪ್ರ ೭ : ಉನ್ಮಾದಾವಸ್ಥೆ ಅಂದರೇನು ?

ಉ : ಬುದ್ಧಿ ಭ್ರಮಣೆಯುಂಟಾದಾಗ ಹುಚ್ಚನಂತೆ ಸಿಕ್ಕಾಪಟ್ಟೆ ಮಾತನಾಡುವಿಕೆಗೆ ಉನ್ಮಾದಾವಸ್ಥೆಯೆಂದು ಹೆಸರು.

ಪ್ರ ೮ : ವಶ್ಯಾವಸ್ಥೆ ಎಂದರೇನು ?

ಉ : ಯಂತ್ರ ಮಂತ್ರಾದಿಗಳಿಂದ ಮತ್ತೊಬ್ಬರ ಶರೀರವನ್ನು ಮರೆಯುವಂತೆ ಮಾಡುವುದಕ್ಕೆ ವಶ್ಯಾವಸ್ಥೆಯೆಂದು ಹೆಸರು.

ಪ್ರ ೯ : ಜಡಾವಸ್ಥೆ ಅಂದರೇನು ?

ಉ : ನಿದ್ರಾ, ಮೂರ್ಛಾದಿಗಳ ಕಾಲದಲ್ಲಿ ಈ ಶರೀರವು ಮರದ ತುಂಡಿನಂತೆ ಜಡವಾಗಿ ಬಿದ್ದಿರುವುದಕ್ಕೆ ಜಡಾವಸ್ಥೆ ಎಂದು ಹೆಸರು.

ಪ್ರ ೧೦ : ತೂಷ್ಣೀಂ ಅವಸ್ಥೆ ಅಥವಾ ಉದಾಸೀನಾವಸ್ಥೆ ಅಂದರೇನು ?

ಉ : ಅಂತಃಕರಣದಲ್ಲಿ ಒಂದು ವೃತ್ತಿಯು ಹೋಗಿ, ಮತ್ತೊಂದು ವೃತ್ತಿಯು ಬರುವ ಮುನ್ನ ನಿಸ್ತರಂಗ ಸಮುದ್ರದಂತೆ ಇರುವ ಅವಸ್ಥೆಗೆ ತೂಷ್ಣೀಂ ಅಥವಾ ಉದಾಸೀನಾವಸ್ಥೆಯೆಂದು ಹೆಸರು.

ಪ್ರ ೧೧ : ಸಮಾಧಿ ಅವಸ್ಥೆ ಎಂದರೇನು ?

ಉ : ಯೋಗಿಗಳು ಪ್ರಾಣವನ್ನು ಕ್ರಮವಾಗಿ ತೆಗೆದುಕೊಂಡು ಹೋಗಿ ಸಹಸ್ರಾರದಲ್ಲಿ ನಿಲ್ಲಿಸುವುದಕ್ಕೆ ಸಮಾಧಿಯೆನ್ನುತ್ತಾರೆ. ವೇದಾಂತಿಗಳು ಬುದ್ಧಿಯ ಬ್ರಹ್ಮಾಕಾರ ಸ್ಥಿತಿಗೆ ಸಮಾಧಿ ಅವಸ್ಥೆ ಎಂದು ಹೇಳುತ್ತಾರೆ.

ಪ್ರ ೧೨ : ತುರ್ಯಾವಸ್ಥೆ ಅಂದರೇನು ?

ಉ : ಗುರುಶಾಸ್ತ್ರಾದಿಗಳಿಂದ ಮೂರೂ ಅವಸ್ಥೆಗಳನ್ನು ವಿಚಾರಮಾಡಿ

ಇವು ತಾನಲ್ಲವೆಂದು ತಿಳಿದು ತಾನು ಪರಬ್ರಹ್ಮ ಎಂದು ತಿಳಿಯುವುದೇ ತುರ್ಯಾವಸ್ಥೆ.

ಪ್ರ ೧೩ : ತುರ್ಯಾತೀತಾವಸ್ಥೆ ಇದೆಯೆ ?

ಉ : ತುರ್ಯಾತೀತಾವಸ್ಥೆ ಎಂದರೆ ಜಡ. ಅದು ಇಲ್ಲ.

ಪ್ರ ೧೪ : ಮರಣಾವಸ್ಥೆ ಅಂದರೇನು ?

ಉ : ಸ್ಥೂಲ ಶರೀರದಿಂದ ಸೂಕ್ಷ್ಮ ಶರೀರವು ಬಿಡುಗಡೆ ಹೊಂದುವುದಕ್ಕೆ ಮರಣಾವಸ್ಥೆಯೆಂದು ಹೆಸರು.

ಪ್ರ ೧೫ : ಅವಸ್ಥಾತ್ರಯ ವಿಚಾರದ ಮಹತ್ವವೇನು ?

ಉ : ಮೂರೂ ಅವಸ್ಥೆಗಳನ್ನು ವಿಚಾರ ಮಾಡುವುದರಿಂದ ಆತ್ಮನ ಪೂರ್ಣಾನುಭವವು ಉಂಟಾಗುತ್ತದೆ. ಮೂರೂ ಅವಸ್ಥೆಗಳ ವಿಚಾರ ಮಾಡದಿದ್ದರೆ ಆತ್ಮನ ಪೂರ್ಣ ಸ್ವರೂಪವು ತಿಳಿದು ಬರುವುದಿಲ್ಲ. ಒಂದೇ ಅವಸ್ಥೆಯನ್ನು ವಿಚಾರ ಮಾಡಿದರೆ ಆತ್ಮನ ಒಂದಂಶವು ತಿಳಿದು ಬರುತ್ತದೆ. ವೈದಿಕರಲ್ಲದ ಕೆಲವರು ಜಾಗ್ರದಾವಸ್ಥೆ ಒಂದನ್ನು ಮಾತ್ರ ವಿಚಾರ ಮಾಡಿದರೆ ಸಾಕೆಂತಲೂ ಹೇಳುತ್ತಾರೆ. ಏಕೆಂದರೆ, ಸ್ವಪ್ನಾವಸ್ಥೆಯು ಜಾಗ್ರದಾವಸ್ಥೆಗೆ ಬಂದ ಕೂಡಲೇ ಅದು ಮಿಥ್ಯೆಯಾಗುವುದರಿಂದಲೂ, ಸುಷುಪ್ತಿ ಅವಸ್ಥೆಯು ಅಜ್ಞಾನದಿಂದ ಕೂಡಿರುವುದರಿಂದಲೂ ಅದನ್ನು ವಿಚಾರಿಸುವ ಅಗತ್ಯವಿಲ್ಲವೆಂದೂ, ಜಾಗ್ರದಾವಸ್ಥೆ ಒಂದನ್ನೇ ವಿಚಾರಮಾಡಿದರೆ ಸಾಕೆಂದೂ ಹೇಳುತ್ತಾರೆ. ಸ್ವಪ್ನ, ಸುಷುಪ್ತಿಗಳ ಅವಶ್ಯಕತೆ ಇಲ್ಲದಿದ್ದರೆ ಪರಮೇಶ್ವರನು ಅವುಗಳನ್ನು ಏಕೆ ಸೃಷ್ಟಿಸಬೇಕಿತ್ತು ?

ಉದಾ : ಸುಷುಪ್ತ್ಯಾವಸ್ಥೆಯು ಸರ್ವ ಪ್ರಾಣಿಗಳ ವಿಶ್ರಾಂತಿ ಸ್ಥಾನವಾಗಿದೆ. ಒಂದು ರಾತ್ರಿ ನಿದ್ರೆಗೆಟ್ಟರೆ ಮನುಷ್ಯನ ಆರೋಗ್ಯವು ಕೆಟ್ಟು ಶರೀರವು ಅಸ್ವಸ್ಥತೆಯಿಂದ ಕೂಡಿರುವುದು ಕಂಡುಬರುತ್ತದಾದ ಕಾರಣ ಸುಷುಪ್ತ್ಯಾವಸ್ಥೆಯು ಅಗತ್ಯವಾಗಿದೆ. ಪರಂತು ಮೂರೂ ಅವಸ್ಥೆಗಳ ವಿಚಾರವು ಅಗತ್ಯವಾಗಿದೆ. ಜಾಗ್ರದಾವಸ್ಥೆಯನ್ನು ವಿಚಾರ ಮಾಡುವುದರಿಂದ ಆತ್ಮನು ಸದ್ರೂಪನೆಂತಲೂ ಸ್ವಪ್ನಾವಸ್ಥೆಯನ್ನು ವಿಚಾರ ಮಾಡುವುದರಿಂದ ಆತ್ಮನು ಚಿದ್ರೂಪನೆಂತಲೂ, ಸುಷುಪ್ತ್ಯವಸ್ಥೆಯನ್ನು ವಿಚಾರ ಮಾಡುವುದರಿಂದ ಆತ್ಮನು ಆನಂದ

ಸ್ವರೂಪವನೆಂತಲೂ ತಿಳಿದುಬರುತ್ತದೆ. ಆದುದರಿಂದ ಅವಸ್ಥಾತ್ರಯದ ವಿಚಾರವು ಅಗತ್ಯವಾಗಿದೆ.

ಪ್ರ ೧೬: ಜಾಗ್ರದಾವಸ್ಥೆ ಅಂದರೇನು ?

ಉ : "ಇಂದ್ರಿಯೈಃ ಉಪಲಬ್ಧಸ್ಯ ಅರ್ಥನಾಂಜಾಗ್ರದಾವಸ್ಥಾ ನಿದ್ರಾಯಾಂ ಮನಸೈವ ಅರ್ಥೋಽಪಲಬ್ಧಿಃ ಸ್ವಪ್ನ ಉಚ್ಯತೇ ಸರ್ವೇಽಷಾಂ ಜ್ಞಾನರಹಿತಾಂ ಸ್ಯಾತ್ ಸುಖಾತ್ಮಿಕಾ ।

ತಾತ್ಪರ್ಯ : ಸ್ವಪ್ನ ಸುಷುಪ್ತಿಗಳಿಗಿಂತ ವ್ಯತಿರಿಕ್ತವಾಗಿ ಇಂದ್ರಿಯಗಳು ವಿಷಯಾದಿಗಳಲ್ಲಿ ಹರಿದಾಡುವುದಕ್ಕೆ ಜಾಗ್ರದಾವಸ್ಥೆ ಎಂದು ಹೆಸರು. ಅಥವಾ ೧೪ ಇಂದ್ರಿಯಗಳು ೧೪ ದೇವತೆಗಳೊಡನೆ ೧೪ ವಿಷಯಗಳೆಂಬ ತ್ರಿಪುಟಿಗಳೊಡನೆ ವ್ಯವಹರಿಸುವುದಕ್ಕೆ ಜಾಗ್ರದಾವಸ್ಥೆ ಎಂದು ಹೆಸರು.

ಪ್ರ ೧೭ : ಅಧಿದೇವತೆ ಎಂದರೇನು ?

ಉ : ದೈವ + ಇತಿ = ಅಧಿದೈವ, ಅಂದರೆ ಸ್ವಸಂಘಾತಕ್ಕಿಂತ ಭಿನ್ನವಾಗಿದ್ದು ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗದ ದೇವತೆಗಳಿಗೆ ಅಧಿದೈವವೆನ್ನುತ್ತಾರೆ.

ಪ್ರ ೧೮ : ಅಧ್ಯಾತ್ಮವೆಂದರೇನು ?

ಉ : ಆತ್ಮನಿ + ಇತಿ = ಅಧ್ಯಾತ್ಮ, ಅಂದರೆ ಆತ್ಮನ ಆಶ್ರಯದಿಂದ ಪ್ರವೃತ್ತಿಯಾಗತಕ್ಕ (೧೪) ಇಂದ್ರಿಯಗಳು ಅಧ್ಯಾತ್ಮವೆನಿಸುತ್ತವೆ.

ಪ್ರ ೧೯ : ಅಧಿಭೂತವೆಂದರೇನು ?

ಉ : ಭೂತ + ಇತಿ = ಅಧಿಭೂತ, ಅಂದರೆ ಸ್ವಸಂಘಾತಕ್ಕಿಂತ ಭಿನ್ನವಾಗಿದ್ದು ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗುವ ಸುಖ-ದುಃಖದಾಯಕ ದ್ರವ್ಯಗಳು ಅಧಿಭೂತವೆನಿಸುತ್ತವೆ.

ಪ್ರ ೨೦ : ಅಧ್ಯಾತ್ಮವೆಂದು ಹೇಳಿಸಿಕೊಳ್ಳುವ ಇಂದ್ರಿಯಗಳೆಷ್ಟು?

ಉ : ಜ್ಞಾನೇಂದ್ರಿಯಗಳೈದು : ೧. ಶ್ರೋತ್ರ, ೨. ತ್ವಚಾ, ೩. ಚಕ್ಷು, ೪. ಜಿಹ್ವಾ, ೫. ಘ್ರಾಣವೆಂಬ ಈ ಐದು ಜ್ಞಾನೇಂದ್ರಿಯ ಪಂಚಕ.

ಕರ್ಮೇಂದ್ರಿಯಗಳೈದು : ೧ ವಾಕ್, ೨. ಪಾಣಿ, ೩. ಪಾದ, ೪. ಉಪಸ್ಥ, ೫. ಗುದವೆಂಬ ಈ ಐದು ಕರ್ಮೇಂದ್ರಿಯ ಪಂಚಕ,

ಅಂತಃಕರಣ ಚತುಷ್ಟಯ : ೧. ಮನ, ೨. ಬುದ್ಧಿ, ೩. ಚಿತ್ತ, ೪. ಅಹಂಕಾರವೆಂಬ ಅಂತಃಕರಣ ಚತುಷ್ಟಯ. ಈ ಒಟ್ಟು ೧೪ ಇಂದ್ರಿಯ ಗಳು ಅಧ್ಯಾತ್ಮವೆನಿಸಿಕೊಳ್ಳುತ್ತವೆ.

ಪ್ರ ೨೧ : ಪಂಚ ಜ್ಞಾನೇಂದ್ರಿಯಗಳ ತ್ರಿಪುಟಿಗಳು ಯಾರು ?

ಉ :

| ಇಂದ್ರಿಯ | ದೇವತಾ | ವಿಷಯ |
|---|---|---|
| ೧. ಶ್ರೋತ್ರ | ದಿಕ್ಕು | ಶಬ್ದ |
| ೨. ತ್ವಕ್ಕು | ವಾಯು | ಸ್ಪರ್ಶ |
| ೩. ಚಕ್ಷು | ಸೂರ್ಯ | ರೂಪ |
| ೪. ಜಿಹ್ವಾ | ವರುಣ | ರಸ |
| ೫. ಘ್ರಾಣ | ಅಶ್ವಿನಿ ಕುಮಾರರು | ಗಂಧ |

ಪ್ರ ೨೨ : ಪಂಚ ಕರ್ಮೇಂದ್ರಿಯಗಳ ತ್ರಿಪುಟಿಗಳು ಯಾರು ?

ಉ :

| ಇಂದ್ರಿಯ | ದೇವತಾ | ವಿಷಯ |
|---|---|---|
| ೧. ವಾಕ್ | ಅಗ್ನಿ | ವಚನ |
| ೨. ಹಸ್ತ | ಇಂದ್ರ | ಕೊಡುವ-ತೆಗೆದು ಕೊಳ್ಳುವುದು. |
| ೩. ಪಾದ | ವಾಮನ | ಗಮನಾಗಮನ |
| ೪. ಉಪಸ್ಥ | ಪ್ರಜಾಪತಿ | ರತಿಭೋಗ |
| ೫. ಗುದ | ಯಮ | ಮಲವಿಸರ್ಜನೆ |

ಪ್ರ ೨೩ : ಅಂತಃಕರಣ ಚತುಷ್ಟಯದ ತ್ರಿಪುಟಿಗಳು ಯಾರು ?

ಉ :

| ಕರಣ | ದೇವತಾ | ವಿಷಯ |
|---|---|---|
| ೧. ಮನಸ್ಸು | ಚಂದ್ರ | ಸಂಕಲ್ಪ, ವಿಕಲ್ಪ |
| ೨. ಬುದ್ಧಿ | ಬ್ರಹ್ಮ | ನಿಶ್ಚಯ |
| ೩. ಚಿತ್ತ | ವಾಸುದೇವ | ಚಿಂತನೆ |
| ೪. ಅಹಂಕಾರ | ರುದ್ರ | ಅಭಿಮಾನ |

ಈ ರೀತಿ ಚತುರ್ದಶ ಇಂದ್ರಿಯಗಳಿಗೆ ಅಧಿದೇವತೆಗಳೂ ವಿಷಯಗಳೂ ಇವೆ

**ಪ್ರ ೨೩ : ಇವುಗಳನ್ನು ತ್ರಿಪುಟಿಗಳೆಂದು ಕರೆಯಲು ಕಾರಣ ವೇನು ?**

ಉ : ಅಧ್ಯಾತ್ಮ– ಅಧಿದೈವ–ಅಧಿಭೂತ ಅಂದರೆ ಇಂದ್ರಿಯ, ದೇವತೆ ಮತ್ತು ವಿಷಯಗಳೆಂಬ ಮೂರು ವಿಭಾಗಗಳಾದುದರಿಂದ ಇವುಗಳನ್ನು ತ್ರಿಪುಟಿಗಳೆಂದು ಕರೆಯುತ್ತಾರೆ.

**ಪ್ರ ೨೪ : ಮನಸ್ಸಿನ ವಿಷಯ, ಸಂಕಲ್ಪ ವಿಕಲ್ಪವೆನ್ನುವುದರಲ್ಲಿ ತಿಳಿದುಕೊಳ್ಳಬೇಕಾದ ಅಂಶವೇನು ?**

ಉ : ಮನಸ್ಸು ಯಾವ ವಸ್ತುವನ್ನು ಕುರಿತು ಸಂಕಲ್ಪ ಮಾಡು ತ್ತಿದೆಯೋ ಅದು ಮನಸ್ಸಿಗೆ ವಿಷಯವೆನಿಸುತ್ತದೆ.

**ಪ್ರ ೨೫ : ಬುದ್ಧಿಗೆ ವಿಷಯ ನಿಶ್ಚಯ ಎಂಬುದರಲ್ಲಿ ತಿಳಿದುಕೊಳ್ಳ ಬೇಕಾದ ಅಂಶವೇನು ?**

ಉ : ಬುದ್ಧಿಯು ಯಾವ ವಸ್ತುವನ್ನು ಕುರಿತು ನಿಶ್ಚಯವನ್ನು ಮಾಡುತ್ತದೆಯೋ ಅದು ಬುದ್ಧಿಗೆ ವಿಷಯವೆನಿಸುತ್ತದೆ.

**ಪ್ರ ೨೬ : ಚಿತ್ತಕ್ಕೆ ಚಿಂತನೆ ಮಾಡುವುದು ವಿಷಯ ಎಂಬುದರಲ್ಲಿ ತಿಳಿದುಕೊಳ್ಳಬೇಕಾದ ಅಂತರವೇನು ?**

ಉ : ಚಿತ್ತವು ಯಾವ ವಸ್ತುವನ್ನು ಕುರಿತು ಚಿಂತನೆ ಮಾಡು ತ್ತದೆಯೋ ಅದು ಚಿತ್ತಕ್ಕೆ ವಿಷಯವೆನಿಸುತ್ತದೆ.

**ಪ್ರ ೨೭ : ಅಹಂಕಾರಕ್ಕೆ ಅಹಂಕರಿಸುವುದು ವಿಷಯ ಅಂದರೆ ಅರ್ಥವೇನು ?**

ಉ : ಅಹಂಕಾರವು ಯಾವ ವಸ್ತುವನ್ನು ಕುರಿತು ಅಭಿಮಾನಿಸು ತ್ತದೆಯೋ, ಅಥವಾ ಅಹಂಕರಿಸುತ್ತದೆಯೋ ಆ ವಸ್ತುವೇ ಅಹಂಕಾರಕ್ಕೆ ವಿಷಯವೆನಿಸುತ್ತದೆ.

**ಪ್ರ ೨೮ : ಅಧ್ಯಾತ್ಮ, ಅಧಿದೈವ, ಅಧಿಭೂತ ಈ ಮೂರರ ಸಂಪುಟಿಗೆ ಹೆಸರೇನು ?**

ಉ : ಈ ಮೂರರ ಸಮೂಹಕ್ಕೆ ತ್ರಿಪುಟಿಯೆಂತಲೂ, ಸಮೂಹ ವೆಂತಲೂ ಹೇಳುತ್ತಾರೆ.

**ಪ್ರ ೨೯ : ತ್ರಿಪುಟಿಗಳೆಷ್ಟು?**

ಉ : ೧೪ ಇಂದ್ರಿಯಗಳು, ೧೪ ದೇವತೆಗಳು, ೧೪ ವಿಷಯಗಳು ತ್ರಿಪುಟಿ ಎನಿಸುತ್ತದೆ.

**ಪ್ರ ೩೦ : ಜ್ಞಾನೇಂದ್ರಿಯಗಳ ತ್ರಿಪುಟಿ ಯಾವುದು ?**

ಉ : ಜ್ಞಾನೇಂದ್ರಿಯಗಳ ಅಧ್ಯಾತ್ಮ– ಅಧಿದೈವ – ಅಧಿಭೂತಗಳಿಗೆ ಜ್ಞಾನೇಂದ್ರಿಯ ತ್ರಿಪುಟಿ ಎನ್ನುತ್ತಾರೆ.

**ಪ್ರ ೩೧ : ಕರ್ಮೇಂದ್ರಿಯ ತ್ರಿಪುಟಿ ಯಾವುದು ?**

ಉ : ಕರ್ಮೇಂದ್ರಿಯಗಳ ಅಧ್ಯಾತ್ಮ– ಅಧಿದೈವ– ಅಧಿಭೂತಗಳಿಗೆ ಕರ್ಮೇಂದ್ರಿಯ ತ್ರಿಪುಟಿ ಎನ್ನುತ್ತಾರೆ.

**ಪ್ರ ೩೨ : ಅಂತಃಕರಣ ತ್ರಿಪುಟಿ ಯಾವುದು ?**

ಉ : ಅಂತಃಕರಣಗಳ ಅಧ್ಯಾತ್ಮ–ಅಧಿದೈವ–ಅಧಿಭೂತಗಳಿಗೆ ಅಂತಃಕರಣ ತ್ರಿಪುಟಿ ಎನ್ನುತ್ತಾರೆ.

**ಪ್ರ ೩೩ : ತ್ರಿಪುಟಿಗಳ ಸ್ವಭಾವವೇನು ?**

ಉ : ಸ್ವ + ಎಂದರೆ ತಾನು, ಭಾವವೆಂದರೆ ಪರಿಸ್ಥಿತಿ ; ಅರ್ಥಾತ್ ತಾನು ಇರುವಿಕೆ ಅಥವಾ ಪರಿಸ್ಥಿತಿ.

ತ್ರಿಪುಟಿಗಳಲ್ಲಿ ಒಂದು ಇಲ್ಲದಿದ್ದರೆ ಅದರ ವ್ಯವಹಾರವು ನಡೆಯಲಾರದು.

ಹೇಗೆಂದರೆ : ನಾನು ಒಂದು ವಸ್ತುವನ್ನು ನೋಡುತ್ತೇನೆ.

| ಅಧ್ಯಾತ್ಮ | ಅಧಿಭೂತ | ಅಧಿದೈವ |
|---|---|---|
| ಚಕ್ಷು | ವಸ್ತು | ಬೆಳಕು |

ಚಕ್ಷು, ವಸ್ತುವಿದ್ದು ಬೆಳಕಿಲ್ಲದಿದ್ದರೆ ಆಗಲೂ ವ್ಯವಹಾರ ನಡೆಯಲಾರದು ಬೆಳಕು, ಚಕ್ಷುವಿದ್ದು ವಸ್ತುವಿಲ್ಲದಿದ್ದರೆ ಆಗಲೂ ವ್ಯವಹಾರ ನಡೆಯಲಾರದು. ಪರಂತು ಅಧ್ಯಾತ್ಮ ಅಧಿದೈವ ಅಧಿಭೂತಗಳೆಂಬ ತ್ರಿಪುಟಿಗಳ ಪೂರ್ಣತೆ ಇದ್ದರೇನೇ ಪೂರ್ಣ ವ್ಯವಹಾರವು ನಡೆಯಲು ಸಾಧ್ಯ. ಇವುಗಳಲ್ಲಿ ಒಂದು ಇಲ್ಲದಿದ್ದರೆ ವ್ಯವಹಾರ ಪೂರ್ಣ ನಡೆಯಲಾರದು. ಇದರಂತೆ ಎಲ್ಲಾ ತ್ರಿಪುಟಿಗಳನ್ನು ತಿಳಿಯಬೇಕು.

**ಪ್ರ ೩೪ : ಆತ್ಮನಾದ ನನ್ನ ಸ್ವಭಾವವೇನು ?**

ಉ : ತ್ರಿಪುಟಿಗಳಲ್ಲಿ ಅಧ್ಯಾತ್ಮವಿದ್ದು, ಅಧಿಭೂತ ಅಧಿದೈವವಿಲ್ಲದಿದ್ದಾಗ ಅದರ ಅಭಾವವನ್ನೂ, ಅಧ್ಯಾತ್ಮ ಅಧಿಭೂತ ಅಧಿದೈವಗಳೆಂಬ ತ್ರಿಪುಟಿಯ ವ್ಯವಹಾರವು ನಡೆಯುವ ಭಾವವನ್ನೂ ನೋಡುತ್ತೇನೆ. ಆದ್ದರಿಂದ ಅವುಗಳ ಭಾವಾಭಾವಗಳನ್ನು ಅರಿಯುವ ಆತ್ಮನಾದ ನಾನು ಸಾಕ್ಷಿಯಾಗಿರುವುದೇ ಸ್ವಭಾವವಾಗಿದೆ.

ಪ್ರ ೩೫ : ಈ ಪ್ರಸಂಗಕ್ಕೆ ತಾತ್ಪರ್ಯವೇನು ?

ಉ : ಜಾಗ್ರದಾವಸ್ಥೆಯಲ್ಲಿ ನಡೆಯುವ ತ್ರಿಪುಟಿಗಳು ದೃಶ್ಯವೆಂತಲೂ, ಆತ್ಮನಾದ ನಾನು ದೃಕ್ ಅಥವಾ ದ್ರಷ್ಟನೆಂತಲೂ ತಿಳಿಯುವುದೇ ಈ ಪ್ರಸಂಗಕ್ಕೆ ತಾತ್ಪರ್ಯವಾಗಿದೆ.

**ಪ್ರ ೩೬ : ಜಾಗ್ರದಾವಸ್ಥೆಯಲ್ಲಿ ಜೀವನಿಗೆ ಉಪಕರಣಗಳಾವುವು?**

| | | | |
|---|---|---|---|
| ಉ : ೧ | ಜೀವನ ಸ್ಥಾನ | — | ನೇತ್ರ |
| ೨ | ವಾಕ್ಕು | — | ವೈಖರಿ |
| ೩ | ಭೋಗ | — | ಸ್ಥೂಲ |
| ೪ | ಶಕ್ತಿ | — | ಕ್ರಿಯಾ |
| ೫ | ಗುಣ | — | ರಜೋ |
| ೬ | ಮಾತ್ರೆ | — | "ಅ"ಕಾರ |
| ೭ | ಹೆಸರು | — | ವಿಶ್ವ |

ಈ ಏಳು ಜಾಗ್ರದಾವಸ್ಥೆಯ ಜೀವನ ಉಪಕರಣಗಳು.

**ಪ್ರ ೩೭ : ಜಾಗ್ರದಾವಸ್ಥೆಯ ವರ್ಣನೆಯಿಂದ ನಿರ್ಣಯವಾದ ಅಂಶವಾವುದು ?**

ಉ : ಜಾಗ್ರದಾವಸ್ಥೆ, ಜಾಗ್ರದಾವಸ್ಥೆಯ ಕಾರ್ಯ ಎಲ್ಲವೂ ದೃಶ್ಯವಾದ್ದರಿಂದ ಆತ್ಮನಾದ ನಾನು ಇವಕ್ಕೆ ಸಾಕ್ಷಿ ಎಂಬ ನಿರ್ಣಯವಾಗುತ್ತದೆ.

# ಸ್ವಪ್ನಾವಸ್ಥೆಯ ವಿಚಾರ

**ಪ್ರ ೩೮ : ಸ್ವಪ್ನಾವಸ್ಥೆ ವಿಚಾರವೇನು ?**

ಉ : (೧) ಜಾಗ್ರದಾವಸ್ಥೆಯಲ್ಲಿ ನೋಡಿದ, ಕೇಳಿದ, ಅನುಭವಿಸಿದ ವಿಷಯ ಸಂಸ್ಕಾರಗಳು ಸುಷುಪ್ತ್ಯವಸ್ಥೆಯಲ್ಲಿ ಕಂಠದಲ್ಲಿರುವ "ಹಿತಾ" ಎಂಬ ನಾಡಿಯಲ್ಲಿ ಸೂಕ್ಷ್ಮವಾಗಿದ್ದು ಸ್ವಪ್ನಾವಸ್ಥೆಯು ಬಂದಾಗ ಹೊರಬೀಳುತ್ತವೆ. ಆಗ ನಡೆಯುವ ವ್ಯವಹಾರ ಸ್ವಪ್ನಾವಸ್ಥೆಯೆನಿಸುತ್ತದೆ.

(೨) ಯಾವುದೇ ಇಂದ್ರಿಯಗಳ ಅಗತ್ಯವಿಲ್ಲದೆ ಕೇವಲ ಪ್ರಾಣ ಮತ್ತು ಅಂತಃಕರಣದ ಸಹಾಯದಿಂದ ನಡೆಯುವ ವ್ಯವಹಾರಕ್ಕೆ ಸ್ವಪ್ನಾವಸ್ಥೆ ಎಂದು ಹೆಸರು.

(೩) ಜಾಗ್ರದಾವಸ್ಥೆಯ ಯಾವ ಉಪಕರಣಗಳೂ ಇಲ್ಲದೆ ಕೇವಲ ಹೊಸ ಉಪಕರಣಗಳಿಂದ ವ್ಯವಹರಿಸುವುದಕ್ಕೆ ಸ್ವಪ್ನಾವಸ್ಥೆಯೆಂದು ಹೆಸರು.

**ಪ್ರ ೩೯ : ಸ್ವಪ್ನಾವಸ್ಥೆಯಲ್ಲಿನ ಜೀವನ ಉಪಕರಣಗಳೇನು ?**

ಉ : ೧ ಜೀವನ ಸ್ಥಾನ — ಕಂಠ
೨ ವಾಕ್ಕು — ಮಧ್ಯಮಾ
೩ ಭೋಗ — ಸೂಕ್ಷ್ಮವಾಸನಾಮಯ
೪ ಶಕ್ತಿ — ಜ್ಞಾನ
೫ ಗುಣ — ಸತ್ವಗುಣ
೬ ಮಾತ್ರೆ — "ಉ"ಕಾರ
೭ ಹೆಸರು — ತೈಜಸ

ತೈಜಸನೆಂದರೆ, ಸ್ವಪ್ನದಲ್ಲಿ ಸೂರ್ಯಚಂದ್ರಾದಿಗಳ ಸಹಾಯವಿಲ್ಲದೆ ತನ್ನ ಬೆಳಕಿನಲ್ಲಿ ತಾನು ಬೆಳಗುವವನು.

ಮೇಲ್ಕಂಡ ಏಳು ಸ್ವಪ್ನಾವಸ್ಥೆಯ ತೈಜಸನೆಂಬ ಜೀವನ ಉಪಕರಣಗಳು.

ಪ್ರ ೪೦ : **ಸ್ವಪ್ನಾವಸ್ಥೆಯಲ್ಲಿನ ಸ್ವರೂಪವನ್ನು ತಿಳಿಯುವುದರಿಂದ ಲಾಭವೇನು ?**

ಉ : ೧. ಸ್ವಪ್ನಾವಸ್ಥೆಯ ಭಾವವನ್ನು ತಿಳಿಯುತ್ತೇನೆ.

೨. ಜಾಗ್ರತ್ ಸುಷುಪ್ತಿಯಲ್ಲಿ ಅದು ಇಲ್ಲದಿರುವುದನ್ನು ನಾನು ತಿಳಿಯುತ್ತೇನೆ. ಆದ್ದರಿಂದ ಸ್ವಪ್ನ ನಾನಲ್ಲ ಮತ್ತು ಇದು ನನ್ನದೂ ಅಲ್ಲ. ಸ್ವಪ್ನವು ಸೂಕ್ಷ್ಮ ಶರೀರದ ಧರ್ಮವೆನಿಸುವುದು. ನಾನು ಇದನ್ನು ತಿಳಿಯುವ ಸಾಕ್ಷಿ ಘಟ ಸಾಕ್ಷಿಯಂತೆ ಇದಕ್ಕೆ ಭಿನ್ನನಿರುತ್ತೇನೆಂದು ಸಿದ್ಧವಾಗುತ್ತದೆ. ಈ ಕಾರಣದಿಂದ ಸ್ವಪ್ನಾವಸ್ಥೆಗೂ ನಾನು ಸಾಕ್ಷಿಯು.

೩. ಸುಷುಪ್ತಿ ಅವಸ್ಥೆಗೂ ನಾನು ಸಾಕ್ಷಿಯಾಗಿದ್ದೇನೆ.

## ಸುಷುಪ್ತ್ಯವಸ್ಥೆ ವಿಚಾರ

ಪ್ರ ೪೧ : **ಸುಷುಪ್ತ್ಯವಸ್ಥೆ ಎಂದರೇನು ? ಅದರ ಸ್ವರೂಪವೇನು?**

ಉ . (೧) ನಿದ್ರೆಯಿಂದ ಎದ್ದ ಮನುಷ್ಯನನ್ನು ತನ್ನ ಅನುಭವವನ್ನು ಕೇಳಿದರೆ ನಾನು ಸುಖವಾಗಿ ಮಲಗಿದ್ದೆ, ನನಗೆ ಏನೂ ಗೊತ್ತಾಗಲಿಲ್ಲ ಎಂಬ ಸ್ಮೃತಿಯನ್ನು ಮಾಡಿ ಹೇಳುತ್ತಾನೆ. ಹೀಗೆ ಹೇಳುವಾಗ ಸುಖ ಗೋಚರವೂ, ಅಜ್ಞಾನ ಗೋಚರವೂ ಒಬ್ಬನಲ್ಲೇ ಕಂಡು ಬರುತ್ತದೆ. ಅಲ್ಲದೆ ನೆನಪು, ಅನುಭವ, ಸ್ಮೃತಿಗಳೂ ಇವನಲ್ಲೇ ಕಂಡು ಬರುತ್ತವೆ.

(೨) ಸುಖ ಮತ್ತು ಅಜ್ಞಾನ ಗೋಚರವಾಗುವ ಬುದ್ಧಿಗೆ ವಿಲಯಾವಸ್ಥೆಯೆಂದು ಹೇಳಬಹುದು.

(೩) ಈ ಅವಸ್ಥೆಯಲ್ಲಿ ಯಾವ ಇಂದ್ರಿಯ ಅಂತಃಕರಣಗಳೂ ಇಲ್ಲದೆ ಕೇವಲ ಪ್ರಾಣದಿಂದ ಕೂಡಿ ನಡೆಯುವ ವ್ಯವಹಾರಕ್ಕೆ ಸುಷುಪ್ತ್ಯವಸ್ಥೆ ಎಂದು ಹೆಸರು.

ಪ್ರ ೪೨ : **ಸುಷುಪ್ತ್ಯವಸ್ಥೆಯ ಜೀವನ ಉಪಕರಣಗಳಾವುವು ?**

| | | | |
|---|---|---|---|
| ಉ : ೧ | ಸ್ಥಾನ | – | ಹೃದಯ |
| ೨ | ವಾಕ್ಕು | – | ಪಶ್ಯಂತಿ |

| | | | |
|---|---|---|---|
| ೩ | ಭೋಗ | – | ನಿರ್ವಿಷಯಾನಂದ |
| ೪ | ಶಕ್ತಿ | – | ದ್ರವ್ಯ |
| ೫ | ಗುಣ | – | ತಮೋಗುಣ |
| ೬ | ಮಾತ್ರೆ | – | "ಮ"ಕಾರ |
| ೭ | ಹೆಸರು | – | ಪ್ರಾಜ್ಞ |

ಈ ಏಳು ಸುಷುಪ್ತ್ಯವಸ್ಥೆಯ ಪ್ರಾಜ್ಞನ ಉಪಕರಣಗಳು.

**ಪ್ರ ೪೩ : ಪ್ರಾಜ್ಞ ಅಂದರೇನು ?**

ಉ : ಪ್ರ+ಅಜ್ಞ=ಪ್ರಾಜ್ಞ, ಪ್ರಕರ್ಷೇಣ ಅಜ್ಞ. ಅಂದರೆ ವಿಶೇಷ ಅಜ್ಞಾನದಿಂದ ಕೂಡಿರುವವನು ಎಂದರ್ಥ.

**ಪ್ರ ೪೪ : ಸುಷುಪ್ತ್ಯವಸ್ಥೆಗೆ ಒಂದನೇ ದೃಷ್ಟಾಂತವೇನು ?**

ಉ : ಒಬ್ಬ ಹೆಣ್ಣು ಮಗಳು ನೀರು ಸೇದುವಾಗ ಅಕಸ್ಮಾತ್ತಾಗಿ ಹಗ್ಗವು ಕಳಚಿ, ಬಿಂದಿಗೆಯು ಬಾವಿಯಲ್ಲಿ ಬಿದ್ದುಹೋಯಿತು. ಆ ಬಿಂದಿಗೆಯನ್ನು ತೆಗೆಯಲು ಅನುಭವಜ್ಞನು ಬಾವಿಯಲ್ಲಿ ಇಳಿದು ನೋಡಿದಾಗ ಬಿಂದಿಗೆ ಸಿಕ್ಕಿರುವುದನ್ನೂ, ಸಿಕ್ಕದೆ ಇರುವುದನ್ನೂ ತಿಳಿಯುತ್ತಾನೆ.

ಆದರೆ ಮಾತನಾಡಲು ಸಾಧನವಾದ ವಾಗೇಂದ್ರಿಯವು ಇದ್ದರೂ ಅದಕ್ಕೆ ಅಧಿದೇವತೆಯಾದ ಅಗ್ನಿಯು ಜಲದೊಡನೆ ವಿರೋಧವುಳ್ಳದ್ದರಿಂದ ತ್ರಿಪುಟಿಯ ಪೂರ್ಣತ್ವವಿಲ್ಲದ್ದರಿಂದ ವಚನ ಕ್ರಿಯೆಯು ನಡೆಯಲಾರದು.

ಮೇಲಕ್ಕೆ ಬಂದನಂತರ ವಚನ ರೂಪ ಕ್ರಿಯೆಗೆ ಸಾಧನವಾದ ದೇವತಾ, ವಾಕ್, ವಸ್ತುಗಳೆಂಬ ತ್ರಿಪುಟಿಯ ಪೂರ್ಣತ್ವವು ಇರುವುದರಿಂದ ಆಗ ಮಾತ್ರ ದೊರಿತದ್ದನ್ನೂ ದೊರೆಯದ್ದನ್ನೂ ಸ್ಪಷ್ಟವಾಗಿ ಹೇಳುತ್ತಾನೆ.

**ಪ್ರ ೪೫ : ಇದಕ್ಕೆ ದಾರ್ಷ್ಟಾಂತವೇನು ?**

ಉ : ಸುಷುಪ್ತಿಯಲ್ಲಿ ಸುಖ ಮತ್ತು ಅಜ್ಞಾನದ ಸಾಮಾನ್ಯ ಜ್ಞಾನವಿದೆ. ವಿಶೇಷ ಜ್ಞಾನಕ್ಕೆ ಸಾಧನವಾದ ಇಂದ್ರಿಯ ಮತ್ತು ಅಂತಃಕರಣಗಳ ಅಭಾವವಿರುವುದರಿಂದ ಸುಖ ಮತ್ತು ಅಜ್ಞಾನಗಳ ವಿಶೇಷ ಜ್ಞಾನ ಉಂಟಾಗಲಾರದು. ಪುರುಷನು ಜಾಗ್ರದಾವಸ್ಥೆಗೆ ಬಂದಾಗ ವಿಶೇಷ ಜ್ಞಾನಕ್ಕೆ ಸಾಧನವಾದ ಇಂದ್ರಿಯಾದಿ ಅಂತಃಕರಣಗಳು ತೋರುವುದರಿಂದ, ಸುಷುಪ್ತಿಯಲ್ಲಿ

ಅನುಭವಿಸಿದ ಸುಖ ಮತ್ತು ಅಜ್ಞಾನದ ಸ್ಮೃತಿ ರೂಪ ವಿಶೇಷ ಜ್ಞಾನವು ಕಂಡುಬರುತ್ತದೆ.

ಪ್ರ ೪೬ : **ಎರಡನೇ ದೃಷ್ಟಾಂತವೇನು ?**

ಉ : ಗಟ್ಟಿ ತುಪ್ಪವನ್ನು ಬಿಸಿಲಿನಲ್ಲಿ ಇಟ್ಟಾಗ ಕರಗುತ್ತದೆ. ನೆರಳಿನಲ್ಲಿ ಇಟ್ಟಾಗ ಮತ್ತೆ ಗಟ್ಟಿಯಾಗುತ್ತದೆ. ಈ ಗಟ್ಟಿ ತುಪ್ಪವನ್ನು ಮತ್ತೆ ಬಿಸಿಲಿನಲ್ಲಿ ಇಟ್ಟರೆ ಕರಗುತ್ತದೆ.

ಪ್ರ ೪೭ : **ದಾರ್ಷ್ಟಾಂತವೇನು ?**

ಉ : ಸುಷುಪ್ತಿಯಲ್ಲಿದ್ದ ಅಜ್ಞಾನವು ಜಾಗ್ರತ್ ಸ್ವಪ್ನದಲ್ಲಿ ಬುದ್ಧಿ ರೂಪವಾಗಿ ಪರಿಣಮಿಸುತ್ತದೆ. ಮತ್ತೆ ಸುಷುಪ್ತ್ಯವಸ್ಥೆಗೆ ಹೋದಾಗ ಅಜ್ಞಾನವಾಗಿ ಪರಿಣಮಿಸುತ್ತದೆ.

ಪ್ರ ೪೮ : **ಮೂರನೇ ದೃಷ್ಟಾಂತವೇನು ?**

ಉ : ಒಬ್ಬಾನೊಬ್ಬ ಬಾಲಕನು ಕೆಲವು ಮಕ್ಕಳ ಸಂಗಡ ಆಟವಾಡುತ್ತ ಇರುವುದನ್ನು ಕಂಡ ತಾಯಿಯು ಆ ಮಗುವನ್ನು ಆಟದಿಂದ ತಪ್ಪಿಸಿ, ಹಿಂದಕ್ಕೆ ಕರೆದುಕೊಂಡು ಬಂದು ಮೊಲೆ ಹಾಲನ್ನು ಕೊಡುತ್ತಾ ತನ ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಾಳೆ. ಪುನಃ ಮಕ್ಕಳು ಬಂದು ಆ ಬಾಲಕನನ್ನು ಕರೆಯಲು ಆತ ತಾಯಿ ತೊಡೆಯಿಂದ ತಪ್ಪಿಸಿಕೊಂಡು ಹೋಗುತ್ತಾನೆ. ಮತ್ತೆ ತಾಯಿ ಕರೆದುಕೊಂಡು ಬಂದು ತನ್ನ ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಾಳೆ.

ಪ್ರ ೪೯ : **ದಾರ್ಷ್ಟಾಂತವೇನು ?**

ಉ : ಅಜ್ಞಾನ ರೂಪ ತಾಯಿಯೂ, ಬುದ್ಧಿ ರೂಪ ಬಾಲಕನೂ ಕರ್ಮ ರೂಪ ಅನ್ಯ ಮಕ್ಕಳೊಡನೆ ಜಾಗ್ರತ್ ಸ್ವಪ್ನರೂಪ ಪ್ರಪಂಚದಲ್ಲಿ ವ್ಯವಹಾರ ರೂಪ ಆಟವಾಡ ತ್ತಿರುವಾಗ, ಸುಖ-ದುಃಖ ದ್ವಂದಗಳಿಂದ ಕೂಡಿ ವಿಕ್ಷೇಪ ಹೊಂದುತ್ತಿರುವಾಗ, ಅಜ್ಞಾನ ರೂಪ ತಾಯಿಯು ಸುಷುಪ್ತಿಯೆಂಬ ತನ್ನ ತೊಡೆ ಮೇಲೆ ಆನಂದವೆಂಬ ಅಮೃತವನ್ನು ಕೊಟ್ಟು ಮಲಗಿಸಿಕೊಳ್ಳುತ್ತಾಳೆ.

ಪ್ರ ೫೦ : **ನಾಲ್ಕನೇ ದೃಷ್ಟಾಂತವೇನು ?**

ಉ : ಒಬ್ಬ ಮನುಷ್ಯ ಹಗ್ಗದಿಂದ ಕಟ್ಟಲ್ಪಟ್ಟ ಒಂದು ಕೊಡವನ್ನು ಬಾವಿಯಲ್ಲಿ ಮುಳುಗಿಸಲು ಬಾವಿಯ ನೀರಿನಲ್ಲಿ ಕೊಡದ ಜಲವು ಅಭೇದವಾಗಿ

ರುತ್ತದೆ. ಆದರೂ ಕೊಡವೆಂಬ ಉಪಾಧಿ ದೃಷ್ಟಿಯಿಂದ ಬಾವಿಯ ನೀರಿಗಿಂತ ಕೊಡದ ನೀರು ಭಿನ್ನವೆನಿಸಿರುತ್ತದೆ. ನಂತರ ಹಗ್ಗವನ್ನು ಮೇಲಕ್ಕೆ ಸೆಳೆದರೆ ಭೇದವು ತೋರುತ್ತದೆ.

ಪ್ರ ೫೧ : **ದಾರ್ಷ್ಟಾಂತವೇನು ?**

ಉ : ಅಜ್ಞಾನವೆಂಬ ಬಾವಿಯಲ್ಲಿ ಲಿಂಗ ದೇಹ ಅಥವಾ ಬುದ್ಧಿಯೆಂಬ ಕೊಡವು ಹಗ್ಗವೆಂಬ ಪ್ರಾರಬ್ಧ ಕರ್ಮದೊಂದಿಗೆ ಅಜ್ಞಾನದಲ್ಲಿ ಮುಳುಗುತ್ತದೆ. ಆದರೂ ಲಿಂಗ ಶರೀರದ ಸಂಸ್ಕಾರ ರೂಪದಿಂದ ಭಿನ್ನವಾಗಿಯೇ ಇರುತ್ತದೆ ಜಾಗ್ರದಾವಸ್ಥೆ ಬಂದೊಡನೆಯೇ ಪ್ರಾರಬ್ಧ ಕರ್ಮಾನುಸಾರ ಈಶ್ವರನಿಂದ ಪ್ರೇರೇಪಿಸಲ್ಪಟ್ಟಾಗ ಬುದ್ಧಿಯು ಬಹಿರ್ಮುಖವಾಗಿ ತನ್ನ ಸಂಸ್ಕಾರಕ್ಕನುಗುಣವಾಗಿ ವ್ಯವಹಾರವನ್ನು ಮಾಡುತ್ತಾನೆ.

ಪ್ರ ೫೨ : **ಈ ರೀತಿ ಸುಷುಪ್ತಿ ಅವಸ್ಥೆಯ ಸ್ವರೂಪವನ್ನು ತಿಳಿದುಕೊಳ್ಳುವುದರಿಂದ ಉಂಟಾಗುವ ಲಾಭವೇನು ?**

ಉ : ಈ ಸುಷುಪ್ತಿ ಅವಸ್ಥೆಯನ್ನು ವಿಚಾರ ಮಾಡುವುದಕ್ಕಿಂತ ಮೊದಲು ಭೋಕ್ತನೆಂದು ತಿಳಿದಿದ್ದೆ. ಈ ಸುಷುಪ್ತಿ ಅವಸ್ಥೆಯನ್ನು ವಿಚಾರ ಮಾಡಲಾಗಿ ನಾನು ಅಭೋಕ್ತನೆಂದು ತಿಳಿದುಬರುತ್ತದೆ. ಅಲ್ಲದೆ ಸುಷುಪ್ತಾವಸ್ಥೆಯ ಭಾವವನ್ನೂ ಜಾಗ್ರತ್-ಸ್ವಪ್ನದೊಳಗಿನ ಅಭಾವವನ್ನೂ ಅರಿಯುವುದರಿಂದ ಇದು ನಾನಲ್ಲ ಇದು ನನ್ನದಲ್ಲ. ಏಕೆಂದರೆ, ಇದು ಕಾರಣ ಶರೀರಕ್ಕೆ ಸೇರಿದ್ದರಿಂದ ಇದು ವಿಕಾರವಂತವಾದದ್ದು. ನಾನು ನಿರ್ವಿಕಾರಿಯಾದವನು; ಆದ್ದರಿಂದ ನಾನು ವಿಲಕ್ಷಣನು. ಘಟವನ್ನು ನೋಡುವವನು ಘಟಕ್ಕಿಂತ ಬೇರೆಯಾದಂತೆ, ಸುಷುಪ್ತ್ಯಾವಸ್ಥೆಯ ಭಾವವನ್ನೂ, ಜಾಗೃತ್ ಸ್ವಪ್ನಗಳಲ್ಲಿ ಅದರ ಅಭಾವವನ್ನೂ ತಿಳಿಯುತ್ತೇನಾದ್ದರಿಂದ ಇದಕ್ಕಿಂತಲೂ ಬೇರೆಯಿದ್ದೇನೆ. ಮತ್ತು ಸಾಕ್ಷಿಯಾಗಿದ್ದೇನೆ.

ಪ್ರ : ೫೩ **ಮೂರು ಅವಸ್ಥೆಗಳನ್ನು ವಿಚಾರ ಮಾಡುವುದರಿಂದ ಆಗುವ ನಿರ್ಣಯವೇನು ?**

ಉ : ಈ ಮೂರೂ ಅವಸ್ಥೆಗಳು ಒಂದರೊಳಗೊಂದಿಲ್ಲ. ಹೇಗೆಂದರೆ ಜಾಗ್ರದಾವಸ್ಥೆಯಿದ್ದಾಗ, ಸ್ವಪ್ನ ಸುಷುಪ್ತಿಗಳಿಲ್ಲ. ಸುಷುಪ್ತ್ಯಾವಸ್ಥೆಯಿದ್ದಾಗ ಜಾಗ್ರತ್ ಸ್ವಪ್ನವಿಲ್ಲ. ಸ್ವಪ್ನಾವಸ್ಥೆಯಿದ್ದಾಗ ಜಾಗ್ರತ್-ಸುಷುಪ್ತಿಗಳಿಲ್ಲ

ವಾದ್ದರಿಂದ ಇವುಗಳು ಒಂದರೊಳಗೊಂದು ವ್ಯತಿರಿಕ್ತವಾಗಿವೆ. ಆತ್ಮನು ಮೂರೂ ಅವಸ್ಥೆಗಳಲ್ಲಿ ಅನ್ವಯನಾಗಿದ್ದಾನೆ ಈ ರೀತಿ ಅನ್ವಯನಾಗಿರುವುದರಿಂದ ಸದ್ರೂಪನಾಗಿದ್ದಾನೆ. ಈ ಮೂರು ಅವಸ್ಥೆಗಳು ಒಂದರೊಳಗೊಂದಿಲ್ಲದ್ದರಿಂದ ಅಸದ್ರೂಪವಾಗಿವೆ. ಆತ್ಮನು ಮೂರೂ ಅವಸ್ಥೆಗಳನ್ನು ಅರಿಯುವುದರಿಂದ ಚಿದ್ರೂಪನು. ಮೂರು ಅವಸ್ಥೆಗಳು ಒಂದನ್ನೊಂದು ತಿಳಿಯುವುದಿಲ್ಲವಾದ್ದರಿಂದ ಜಡವಾಗಿವೆ ಆತ್ಮನು ನಿರ್ವಿಕಾರಿಯಾದ್ದರಿಂದ ಆನಂದ ರೂಪನು. ಮೂರು ಅವಸ್ಥೆಗಳು ವಿಕಾರವಂತವಾದವುಗಳಾದ್ದರಿಂದ ದುಃಖ ರೂಪವಾಗಿವೆ.

ಈ ರೀತಿ ಆತ್ಮನು ಸತ್ತು, ಚಿತ್ತು, ಆನಂದ ರೂಪನೆಂತಲೂ, ಮೂರು ಅವಸ್ಥೆಗಳು ಅಸತ್, ಜಡ, ದುಃಖ ರೂಪಗಳೆಂತಲೂ ನಿರ್ಣಯವಾಗುತ್ತದೆ.

ಪ್ರ ೫೪ : **ಮೂರು ಅವಸ್ಥೆಗಳಿಗೂ ಆತ್ಮನಿಗೂ ಸಂಬಂಧವೇನು ?**

ಉ : ಆತ್ಮನಾದ ನನಗೂ, ಮೂರು ಅವಸ್ಥೆಗಳಿಗೂ ಯಾವ ಸಂಬಂಧವೂ ಇಲ್ಲ ಅಧ್ಯಾಸದಿಂದ ಸಂಬಂಧವಿದ್ದಂತೆ ಕಂಡುಬರುತ್ತದೆ.

ಪ್ರ ೫೫ : **ಮೂರು ಅವಸ್ಥೆಗಳಿಗಿಂತಲೂ ಆತ್ಮನು ಬೇರೆ ಎಂಬುದಕ್ಕೆ ದೃಷ್ಟಾಂತವೇನು ?**

ಉ : "ಘಟಾದ್ರಷ್ಟ ಘಟಾದ್ಭಿನ್ನ ಸರ್ವಥಾ ನ ಘಟೋ ಯಥಾ." ಘಟವನ್ನು ನೋಡ.ವವನು ಘಟಕ್ಕಿಂತಲೂ ಬೇರೆ ಇರುತ್ತಾನೆ. ಅವನು ಎಂದೂ ಘಟವಾಗಲಾರ.

ಪ್ರ ೫೬ : **ದ್ರಾಷ್ಟಾಂತವೇನು ?**

ಉ : ಆತ್ಮನಾದ ನಾನು ಈ ಮೂರೂ ಅವಸ್ಥೆಗಳನ್ನು ಅರಿಯುವ ಮತ್ತು ನೋಡುವ ಸಾಕ್ಷಿಯಾಗಿದ್ದೇನೆ

ಪ್ರ ೫೭ : **ಆತ್ಮನು ಮೂರು ಅವಸ್ಥೆಗಳಿಗೆ ಸಾಕ್ಷಿ ಎಂಬುದನ್ನು ಯಾವ ಯಾವ ಯುಕ್ತಿಯಿಂದ ನಿರ್ಣಯಿಸಬೇಕು ?**

ಉ : ವಿವೇಕಯುತವಾದ ವಿಚಾರದಿಂದ ಮೂರು ಅವಸ್ಥೆಗಳಿಗೆ ಸಾಕ್ಷಿಯೆಂದು ನಿರ್ಣಯಿಸಬೇಕು.

ಪ್ರ ೫೮ : **ಹಿಂದಿನ ದಿನದ ಅನುಭವವೇನು ?**

ಉ: ನಿನ್ನಿನ ದಿನದಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿಗಳನ್ನೂ, ಆ ಅವಸ್ಥೆಗಳ ಜೀವರುಗಳನ್ನೂ, ಅಲ್ಲಿನ ವ್ಯವಹಾರವನ್ನೂ ನೋಡಿರುವುದೇ ಅನುಭವ.

ಪ್ರ ೫೯: **ಹಿಂದಿನ ದಿನದ ವಿಷಯವು ನಿನಗೆ ಈ ದಿನ ಅನುಭವವೇ? ಸ್ಮೃತಿಯೋ?**

ಉ: ಅನುಭವವು ಪ್ರತ್ಯಕ್ಷವಾಗಿರಬೇಕು. ಪ್ರತ್ಯಕ್ಷವಿಲ್ಲವಾದ್ದರಿಂದ ಹಿಂದಿನ ದಿನದ ಅನುಭವದ ಸ್ಮೃತಿಯಾಗಿದೆ.

ಪ್ರ ೬೦: **ಸ್ಮೃತಿಯಾದರೆ ಹೇಗೆ?**

ಉ: ಅನುಭವವಾದ ವಿಷಯವು ಎದುರಿಗಿದ್ದರೆ ಅನುಭವವಾಗುತ್ತದೆ. ಹಿಂದೆ ಅನುಭವಿಸಿದ್ದನ್ನು ಈಗ ಹೇಳುವುದಕ್ಕೆ ಸ್ಮೃತಿಯೆನ್ನುತ್ತೇವೆ.

ಪ್ರ ೬೧: **ಅನುಭವವಲ್ಲವೆಂಬುದಕ್ಕೆ ಯುಕ್ತಿಯೇನು?**

ಉ: ಅನುಭವವಾಗಿದ್ದರೆ ವಿಷಯವು ಎದುರಿಗೆ ತೋರಬೇಕಿತ್ತು. ಹಾಗೆ ತೋರುವುದಿಲ್ಲವೆಂಬುದು ಅನುಭವಕ್ಕೆ ಯುಕ್ತಿ.

ಪ್ರ ೬೨: **ನಿನ್ನೆ ಅದನ್ನು ಅನುಭವಿಸಿದವರಾರು?**

ಉ: ಮೂರೂ ಅವಸ್ಥೆಗಳನ್ನು ಅನುಭವಿಸಿದವನು ನಾನೇ ಆದ್ದರಿಂದ ಅದರ ಅನುಭವವು ನನ್ನಲ್ಲಿದೆ.

ಪ್ರ ೬೩: **ನಾನೇ ಅನುಭವಿಸಿದೆ ಎಂಬುದಕ್ಕೆ ಯುಕ್ತಿಯೇನು?**

ಉ: ಮರವನ್ನು ಹತ್ತಿದವನೇ ಇಳಿಯಬೇಕು. ಹತ್ತುವವನೊಬ್ಬ ಇಳಿಯುವವನೊಬ್ಬ ಹೇಗೆ ಸಾಧ್ಯವಿಲ್ಲವೋ ಅದರಂತೆ ಅನುಭವಿಸಿದವನೇ ಸ್ಮೃತಿ ಮಾಡಿಕೊಂಡು ಹೇಳುವುದೇ ಯುಕ್ತಿ.

ಪ್ರ ೬೪: **ನೀನು ಅನುಭವಿಸಿದ್ದರೆ ಕೂಡಿಕೊಂಡು ಅನುಭವಿಸಿದೆಯೋ, ಬೇರೆಯಾಗಿದ್ದು ಅನುಭವಿಸಿದೆಯೋ?**

ಉ: ಮೂರು ಅವಸ್ಥೆಗಳನ್ನು ಬೇರೆಯಾಗಿದ್ದು ಅನುಭವಿಸಿದ್ದೇನೆ.

ಪ್ರ ೬೫: **ಕೂಡಿಕೊಂಡು ಅನುಭವಿಸಿದ್ದೇನೆಂದರೆ ಬರುವ ದೋಷವೇನು?**

ಉ: ಅವಸ್ಥೆಗಳು ಬದಲಾವಣೆಯಾಗುವಂತೆ ತಾನು ಬದಲಾವಣೆಯಾಗದೆ ನಿರ್ವಿಕಾರದಿಂದ ಇದ್ದುದರಿಂದ ಆ ಅವಸ್ಥೆಗಳ ಅನುಭವವುಂಟಾ

ಯಿತು. ಅವಸ್ಥೆಗಳು ಬದಲಾದಂತೆ ತಾನೂ ಬದಲಾಯಿಸಿದ್ದರೆ ಆ ಅವಸ್ಥೆಗಳ ಅನುಭವವಾಗುತ್ತಿರಲಿಲ್ಲ. ಪರಂತು ಈ ಮೂರೂ ಅವಸ್ಥೆಗಳಿಗೆ ಬೇರೆಯಿದ್ದು ಅನುಭವಿಸಿದ್ದೇನೆ.

ಪ್ರ ೬೬ : **ಈ ವಿವೇಕದಿಂದ ಆಗುವ ತೀರ್ಮಾನವೇನು ?**

ಉ : ಈ ವಿವೇಕದಿಂದ ಮೂರು ಅವಸ್ಥೆಗಳಿಗೂ ಸಾಕ್ಷಿಯಾಗಿರುವುದೇ ತೀರ್ಮಾನ.

**ಪ್ರ ೬೭ : ನೀನು ಸಾಕ್ಷಿಯಾದರೆ ಯಾವಾಗಲೂ ಸಾಕ್ಷಿಯೋ ? ಅಥವಾ ಈಗ ಮಾತ್ರ ಸಾಕ್ಷಿಯೆ ?**

ಉ : ಆತ್ಮನಾದ ನಾನು ತ್ರಿಕಾಲದಲ್ಲೂ ಸಾಕ್ಷಿಯಾಗಿದ್ದೇನೆ.

ಪ್ರ ೬೮ : **ಯಾವಾಗಲೂ ಸಾಕ್ಷಿಯಾದರೆ ಅದು ಏಕೆ ಗೊತ್ತಾಗಲಿಲ್ಲ ?**

ಉ : ಜೀವ, ಜಗತ್ತು, ಈಶ್ವರ ಎಂಬೀ **ವಿಚಾರ ಮಾಡದ್ದರಿಂದ ಗೊತ್ತಾಗಲಿಲ್ಲ.**

ಪ್ರ ೬೯ : **ಸಾಕ್ಷಿಯ ಲಕ್ಷಣವನ್ನು ಉಪನಿಷತ್ತಿನಲ್ಲಿ ಹೇಗೆ ಹೇಳಿದೆ?**

ಉ : "ಸಾಕ್ಷೀ ಚೇತಾಕೇವಲೋನಿರ್ಗುಣಶ್ಚ"ವೆಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿದೆ.

ಪ್ರ ೭೦ : **ಪ್ರಕರಣ ಗ್ರಂಥಗಳಲ್ಲಿ ಹೇಗೆ ಹೇಳಿದೆ?**

ಉ : "ಉದಾಸೀನತ್ವೇಸತಿ ಬೋದ್ಧಾ ಸಾಕ್ಷಿಲಕ್ಷಣಂ" ಎಂದು ಪ್ರಕರಣ ಗ್ರಂಥದಲ್ಲಿ ಹೇಳಿದೆ.

೭೧ : **ಸಾಕ್ಷಿಗಳಿಗೆ ಇರಬೇಕಾದ ಲಕ್ಷಣಗಳೆಷ್ಟು?**

ಉ : ೧. ಚೇತನವಾಗಿಯೂ, ೨. ವಾದಿ ಪ್ರತಿವಾದಿಗಳಲ್ಲಿ ಸೇರದವನಾಗಿಯೂ, ೩. ಪ್ರತ್ಯಕ್ಷ ನೋಡಿರುವವನಾಗಿಯೂ ಇರಬೇಕು ಇವು ಸಾಕ್ಷಿ ಲಕ್ಷಣಗಳು

ಪ್ರ ೭೨ : **ತಿಳುವಳಿಕೆಯು ಮಾತ್ರವಿದ್ದು ಸಾಕ್ಷಿ ಲಕ್ಷಣವನ್ನು ಹೇಳಿ ಉದಾಸೀನತ್ವವನ್ನು ಹೇಳದಿದ್ದರೆ ಬರುವ ದೋಷವೇನು ?**

ಉ : ತಿಳುವಳಿಕೆಯಿದ್ದು ಉದಾಸೀನತ್ವವಿಲ್ಲದಿದ್ದರೆ ಯಾವುದಾದರೊಂದು ಪಕ್ಷ ಅಥವ ಅವಸ್ಥೆಗೆ ಸೇರಿದಾಗ ಜೀವನೆನಿಸಬೇಕಾಗುತ್ತದೆ. ಪರಂತು ಸಾಕ್ಷಿ ಎನಿಸಲಾರನು.

**ಪ್ರ ೭೩ : ಉದಾಸೀನತ್ವವನ್ನು ಹೇಳಿ ತಿಳುವಳಿಕೆಯನ್ನು ಹೇಳದಿದ್ದರೆ ಬರುವ ದೋಷವೇನು ?**

ಉ : ಉದಾಸೀನತ್ವವನ್ನು ಹೇಳಿ ತಿಳುವಳಿಕೆಯನ್ನು ಹೇಳದಿದ್ದರೆ ಜಡವೆನಿಸುತ್ತದೆ.

ಉದಾ : ಒಂದು ಮರವು ಉದಾಸೀನವಾಗಿ ಯಾರ ಪಕ್ಷದಲ್ಲೂ ಸೇರದಿದ್ದರೂ ಜಡವಾಗಿದೆ. ಪರಂತು ಚೇತನವಲ್ಲವಾದ್ದರಿಂದ ಉದಾಸೀನವಾದ ಮಾತ್ರಕ್ಕೆ ಸಾಕ್ಷಿಯೆನಿಸಲಾರದು ಇದರಂತೆ ಆತ್ಮನು ಉದಾಸೀನನಾದರೂ ಜಡನಲ್ಲ ಚೇತನನು ಆ ಕಾರಣ ಆತ್ಮನು ಸಾಕ್ಷಿಯೆನಿಸುತ್ತಾನೆ.

**ಪ್ರ ೭೪ : ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳು ಸಾಕ್ಷಿ ಅಲ್ಲವೆಂಬುದಕ್ಕೆ ಕಾರಣವೇನು ?**

ಉ : ಈ ಮೂರು ದೇಹಗಳ ಒಂದನ್ನೊಂದು ಅರಿಯುವುದಿಲ್ಲವಾದ್ದರಿಂದ ಜಡವಾಗಿವೆ. ಪರಂತು ಇವು ಸಾಕ್ಷಿಯೆನಿಸಲಾರವು.

**ಪ್ರ ೭೫ : ಅವಸ್ಥೆಗಳ ಅಭಿಮಾನಿಗಳಾದ ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವರುಗಳು ಸಾಕ್ಷಿ ಅಲ್ಲವೆಂಬುದಕ್ಕೆ ಕಾರಣವೇನು ?**

ಉ : ವಿಶ್ವ, ತೈಜಸ, ಪ್ರಾಜ್ಞರು ಚೇತನರಾದರೂ ಅವಸ್ಥೆಗಳಲ್ಲಿ ಸೇರಿರುವುದರಿಂದ ಉದಾಸೀನರಲ್ಲ. ಪರಂತು ಇವರು ಸಾಕ್ಷಿಯೆನಿಸಲಾರರು.

**ಪ್ರ ೭೬ : ಮೂರೂ ಅವಸ್ಥೆಗಳಿಗೆ ಆತ್ಮನಾದ ನಾನು ಸಾಕ್ಷಿಯೆಂದು ತಿಳಿದರೆ ಉಂಟಾಗುವ ಲಾಭವೇನು ?**

ಉ : ಶ್ಲೋಕ : "ಅಹಂಸಾಕ್ಷೀತಿ ಯೋ ವಿದ್ಯಾತ್ ವಿವಿಚ್ಯೈವಂ ಪುನಃ ಪುನಃ ಸ ಏವ ಮುಕ್ತೋಽಸೌ ವಿದ್ವಾನ್ ಇತಿ ವೇದಾಂತ ಡಿಂಡಿಮಃ ||

ಅರ್ಥ : ವಿವೇಕಯುಕ್ತವಾದ ಬುದ್ಧಿಯಿಂದ ನಾನು ಮೂರು ಅವಸ್ಥೆಗಳಿಗೆ ಸಾಕ್ಷಿಯೆಂದು ಪದೇ ಪದೇ ಯಾವನು ವಿಮರ್ಶಿಸುತ್ತಿರುವನೋ ಅಂಥ ವಿದ್ಯಾವಂತನು ಭವಸಾಗರವನ್ನು ದಾಟಿ ಖಂಡಿತವಾಗಿಯೂ ಮುಕ್ತನಾಗುತ್ತಾನೆಂದು ವೇದಾಂತದ ಭೇರಿ ಬಾರಿಸುತ್ತದೆ.

ಓಂ ತತ್ಸತ್

ಇತಿ ''ಆತ್ಮನು ಅವಸ್ಥಾತ್ರಯಗಳಿಗೆ ಸಾಕ್ಷಿ'' ಎಂಬ
ಪಂಚಮ ಕಲಾ ಸಮಾಪ್ತಿ.

ಓಂ

ನಮೋ ಭಗವತೇ ಶಂಕರಾನಂದಾಯ

**ಆರನೆಯ ಕಲಾ ಪ್ರಾರಂಭ**

# ಪ್ರಪಂಚ ಮಿಥ್ಯತ್ವ ಪ್ರಕರಣ

ಸಂಬಂಧ: ಹಿಂದೆ ಐದನೆ ಕಲಾ ಅಂತ್ಯದಲ್ಲಿ ಮೂರು ಅವಸ್ಥೆಗಳು ಕಲ್ಪಿತವಾಗಿ ತೋರುತ್ತವೆ ಎಂದು ಹೇಳಿದೆ. ಅವು ಹೇಗೆ ಕಲ್ಪಿತವಾಗಿ ತೋರುತ್ತವೆ ಎಂಬುದಕ್ಕೆ ಆರನೆ ಕಲಾ ಪ್ರಾರಂಭವಾಗುತ್ತದೆ.

ಪ್ರ ೧: **ಮೂರು ಅವಸ್ಥೆಗಳು ಆತ್ಮನಲ್ಲಿ ಕಲ್ಪಿತವಾಗಿ ತೋರುತ್ತವೆ ಎಂಬುದಕ್ಕೆ ದೃಷ್ಟಾಂತಗಳೇನು?**

ದೃಷ್ಟಾಂತ: ೧. (ಕಪ್ಪೆ ಚಿಪ್ಪಿನಲ್ಲಿ ಬೆಳ್ಳಿ) ಶುಕ್ತಿ ರಜತ, ೨. ರಜ್ಜು ಸರ್ಪದಂತೆ ಆತ್ಮನಲ್ಲಿ ಮೂರು ಅವಸ್ಥೆಗಳು ತೋರುತ್ತವೆ.

ಪ್ರ ೨: **ಕಪ್ಪೆ ಚಿಪ್ಪಿನಲ್ಲಿ ಭ್ರಾಂತಿಯಿಂದ ತೋರುವ ಪದಾರ್ಥಗಳೆಷ್ಟು?**

ಉ: ೧. ಬೆಳ್ಳಿ, ೨. ಕಾಗದ, ೩. ಅಭ್ರಕಗಳು ಭ್ರಾಂತಿಯಿಂದ ತೋರುತ್ತವೆ.

ಪ್ರ ೩: **ಅವು ಏಕೆ ತೋರುತ್ತವೆ?**

ಉ: ಕಪ್ಪೆ ಚಿಪ್ಪನ್ನು ಕಪ್ಪೆ ಚಿಪ್ಪೆಂದು ತಿಳಿಯದ ದೋಷದಿಂದ ತೋರುತ್ತವೆ.

ಪ್ರ ೪: **ಹೇಗೆ ತೋರುತ್ತವೆ?**

ಉ: ಅಧಿಷ್ಠಾನ ಜ್ಞಾನವಿಲ್ಲದ್ದರಿಂದ ತೋರುತ್ತವೆ.

ಪ್ರ ೫: **ಅವುಗಳ ಸ್ವರೂಪಗಳೇನು?**

ಉ : ೧. ಬೆಳ್ಳಿಯೆಂದು ತಿಳಿದವನ ದೃಷ್ಟಿಯಲ್ಲಿ ಕಾಗದ ಅಭ್ರಕಗಳು ತೋರುವುದಿಲ್ಲ.

೨. ಕಾಗದವೆಂದು ತಿಳಿದವನ ದೃಷ್ಟಿಯಲ್ಲಿ ಬೆಳ್ಳಿ ಅಭ್ರಕಗಳು ತೋರುವುದಿಲ್ಲ.

೩. ಅಭ್ರಕವೆಂದು ತಿಳಿದವನ ದೃಷ್ಟಿಯಲ್ಲಿ ಬೆಳ್ಳಿ ಕಾಗದಗಳು ತೋರುವುದಿಲ್ಲ.

ಪರಂತು ಈ ಮೂರೂ ಪದಾರ್ಥಗಳು ಪರಸ್ಪರ ವ್ಯತಿರೇಕವಾಗಿರುತ್ತವೆ. ಮತ್ತು ಶುಕ್ತಿಯಲ್ಲಿ ಈ ಮೂರು ಪದಾರ್ಥಗಳು ವ್ಯಾವಹಾರಿಕವಾಗಿ ಅಥವಾ ಪಾರಮಾರ್ಥಿಕವಾಗಿ ಅತ್ಯಂತ ಅಭಾವವಾಗಿರುವುದರಿಂದ ಶುಕ್ತಿಯಲ್ಲಿ ಆ ಮೂರು ಪದಾರ್ಥಗಳು ವ್ಯತಿರೇಕವಿರುವುವು.

ಪ್ರ ೬ : **ಅವುಗಳ ತೋರುವಿಕೆಗೆ ಆಧಾರವಾದ ಕಪ್ಪೆ ಚಿಪ್ಪಿನ ಸ್ವಭಾವವೇನು ?**

ಉ : ೧. ಬೆಳ್ಳಿ, ಕಾಗದ, ಅಭ್ರಕಗಳು ಒಂದರೊಳಗೊಂದಿಲ್ಲವಾದ್ದರಿಂದ ವ್ಯತಿರೇಕವಾಗಿವೆ.

೨. ಕಪ್ಪೆ ಚಿಪ್ಪು ಮೂರರಲ್ಲೂ ಅನ್ವಯವಾಗಿರುವುದರಿಂದ ಆಧಾರವಾಗಿದೆ.

೩. ಕಪ್ಪೆ ಚಿಪ್ಪಿನಲ್ಲಿ ಈ ಮೂರೂ ಅತ್ಯಂತಾಭಾವವಾಗಿವೆ.

ಪ್ರ ೭ : **ಅನ್ವಯ ಹೇಗೆ ?**

ಉ : ವಿಚಾರ ಮಾಡದ್ದರಿಂದ ಇವು ತೋರುವುದಾದರೂ —

೧. ಬೆಳ್ಳಿಯೆಂದು ಕಂಡವನಿಗೂ ಕಪ್ಪೆ ಚಿಪ್ಪೇ ಆಧಾರ.

೨. ಕಾಗದವೆಂದು ಕಂಡವನಿಗೂ ಕಪ್ಪೆ ಚಿಪ್ಪೇ ಆಧಾರ.

೩. ಅಭ್ರಕವೆಂದು ಕಂಡವನಿಗೂ ಕಪ್ಪೆ ಚಿಪ್ಪೇ ಆಧಾರವಾಗಿದೆ. ಪರಂತು ಕಪ್ಪೆ ಚಿಪ್ಪು ಈ ಮೂರು ಪದಾರ್ಥಗಳು ತೋರುವುದಕ್ಕೆ ಆಧಾರವಾಗಿರುವುದರಿಂದ ಅನ್ವಯವಾಗಿದೆ.

ಪ್ರ ೮ : **ಈ ಮೂರು ವಸ್ತುಗಳು ಹೇಗೆ ತೋರುತ್ತವೆ ?**

ಉ : ಕಪ್ಪೆ ಚಿಪ್ಪಿನ ಸಾಮಾನ್ಯಾಂಶವು ತೋರಿ ವಿಶೇಷಾಂಶವು ತೋರದಿರುವುದರಿಂದ ಭ್ರಾಂತಿಯುಂಟಾಗಿ ಈ ಮೂರು ವಸ್ತುಗಳು ತೋರುತ್ತವೆ.

ಪ್ರ ೯ : **ಇದು ಅಭ್ರಕ, ಇದು ಕಾಗದ, ಇದು ಬೆಳ್ಳಿ ಎಂದು ಕಲ್ಪಿಸಿ ಹೇಳುವಾಗಲೂ, ಅವುಗಳಲ್ಲಿ ಶುಕ್ತಿಯ ಯಾವ ಅಂಶವು ಸೇರಿರುತ್ತದೆ ?**

ಉ : ಇದು ಅಭ್ರಕ, ಇದು ಕಾಗದ, ಇದು ಬೆಳ್ಳಿ ಎಂದು ಹೇಳುವಾಗ "ಇದಂ" ರೂಪದಿಂದ ಸಾಮಾನ್ಯಾಂಶವಿರುತ್ತದೆ.

ಪ್ರ ೧೦ : **ಶುಕ್ತಿಯಲ್ಲಿ ಎಷ್ಟು ಅಂಶಗಳಿರುತ್ತವೆ ?**

ಉ : ಶುಕ್ತಿಯಲ್ಲಿ ೧. ಸಾಮಾನ್ಯಾಂಶ, ೨. ವಿಶೇಷಾಂಶ, ೩. ಕಲ್ಪಿತ ವಿಶೇಷಾಂಶವೆಂದು ಮೂರು ಅಂಶಗಳಿರುತ್ತವೆ.

ಪ್ರ ೧೧ : **ಸಾಮಾನ್ಯಾಂಶವೆಂದರೇನು ?**

ಉ : ಸಾಮಾನ್ಯಾಂಶವೆಂದರೆ ತ್ರಿಕಾಲದಲ್ಲೂ ಇರುವಂಥಾದ್ದು. ಅರ್ಥಾತ್ ಭ್ರಾಂತಿ ಕಾಲದಲ್ಲೂ, ಭ್ರಾಂತಿ ನಿವೃತ್ತಿ ಕಾಲದಲ್ಲೂ ತೋರುವುದು ಸಾಮಾನ್ಯಾಂಶ.

ಪ್ರ ೧೨ : **ವಿಶೇಷಾಂಶವೆಂದರೇನು ?**

ಉ : ಯಾವುದು ತೋರುವುದರಿಂದ ಭ್ರಾಂತಿ ನಿವೃತ್ತಿಯಾಗಿ, ಯಾವುದು ತೋರದಿದ್ದರೆ ಭ್ರಾಂತಿ ಉಂಟಾಗುತ್ತದೋ ಅದುವೇ ವಿಶೇಷಾಂಶ. ಹೇಗೆಂದರೆ : ಬೆಳ್ಳಿ ತೋರಿದಾಗ ಕಪ್ಪೆ ಚಿಪ್ಪು ಇಲ್ಲವಾಗುತ್ತದೆ. ಕಾಗದ ತೋರಿದಾಗ ಕಪ್ಪೆಚಿಪ್ಪು ಇಲ್ಲವಾಗುತ್ತವೆ. ಅಭ್ರಕ ತೋರಿದಾಗ ಕಪ್ಪೆಚಿಪ್ಪು ಇಲ್ಲವಾಗುತ್ತದೆ. ಇದರಂತೆ ಅಲ್ಪಕಾಲದಲ್ಲಿ ತೋರುವ ಕಪ್ಪೆ ಚಿಪ್ಪು ವಿಶೇಷಾಂಶವೆನಿಸುತ್ತದೆ.

ಪ್ರ ೧೩ : **ಕಲ್ಪಿತ ವಿಶೇಷಾಂಶವೆಂದರೇನು ?**

ಉ : ಭ್ರಾಂತಿ ಕಾಲದಲ್ಲಿ ತೋರಿದ ಬೆಳ್ಳಿ, ಕಾಗದ, ಅಭ್ರಕಗಳು ಅಧಿಷ್ಠಾನ ಜ್ಞಾನಾನಂತರ ಇಲ್ಲವಾಗುವುದಕ್ಕೆ ಕಲ್ಪಿತ ವಿಶೇಷಾಂಶವೆಂದು ಹೆಸರು.

ಪ್ರ ೧೪ : **ದ್ರಾಷ್ಟಾಂತವೇನು ?**

ಉ : ಕಪ್ಪೆಚಿಪ್ಪಿನಲ್ಲಿ ಬೆಳ್ಳಿ, ಕಾಗದ, ಅಭ್ರಕಗಳು ತೋರಿದಂತೆ ಆತ್ಮನಲ್ಲಿ ಭ್ರಾಂತಿಯಿಂದ ಜಾಗ್ರತ್, ಸ್ವಪ್ನ, ಸುಷುಪ್ತ್ಯಾದಿ ಅವಸ್ಥೆಗಳು ತೋರುತ್ತವೆ. ವಿಚಾರಾನಂತರ ಇಲ್ಲವಾಗುತ್ತವೆ.

ಪ್ರ ೧೫ : **ಆತ್ಮನಲ್ಲಿ ಅವಸ್ಥಾತ್ರಯಗಳು ಏಕೆ ತೋರುತ್ತವೆ ?**

ಉ : ಅಧಿಷ್ಠಾನವಾದ ಆತ್ಮಜ್ಞಾನವಿಲ್ಲದ್ದರಿಂದ ಅವಸ್ಥಾತ್ರಯಗಳು ತೋರುತ್ತವೆ.

ಪ್ರ ೧೬ : **ಅವುಗಳ ಸ್ವರೂಪವೇನು ?**

ಉ : ಈ ಮೂರು ಅವಸ್ಥೆಗಳು ಪರಸ್ಪರ ವ್ಯತಿರೇಕವಾಗಿವೆ.

ಹೇಗೆಂದರೆ : ೧. ಜಾಗ್ರದಾವಸ್ಥೆ ತೋರಿದಾಗ ಸ್ವಪ್ನ, ಸುಷುಪ್ತಿಗಳು ತೋರುವುದಿಲ್ಲ. ೨. ಸ್ವಪ್ನಾವಸ್ಥೆ ತೋರಿದಾಗ ಜಾಗ್ರತ್, ಸುಷುಪ್ತಿಗಳು ತೋರುವುದಿಲ್ಲ. ೩. ಸುಷುಪ್ತ್ಯಾವಸ್ಥೆ ತೋರಿದಾಗ ಜಾಗ್ರತ್, ಸ್ವಪ್ನಗಳು ತೋರುವುದಿಲ್ಲ.

ಪರಂತು ಈ ಮೂರು ಅವಸ್ಥೆಗಳು ಪರಸ್ಪರ ವ್ಯತಿರೇಕವಾಗಿವೆ. ಆತ್ಮನ ದೃಷ್ಟಿಯಿಂದ ಇವು ಅತ್ಯಂತಾಭಾವವಾಗಿವೆ.

ಪ್ರ ೧೭ : **ಆತ್ಮನ ಸ್ವರೂಪವೇನು ?**

ಉ : ಆತ್ಮನು ಮೂರು ಅವಸ್ಥೆಗಳಲ್ಲಿ ಅನ್ವಯನಾಗಿದ್ದಾನೆ.

ಹೇಗೆಂದರೆ : ಜಾಗ್ರತ್, ಸ್ವಪ್ನ, ಸುಷುಪ್ತ್ಯಾದಿ ಅವಸ್ಥೆಗಳು ತೋರಬೇಕಾದರೆ ಆತ್ಮನೇ ಆಧಾರವಾಗಿದ್ದಾನೆ. ಪರಂತು ಆತ್ಮನು ಮೂರವಸ್ಥೆಗಳಲ್ಲೂ ಅನ್ವಯನಾಗಿದ್ದಾನೆ.

ಪ್ರ ೧೮ : **ವ್ಯತಿರೇಕವೆಂದರೇನು ?**

ಉ : ಒಂದು ಅವಸ್ಥೆಯು ಬಂದಾಗ ಮತ್ತೆರಡು ಅವಸ್ಥೆಗಳು ತೋರದಿರುವುದು ಅಥವಾ ಒಂದರೊಳಗೊಂದು ಇಲ್ಲದಿರುವುದು ವ್ಯತಿರೇಕವೆನಿಸುತ್ತದೆ.

ಪ್ರ ೧೯ : **ಅನ್ವಯವೆಂದರೇನು ?**

ಉ : ಉದಾಹರಣೆ : ಗಡಿಗೆಯು ಮಣ್ಣಿನಲ್ಲಿ ವ್ಯತಿರೇಕವಾಗಿದೆ ಮತ್ತು ಅತ್ಯಂತಾಭಾವವಾಗಿದೆ. ಆದರೂ ಮಣ್ಣನ್ನು ಬಿಟ್ಟು ಗಡಿಗೆಯಿಲ್ಲ ಗಡಿಗೆಯಲ್ಲಿ ಮಣ್ಣು ಅನ್ವಯವಾಗಿರುವಂತೆ, ಆತ್ಮನು ಮೂರು ಅವಸ್ಥೆಗಳಲ್ಲಿ ಅನುಸ್ಯೂತನಾಗಿರುವುದರಿಂದ ಅನ್ವಯನಾಗಿದ್ದಾನೆ. ಆತ್ಮನಲ್ಲಿ ಮೂರೂ ಅವಸ್ಥೆಗಳು ತೋರದಿರುವುದರಿಂದ ವ್ಯತಿರೇಕವಾಗಿವೆ.

ಪ್ರ ೨೦ : **ವ್ಯತಿರೇಕದ ವಿಶೇಷ ವಿಚಾರವೇನು ?**

ಉ: ೧ ಅಭಾವ, ೨ ವ್ಯಾವೃತ್ತಿ, ೩ ಖಂಡ ಎಂಬೀ ಮೂರು ಲಕ್ಷಣಗಳು ವ್ಯತಿರೇಕದ ವಿಶೇಷ ವಿಚಾರ.

ಪ್ರ ೨೧ : **ಅನ್ವಯ ಸ್ವರೂಪದ ವಿಶೇಷ ವಿಚಾರವೇನು ?**

ಉ : ೧ ಭಾವ, ೨ ಅನುವೃತ್ತಿ, ೩ ಅಖಂಡ ಎಂಬೀ ಮೂರು ಲಕ್ಷಣಗಳು ಅನ್ವಯ ಸ್ವರೂಪದ ವಿಶೇಷ ವಿಚಾರ.

ಪ್ರ ೨೨ : **ಆತ್ಮನಲ್ಲಿ ಸಾಮಾನ್ಯ, ವಿಶೇಷ, ಕಲ್ಪಿತ ವಿಶೇಷಗಳು ಹೇಗೆ ತೋರುತ್ತವೆ ?**

ಉ : ಆತ್ಮನ ಅಜ್ಞಾನದಿಂದ ಈ ಮೂರೂ ಅಂಶಗಳು ತೋರುತ್ತವೆ.

ಪ್ರ ೨೩ : **ಆತ್ಮನ ಸಾಮಾನ್ಯಾಂಶ ಯಾವುದು ?**

ಉ : ಆತ್ಮನ ಸಾಮಾನ್ಯಾಂಶವು ಸದ್ರೂಪ ಅಂದರೆ ತ್ರಿಕಾಲದಲ್ಲೂ ಇರುವುದು. ಹೆಚ್ಚುಕಾಲ ತೋರುವುದು. ಜಾಗ್ರತ್ ಇದೆ, ಸ್ವಪ್ನ ಇದೆ, ಸುಷುಪ್ತಿ ಇದೆ ಎಂಬ ರೂಪದಿಂದ ಸಾಮಾನ್ಯಾಂಶವಿದೆ.

ಪ್ರ ೨೪ : **ಕಾರಣವೇನು ?**

ಉ : ಭ್ರಾಂತಿ ಕಾಲದಲ್ಲೂ, ಭ್ರಾಂತಿ ನಿವೃತ್ತಿ ಕಾಲದಲ್ಲೂ ಇದು, ಇದು ಎಂಬ ರೂಪದಿಂದ ತೋರುವುದು ಸಾಮಾನ್ಯಾಂಶವೆನಿಸುತ್ತದೆ.

ಹೇಗೆಂದರೆ : ಜಾಗ್ರದಾವಸ್ಥೆಯಲ್ಲಿ ಇದ್ದೆ – ಸ್ವಪ್ನಾವಸ್ಥೆಯಲ್ಲಿ ಇದ್ದೆ– ಸುಷುಪ್ತ್ಯಾವಸ್ಥೆಯಲ್ಲಿ ಇದ್ದೆ – ಈ ರೀತಿ ಇದ್ದೆ, ಇದ್ದೆ ಎಂಬ ರೂಪದಿಂದ ತೋರುವುದು ಸದ್ರೂಪವೆನಿಸುತ್ತದೆ. ಯಾವುದು ಸದ್ರೂಪವೋ ಅದು ಸಾಮಾನ್ಯಾಂಶವೆನಿಸುತ್ತದೆ.

ಪ್ರ ೨೫ : **ಆತ್ಮನ ವಿಶೇಷಾಂಶಗಳಾವುವು ?**

ಉ : ೧ ಚಿತ್, ೨ ಆನಂದ, ೩ ಅಕರ್ತ, ೪ ಅಭೋಕ್ತಾ, ೫ ಅಖಂಡ, ೬ ಅದ್ವಿತೀಯ ಇತ್ಯಾದಿ ಆತ್ಮನ ವಿಶೇಷಾಂಶಗಳು.

ಪ್ರ : ೨೬ **ಕಾರಣವೇನು ?**

ಉ : ಯಾವುದು ತೋರದೆ ಇರುವಾಗ ಭ್ರಾಂತಿ ಉಂಟಾಗಿ, ಯಾವುದು ತೋರುವುದರಿಂದ ಭ್ರಾಂತಿ ನಿವೃತ್ತಿಯಾಗುವುದೋ ಅದು **ವಿಶೇಷಾಂಶ.** ಅರ್ಥಾತ್ ಅಲ್ಪಕಾಲದಲ್ಲಿ ತೋರುವುದು.

ಪ್ರ ೨೭ : **ಅವಸ್ಥಾತ್ರಯ ರೂಪವಾದ ಈ ಪ್ರಪಂಚವು ಯಾವ ಅಂಶಕ್ಕೆ ಸೇರಿದ್ದು ?**

ಉ : ಈ ಮೂರೂ ಅವಸ್ಥೆಗಳು ಕಲ್ಪಿತ ವಿಶೇಷಾಂಶಕ್ಕೆ ಸೇರಿದವುಗಳು.

ಪ್ರ ೨೮ : **ಕಾರಣವೇನು ?**

ಉ : ಭ್ರಾಂತಿಯಿಂದ ಅವಸ್ಥಾತ್ರಯ ರೂಪವಾದ ಪ್ರಪಂಚವು ತೋರಿ ಅಧಿಷ್ಠಾನವಾದ ಆತ್ಮನ ಜ್ಞಾನವಾದ ಕೂಡಲೇ ಬಾಧೆಯಾಗುವುದಕ್ಕೆ ಕಲ್ಪಿತ ವಿಶೇಷಾಂಶವೆಂದು ಹೆಸರು.

ಪ್ರ ೨೯ : **ಆತ್ಮನಲ್ಲಿ ಮಿಥ್ಯಾ ಪ್ರಪಂಚವು ಪ್ರತೀತಿಯಾಗುತ್ತದೆ ಎಂಬುದಕ್ಕೆ ದೃಷ್ಟಾಂತಗಳಾವುವು ?**

ಉ : ೧ ರಜ್ಜುಸರ್ಪ, ೨. ಮರುಮರೀಚಿಕೆ, ೩. ಸ್ಥಾಣು ಚೋರ, ೪. ಸ್ವಪ್ನಸಾಕ್ಷಿ. ಜಗವು ಕನ್ನಡಿಯೊಳಗೆ ಪ್ರತೀತಿಯಾದಂತೆ ಆತ್ಮನಲ್ಲಿ ಅಜ್ಞಾನ ಕಲ್ಪಿತವಾದ ಪ್ರಪಂಚವು ಮಿಥ್ಯಾ ರೂಪದಿಂದ ಪ್ರತೀತಿಯಾಗುತ್ತದೆ ಎಂದು ತಿಳಿಯಬೇಕು. ರಜ್ಜುವಿನ ಜ್ಞಾನದಿಂದ ಸರ್ಪವು ಬಾಧೆಯಾದಂತೆ ಆತ್ಮಜ್ಞಾನದಿಂದ ಪ್ರಪಂಚವು ಬಾಧೆಯಾಗುತ್ತದೆ.

ಪ್ರ ೩೦ : **ಬಾಧೆ ಎಂದರೇನು ?**

ಉ : ಮಿಥ್ಯತ್ವ ನಿಶ್ಚಯ ಬಾಧೆಯೆನಿಸುತ್ತದೆ.

ಬಾಧೆಯೆಂದರೆ ಪುನರುತ್ಪತ್ತಿ ಇಲ್ಲದ್ದು.

ನಾಶವೆಂದರೆ ಪುನರುತ್ಪತ್ತಿ ಇರುವಿಕೆ.

ಪ್ರ ೩೧ : **ಬಾಧೆ ಎಷ್ಟು ವಿಧ ?**

ಉ : ಮೂರು ವಿಧ – ೧. ಶಾಸ್ತ್ರೀಯ, ೨. ಯೌಕ್ತಿಕ, ೩. ಅಪರೋಕ್ಷ.

ಪ್ರ ೩೨ : **ಭ್ರಾಂತಿ ಎಷ್ಟು ವಿಧ ? ಅವು ಯಾವುವು ?**

ಉ : ಭ್ರಾಂತಿಗಳು ಐದು ವಿಧ.

೧. ಭೇದ ಭ್ರಾಂತಿ, ೨. ಕರ್ತೃತ್ವಭೋಕ್ತೃತ್ವ ಭ್ರಾಂತಿ, ೩. ಸಂಗ ಭ್ರಾಂತಿ, ೪. ವಿಕಾರ ಭ್ರಾಂತಿ, ೫. ಬ್ರಹ್ಮಕ್ಕೆ ಭಿನ್ನವಾದ ಪ್ರಪಂಚದ ಸತ್ಯತ್ವ ಭ್ರಾಂತಿ. ಈ ರೀತಿ ಸಂಸಾರವು ಪಂಚ ಪ್ರಕಾರ ಭ್ರಾಂತಿಯಿಂದ ಕೂಡಿರುತ್ತದೆ.

ಪ್ರ ೩೩ : **ಭೇದ ಭ್ರಾಂತಿಗಳೆಷ್ಟು ?**

ಉ : ಭೇದ ಭ್ರಾಂತಿಗಳು ಐದು ವಿಧ.

೧. ಜೀವೇಶ್ವರ ಭೇದ, ೨. ಜೀವರುಗಳ ಪರಸ್ಪರ ಭೇದ, ೩. ಜೀವ ಜಡ ಭೇದ, ೪. ಜಡ ಜಡ ಭೇದ, ೫. ಈಶ್ವರ ಜಡ ಭೇದ.

ಪ್ರ ೩೪ : **ಕರ್ತೃತ್ವ ಭೋಕ್ತೃತ್ವ ಭ್ರಾಂತಿಯು ಸ್ವರೂಪವೇನು ?**

ಉ : ಅಂತಃಕರಣದ ಧರ್ಮಗಳಾದ ಕರ್ತೃತ್ವ ಭೋಕ್ತೃತ್ವ ಭ್ರಾಂತಿಯನ್ನು ತಪ್ಪು ತಿಳುವಳಿಕೆಯಿಂದ ಆತ್ಮನಲ್ಲಿ ಆರೋಪಿಸುವುದು ಕರ್ತೃತ್ವ ಭೋಕ್ತೃತ್ವ ಭ್ರಾಂತಿಯ ಸ್ವರೂಪವಾಗಿದೆ.

ಪ್ರ ೩೫ : **ಸಂಗ ಭ್ರಾಂತಿಯು ಸ್ವರೂಪವೇನು ?**

ಉ : ಅಸಂಗನಾದ ಆತ್ಮನಲ್ಲಿ ಸಂಗವನ್ನು ಕಲ್ಪಿಸುವುದು ಸಂಗ ಭ್ರಾಂತಿಯೆನಿಸುತ್ತದೆ.

ಪ್ರ ೩೬ : **ವಿಕಾರ ಭ್ರಾಂತಿಯ ಸ್ವರೂಪವೇನು ?**

ಉ : ನಿರ್ವಿಕಾರನಾದ ಆತ್ಮನಲ್ಲಿ ತಪ್ಪು ತಿಳಿವಳಿಕೆಯಿಂದ ವಿಕಾರವನ್ನು ಕಲ್ಪಿಸುವುದು ವಿಕಾರ ಭ್ರಾಂತಿಯೆನಿಸುತ್ತದೆ.

ಪ್ರ ೩೭ : **ಬ್ರಹ್ಮಕ್ಕೆ ಅಭಿನ್ನವಾದ ಜಗತ್ತು ಸತ್ಯವೆಂಬ ಭ್ರಾಂತಿಯ ಸ್ವರೂಪವೇನು ?**

ಉ : ಪ್ರಪಂಚವು ಅಧಿಷ್ಠಾನ ಜ್ಞಾನದಿಂದ ಬಾಧೆಯಾಗುತ್ತವೆ ಎಂಬುದನ್ನು ತಿಳಿಯದೆ, ಪ್ರಪಂಚವು ಸತ್ಯವೆಂದು ತಿಳಿಯುವುದು ಪ್ರಪಂಚ ಸತ್ಯತ್ವ ಭ್ರಾಂತಿಯ ಸ್ವರೂಪವಾಗಿದೆ.

ಪ್ರ ೩೮ : **ಈ ಐದು ವಿಧ ಭ್ರಾಂತಿಗಳು ನಿವೃತ್ತಿಯಾಗುವ ದೃಷ್ಟಾಂತಗಳಾವುವು ?**

ಉ : ೧. ಬಿಂಬ ಪ್ರತಿಬಿಂಬ, ೨. ಸ್ಫಟಿಕ ಲೋಹಿತ, ೩. ಘಟಾಕಾಶ, ೪. ರಜ್ಜು ಸರ್ಪ, ೫. ಕಟಕ ಕುಂಡಲ ಅಥವಾ ಬಂಗಾರ ಮತ್ತು ಆಭರಣಗಳ ದೃಷ್ಟಾಂತವೆಂದು ಐದು ವಿಧ.

ಪ್ರ ೩೯ : **ಯಾವ ಯಾವ ದೃಷ್ಟಾಂತಗಳಿಂದ ಯಾವ ಯಾವ ಭ್ರಾಂತಿಯು ನಿವೃತ್ತಿಯಾಗುತ್ತದೆ ?**

ಉ : ೧. ಶ್ಲೋಕ : "ಬಿಂಬ ಪ್ರತಿಬಿಂಬ ದರ್ಶನೇನ ಭೇದ ಭ್ರಾಂತಿ ನಿವೃತ್ತಿಃ"

ಅರ್ಥ : ಬಿಂಬ ಪ್ರತಿಬಿಂಬದ ದೃಷ್ಟಾಂತದಿಂದ ಭೇದ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಶ್ಲೋ : ೨. "ಸ್ಪಟಿಕಲೋಹಿತ ದರ್ಶನೇನ ಕರ್ತೃತ್ವ ಭೋಕ್ತೃತ್ವ ಭ್ರಾಂತಿ ನಿವೃತ್ತಿಃ"

ಅರ್ಥ : ಸ್ಪಟಿಕ ಮತ್ತು ಕೆಂಪು ಬಣ್ಣದ ದರ್ಶನದಿಂದ ಕರ್ತೃತ್ವ" ಭೋಕ್ತೃತ್ವ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಶ್ಲೋ : ೩. "ಘಟಾಕಾಶ ದರ್ಶನೇನ ಸಂಗಭ್ರಾಂತಿ ನಿವೃತ್ತಿಃ"

ಅರ್ಥ : ಘಟಾಕಾಶದ ದೃಷ್ಟಾಂತದಿಂಡ ಸಂಗ ಭ್ರಾಂತಿಯು ಇವೃತ್ತಿ ಯಾಗುತ್ತದೆ.

ಶ್ಲೋ : ೪. ರಜ್ಜು ಸರ್ಪದರ್ಶನೇನ ವಿಕಾರ ಬ್ರಾಂತಿ ನಿವೃತ್ತಿಃ"

ಅರ್ಥ : ರಜ್ಜು ಸರ್ಪದ ದೃಷ್ಟಾಂತದಿಂದ ವಿಕಾರ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಶ್ಲೋ : ೫. ಕಟಕಕುಂಡಲದರ್ಶನೇನ ಪ್ರಪಂಚ ಸತ್ಯತ್ವ ಭ್ರಾಂತಿ ನಿವೃತ್ತಿಃ"

ಅರ್ಥ : ಕಟಕ, ಕುಂಡಲ ದೃಷ್ಟಾಂತದಿಂದ ಪ್ರಪಂಚ ಸತ್ಯತ್ವ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಈ ರೀತಿ ಐದು ವಿಧವಾದ ದೃಷ್ಟಾಂತಗಳಿಂದ ಐದು ವಿಧ ಭ್ರಾಂತಿಗಳು ನಿವೃತ್ತಿಯಾಗುತ್ತವೆ.

ಪ್ರ ೪೦ : **ಭೇದ ಭ್ರಾಂತಿ ನಿವೃತ್ತಿಯಲ್ಲಿ ಬಿಂಬ ಪ್ರತಿಬಿಂಬ ದೃಷ್ಟಾಂತದ ವಿವರಣೆಯೇನು ?**

ಉ : ಬ್ರಹ್ಮಸೂತ್ರಕ್ಕೆ ಶ್ರೀ ಶಂಕರ ಭಗವತ್ಪಾದಾಚಾರ್ಯರು ಶಾರೀರಿಕ ಮೀಮಾಂಸವೆಂಬ ಬಾಷ್ಯವನ್ನು ಬರೆದಿರುತ್ತಾರೆ. ಅ ಭಾಷ್ಯಕ್ಕೆ ಪದ್ಮಪಾದಚಾರ್ಯರು "ಪಂಚಪಾದಿಕ"ವೆಂಬ ವಾಖ್ಯಾನವನ್ನು ಬರೆದಿರುತ್ತಾರೆ. ಆ ವಾಖ್ಯಾನಕ್ಕೆ ಸರ್ವಜ್ಞಾತ್ಮಮುನಿಗಳು" ಸಂಕ್ಷೇಪಶಾರೀರಕ

ವೆಂಬ ವಿವರಣ ಗ್ರಂಥವನ್ನು ಬರೆದಿರುತ್ತಾರೆ. ಆ ವಿವರಣ ಗ್ರಂಥದಲ್ಲಿ ಬಿಂಬ ಪ್ರತಿಬಿಂಬ ದೃಷ್ಟಾಂತವು ವಿವರಿಸಲ್ಪಟ್ಟಿವೆ.

ಹೇಗೆಂದರೆ : ಮುಖವನ್ನು ನೋಡಿಕೊಳ್ಳಬೇಕೆಂಬ ಅಂತಃಕರಣದ ವೃತ್ತಿಯು ನೇತ್ರೇಂದ್ರಿಯದ ಮೂಲಕ ಕನ್ನಡಿಯವರೆಗೂ ಹೋಗಿ ಕನ್ನಡಿಯಲ್ಲಿ ಪ್ರತಿಬಿಂಬವನ್ನು ನೋಡುತ್ತದೆ. ಆ ಪ್ರತಿಬಿಂಬವು ಸತ್ಯವೆ? ಮಿಥ್ಯವೇ? ಮೇಲೆ ಮೇಲೆ ನೋಡಿದರೆ ಪ್ರತಿಬಿಂಬವು ಮಿಥ್ಯೆಯೆಂದು ತೋರುತ್ತದೆ. ವಾಸ್ತವವಾಗಿ ಹಾಗಿಲ್ಲ. ಏಕೆಂದರೆ, ಅಂತಃಕರಣದ ವೃತ್ತಿಯು ನೇತ್ರೇಂದ್ರಿಯದ ಮೂಲಕ ಕನ್ನಡಿಯವರೆಗೂ ಹೋಗಿ, ಕನ್ನಡಿಯನ್ನು ತಾಕಿ ಮುಂದಕ್ಕೆ ಹೋಗಲಾರದೆ ಹೋಯಿತು. ಏಕೆಂದರೆ, ಕನ್ನಡಿಯ ಹಿಂದೆ ಪಾದರಸವನ್ನು ಸವರಿರುವುದರಿಂದ ಅದು ಅಲ್ಲಿಂದ ಹಿಂದಿರುಗಿದಾಗ ಬಿಂಬವೇ ಕಂಡು ಬಂತು. ಪರಂತು ಆ ಪ್ರತಿಬಿಂಬವು ಮಿಥ್ಯೆಯಲ್ಲ, ಸತ್ಯವೇ ಆಗಿವೆ.

ಪ್ರ ೪೧ : **ಪ್ರತಿಬಿಂಬದ ಧರ್ಮಗಳೇನು ?**

ಉ : ೧. ಬಿಂಬಕ್ಕಿಂತ ಪ್ರತಿಬಿಂಬವು ಬೇರೆಯಾಗಿರುವುದು.

೨. ಕನ್ನಡಿಯಲ್ಲಿ ಇದ್ದಂತೆ ತೋರುವುದು.

೩. ಬಿಂಬಕ್ಕಿಂತ ಪ್ರತಿಬಿಂಬವು ವಿಪರೀತವಾಗಿ ತೋರುವುದು.

ಈ ಮೂರರ ಪ್ರತೀತಿ ಭ್ರಾಂತಿಯಿಂದ ತೋರುತ್ತದೆ.

ಪ್ರ ೪೨ : **ಇದರಿಂದಾದ ನಿರ್ಣಯವೇನು ?**

ಉ : ದೃಷ್ಟಾಂತದಲ್ಲಿ ಕನ್ನಡಿಯೆಂಬ ಉಪಾಧಿಯಿರುವುದರಿಂದ ಬಿಂಬ ಮತ್ತು ಪ್ರತಿಬಿಂಬಗಳು ಭಿನ್ನವಾಗಿ ಕಂಡುಬರುತ್ತವೆ. ವಿಚಾರಾನಂತರ ಕನ್ನಡಿಯೆಂಬ ಉಪಾಧಿಯನ್ನು ನಿರಸನ ಮಾಡಿದ ಮೇಲೆ ಬಿಂಬ ಮತ್ತು ಪ್ರತಿಬಿಂಬವು ಅಭೇದವಾಗಿದೆಯೆಂದು ತಿಳಿದು ಬರುವುದೇ ಇದರಿಂದಾಗುವ ನಿರ್ಣಯ.

ಪ್ರ ೪೩ : **ದ್ರಾಷ್ಟಾಂತದ ವಿವರಣೆ ಏನು ?**

ಉ : ಬ್ರಹ್ಮವೇ ಬಿಂಬ. ಮಾಯೆ ಅಥವಾ ಅವಿದ್ಯೆಯೇ ಕನ್ನಡಿ. ಜೀವನೇ ಪ್ರತಿಬಿಂಬ.

ಇದರಂತೆ – ಶುದ್ಧ ಬ್ರಹ್ಮವೇ ಬಿಂಬವಾಗಿದೆ. ಅದು ಮಾಯೆಯೆಂಬ ಕನ್ನಡಿಯಲ್ಲಿ ಜೀವನೆಂಬ ಪ್ರತಿಬಿಂಬವನ್ನು ತೋರುತ್ತದೆ. ಈ ಪ್ರತಿಬಿಂಬ

ರೂಪನಾದ ಜೀವನು ಸತ್ಯವೇ ? ಮಿಥ್ಯವೇ ? ಎಂದು ವಿಚಾರ ಮಾಡೋಣಾದ್ದರಿಂದ ಸತ್ಯನಾಗಿಯೇ ಇದ್ದಾನೆ. ಮಾಯೋಪಾಧಿ ದೃಷ್ಟಿಯಿಂದ ಮಿಥ್ಯವಾಗಿ ತೋರುತ್ತಾನೆ, ಅಷ್ಟೆ.

ಪ್ರ ೪೪ : **ಪ್ರತಿಬಿಂಬ ರೂಪನಾದ ಜೀವನು ಬಿಂಬ ರೂಪನಾಗಿರುವ ಈಶ್ವರನೊಂದಿಗೆ ಇರುವ ಸ್ವರೂಪವೇನು ?**

ಉ : ಪ್ರತಿಬಿಂಬ ರೂಪನಾದ ಜೀವನು ಮೊದಲು ಬ್ರಹ್ಮನೇ ಆಗಿದ್ದರೂ ಉಪಾಧಿ ಭೇದದಿಂದ ಜೀವನಾಗಿ ತೋರುತ್ತಾನೆ. ವಿಚಾರಾನಂತರ ಜೀವಬ್ರಹ್ಮರ ಏಕತ್ವವು ಸಿದ್ಧಿಸುತ್ತದೆ.

ಪ್ರ ೪೫ : **ಬಿಂಬ ಪ್ರತಿಬಿಂಬ ನ್ಯಾಯದಲ್ಲಿ ಭ್ರಾಂತಿಸಿದ್ಧ ಪದಾರ್ಥಗಳೆಷ್ಟು?**

ಉ : ಮೂರು – ೧. ಜೀವನು ಬ್ರಹ್ಮಕ್ಕಿಂತ ಬೇರೆಯಾಗಿರುವುದು.

೨. ಕಿಂಚಿಜ್ಞತ್ವಾದಿ ಗುಣಗಳುಳ್ಳವನಾಗಿರುವುದು.

೩. ಜನನ ಮರಣಾದಿ ಧರ್ಮಗಳು.

ಈ ಮೂರರ ಪ್ರತೀತಿಯು ಭ್ರಾಂತಿಯಿಂದ ತೋರುತ್ತದೆ.

ಪ್ರ ೪೬ : **ಈ ದೃಷ್ಟಾಂತದಿಂದ ಭೇದಭ್ರಾಂತಿ ಹೇಗೆ ನಿವೃತ್ತಿಯಾಗುತ್ತದೆ ?**

: ದೃಷ್ಟಾಂತ ರೂಪ ಕನ್ನಡಿಯನ್ನು ತೆಗೆದರೆ ಪ್ರತಿಬಿಂಬವು ತೋರದೆ ಕೇವಲ ಬಿಂಬವೇ ತೋರುವಂತೆ, ಉಪಾಧಿಯಾದ ಅವಿದ್ಯೆಯನ್ನು ಮಿಥ್ಯತ್ವ ನಿಶ್ಚಯರೂಪ ಬಾಧೆಪಡಿಸಿದ ಮೇಲೆ ಜೀವನು ಬ್ರಹ್ಮಕ್ಕಿಂತಲೂ ಅಭಿನ್ನನಾಗಿರುತ್ತಾನೆ.

''ಜೀವೋಬ್ರಹ್ಮೈವನಾಪರಃ'' – ಜೀವನು ಬ್ರಹ್ಮಕ್ಕಿಂತ ಬೇರೆಯಲ್ಲವೆಂದು ಈ ದರ್ಶನದಿಂದ ತಿಳಿದು ಬರುತ್ತದೆ. ಈ ರೀತಿ ಬಿಂಬ ಪ್ರತಿಬಿಂಬಗಳ ದೃಷ್ಟಾಂತದಿಂದ ಭೇದ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಪ್ರ ೪೭ : **ಸ್ಪಟಿಕ ಲೋಹಿತ ದೃಷ್ಟಾಂತದಿಂದ ಕರ್ತೃತ್ವ ಭೋಕ್ತೃತ್ವ ಭ್ರಾಂತಿಯು ಹೇಗೆ ನಿವೃತ್ತಿಯಾಗುತ್ತದೆ ?**

ಉ : ಸ್ಪಟಿಕ ಶಿಲೆಯ ಪಕ್ಕದಲ್ಲಿರುವ ಕೆಂಪು ಹೂವಿನ ಸಂಯೋಗದಿಂದ ಸ್ಪಟಿಕ ಶಿಲೆಯು ಕೆಂಪಾಗಿ ತೋರುತ್ತದೆ. ವಾಸ್ತವವಾಗಿ ಸ್ಪಟಿಕ

ಶಿಲೆಯಲ್ಲಿ ಕೆಂಪು ಇಲ್ಲವೇ ಇಲ್ಲ. ಆ ಹೂವನ್ನು ಸ್ಫಟಿಕ ಶಿಲೆಯಿಂದ ಬೇರ್ಪಡಿಸಿದಾಗ ಸ್ಫಟಿಕ ಶಿಲೆಯಲ್ಲಿ ಕೆಂಪು ತೋರುವುದೇ ಇಲ್ಲ. ಈ ಕೆಂಪು ಬಣ್ಣವು ಹೂವಿನದೇ ವಿನಾ ಸ್ಫಟಿಕ ಶಿಲೆಯದ್ದಲ್ಲ. ಪರಂತು ಭ್ರಾಂತಿಯಿಂದ ಸ್ಫಟಿಕ ಶಿಲೆಯಲ್ಲಿ ಕೆಂಪನ್ನು ಕಾಣುತ್ತೇವೆ. ವಾಸ್ತವವಾಗಿ ಸ್ಫಟಿಕ ಶಿಲೆಯಲ್ಲಿ ಕೆಂಪು ಇಲ್ಲವೇ ಇಲ್ಲ.

ದಾರ್ಷ್ಟಾಂತ: ಈ ರೀತಿ ಕರ್ತೃತ್ವ ಭೋಕ್ತೃತ್ವವು ಭ್ರಾಂತಿಜನ್ಯವಾದದ್ದೇ ವಿನಾ ಸಹಜವಲ್ಲ. ಹೇಗೆಂದರೆ, ಅಂತಃಕರಣ ಧರ್ಮಗಳಾದ ಕರ್ತೃತ್ವ, ಭೋಕ್ತೃತ್ವಗಳು, ತಾದಾತ್ಮ್ಯ ಅಧ್ಯಾಸದಿಂದ ಭ್ರಾಂತಿಯುಂಟಾಗಿ, ಆತ್ಮನಲ್ಲಿ ತೋರುತ್ತವೆ. ವಿಚಾರ ಮಾಡಿದರೆ ಕರ್ತೃತ್ವ ಭೋಕ್ತೃತ್ವಗಳು ಆತ್ಮನಲ್ಲಿ ಇಲ್ಲವೇ ಇಲ್ಲ. ಇದ್ದಿದ್ದರೆ ಸುಷುಪ್ತಿಯಲ್ಲಿ ತೋರಬೇಕಿತ್ತು. ಹಾಗಿಲ್ಲವಾದ್ದರಿಂದ ಈ ಕರ್ತೃತ್ವಭೋಕ್ತೃತ್ವಾದಿಗಳು ಅಂತಃಕರಣದ ಧರ್ಮವೇ ಆಗಿವೆ.

ಈ ರೀತಿ ಸ್ಫಟಿಕದಲ್ಲಿ ಕೆಂಪು ಹೂವಿನ ಪ್ರತೀತಿಯ ದಾರ್ಷ್ಟಾಂತದಿಂದ ಕರ್ತೃತ್ವಭೋಕ್ತೃತ್ವ ಭ್ರಾಂತಿ ನಿವೃತ್ತಿಯಾಗುತ್ತದೆ.

ಪ್ರ ೪೮ : **ಘಟಾಕಾಶ ದೃಷ್ಟಾಂತದಿಂದ ಸಂಗ ಭ್ರಾಂತಿಯು ಹೇಗೆ ನಿವೃತ್ತಿಯಾಗುತ್ತದೆ?**

ಉ : ಘಟದ ಉಪಾಧಿಯುಳ್ಳ ಆಕಾಶವು ಘಟಾಕಾಶವೆನಿಸುತ್ತದೆ. ಘಟದ ಉತ್ಪತ್ತಿ, ನಾಶ ಮತ್ತು ಗಮನಾಗಮನಾದಿ ಕ್ರಿಯೆಗಳು ಆಕಾಶವನ್ನು ಸ್ಪರ್ಶ ಮಾಡಲಾರವು. ಆಕಾಶವು ಅಸಂಗವಾಗಿದೆ. ಘಟದೊಡನೆ ತೋರುವ ಆಕಾಶದ ಸಂಬಂಧವು ಭ್ರಾಂತಿಯೆನಿಸುತ್ತವೆ.

ಪ್ರ ೪೯ : **ದಾರ್ಷ್ಟಾಂತವೇನು ?**

ಉ : ಸಂಗವು ಆತ್ಮನಲ್ಲಿ ಭ್ರಾಂತಿ ಸಿದ್ಧವಾದದ್ದೇ ವಿನಾ ಸಹಜವಲ್ಲ. ಹೇಗೆಂದರೆ, ಶರೀರಾದಿ ಅಂತಃಕರಣ ಉಪಾಧಿ ದೆಸೆಯಿಂದ ಆತ್ಮನು ಜೀವನೆನಿಸಲ್ಪಟ್ಟನು. ಆತ್ಮನು ಸಂಘಾತದೊಡನೆ ತೋರಿದರೂ ಸಂಘಾತ ಧರ್ಮಗಳಾದ ಜನನ–ಮರಣಾದಿಗಳು ಆತ್ಮನನ್ನು ಸ್ಪರ್ಶ ಮಾಡಲಾರವು. ಯಾಕೆಂದರೆ, ಸಂಘಾತವೆಲ್ಲವೂ ದೃಶ್ಯವೆನಿಸಲ್ಪಡುತ್ತವೆ. ಆತ್ಮನು ದ್ರಷ್ಟನು; ಆತ್ಮನು ದ್ರಷ್ಟನಾದ್ದರಿಂದ ಇವೆಲ್ಲಕ್ಕೂ ಬೇರೆಯಾಗಿ ಅಸಂಗನಾಗಿದ್ದಾನೆ.

ಆತ್ಮನು ಯಾವಾಗ ಸಂಘರೂಪನಲ್ಲವೋ ಆಗ ಆತ್ಮನಲ್ಲಿ ಅಹಂತಾ ರೂಪ ಸಂಬಂಧವೂ ಸಂಭವಿಸಲಾರದು. ಈ ಸಂಘಾತವು ಪಂಚ ಭೂತಗಳಿಗೆ ಸೇರಿದ್ದರಿಂದ ಮಮತ್ವ ರೂಪ ಸಂಬಂಧವೂ ಸಂಭವಿಸಲಾರದು. ಪರಂತು ಆತ್ಮನು ಸಂಘಾತಕ್ಕಿಂತಲೂ ಭಿನ್ನನಾಗಿರುವುದರಿಂದ ಸಂಘಾತ ಸಂಬಂಧವಾದ ಸ್ತ್ರೀ, ಪುತ್ರ, ಗೃಹಾದಿಗಳಲ್ಲಿ ಮಮತಾ ರೂಪವೂ ಸಂಭವಿಸಲಾರದು.

ಈ ಕಾರಣದಿಂದ ಆತ್ಮನ ಸಂಘಾತದ ಕೂಡ ಅಹಂ, ಮಮತಾ ರೂಪ ಸಂಬಂಧವು ಭ್ರಾಂತಿಯಾಗಿರುವುದು. ಮತ್ತು ಆತ್ಮನಲ್ಲಿ ಸಜಾತೀಯ, ವಿಜಾತೀಯ, ಸ್ವಗತ ಸಂಬಂಧವೂ ಇಲ್ಲ.

೧. ಸಜಾತೀಯವೆಂದರೆ, ಆತ್ಮನಂತೆ ಮತ್ತೊಂದು ಆತ್ಮನಿಲ್ಲದಿರುವುದು.

೨. ವಿಜಾತೀಯವೆಂದರೆ, ಆತ್ಮನಿಗಿಂತ ಅನ್ಯ ವಸ್ತುಗಳೆಲ್ಲವೂ ಮಿಥ್ಯ: ಮನುಷ್ಯ ಕಲ್ಲು.

೩. ಸ್ವಗತ ಭೇದವೆಂದರೆ, ಆತ್ಮನು ನಿರಾಕಾರ ನಿರವಯ. (ಉದಾ: ಮರದಲ್ಲಿ ಕೊಂಬೆ, ಎಲೆ ಮುಂತಾಗಿ ಭೇದವಿದ್ದಂತೆ.) ಆದ್ದರಿಂದ ಆತ್ಮನಲ್ಲಿ ಸ್ವಗತ ಸಂಬಂಧವೂ ಇಲ್ಲದ್ದರಿಂದ ಅಸಂಗನಾಗಿದ್ದಾನೆ.

ಈ ರೀತಿ ಘಟಾಕಾಶದ ದೃಷ್ಟಾಂತದಿಂದ ಸಂಗ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಪ್ರ ೫೦ : **ರಜ್ಜು ಸರ್ಪ ದೃಷ್ಟಾಂತದಿಂದ ವಿಕಾರ ಭ್ರಾಂತಿಯು ಹೇಗೆ ನಾಶವಾಗುತ್ತದೆ ?**

ಉ : ವಿಕಾರವೆಂದರೆ ಪರಿಣಾಮ. ನಸುಗತ್ತಲೆಯಲ್ಲಿ ಒಬ್ಬ ಮನುಷ್ಯನು ಪ್ರಯಾಣ ಮಾಡುತ್ತಿರುವಾಗ ರಜ್ಜುವನ್ನು ನೋಡುವುದಕ್ಕಾಗಿ ಅಂತಃಕರಣದ ವೃತ್ತಿಯು ನೇತ್ರೇಂದ್ರಿಯದ ಮೂಲಕ ರಜ್ಜುವರೆಗೆ ಹೋಗಿ ಆವರಣವನ್ನು ಭಂಗಮಾಡಲಾರದೆ ಹೋಯಿತು. ಏಕೆಂದರೆ, ರಜ್ಜು ಉಪಹಿತ ಚೇತನದ ಆಶ್ರಯದಲ್ಲಿರುವ ತೂಲಾವಿದ್ಯೆಯ ಆವರಣದಿಂದಲೂ, ನಸುಗತ್ತಲ ದೋಷದಿಂದಲೂ ರಜ್ಜುವನ್ನು ರಜ್ಜುವೆಂದು ತಿಳಿಯದ ಭ್ರಾಂತಿಯಿಂದ ಈ ತೂಲಾವಿದ್ಯೆಯು ಕ್ಷೋಭೆಗೊಂಡು (ಕಾರ್ಯೋನ್ಮುಖವಾಗಿ) ಸರ್ಪರೂಪ ವಿಕಾರವಾಗಿ ಪರಿಣಮಿಸಿತು.

ಈ ಸರ್ಪವು ತೂಲಾವಿದ್ಯೆಯ ಪರಿಣಾಮ ಚೇತನದ ವಿವರ್ತವಾಗಿದೆ. ಅರ್ಥಾತ್ ರಜ್ಜು ಉಪಹಿತ ಚೇತನದ ವಿವರ್ತವಾಗಿದೆ. ಪರಿಣಾಮವಲ್ಲ (ವಿಕಾರವಲ್ಲ).

ಪ್ರ ೫೧ : **ದ್ರಾಷ್ಟಾಂತವೇನು ?**

ಉ : ಬ್ರಹ್ಮವನ್ನು ನೋಡಬೇಕೆಂಬ ಅಂತಃಕರಣ ವೃತ್ತಿಯು ಹೊರಟಾಗ ಬ್ರಹ್ಮದ ಆಶ್ರಯದಲ್ಲಿರುವ ಮೂಲಾವಿದ್ಯೆಯನ್ನು ಭಂಗ ಮಾಡಲಾರದೆ ಹೋಯಿತು. ಆಗ ಬ್ರಹ್ಮದ ಆಶ್ರಯದಲ್ಲಿರುವ ಮೂಲಾವಿದ್ಯೆಯು ಕ್ಷೋಭೆ ಹೊಂದಿ ಜೀವ ಜಗತ್ತಾಗಿ ಪರಿಣಮಿಸಿತು.

ಈ ಜೀವ, ಜಗತ್ತು – ಇವು ಮೂಲಾವಿದ್ಯೆಯ ಪರಿಣಾಮ ಬ್ರಹ್ಮ ಚೇತನದ ವಿವರ್ತವಾಗಿವೆ. ಪರಿಣಾಮವಲ್ಲ.

ಈ ರೀತಿ ರಜ್ಜು ಸರ್ಪ ದೃಷ್ಟಾಂತದಿಂದ ವಿಕಾರ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಪ್ರ ೫೨ : **ತೂಲಾವಿದ್ಯೆಯೆಂದರೇನು ?**

ಉ : ಘಟಪಟಾದಿ ನಾಮ ರೂಪ ವಿಷಯಾವಚ್ಛಿನ್ನ ಚೇತನವನ್ನು ಆವರಿಸಿರುವ ಅವಿದ್ಯೆಯು ತೂಲಾವಿದ್ಯೆಯೆನಿಸುತ್ತದೆ.

ಅವಚ್ಛಿನ್ನವೆಂದರೆ ಅವಕಾಶ ಕೊಟ್ಟಿರುವುದು.

ಪ್ರ ೫೩ : **ಮೂಲಾವಿದ್ಯೆಯೆಂದರೇನು ?**

ಉ : ಆತ್ಮವನ್ನು ಆವರಿಸಿರುವುದು ಅಥವಾ ಮುಚ್ಚಿರುವುದು ಮೂಲಾವಿದ್ಯೆಯೆನಿಸುತ್ತದೆ.

ಪ್ರ ೫೪ : **ಕ್ಷೋಭವೆಂದರೇನು ?**

ಉ : ಕಾರಣವು ಕಾರ್ಯೋನ್ಮುಖವಾಗುವ ಸ್ಥಿತಿ. (ಕಾರಣ ತೂಲಾವಿದ್ಯೆ ಕಾರ್ಯಸರ್ಪ.)

ಪ್ರ ೫೫ : **ಪರಿಣಾಮವೆಂದರೇನು ?**

ಉ : ೧. ಮೊದಲಿನ ರೂಪವು ಹೋಗಿ ಮತ್ತೊಂದು ರೂಪವಾಗಿ ಪರಿಣಮಿಸುವಿಕೆ. ಅಥವಾ ಕಾರಣವು ಕಾರ್ಯವಾದ ಮೇಲೆ ಮತ್ತೆ ಕಾರಣವಾಗದಿರುವುದು.

೨. ಸಮಸತ್ತವುಳ್ಳ ಎರಡು ಪದಾರ್ಥಗಳು ಅನ್ಯಥಾ ರೂಪವಾಗುವಿಕೆ.

ಹೇಗೆಂದರೆ ಹಾಲು, ಮೊಸರು ವ್ಯಾವಹಾರಿಕ ಸತ್ತಾ. ಅನ್ಯಥಾ ಅಂದರೆ ಹಾಲು ಮೊಸರಾಗುವಿಕೆ. ಹಾಲು ಸಿಹಿಯಾಗಿದೆ; ಅನ್ಯಥಾ ರೂಪ ಮೊಸರು ಹುಳಿಯಾಗಿದೆ.

ಕಾರ್ಯವಾದ ಮೊಸರು ಕಾರಣವಾದ ಹಾಲಾಗದಿರುವಿಕೆ ಪರಿಣಾಮವೆನಿಸಲ್ಪಡುತ್ತದೆ.

ಉದಾ : ೧. ಹೂ ಕೆಟ್ಟು ಕಾಯಾದಂತೆ.

೨. ಅಕ್ಕಿ ಕೆಟ್ಟು ಅನ್ನವಾದಂತೆ.

ಪ್ರ ೫೬ : **ಅಧಿಷ್ಠಾನ ಎಂದರೇನು ?**

ಉ : ಅಧಿ + ತಿಷ್ಠತಿ = ಅಧಿಷ್ಠಾನ. ಅಂದರೆ ಅಧಿಕರಿಸಿರುವುದು ಅಧಿಷ್ಠಾನ. ಅರ್ಥಾತ್ ಕಾರಣವು ಬದಲಾಯಿಸದೆ ಕಾರ್ಯರೂಪವಾಗಿ ತೋರುವಿಕೆ.

ಉದಾ : ೧. ರಜ್ಜು ಕೆಟ್ಟಿಲ್ಲ, ಸರ್ಪವಾಗುವುದು ಬಿಟ್ಟಿಲ್ಲ.

೨. ಮಣ್ಣು ಕೆಟ್ಟಿಲ್ಲ, ಗಡಿಗೆ ಆಗುವುದು ಬಿಟ್ಟಿಲ್ಲ.

ಪ್ರ ೫೭ : **ಅಧಿ ಎಂಬ ಉಪಸರ್ಗಕ್ಕೆ ಲಕ್ಷಣಗಳೇನು ?**

ಉ : ಅಧಿ ಎಂಬ ಉಪಸರ್ಗಕ್ಕೆ ನಾಲ್ಕು ಅರ್ಥಗಳು :

೧. ಪೂರ್ವ, ೨. ಉಪರಿ (ನಂತರ), ೩. ಅಧಿಕೃತ, ೪. ಅತಿಶಯ.

೧. ಪೂರ್ವವೆಂದರೆ, ಘಟಕ್ಕಿಂತ ಮೊದಲೂ ಮಣ್ಣೆ.

೨. ಉಪರಿಯೆಂದರೆ, ವಿಚಾರದಿಂದ ಘಟವಲ್ಲ ಎಂದು ತಿಳಿದಾಗಲೂ ಮಣ್ಣೆ.

೩. ಅಧಿಕೃತವೆಂದರೆ, ಗಡಿಗೆ ಮಿಥ್ಯ – ಮಣ್ಣು ಸತ್ಯ.

೪. ಅತಿಶಯವೆಂದರೆ, ಗಡಿಗೆಗಿಂತಲೂ ಮಣ್ಣು ಶ್ರೇಷ್ಠವಾದದ್ದು. ಇದರಂತೆ ಬ್ರಹ್ಮ–ಜಗತ್ತು.

ಪ್ರ ೫೮ : **ಅಧಿಷ್ಠಾನ ಎಷ್ಟು ವಿಧ ?**

ಉ : ೧. ಜಡ, ೨. ಚೇತನ – ಹೀಗೆ ಎರಡು ವಿಧ.

೧. ಕಲ್ಪಿತ ಸರ್ಪಕ್ಕೆ ರಜ್ಜು ಅಧಿಷ್ಠಾನ.

೨. ನಾಮ ರೂಪ ಜಗತ್ತಿಗೆ ಬ್ರಹ್ಮ ಅಧಿಷ್ಠಾನ.

ಪ್ರ ೫೯ : **ವಿವರ್ತವೆಂದರೇನು ? ಉದಾಹರಣೆ ಏನು ?**

ಉ : ಅಧಿಷ್ಠಾನವು ಬದಲಾಯಿಸದೆ ಮತ್ತೊಂದು ರೂಪವಾಗಿ ಪರಿಣಮಿಸುವುದು. ಉದಾ : (ರಜ್ಜು ಸರ್ಪ) ರಜ್ಜುವೇ ಸರ್ಪವಾಗಿ ತೋರಿದರೂ, ಸರ್ಪಕ್ಕೆ ಅಧಿಷ್ಠಾನವಾದ ರಜ್ಜುವು ಯಾವ ವಿಕಾರವನ್ನೂ ಹೊಂದದೆ ರಜ್ಜುವಾಗಿಯೇ ಉಳಿದಿದೆ. ಇದರಂತೆ ಶುದ್ಧ ಪರಬ್ರಹ್ಮದಲ್ಲಿ ಜಗದ್ರೂಪವಾಗಿರುವಂತೆ ತೋರಿದರೂ ಜಗತ್ತಿಗೆ ಅಧಿಷ್ಠಾನವಾದ ಬ್ರಹ್ಮವು ಯಾವ ವಿಕಾರವನ್ನೂ ಹೊಂದದೆ ಶುದ್ಧ ಬ್ರಹ್ಮವಾಗಿಯೇ ಉಳಿದಿದೆ. ಇದುವೇ ವಿವರ್ತವೆನಿಸುತ್ತದೆ.

ಬ್ರಹ್ಮವು ಪರಿಣಾಮವಾಗಿದ್ದರೆ ಮತ್ತೆ ಬ್ರಹ್ಮವು ಬ್ರಹ್ಮವಾಗಬಾರದಿತ್ತು. ಹಾಗಿಲ್ಲವಾದ ಕಾರಣ ಈ ಜಗತ್ತು ಬ್ರಹ್ಮ ಚೇತನದ ವಿವರ್ತವಾಗಿದೆ.

ಪ್ರ ೬೦ : **ಕನಕ ಕುಂಡಲ ದರ್ಶನದಿಂದ ಜಗತ್ಸತ್ಯತ್ವ ಭ್ರಾಂತಿಯು ಹೇಗೆ ನಿವೃತ್ತಿಯಾಗುತ್ತದೆ ?**

ಉ : ಕಾರಣವಾದ ಬಂಗಾರ ಮತ್ತು ಅದರ ಕಾರ್ಯವಾದ ಒಡವೆಗಳು ಬೇರೆ ಬೇರೆ ಎಂದು ಕೆಲವರು ಹೇಳಿದರೂ ಅದನ್ನು ವೇದಾಂತಿಗಳು ಒಪ್ಪುವುದಿಲ್ಲ ವಿಚಾರ ಮಾಡಿದರೆ ಕಾರ್ಯವಾದ ಒಡವೆಗಳು ಇಲ್ಲವೇ ಇಲ್ಲ. ಹಾಗಿದ್ದ ಪಕ್ಷದಲ್ಲಿ ಬಂಗಾರ ಬೇರೆ, ಒಡವೆಗಳು ಬೇರೆ ಎಂದು ಬೇರ್ಪಡಿಸಲಾಗುವುದೇ ? ಹಾಗಾಗದ ಕಾರಣ ಕಾರ್ಯವಾದ ಒಡವೆಗಳು ಕಾರಣವಾದ ಬಂಗಾರಕ್ಕಿಂತ ಬೇರೆಯಲ್ಲ. ಒಡವೆಗಳು ಕೇವಲ ಕಲ್ಪಿತ ಮಾತ್ರವಾಗಿವೆ.

ದ್ರಾಷ್ಟಾಂತ : ಬ್ರಹ್ಮದಲ್ಲಿ ಜಗತ್ತು ಕಾರ್ಯ – ಕಾರಣ ಭಾವ ಮೂಲಕ ಕಲ್ಪಿತವಾಗಿದೆ ; ಪರಂತು ಮಿಥ್ಯವಾಗಿದೆ. ಆದರೆ ಈ ಕಲ್ಪಿತ ಜಗತ್ತು ಅಧಿಷ್ಠಾನಕ್ಕೆ ಭಿನ್ನವೆನಿಸಲಾರದು. ''ವಾ ಚಾ ರಂ ಭ ಣೋ ವಿಕಾರೋ ನಾಮಧೇಯಃ ಮೃತ್ತಿಕತ್ಯೇವ ಸತ್ಯಂ'' ಎಂಬಂತೆ ವ್ಯಾವಹಾರಿಕ ದೃಷ್ಟಿಯಿಂದ ಸತ್ತಾ ಇದ್ದಂತೆ ತೋರುತ್ತದೆ. ಅಧಿಷ್ಠಾನಕ್ಕೆ ಭಿನ್ನವೆನಿಸಲಾರದ್ದರಿಂದ ಬ್ರಹ್ಮಕ್ಕೆ ಜಗತ್ತು ಭಿನ್ನ ಸತ್ತಾವುಂಟಾಗಲಾರದು.

ಈ ರೀತಿ ಕನಕ ಕುಂಡಲಗಳ ದೃಷ್ಟಾಂತದಿಂದ ಜಗತ್ಸತ್ಯತ್ವ ಭ್ರಾಂತಿಯು ನಿವೃತ್ತಿಯಾಗುತ್ತದೆ.

ಪ್ರ ೬೧ : **ಬ್ರಹ್ಮಕ್ಕೂ ಜಗತ್ತಿಗೂ ಇರುವ ಭೇದವು ಯಾವುದನ್ನು ಆಶ್ರಯಿಸಿಕೊಂಡಿದೆ?**

ಉ : ಬ್ರಹ್ಮಕ್ಕೂ ಜಗತ್ತಿಗೂ ಕಾರ್ಯ – ಕಾರಣ ಭಾವವನ್ನನುಸರಿಸಿ ಬ್ರಹ್ಮ ಮತ್ತು ಜಗತ್ತಿಗೆ ಭೇದವು ತೋರುತ್ತದೆ. ಅಂದರೆ ಮಾಯಾ ಕಾರಣದಿಂದ ಜಗದ್ರೂಪವಾಗಿ ತೋರಿ ಬ್ರಹ್ಮಜಗತ್ತುಗಳಿಗೆ ಭೇದವು ತೋರುತ್ತದೆ.

ಪ್ರ ೬೨ : **ಕಲ್ಪಿತ ವಸ್ತುವಿನ ತಾತ್ಪರ್ಯವೇನು?**

ಉ : ಕಲ್ಪಿತ ವಸ್ತುವಿಗೆ ಅಧಿಷ್ಠಾನವೇ ಸ್ವರೂಪ. ಹೇಗೆಂದರೆ, ಕಲ್ಪಿತ ಸರ್ಪಕ್ಕೆ ರಜ್ಜುವೇ ಅಧಿಷ್ಠಾನವಾದಂತೆ ಕಲ್ಪಿತ ನಾಮರೂಪ ಜಗತ್ತಿಗೆ ಬ್ರಹ್ಮವೇ ಅಧಿಷ್ಠಾನವಾಗಿದೆ.

ಪ್ರ ೬೩ : **ಇದರಿಂದಾಗುವ ನಿರ್ಣಯವೇನು?**

ಉ : ಜಗತ್ತು ಇಲ್ಲವೇ ಇಲ್ಲವೆಂತಲೂ, ಇದ್ದರೂ ತೋರಿಕೆ ಮಾತ್ರ ವೆಂತಲೂ, ಇದಕ್ಕಧಿಷ್ಠಾನ ಬ್ರಹ್ಮವೇ ಸತ್ಯವೆಂತಲೂ ನಿರ್ಣಯವಾಗುತ್ತದೆ.

ಶ್ರೀ ಶಂಕರ ಭಗವತ್ಪಾದರವರು "ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥ ಕೋಟಿಭಿಃ। ಬ್ರಹ್ಮಸತ್ಯಂ ಜಗನ್ಮಿಥ್ಯ ಜೀವೋ ಬ್ರಹ್ಮೈವ ನಾಪರಃ" ಎಂದು ನಿರ್ಣಯವನ್ನು ಮಾಡಿದ್ದಾರೆ.

ಪ್ರ ೬೪ : **ಭ್ರಾಂತಿ ಅಂದರೇನು?**

ಉ : ಭ್ರಾಂತಿಯೆಂದರೆ ಅಧ್ಯಾಸವೆಂದರ್ಥ.

ಪ್ರ ೬೫ : **ಅಧ್ಯಾಸವೆಂದರೇನು?**

ಉ : ಅಧ್ಯಾಸವೆಂದರೆ ೧. ಭ್ರಾಂತಿವಸ್ತು, ೨. ಭ್ರಾಂತಿವಸ್ತುವಿನ ಜ್ಞಾನ. ಈ ಎರಡೂ ಸೇರಿ ಅಧ್ಯಾಸವೆನಿಸುತ್ತದೆ.

ಪ್ರ ೬೬ : **ಅಧ್ಯಾಸಕ್ಕೆ ಎರಡನೆಯ ಅರ್ಥವೇನು?**

ಉ : ಅಧಿಷ್ಠಾನಕ್ಕಿಂತ ವಿಷಮ ಸತ್ತೆಯುಳ್ಳದ್ದಾಗಿ ಅವಭಾಸವಾಗಿ ತೋರುವುದು.

ಪ್ರ ೬೭ : **ದೃಷ್ಟಾಂತವೇನು?**

ಉ : ೧. ರಜ್ಜುಸರ್ಪ, ೨. ಸ್ಥಾಣು ಚೋರ, ೩. ಶುಕ್ತಿರಜತ.

೧. ಬ್ರಹ್ಮ ಪಾರಮಾರ್ಥಿಕ ಸತ್ತಾ; ೨. ರಜ್ಜು ವ್ಯಾವಹಾರಿಕ ಸತ್ತಾ;

೩. ಸರ್ಪ ಪ್ರಾತಿಭಾಸಿಕ ಸತ್ತಾ. ಅಧಿಷ್ಠಾನ ರಜ್ಜುವಿಗಿಂತ ಬೇರೆಯಾದ ಸರ್ಪವೇ ವಿಷಮ ಸತ್ತಾ.

೧. ಬ್ರಹ್ಮವು ಪಾರಮಾರ್ಥಿಕ ಸತ್ತಾ.

೨. ಜಗತ್ತು ವ್ಯಾವಹಾರಿಕ ಸತ್ತಾ.

ಅವಭಾಸವೆಂದರೆ ಇಲ್ಲದೆ ತೋರುವಿಕೆ (ಸರ್ಪ).

ಪ್ರ ೬೮ : **ಅಧ್ಯಾಸಕ್ಕೆ ಮೂರನೆಯ ಲಕ್ಷಣವೇನು ?**

ಉ : ''ಅತಸ್ಮಿನ್ ತದ್ಬುದ್ಧಿ'' – ತಾನಿಲ್ಲದ ಸ್ಥಾನದಲ್ಲಿ ತಾನು ತೋರುವುದು.

ಉದಾ : ಕೋಟು ಮರದಲ್ಲಿ ಕಳ್ಳನಿಲ್ಲದಿದ್ದರೂ ಕಳ್ಳನಿದ್ದಂತೆ ತೋರುವುದು. ಇದರಂತೆ ತಾನು ದೇಹವಲ್ಲದಿದ್ದರೂ ತಾನು ದೇಹನೆನ್ನುವುದು.

ಪ್ರ ೬೯ : **ದೃಷ್ಟಾಂತವೇನು ?**

ಉ : ''ರಜ್ಜು ಸರ್ಪ'' – ರಜ್ಜುವಿನಲ್ಲಿ ಸರ್ಪವಿಲ್ಲದಿದ್ದರೂ ಅಧಿಕರಣದಲ್ಲಿ ತೋರುವುದು.

ಪ್ರ ೭೦ : **ಅಧಿಕರಣವೆಂದರೇನು ?**

ಉ : ತಪ್ಪು ತಿಳುವಳಿಕೆಗೆ ಯಾವುದು ಆಶ್ರಯವೋ ಅದು ಅಧಿಕರಣ.

ಉದಾ : ರಜ್ಜು ಅಧಿಕರಣ – ಸರ್ಪ ತಪ್ಪು ತಿಳುವಳಿಕೆ.

ಪ್ರ ೭೧ : **ಆರೋಪವೆಂದರೆನು ?**

ಉ : ಕಲ್ಪಿತ ವಸ್ತುವಿಗೆ ಆರೋಪವೆಂದು ಹೆಸರು.

ಉದಾ : ರಜ್ಜು–ಅಧಿಕರಣ, ಸರ್ಪ–ಆರೋಪ. ಬ್ರಹ್ಮ – ಅಧಿಕರಣ, ಜಗತ್ತು – ಆರೋಪ.

ಪ್ರ ೭೨ : **ಮುಖ್ಯವಾಗಿ ಅಧ್ಯಾಸವು ಎಷ್ಟು ವಿಧ ?**

ಉ : ಎರಡು ವಿಧ.

ಪ್ರ ೭೩ : **ಅಧ್ಯಾಸದ ಒಂದನೇ ಲಕ್ಷಣವೇನು ?**

ಉ : ಸ್ವರೂಪಾಧ್ಯಾಸವೆಂದು ಹೆಸರು.

ಪ್ರ ೭೪ : **ಅಧ್ಯಾಸದ ಎರಡನೆಯ ಲಕ್ಷಣವೇನು ?**

ಉ : ಸಂಸರ್ಗಾಧ್ಯಾಸವೆಂದು ಹೆಸರು.

ಪ್ರ ೭೫ : **ಸ್ವರೂಪಾಧ್ಯಾಸವೆಂದರೇನು ?**

ಉ : ಆತ್ಮನಲ್ಲಿ ಅನಾತ್ಮ ಸ್ವರೂಪಗಳನ್ನು ಕಲ್ಪಿಸುವುದು ಸ್ವರೂಪಾಧ್ಯಾಸವೆನಿಸುತ್ತದೆ.

ಪ್ರ ೭೬ : **ನಾನು ಅಜ್ಞಾನಿಯೆನ್ನುವುದು ಯಾವ ಅಧ್ಯಾಸ ?**

ಉ : ಶುದ್ಧ ಚೇತನವಾದ ಆತ್ಮನಲ್ಲಿ ನಾನು ಅಜ್ಞಾನಿಯೆಂದು ತಪ್ಪು ತಿಳಿಯುವುದೇ ಶುದ್ಧ ಚೇತನದಲ್ಲಿ ಅಜ್ಞಾನಾಧ್ಯಾಸವಾಗಿದೆ.

ಪ್ರ ೭೭ : **ನಾನು ಇದ್ದೇನೆ ಎನ್ನುವುದು ಯಾವ ಅಧ್ಯಾಸ ?**

ಉ : ಅಹಂಕಾರವು ಅಜ್ಞಾನೋಪಹಿತ ಚೇತನದಲ್ಲಿ ಅಧ್ಯಾಸವಾಗಿದೆ.

ಪ್ರ ೭೮ : **ನಾನು ಸುಖಿ ಎನ್ನುವುದು ಯಾವ ಅಧ್ಯಾಸ ?**

ಉ : ನಾನು ಸುಖಿ, ನಾನು ದುಃಖಿ ಎನ್ನುವುದು ಅಂತಃಕರಣದ ಧರ್ಮವಾಗಿದೆ. ಆತ್ಮನಾದ ನನ್ನಲ್ಲಿ ಯಾವ ಧರ್ಮಗಳಿಲ್ಲದಿದ್ದರೂ ನಾನು ಸುಖಿ, ನಾನು ದುಃಖಿ ಎನ್ನುವುದು ಅಂತಃಕರಣ ಉಪಹಿತ ಚೇತನದಲ್ಲಿ ಅಧ್ಯಾಸವಾಗಿದೆ.

ಪ್ರ ೭೯ : **ನಾನು ಕುರುಡನೆನ್ನುವುದು ಯಾವ ಅಧ್ಯಾಸ ?**

ಉ : ನಾನು ಕುರುಡನೆನ್ನುವುದು ಇಂದ್ರಿಯ ಧರ್ಮವಾಗಿದೆಯಾದರೂ, ಅಂತಃಕರಣೋಪಹಿತ ಚೇತನದಲ್ಲಿ ನಾನು ಕುರುಡನೆನ್ನುವುದು ಅಧ್ಯಾಸವಾಗಿದೆ.

ಪ್ರ ೮೦ : **ನಾನು ದಪ್ಪಗಿದ್ದೇನೆ, ಸಣ್ಣಗಿದ್ದೇನೆ, ಕೆಂಪಗಿದ್ದೇನೆ, ಬೆಳ್ಳಗಿದ್ದೇನೆ, ಕಪ್ಪಗಿದ್ದೇನೆ ಎಂಬುದು ಯಾವ ಅಧ್ಯಾಸ ?**

ಉ : ದಪ್ಪ, ಸಣ್ಣ, ಕೆಂಪು, ಬಿಳುಪು, ಕಪ್ಪು ಮುಂತಾದವು ದೇಹದ ಧರ್ಮವಾದರೂ ದೇಹೋಪಹಿತ ಚೇತನದಲ್ಲಿ ಇವು ಅಧ್ಯಾಸವಾಗಿವೆ.

ಪ್ರ ೮೧ : **ಈ ಅಧ್ಯಾಸದಿಂದ ತಿಳಿದುಕೊಳ್ಳಬೇಕಾದ ಅಂಶವೇನು?**

ಉ : ಮೇಲ್ಕಂಡ ಅಹಂಕಾರಾದಿ ಧರ್ಮಗಳು ಕೂಟಸ್ಥ ಚೇತನದಲ್ಲಿ ಅಧ್ಯಾಸವಾಗುವುದಿಲ್ಲ. ಅಧ್ಯಾಸವಾಗುವುದು ಬ್ರಹ್ಮಚೇತನದಲ್ಲೇ. ಆದರೂ ತಪ್ಪು ತಿಳುವಳಿಕೆಯಿಂದ ಕೂಟಸ್ಥ ಚೇತನದಲ್ಲಿ ಆದಂತೆ ಕಾಣುತ್ತದೆ. ಈ ಧರ್ಮಗಳೆಲ್ಲವೂ ಕೂಟಸ್ಥನಲ್ಲಿ ಅಭೇದವಾಗಿ ತೋರುತ್ತವೆ.

ಪ್ರ ೮೨ : **ಇವುಗಳಿಗೆ ಸ್ವರೂಪಾಧ್ಯಾಸವೆಂದು ಹೇಳಲು ಕಾರಣವೇನು ?**

ಉ : ೧. ಶುದ್ಧ ಚೇತನದಲ್ಲಿ ಆಯಾಯಾ ವಸ್ತುಗಳ ಸ್ವರೂಪವು ಅಧ್ಯಾಸವಾಗಿವೆ ೨. ಶುದ್ಧ ಚೇತನದಲ್ಲಿ ದೇಹಾದಿ ಇಂದ್ರಿಯ ಧರ್ಮಗಳು ಅನಿರ್ವಚನೀಯವಾಗಿ ತೋರುತ್ತವೆ.

ಮೇಲ್ಕಂಡ ದೃಷ್ಟಾಂತಗಳೆಲ್ಲವೂ ಸ್ವರೂಪಾಧ್ಯಾಸಕ್ಕೆ ಸೇರಿದವುಗಳು.

ಪ್ರ ೮೩ : **ಅನಿರ್ವಚನೀಯವೆಂದರೇನು ?**

ಉ : "ಸದಸದ್ವಿಲಕ್ಷಣ"ವಾದದ್ದು ಅನಿರ್ವಚನೀಯವಾಗಿದೆ. ಸದ ಸದ್ವಿಲಕ್ಷಣವೆಂದರೆ, ಸತ್ತೂ ಅಲ್ಲದೆ, ಅಸತ್ತೂ ಅಲ್ಲದೆ, ಎರಡಕ್ಕೆ ವಿಲಕ್ಷಣ ವಾದದ್ದು.

ಉದಾ : ರಜ್ಜು ಸರ್ಪ – ೧. ರಜ್ಜುವಿನಲ್ಲಿ ಕಂಡ ಹಾವು ಸತ್ಯ ವಾಗಿದ್ದರೆ ರಜ್ಜು ಜ್ಞಾನವಾದೊಡನೆಯೇ ಸರ್ಪವು ಇಲ್ಲದಂತಾಗಬಾರದು. ಪರಂತು ಇಲ್ಲದಂತಾಗುವುದರಿಂದ ಆ ಸರ್ಪವು ಸತ್ತು ಅಲ್ಲ.

೨. ಅದು ಅಸತ್ತಾದ ಪಕ್ಷದಲ್ಲಿ ವಂಧ್ಯಾಪುತ್ರನಂತೆ ತೋರಬಾರದು. ತೋರುತ್ತದೆಯಾದ ಕಾರಣ ಅಸತ್ತೂ ಅಲ್ಲ.

೩. ಸದಸತ್ತೆನ್ನೋಣವೇ ಎಂದರೆ, ಕತ್ತಲು ಬೆಳಕು ಒಂದೆಡೆ ಕೂಡ ದಿರುವಂತೆ ಸದಸತ್ತುಗಳು ಕೂಡುವುದಿಲ್ಲ. ಆದುದರಿಂದ ಸದಸದ್ವಿಲಕ್ಷಣ ವಾದದ್ದು ಅನಿರ್ವಚನೀಯವೆನಿಸುತ್ತದೆ.

ಪ್ರ ೮೪ : **ಇಲ್ಲಿಯವರೆಗೆ ಹೇಳಿದ ಸ್ವರೂಪಾಧ್ಯಾಸದಲ್ಲಿ ಅಂತ ರ್ಭೂತವಾಗಿರುವ ಅಧ್ಯಾಸಗಳು ಯಾವುವು ?**

ಉ : ೧. ಕೇವಲ ಸಂಬಂಧಾಧ್ಯಾಸ, ೨. ಸಂಬಂಧೀಸಹಿತ ಸಂಬಂಧಾಧ್ಯಾಸ. ಇವು ಸ್ವರೂಪಾಧ್ಯಾಸದಲ್ಲಿ ಅಂತರ್ಭೂತಗಳು.

ಪ್ರ ೮೫ : **ಹಿಂದೆ ಹೇಳಿದ ಪಂಚ ವಿಧ ಭ್ರಾಂತಿಗಳಲ್ಲಿ ಸ್ವರೂಪಾ ಧ್ಯಾಸಕ್ಕೆ ಯಾವ ಭ್ರಾಂತಿಗಳು ಸೇರಿವೆ ?**

ಉ : ೧. ಭೇದ ಭ್ರಾಂತಿ, ೨. ಕರ್ತೃತ್ವ ಭೋಕ್ತೃತ್ವ ಭ್ರಾಂತಿ, ೩. ವಿಕಾರ ಭ್ರಾಂತಿ, ೪. ಜಗತ್ಸತ್ಯತ್ವ ಭ್ರಾಂತಿ. ಈ ನಾಲ್ಕು ಭ್ರಾಂತಿ ಗಳು ಸ್ವರೂಪಾಧ್ಯಾಸಕ್ಕೆ ಸೇರಿವೆ.

ಪ್ರ ೮೬ : **ಸಂಗ ಭ್ರಾಂತಿಯು ಯಾವ ಅಧ್ಯಾಸಕ್ಕೆ ಸೇರಿದ್ದು?**

ಉ : ಸಂಗಭ್ರಾಂತಿಯು ಸಂಸರ್ಗಾಧ್ಯಾಸಕ್ಕೆ ಸೇರಿದ್ದಾಗಿದೆ.

ಪ್ರ ೮೭ : **ಸಂಸರ್ಗಾಧ್ಯಾಸವೆಂದರೇನು ?**

ಉ : ಯಾವುದೇ ವಸ್ತುವು ಮೊದಲಿದ್ದು – ಅದರ ಸ್ವರೂಪವು ಯಾವ ಸತ್ತಾದರೂ ಸರಿಯೆ – ಅನಿರ್ವಚನೀಯವಾಗಿ ಮತ್ತೊಂದು ಕಡೆ ತೋರಿದರೆ ಅದು ಸಂಸರ್ಗಾಧ್ಯಾಸವೆನಿಸುತ್ತದೆ.

ಮುಖಕ್ಕೂ ಮತ್ತು ಕನ್ನಡಿಗೂ ಯಾವ ಸಂಬಂಧವೂ ಇಲ್ಲ. ಮುಖ ಮತ್ತು ಕನ್ನಡಿ ಎರಡೂ ವ್ಯಾವಹಾರಿಕ ಸತ್ತಾ ಆಗಿವೆ.

ಕನ್ನಡಿಯಲ್ಲಿ ಮುಖದ ಸಂಬಂಧವಿದ್ದಂತೆ ಕಾಣುತ್ತದೆ. ಪರಂತು ಇಲ್ಲಿ ಅನಿರ್ವಚನೀಯ ಸಂಬಂಧವು ಕಂಡುಬರುತ್ತದೆ.

ಪ್ರ ೮೮ : **ಸಂಸರ್ಗಾಧ್ಯಾಸದ ವಿಶೇಷ ವಿಚಾರವೇನು ?**

ಉ : ವಸ್ತುಗಳು ಪೂರ್ವಸಿದ್ಧವಾಗಿದ್ದು ಒಂದು ಮತ್ತೊಂದರಲ್ಲಿ ಹೀಗೆ ಎಂದು ಹೇಳಲಿಕ್ಕೆ ಬಾರದೆ ಅನಿರ್ವಚನೀಯ ಸಂಬಂಧವಾದದ್ದು ಸಂಸರ್ಗಾಧ್ಯಾಸದ ವಿಶೇಷ ವಿಚಾರವೆನಿಸುತ್ತದೆ.

ಪ್ರ ೮೯: **ಅನಿರ್ವಚನೀಯ ಸಂಬಂಧವೆಂದರೇನು ?**

ಉ : ಸಂಬಂಧವು ಇದೆಯೆಂತಲೂ, ಇಲ್ಲವೆಂತಲೂ, ಇದೆ–ಇಲ್ಲವೆಂತಲೂ ಹೇಳಲಿಕ್ಕೆ ಬಾರದ್ದು ಅನಿರ್ವಚನೀಯ ಸಂಬಂಧವೆನಿಸುತ್ತದೆ.

ಪ್ರ ೯೦ : **ಅನಿರ್ವಚನೀಯ ಸಂಬಂಧವು ಇದೆಯೆಂದು ಏಕೆ ಹೇಳಲಿಕ್ಕೆ ಬರುವುದಿಲ್ಲ ?**

ಉ : ವಿಚಾರದಿಂದ ಆ ಸಂಬಂಧವು ಇಲ್ಲದಂತಾಗುವುದರಿಂದ ಇದೆ ಎಂದು ಹೇಳಲಿಕ್ಕೆ ಬರುವುದಿಲ್ಲ. ಅವಿಚಾರ ಕಾಲದಲ್ಲಿ ತೋರುವುದರಿಂದ ಇಲ್ಲವೆಂತಲೂ ಹೇಳಲಾಗದು. ಇದೆ – ಇಲ್ಲವೆಂಬ ಎರಡು ವಿರುದ್ಧ ಧರ್ಮಗಳು ಒಂದೆಡೆ ಸೇರಿದ್ದು ಎಲ್ಲೂ ಕಂಡುಬಂದಿಲ್ಲ. ಇದೆ – ಇಲ್ಲವೆಂದು ಹೇಳಲಿಕ್ಕೆ ಬರದಂಥ ಅನಿರ್ವಚನೀಯ ಸಂಬಂಧವಾಗಿದೆ.

ಪ್ರ ೯೧ : **ದೃಷ್ಟಾಂತವೇನು ?**

ಉ : ಲೋಕದಲ್ಲಿ ಕೆಂಪು ಬಣ್ಣದ ಬಟ್ಟೆಯನ್ನು ಕೆಂಪು ಬಟ್ಟೆಯೆನ್ನುವುದುಂಟು. ನಿಜವಾಗಿ ನೋಡಿದರೆ ಅದು ಕೆಂಪು ಬಟ್ಟೆಯಲ್ಲ. ಕೆಂಪು ಬಣ್ಣಕ್ಕೂ ಬಟ್ಟೆಗೂ ತಾದಾತ್ಮ್ಯ ಸಂಬಂಧವುಂಟಾಗಿದೆ. ವಾಸ್ತವವಾಗಿ ಆ

ತಾದಾತ್ಮ್ಯ ಸಂಬಂಧವೂ ಇಲ್ಲ. ಈ ರೀತಿ ಬಟ್ಟೆಗೂ ಬಣ್ಣಕ್ಕೂ ಅನಿರ್ವಚನೀಯವಾದ ತಾದಾತ್ಮ್ಯ ಸಂಬಂಧವಿರುವುದರಿಂದ ಇದು ಅನಿರ್ವಚನೀಯ ಸಂಬಂಧಕ್ಕೆ ಉದಾಹರಣೆ.

ಪ್ರ ೯೨ : **ಅನಿರ್ವಚನೀಯ ಸಂಬಂಧಕ್ಕೆ ಮತ್ತೊಂದು ದೃಷ್ಟಾಂತವೇನು ?**

ಕೆಂಪು ದಾಸವಾಳದ ಹೂವಿನ ಪಕ್ಕದಲ್ಲಿ ಸ್ಫಟಿಕ ಶಿಲೆಯನ್ನು ಇಟ್ಟಾಗ, ಆ ಸ್ಫಟಿಕವು ಕೆಂಪು ಬಣ್ಣವಾಗಿ ತೋರುತ್ತದೆ. ಇಲ್ಲಿ ದಾಸವಾಳದ ಹೂವಿಗೂ, ಸ್ಫಟಿಕದ ಶಿಲೆಗೂ ನಿಜವಾದ ಸಂಬಂಧವಿಲ್ಲ. ಅನಿರ್ವಚನೀಯ ಸಂಬಂಧವಿದೆ. ನಿಜವಾದ ಸಂಬಂಧವಿದ್ದಿದ್ದರೆ ಕೆಂಪು ಹೂವನ್ನು ತೆಗೆದ ಮೇಲೂ ತೋರಬೇಕಿತ್ತು. ಹಾಗೆ ತೋರುವುದಿಲ್ಲವಾದ್ದರಿಂದ ಆ ಕೆಂಪು ಹೂವಿಗೂ, ಸ್ಫಟಿಕ ಶಿಲೆಗೂ ಅನಿರ್ವಚನೀಯ ಸಂಬಂಧವಿದೆ.

ಪ್ರ ೯೩ : **ಸಂಸರ್ಗಾಧ್ಯಾಸಕ್ಕೆ ಮತ್ತೊಂದು ಹೆಸರೇನು ?**

ಉ : ಸಂಬಂಧಾಧ್ಯಾಸವೆಂದು ಮತ್ತೊಂದು ಹೆಸರು.

ಪ್ರ ೯೪ : **ಚೇತನಕ್ಕೂ ಅಹಂಕಾರಕ್ಕೂ ಉಂಟಾಗುವ ಸಂಬಂಧವು ಕಲ್ಪಿತವಾದರೆ ಅದು ಹೇಗೆ ?**

ಉ : ಚೇತನವು ಅಹಂಕಾರದಲ್ಲಿ ಅಧ್ಯಾಸವಾಗಿಲ್ಲ. ಏಕೆಂದರೆ, ಚೇತನವು ಪಾರಮಾರ್ಥಿಕ ವಸ್ತುವಾದರೂ ಚೇತನದ ಸಂಬಂಧವು ಅಹಂಕಾರದಲ್ಲಿ ಅನಿರ್ವಚನೀಯವಾಗಿ ತೋರುತ್ತದೆ. ಆತ್ಮತ್ವವಿರುವುದು ಚೇತನದಲ್ಲಿ; ತೋರುವುದು ಅಹಂಕಾರದಲ್ಲಿ. ಆತ್ಮ ತಾದಾತ್ಮ್ಯವು ಸದಾ ಚೇತನದಲ್ಲಿ ಇರುವುದಾದರೂ ಅವಿಚಾರದಿಂದ ಅಹಂಕಾರದಲ್ಲಿ ತೋರುತ್ತದೆ. ಅಹಂಕಾರದಲ್ಲಿ ತೋರುವ ಆತ್ಮಚೇತನದ ತಾದಾತ್ಮ್ಯ ಸಂಬಂಧವು ಅನಿರ್ವಚನೀಯ ಸಂಬಂಧವೆನಿಸುತ್ತದೆ.

ಇಲ್ಲಿ ತಿಳಿದುಕೊಳ್ಳಬೇಕಾದ ಅಂಶವೇನೆಂದರೆ, ಚೇತನವು ಕಲ್ಪಿತವಲ್ಲ. ಆದರೂ ಚೇತನಕ್ಕೂ ಅಹಂಕಾರಕ್ಕೂ ಇರುವ ಸಂಬಂಧ ಕಲ್ಪಿತ ಸಂಬಂಧವಾಗಿದೆ.

ಪ್ರ ೯೫ : **ಅಧ್ಯಾಸವು ಎಷ್ಟು ವಿಧ ? ಅವು ಯಾವುವು ?**

ಉ : ಅಧ್ಯಾಸವು ಎರಡು ವಿಧ : ೧. ಜ್ಞಾನಾಧ್ಯಾಸ, ೨. ಅರ್ಥಾಧ್ಯಾಸ.

ಪ್ರ ೯೬ : **ಜ್ಞಾನಾಧ್ಯಾಸವೆಂದರೇನು ?**

ಉ : ಜ್ಞಾನ+ಅಧ್ಯಾಸ = ಜ್ಞಾನಾಧ್ಯಾಸ.

ಉದಾ : ೧. ರಜ್ಜುವಿನಲ್ಲಿ ಕಂಡ ಸರ್ಪದ ಜ್ಞಾನ; ೨. ಸ್ಥಾಣುವಿನಲ್ಲಿ ಕಂಡ ಚೋರನ ಜ್ಞಾನ; ೩. ಶುಕ್ತಿಯಲ್ಲಿ ಕಂಡ ಬೆಳ್ಳಿಯ ಜ್ಞಾನ. ಇವು ಜ್ಞಾನಾಧ್ಯಾಸಕ್ಕೆ ಉದಾಹರಣೆ. ಕಲ್ಪಿತ ವಸ್ತುವಿನ ಜ್ಞಾನವೇ ಜ್ಞಾನಾಧ್ಯಾಸ.

ಪ್ರ ೯೭ : **ಅರ್ಥಾಧ್ಯಾಸವೆಂದರೇನು ?**

ಉ : ಅರ್ಥ+ಅಧ್ಯಾಸ = ಅರ್ಥಾಧ್ಯಾಸ. ಅರ್ಥ – ವಿಷಯ ಇಲ್ಲವೇ ಪದಾರ್ಥ; ಅಂದರೆ ಕಲ್ಪಿತ ವಸ್ತುವು ಅರ್ಥಾಧ್ಯಾಸ.

ಉದಾ : ಸರ್ಪ, ಚೋರ, ಬೆಳ್ಳಿ ಇವು ಅರ್ಥಾಧ್ಯಾಸ.

ಪ್ರ ೯೮ : **ಅಧ್ಯಾಸ ಸಾಮಗ್ರಿಗಳೆಷ್ಟು ?**

ಉ : ಐದು.

೧. ಸತ್ಯವಸ್ತುವಿನ ಜ್ಞಾನಜನ್ಯ ಸಂಸ್ಕಾರ

೨. ಪ್ರಮಾತೃ ದೋಷ

೩. ಪ್ರಮಾಣ ದೋಷ

೪. ಪ್ರಮೇಯ ದೋಷ

೫. ಸಾಮಾನ್ಯ ರೂಪದಿಂದ ತೋರಿ ವಿಶೇಷ ರೂಪದಿಂದ ತೋರದಿರುವುದು.

## ಪೂರ್ವಪಕ್ಷಿಯ ಶಂಕಾ

೧. ಉದಾ : ರಜ್ಜು ಸರ್ಪ – ಹಗ್ಗದಲ್ಲಿ ಸರ್ಪದ ಅಧ್ಯಾಸವಾಗಬೇಕಿದ್ದರೆ ಮೊದಲು ಸತ್ಯವಾದ ಸರ್ಪವನ್ನು ನೋಡಿದ ಜ್ಞಾನಜನ್ಯ ಸಂಸ್ಕಾರವಿರಲೇಬೇಕು. ಹಾಗಿದ್ದರೆ ಮಾತ್ರ ಹಗ್ಗವನ್ನು ನೋಡಿದ ಕೂಡಲೆ ಸರ್ಪದ ಸಂಸ್ಕಾರವು ಪ್ರಕಟವಾಗಿ ಸರ್ಪವು ತೋರುತ್ತದೆ. ಸತ್ಯವಾದ ಸರ್ಪವನ್ನು ನೋಡಿದ ಸಂಸ್ಕಾರವಿಲ್ಲದ್ದರಿಂದ ಸರ್ಪದ ಅಧ್ಯಾಸವಾಗಲು ಕಾರಣವಿಲ್ಲ. ಇದು ಮೊದಲನೆಯ ಅಧ್ಯಾಸದ ಸಾಮಗ್ರಿಯಾಗಿದೆ.

೨. ಪ್ರಮಾತೃ ದೋಷ :

ಪ್ರಮಾತೃವೆಂದರೆ ಜೀವ. ಪ್ರಮಾತೃವಿನಲ್ಲಿ ಭಯಾದಿ ದೋಷ ವಿರಬೇಕು. ಭಯಾದಿ ದೋಷವಿಲ್ಲದ ಪಕ್ಷದಲ್ಲಿ ಸರ್ಪದ ಅಧ್ಯಾಸವಾಗುವು ದಿಲ್ಲ. ಇದು ೨ನೇ ಅಧ್ಯಾಸ ಸಾಮಗ್ರಿಯಾಗಿದೆ.

೩. ಪ್ರಮಾಣ ದೋಷ :

ನೇತ್ರದಲ್ಲಿ ತಿಮಿರಾದಿ ದೋಷವಿದ್ದಲ್ಲಿ ಸರ್ಪದ ಅಧ್ಯಾಸವಾಗಬಹುದು. ಅದಿಲ್ಲದ ಪಕ್ಷದಲ್ಲಿ ಅಧ್ಯಾಸವಾಗಲಿಕ್ಕಿಲ್ಲ. ಇದು ೩ನೆ ಸಾಮಗ್ರಿಯಾಗಿದೆ.

೪. ಪ್ರಮೇಯ ದೋಷ ಅಥವಾ ಸಾದೃಶ್ಯ ದೋಷ :

ಪ್ರಮೇಯದಲ್ಲಿ ಸಾದೃಶ್ಯ ದೋಷವಿದ್ದರೆ ಸರ್ಪದ ಅಧ್ಯಾಸವಾಗ ಬಹುದು. ಅದಿಲ್ಲದ ಪಕ್ಷದಲ್ಲಿ ಅಧ್ಯಾಸವಾಗಲಿಕ್ಕಿಲ್ಲ. ಇದು ೪ನೇ ಸಾಮಗ್ರಿಯಾಗಿದೆ.

೫. ಸಾಮಾನ್ಯರೂಪದಿಂದ ತೋರಿ ವಿಶೇಷರೂಪದಿಂದ ತೋರದಿರುವ ದೋಷ :

ವಸ್ತುವಿನ ಸಾಮಾನ್ಯಾಂಶವು ತೋರಿ ವಿಶೇಷಾಂಶವು ತೋರದಿರುವುದು. ಉದಾ : ಹಗ್ಗದ "ಇದಂ" ಅಂಶವು ತೋರಿ ಅದರ ವಿಶೇಷಾಂಶವಾದ ಹುರಿ, ಗಂಟು ಇತ್ಯಾದಿ ತೋರದಿರುವುದರಿಂದ ಸರ್ಪದ ಅಧ್ಯಾಸವಾಗಬಹುದು. ಇದು ೫ನೇ ಸಾಮಗ್ರಿಯಾಗಿದೆ.

ಪ್ರ ೯೯ : **ಬ್ರಹ್ಮದಲ್ಲಿ ಪ್ರಪಂಚದ ಅಧ್ಯಾಸವಾಗಿದೆ ಎಂದರೆ, ಮೇಲೆ ಹೇಳಿದ ಐದು ವಿಧ ದೋಷದಲ್ಲಿ ಯಾವುದು ಆಗಿದೆ?**

ಉ : ಮೇಲೆ ಹೇಳಿದ ಐದು ವಿಧ ದೋಷಗಳಲ್ಲಿ ಯಾವುದೂ ಆಗಿಲ್ಲ.

ಏಕೆ ?

೧. ಬ್ರಹ್ಮದಲ್ಲಿ ಪ್ರಪಂಚದ ಅಧ್ಯಾಸವಾಗಬೇಕಾದರೆ ಮೊದಲು ಐದು ವಿಧ ಸಾಮಗ್ರಿಗಳಿರಬೇಕು. ಅವು ಇಲ್ಲ. ಮೊದಲು ಪ್ರಪಂಚ ಸತ್ಯತ್ವದ ಜ್ಞಾನಜನ್ಯ ಸಂಸ್ಕಾರವಿರಬೇಕು. ಅದಂತೂ ಕಂಡುಬಂದಿಲ್ಲ. ಹಾಗಿದ್ದರೆ ಪ್ರಪಂಚ ಮಿಥ್ಯವಲ್ಲ, ಸತ್ಯವೇ ಆಗಬೇಕಾಗುತ್ತದೆ. ಈ ಕಾರಣದಿಂದ ಮೊದಲನೇ ಸಾಮಗ್ರಿ ಇಲ್ಲ.

೨. ಪ್ರಮಾತೃ ದೋಷ : ಅಧ್ಯಾಸ ಸಿದ್ಧವಾದ ಮೇಲೆಯೇ

ಪ್ರಮಾತೃ ಸಿದ್ಧವಾಗಬೇಕು. ಪರಂತು ಅಧ್ಯಾಸವೇ ಇಲ್ಲದ ಮೇಲೆ ಪ್ರಮಾತೃವೆಂಬ ಎರಡನೇ ಸಾಮಗ್ರಿ ಇಲ್ಲ.

೩. ಪ್ರಮಾಣ ದೋಷ : ಅಧ್ಯಾಸ ಸಿದ್ಧವಾದ ಮೇಲೆ ಪ್ರಮಾತೃ ಸಿದ್ಧವಾಗಬೇಕು. ಅಧ್ಯಾಸವೇ ಇಲ್ಲದ ಮೇಲೆ ಪ್ರಮಾಣ ದೋಷವು ಅಸಂಭವ. ಮೂರನೇ ಸಾಮಗ್ರಿ ಇಲ್ಲ.

೪. ಪ್ರಮೇಯ ದೋಷ : ಬ್ರಹ್ಮಕ್ಕೂ ಪ್ರಪಂಚಕ್ಕೂ ಸಾದೃಶ್ಯ ವಿಲ್ಲ. ಏಕೆಂದರೆ ಬ್ರಹ್ಮ ನಿರಾಕಾರ. ಪ್ರಪಂಚ ಸಾಕಾರ. ಹೀಗೆ ವಿರುದ್ಧಾಂಶವಿರುವುದರಿಂದ ನಾಲ್ಕನೇ ಸಾಮಗ್ರಿಯೂ ಇಲ್ಲ.

೫. ಸಾಮಾನ್ಯ ರೂಪದಿಂದ ತೋರಿ ವಿಶೇಷ ರೂಪದಿಂದ ತೋರದಿರುವ ದೋಷ : ವಸ್ತುವಿನ "ಇದಂ" ರೂಪ ಸಾಮಾನ್ಯಾಂಶವು ತೋರಿ ವಿಶೇಷಾಂಶವು ತೋರುವುದಿಲ್ಲ. ಏಕೆಂದರೆ, ಬ್ರಹ್ಮಕ್ಕೆ ಯಾವ ಅಂಶವೂ ಇಲ್ಲ ; ನಿರಂಶವಾಗಿದೆ ; ಪೂರ್ಣವಾಗಿದೆ. ಪ್ರಪಂಚವಾದರೋ ಅಂಶವುಳ್ಳದ್ದು. ಆದ್ದರಿಂದ ಈ ದೋಷವೂ ಇಲ್ಲ.

ಹೀಗೆ ಐದು ಅಧ್ಯಾಸ ಸಾಮಗ್ರಿಗಳು ಇಲ್ಲದಿರುವುದರಿಂದ ಬ್ರಹ್ಮದಲ್ಲಿ ಜಗತ್ತು ಅಧ್ಯಾಸವಾಗಿಲ್ಲ. ಪರಂತು ಸತ್ಯವಾಗಿದೆಯೇ ಹೊರತು ಮಿಥ್ಯವಲ್ಲವೆಂದು ಪೂರ್ವಪಕ್ಷಿ ಹೇಳುತ್ತಾನೆ.

**ಶಂಕಾ :** ಬ್ರಹ್ಮದಲ್ಲಿ ಜಗತ್ತು ಅಧ್ಯಾಸವಾಗಬೇಕಿದ್ದರೆ ಸತ್ಯವಸ್ತುವಿನ ಜ್ಞಾನಜನ್ಯ ಸಂಸ್ಕಾರವಿರಬೇಕು ಎಂದು ಪೂರ್ವಪಕ್ಷಿ ಹೇಳುತ್ತಾನೆ. ಇದಕ್ಕೆ ಸಿದ್ಧಾಂತಿಯ ಸಮಾಧಾನ.

ಸಮಾಧಾನ : ಅಯ್ಯಾ ! ಐದು ದೋಷಗಳು ಇಲ್ಲದಿದ್ದರೂ ಅಧ್ಯಾಸವಾಗಬಹುದು. ಹೇಗೆಂದರೆ, ಸತ್ಯ ವಸ್ತುವಿನ ಜ್ಞಾನಜನ್ಯ ಸಂಸ್ಕಾರವು ಅಧ್ಯಾಸವಾಗಲಿಕ್ಕೆ ಬೇಕಿಲ್ಲ. ಕಲ್ಪಿತ ವಸ್ತುವಿನ ಜ್ಞಾನಜನ್ಯ ಸಂಸ್ಕಾರದಿಂದ ಅಧ್ಯಾಸವಾಗಬಹುದು.

ವಸ್ತು ಸತ್ಯವಿರಲಿ ಮಿಥ್ಯವಿರಲಿ, ವಸ್ತುಜ್ಞಾನಜನ್ಯ ಸಂಸ್ಕಾರವಿದ್ದರೆ ಸಾಕು, ಅಧ್ಯಾಸವಾಗಬಹುದು ಎಂಬುದಾಗಿ ಸಿದ್ಧಾಂತಿ ಹೇಳುತ್ತಾನೆ.

ಉದಾ : ಐಂದ್ರಜಾಲಿಕನು ಮಾಡಿ ತೋರಿಸಿದ ಮಾವಿನ ಗಿಡವನ್ನು ನೋಡಿದ ಒಬ್ಬ ಮನುಷ್ಯನು ದಾರಿಯಲ್ಲಿ ಹೋಗುವಾಗ ಆ ಮಾವಿನ

ಗಿಡದಂತೆಯೇ ಇರುವ ಮತ್ತೊಂದು ಗಿಡವನ್ನು ನೋಡಿ ಇದು ಹಾವಿನ ಗಿಡವೇ ಎಂದು ಭ್ರಮಿಸಿದಂತೆ, ಈ ಮಿಥ್ಯಾವಸ್ತುವಿನ ಜ್ಞಾನಜನ್ಯದಿಂದ ಅಧ್ಯಾಸವಾಗಿ ತೋರಬಹುದು. ಅವಿದ್ಯಾ ದೋಷದಿಂದ ಅಧ್ಯಾಸವಾಗಬಹುದು.

ಪ್ರ ೧೦೦ : **ಪ್ರಮಾತೃ, ಪ್ರಮಾಣ – ಈ ಎರಡು ದೋಷವಿಲ್ಲದಿದ್ದರೂ ಅಧ್ಯಾಸವಾಗಬಹುದು. ಹೇಗೆ ?**

ಉ : ಅಧ್ಯಾಸವಾದ ನಂತರವೇ ಪ್ರಮಾತೃ ಸಿದ್ಧವಾಗುವುದು ಎಂದು ಹೇಳುವ ಮಾತು ಸರಿಯಲ್ಲ. ಏಕೆಂದರೆ ಪ್ರಮಾತೃ, ಪ್ರಮಾಣಗಳಿಗೆ ಅವಿದ್ಯೆಯೊಂದಿದ್ದರೆ ಸಾಕು. ಅಧ್ಯಾಸವಾಗಿ ಪ್ರಪಂಚಾಕಾರವಾಗಿ ತೋರುತ್ತದೆ.

ಪ್ರ ೧೦೧ : **ಸಾದೃಶ್ಯ ದೋಷವಿಲ್ಲದಿದ್ದರೂ ಅಧ್ಯಾಸವಾಗಬಹುದು. ಹೇಗೆ ?**

ಉ : ಸಾದೃಶ್ಯ ದೋಷವಿಲ್ಲದಿದ್ದರೂ ಅವಿದ್ಯೆಯೊಂದರಿಂದಲೇ ಅಧ್ಯಾಸವಾಗಿ ಪ್ರಪಂಚವು ತೋರಬಹುದು. ಹೇಗೆಂದರೆ –

ಉದಾ ೧. ಆಕಾಶವು ನೀಲಿ ವರ್ಣವಾಗಿ ತೋರುತ್ತದೆ. ಆದರೆ ಆಕಾಶವು ಯಾವ ಬಣ್ಣವುಳ್ಳದ್ದೂ ಅಲ್ಲ. ಪರಂತು ಆಕಾಶವು ನಿರವಯುವವೂ, ಬಣ್ಣವು ಸಾವಯುವವೂ ಆದ್ದರಿಂದ ಇವೆರಡರ ಏಕತ್ವವು ಘಟಿಸುವುದಿಲ್ಲ.

ಆಕಾಶದಲ್ಲಿ ಅಜ್ಞಾನದಿಂದ ನೀಲಿ ಬಣ್ಣವು ಅಧ್ಯಾಸವಾದಂತೆ, ಬ್ರಹ್ಮದ ಅಜ್ಞಾನದಿಂದ ಪ್ರಪಂಚವು ಅಧ್ಯಾಸವಾಗಿ ತೋರಬಹುದು.

ಉದಾ ೨ : ನಾನು ಕ್ಷತ್ರಿಯ, ನಾನು ಬ್ರಾಹ್ಮಣ ಎಂದು ಮುಂತಾಗಿ ಹೇಳುವಾಗ, ''ನಾನು'' ಎನ್ನುವುದು ಆತ್ಮನ ಸಾಮಾನ್ಯಾಂಶ. ನಾನು ಕ್ಷತ್ರಿಯ–ಬ್ರಾಹ್ಮಣವೆಂಬವುಗಳು ವಿಶೇಷಾಂಶ. ಇವೆರಡಕ್ಕೂ ಸಾದೃಶ್ಯವಿಲ್ಲದಿದ್ದರೂ ಅವಿದ್ಯೆಯಿಂದ ಅಧ್ಯಾಸವಾಗಿ ತೋರಬಹುದು.

ಪ್ರ ೧೦೨ : **ಬ್ರಹ್ಮದಲ್ಲಿ ಸಾಮಾನ್ಯ ವಿಶೇಷಾಂಶಗಳು ತೋರುತ್ತವೆ ಎಂಬುದು ಹೇಗೆ ?**

ಉ : ಅಜ್ಞಾನಿ ಮನುಷ್ಯನು ನಾನು ಇದ್ದೇನೆ ಎನ್ನುತ್ತಾನೆ. ಬ್ರಹ್ಮಜ್ಞಾನಿಯು ನಾನು ಚಿತ್ತು, ಆನಂದ ರೂಪನೆನ್ನುತ್ತಾನೆ.

ಇಲ್ಲಿ ನಾನು ಇದ್ದೇನೆ ಎನ್ನುವುದು ಸಾಮಾನ್ಯಾಂಶ. ಚಿತ್ತು, ಆನಂದ ಇವು ವಿಶೇಷಾಂಶ. ಪರಂತು ಬ್ರಹ್ಮದಲ್ಲಿ ಅವಿದ್ಯಾ ಕಾಲದಲ್ಲೂ ಸಾಮಾನ್ಯ

ವಿಶೇಷಾಂಶಗಳು ಅವಿದ್ಯೆಯಿಂದ ತೋರಬಹುದು. ಆದ ಕಾರಣ ಪ್ರಪಂಚವು ಮಿಥ್ಯವಾಗಿದೆ, ಸತ್ಯವಲ್ಲವೆಂಬುದು ಸಿದ್ಧಾಂತದ ಮಾತಾಗಿದೆ. ಉಪನಿಷದಾದಿ ವಾಕ್ಯಗಳೂ ಕೂಡ "ಬ್ರಹ್ಮಸತ್ಯಂ ಜಗನ್ಮಿಥ್ಯ" ವೆಂದು ಹೇಳಿವೆ.

ಪ್ರ ೧೦೩ : **ರಜ್ಜು ಸರ್ಪದ ದೃಷ್ಟಾಂತದಲ್ಲಿ ಸರ್ಪದ ಅಧ್ಯಾಸವಾಗಬೇಕಿದ್ದರೆ, ಈ ಐದು ದೋಷಗಳಿರಬೇಕು. ಬ್ರಹ್ಮದಲ್ಲಿ ಪ್ರಪಂಚದ ಅಧ್ಯಾಸವಾಗಬೇಕಿದ್ದರೆ ಈ ಐದು ದೋಷಗಳು ಬೇಕಿಲ್ಲ, ಅವಿದ್ಯಾ ದೋಷವೊಂದಿದ್ದರೆ ಸಾಕು ಎಂದು ಹೇಳಿದಂತಾಯಿತು. ಆದರೆ ಎರಡೂ ಅಧ್ಯಾಸಗಳೇ ಆದರೂ ದೃಷ್ಟಾಂತದಲ್ಲಿ ಐದು ಅಧ್ಯಾಸಗಳು ಬೇಕು, ದಾರ್ಷ್ಟಾಂತಕ್ಕೆ ಅವಿದ್ಯೆಯೊಂದೇ ಸಾಕು ಏಕೆ ?**

ಉ : ಈ ಶಂಕೆಯು ಅಧ್ಯಾಸದ ವಿಭಾಗವನ್ನು ತಿಳಿಯದಿರುವುದರಿಂದ ಉಂಟಾಗಿದೆ.

ಪ್ರ ೧೦೪ : **ಅಧ್ಯಾಸವು ಎಷ್ಟು ವಿಧ ?**

ಉ : ಎರಡು ವಿಧ: ೧. ಸಾಧಿ ಅಧ್ಯಾಸ ಅಂದರೆ ಆದಿವುಳ್ಳದ್ದು. ೨. ಅನಾದಿ ಅಧ್ಯಾಸ ಅಂದರೆ ಆದಿಯಿಲ್ಲದ್ದು.

ಉದಾ : ರಜ್ಜು ಸರ್ಪ, ಶುಕ್ತಿರಜತ, ಸ್ಥಾಣು ಚೋರ - ಇವು ಸಾಧಿ ಅಧ್ಯಾಸಕ್ಕೆ ಸೇರಿದವುಗಳು. ಬ್ರಹ್ಮದಲ್ಲಿ ಪ್ರಪಂಚನೆಂಬ ಅಧ್ಯಾಸವು ಅನಾದಿ ಅಧ್ಯಾಸಕ್ಕೆ ಸೇರಿದ್ದು. ಸಾದಿ ಅಧ್ಯಾಸಕ್ಕೆ ಐದು ದೋಷಗಳಿರಬೇಕು. ಅನಾದಿ ಅಧ್ಯಾಸಕ್ಕೆ ಅವಿದ್ಯೆಯೊಂದಿದ್ದರೆ ಸಾಕು.

ಪ್ರ ೧೦೫ : **ಅನಾದಿ ಅಧ್ಯಾಸವು ಎಷ್ಟು ವಿಧ ?**

ಉ : ೧. ಅರ್ಥಾಧ್ಯಾಸ, ೨. ಜ್ಞಾನಾಧ್ಯಾಸವೆಂದು ಎರಡು ವಿಧ.

ಪ್ರ ೧೦೬ : **ಜ್ಞಾನಾಧ್ಯಾಸವು ಎಷ್ಟು ವಿಧ ?**

ಉ : ಒಂದು ವಿಧ. ಕಲ್ಪಿತ ಸರ್ಪದ ಜ್ಞಾನವೇ ಜ್ಞಾನಾಧ್ಯಾಸ.

ಪ್ರ ೧೦೭ : **ಅರ್ಥಾಧ್ಯಾಸವು ಎಷ್ಟು ವಿಧ ?**

ಉ : ಆರು ವಿಧ :

೧. ಕೇವಲ ಸಂಬಂಧಾಧ್ಯಾಸ (ಸಂಸರ್ಗಾಧ್ಯಾಸ)

೨. ಸಂಬಂಧ ಸಹಿತ ಸಂಬಂಧೀ ಅಧ್ಯಾಸ

೩. ಕೇವಲ ಧರ್ಮಾಧ್ಯಾಸ

೪. ಧರ್ಮಸಹಿತ ಧರ್ಮಿ ಅಧ್ಯಾಸ

೫. ಅನ್ಯೋನ್ಯಾಧ್ಯಾಸ

೬. ಅನತ್ಯರಾಧ್ಯಾಸ

ಪ್ರ ೧೦೮ : **ಕೇವಲ ಸಂಬಂಧಾಧ್ಯಾಸವೆಂದರೇನು ?**

ಉ : ಸಂಬಂಧವು ಮಾತ್ರ ಅಧ್ಯಾಸವಾಗುವುದು. ಹೇಗೆಂದರೆ – ಅನಾತ್ಮವಾದ ಅಹಂಕಾರಾದಿಗಳಲ್ಲಿ ಆತ್ಮನಿಗೆ ಅಧ್ಯಾಸವಾಗುವುದು. ದೇಹಕ್ಕೆ ಸಂಬಂಧಪಟ್ಟ ಸ್ತ್ರೀ, ಪುತ್ರ, ಧನಕನಕ, ವಸ್ತುವಾಹನ, ಮನೆ ಮಠ– ಮುಂತಾದುವುಗಳು ಅತ್ಮನಲ್ಲಿ ಅಧ್ಯಾಸವಾಗುವುದಕ್ಕೆ ಸಂಬಂಧಾಧ್ಯಾಸ ವೆನ್ನುತ್ತಾರೆ.

ಪ್ರ ೧೦೯ : **ಸಂಬಂಧಿಸಹಿತ ಸಂಬಂಧಾಧ್ಯಾಸವೆಂದರೇನು ?**

ಉ : ಸಂಬಂಧಿ ಮತ್ತು ಸಂಬಂಧ – ಈ ಎರಡು ಆತ್ಮನಲ್ಲಿ ಅಧ್ಯಾಸ ವಾಗುವಿಕೆ.

ಪ್ರ ೧೧೦ : **ಹಾಗೆಂದರೇನು ?**

ಸ್ತ್ರೀ, ಪುತ್ರ, ಧನಾದಿಗಳು ಸಂಬಂಧ ಪದಾರ್ಥಗಳು. ಇವು ನನ್ನವು ಎನ್ನುವ ಜೀವನು ಸಂಬಂಧಿ: ಈ ಸಂಬಂಧಿ ಎಂಬುವ ಜೀವನೂ, ಸಂಬಂಧ ವೆಂಬ ಪದಾರ್ಥಗಳೂ ಎರಡೂ ಆತ್ಮನಲ್ಲಿ ಅಧ್ಯಾಸವಾಗುವಿಕೆ. ನನ್ನ ಹೊಲ, ನನ್ನ ಮನೆ ಎನ್ನುವುದು ಸಂಬಂಧಾಧ್ಯಾಸವಾದರೆ, ಜೀವನು ಮತ್ತು ಸಂಬಂಧ ಪದಾರ್ಥಗಳು ಎರಡೂ ಆತ್ಮನಲ್ಲಿ ಅಧ್ಯಾಸವಾಗುವಿಕೆ. ಹೇಗೆಂದರೆ– ಮನೆಯು ಸರಿಯಾಗಿದ್ದರೆ ನಾನೇ ಸರಿಯಾಗಿದ್ದೇನೆ, ಮನೆ ಕೆಟ್ಟುಹೋದರೆ ನಾನೇ ಕೆಟ್ಟುಹೋದೆ ಎನ್ನುವುದು ಸಂಬಂಧಿ ಸಹಿತ ಸಂಬಂಧಾಧ್ಯಾಸ.

ಪ್ರ ೧೧೧ : **ಕೇವಲ ಧರ್ಮಾಧ್ಯಾಸವೆಂದರೇನು ?**

ಉ : ಕೇವಲ ಧರ್ಮವು ಮಾತ್ರ ಅತ್ಮನಲ್ಲಿ ಅಧ್ಯಾಸವಾಗುವುದು ಕೇವಲ ಧರ್ಮಾಧ್ಯಾಸ.

ಪ್ರ ೧೧೨ : **ಹಾಗೆಂದರೇನು ?**

ಉ : ದಪ್ಪಗಿದ್ದೇನೆ, ಕೆಂಪಗಿದ್ದೇನೆ ಎನ್ನುವುದು ದೇಹದ ಧರ್ಮ ಪೇಳುವುದು, ಮುಟ್ಟುವುದು, ನೋಡುವುದು, ರುಚಿಸುವುದು, ಅಘ್ರಾಣಿಸು ಕೆದು ಇವು ಇಂದ್ರಿಯಗಳ ಧರ್ಮಗಳು, ಇಲ್ಲಿ ಹೇಳುವುದು ದೇಹ ಮತ್ತು

ಇಂದ್ರಿಯಗಳ ಅಧ್ಯಾಸವಲ್ಲ. ದೇಹ ಧರ್ಮಗಳೂ ಇಂದ್ರಿಯಗಳ ಧರ್ಮ ಗಳೂ ಆತ್ಮನಲ್ಲಿ ಅಧ್ಯಾಸವಾಗುವಿಕೆ.

ಹೇಗೆಂದರೆ : ನಾನು ದೇಹ, ನಾನು ಕಿವಿ, ನಾನು ಚರ್ಮ, ನಾನು ಕಣ್ಣು, ನಾನು ನಾಲಿಗೆ, ನಾನು ಮೂಗು ಎಂದು ಯಾರೂ ಹೇಳುವುದಿಲ್ಲ. ನನ್ನ ದೇಹ, ನನ್ನ ಕಿವಿ, ನನ್ನ ಚರ್ಮ, ನನ್ನ ಕಣ್ಣು, ನನ್ನ ನಾಲಿಗೆ, ನನ್ನ ಮೂಗು ಎಂದು ವ್ಯವಹರಿಸುವುದು ಕಂಡುಬರುತ್ತದೆ. ಆದುದರಿಂದ ಈ ಪ್ರಸಂಗದಲ್ಲಿ ಕೇವಲ ಧರ್ಮಗಳು ಅತ್ಮನಲ್ಲಿ ಅಧ್ಯಾಸವೆಂದು ತಿಳಿಯಬೇಕು.

ಪ್ರ ೧೧೩ : **ಧರ್ಮಿ ಸಹಿತ ಧರ್ಮಾಧ್ಯಾಸವೆಂದರೇನು ?**

ಉ : ಧರ್ಮಿ ಮತ್ತು ಧರ್ಮದ ಅಧ್ಯಾಸವು ಎರಡೂ ಆತ್ಮನಲ್ಲಿ ಅಧ್ಯಾಸವಾಗುವುದಕ್ಕೆ ಧರ್ಮಿ ಸಹಿತ ಧರ್ಮಾಧ್ಯಾಸವೆಂದು ಹೆಸರು.

ಹೇಗೆಂದರೆ : ಧರ್ಮಿ ಅಂತಃಕರಣ, ಧರ್ಮವೆಂದರೆ ಕರ್ತೃತ್ವ ಭೋಕ್ತೃತ್ವ. ಧರ್ಮಿಯಾದ ಅಂತಃಕರಣವು ಧರ್ಮಗಳಾದ ಕರ್ತೃತ್ವ, ಭೋಕ್ತೃತ್ವಗಳು ಆತ್ಮನಲ್ಲಿ ಅಧ್ಯಾಸವಾಗುವುದಕ್ಕೆ ಧರ್ಮಿಸಹಿತ ಧರ್ಮಾ ಧ್ಯಾಸವೆಂದು ಹೆಸರು.

ಅಂತಃಕರಣವೆಂದರೆ ನಾನು ಎಂಬುವ ವೃತ್ತಿ. ಆತ್ಮನು ಆ ವೃತ್ತಿ ಗಿಂತಲೂ ಬೇರೆಯಾದರೂ ನಾನೆಂಬ ವೃತ್ತಿಯ ಧರ್ಮಗಳಾದ ಕರ್ತೃತ್ವ ಭೋಕ್ತೃತ್ವಗಳನ್ನು ನಾನೆಂಬ ವೃತ್ತಿಗೆ ಸಾಕ್ಷಿಯಾದ ಆತ್ಮನಲ್ಲಿ ಅಧ್ಯಾಸ ಮಾಡುವುದು.

ವಿಚಾರ ಮಾಡಿದರೆ ನಾನೆಂಬ ಆತ್ಮನು ಕರ್ತನೂ ಅಲ್ಲ, ಭೋಕ್ತನೂ ಅಲ್ಲ. ಹೇಗೆಂದರೆ – ಸುಷುಪ್ತಿಯಲ್ಲಿ ಆತ್ಮನಿದ್ದರೂ ಕರ್ತೃತ್ವ ಭೋಕ್ತೃತ್ವದ ಅಧ್ಯಾಸವಿಲ್ಲ. ಹೀಗೆ ದಿನದಿನವೂ ನಾನು ಅಕರ್ತಾ ಅಭೋಕ್ತನೆಂದು ಅನುಭವಿಸುತ್ತಿದ್ದರೂ, ನಾನು ಕರ್ತ, ನಾನು ಭೋಕ್ತನೆಂಬ ಅಧ್ಯಾಸ ಬಿಡುವುದಿಲ್ಲ.

ಪ್ರ ೧೧೪ : **ಅನ್ಯತರಾಧ್ಯಾಸವೆಂದರೇನು ?**

ಉ : ಯಾವ ಅಧ್ಯಾಸದಲ್ಲಿಯೇ ಆಗಲಿ, ಅನಾತ್ಮದಲ್ಲಿ ಆತ್ಮನ ಅಧ್ಯಾಸವಾಗುವುದಿಲ್ಲ. ಆತ್ಮನಲ್ಲಿ ಅನಾತ್ಮದ ಅಧ್ಯಾಸವಾಗುತ್ತದೆ.

ಹೇಗೆಂದರೆ : ಕೇವಲ ಸಂಬಂಧಾಧ್ಯಾಸದಲ್ಲಿ ಸಂಬಂಧ ವಸ್ತುಗಳು

ಮಾತ್ರ ಆತ್ಮನಲ್ಲಿ ಅಧ್ಯಾಸವಾಗಿದೆ. ಸಂಬಂಧೀಸಹಿತ ಸಂಬಂಧಿ ಅಧ್ಯಾಸ, ಸಂಬಂಧಿ ಮತ್ತು ಸಂಬಂಧ ಎರಡೂ ಅನಾತ್ಮಗಳೇ. ಅವು ಆತ್ಮನಲ್ಲಿ ಅಧ್ಯಾಸವಾಗಿವೆ. ಅವುಗಳಲ್ಲಿ ಆತ್ಮನು ಅಧ್ಯಾಸವಾಗಿಲ್ಲ.

ಕೇವಲ ಧರ್ಮಾಧ್ಯಾಸದಲ್ಲಿಯೂ ದೇಹದ ಮತ್ತು ಇಂದ್ರಿಯಗಳ ಧರ್ಮಗಳು ಅನಾತ್ಮಗಳೇ, ಅವು ಆತ್ಮನಲ್ಲಿ ಅಧ್ಯಾಸವಾಗುತ್ತವೆ. ಆತ್ಮನು ಅವುಗಳಲ್ಲಿ ಅಧ್ಯಾಸವಾಗಿಲ್ಲ.

ಧರ್ಮ ಸಹಿತ ಧರ್ಮಿಾಧ್ಯಾಸ ಆದಲ್ಲಿ ಧರ್ಮಿ ಮತ್ತು ಧರ್ಮ ಎರಡೂ ಅನಾತ್ಮಗಳೇ. ಧರ್ಮಿಯೆಂದರೆ ಶರೀರ ಇಂದ್ರಿಯಗಳು ಧರ್ಮವೆಂದರೆ ಅವುಗಳು ಮಾಡುವ ಕರ್ಮಗಳು. ಆತ್ಮನಲ್ಲಿ ಅನಾತ್ಮ ಪದಾರ್ಥಗಳ ಅಧ್ಯಾಸವಾಗಿವೆ. ಆತ್ಮನು ಅವುಗಳಲ್ಲಿ ಅಧ್ಯಾಸವಾಗಿಲ್ಲ. ಅರ್ಥಾತ್ ಚೇತನವು ಅಧ್ಯಾಸವಾಗಲಾರದು. ಜಡ ಪದಾರ್ಥಗಳೇ ಅಧ್ಯಾಸವಾಗುವುದು.

ಆದುದರಿಂದ ಅನಾತ್ಮದಲ್ಲಿ ಆತ್ಮನ ಅಧ್ಯಾಸವಾಗುವುದಿಲ್ಲ. ಆತ್ಮನಲ್ಲಿ ಅನಾತ್ಮದ ಅಧ್ಯಾಸವಾಗುತ್ತದೆ. ಇದುವೇ ಅನ್ಯತರಾಧ್ಯಾಸ.

ಪ್ರ ೧೧೫ : **ಅನ್ಯೋನ್ಯಾಧ್ಯಾಸವೆಂದರೇನು ?**

ಉ : ಅನ್ಯೋನ್ಯಾಧ್ಯಾಸವೆಂದರೇನು, ಒಂದು ಮತ್ತೊಂದರಲ್ಲಿ ಅಧ್ಯಾಸವಾಗುವುದು. ಈ ಅಧ್ಯಾಸವನ್ನು ಬಿಡಿಸಿಕೊಳ್ಳುವುದು ಬಹಳೇ ಪ್ರಾಮುಖ್ಯವಾದದ್ದು. ಇದನ್ನು ಸರ್ವರೂ ತಿಳಿದುಕೊಳ್ಳಬೇಕು.

ಉದಾ : ''ತಪ್ತಾಯಃಪಿಂಡ''–ಕಾದ ಕಬ್ಬಿಣದ ಗುಂಡಿನಲ್ಲಿ– ಕಬ್ಬಿಣದ ಧರ್ಮವು ಅಗ್ನಿಯಲ್ಲೂ. ಅಗ್ನಿಯ ಧರ್ಮವು ಕಬ್ಬಿಣದಲ್ಲೂ ಅಧ್ಯಾಸವಾಗಿದೆ.

ಹೇಗೆಂದರೆ, ಕಾದ ಕಬ್ಬಿಣದ ಗುಂಡನ್ನು ಅಡಿಗಲ್ಲಿನ ಮೇಲಿಟ್ಟು ಚಮ್ಮಟಿಗೆಯಿಂದ ಹೊಡೆದರೆ ಕಿಡಿಗಳು ಹಾರುತ್ತವೆ. ನೋಡಿದವರು ಬೆಂಕಿ ಕಿಡಿಗಳು ಹಾರುತ್ತವೆ ಎಂದು ತಿಳಿಯುತ್ತಾರೆ. ಆದರೆ ಅಲ್ಲಿ ಹಾರುವುದು ಕಬ್ಬಿಣದ ಚೂರುಗಳು. ಕಾದ ಕಬ್ಬಿಣದ ಗುಂಡನ್ನು ಮುಟ್ಟಿದರೆ ಸುಡುತ್ತದೆ ಎನ್ನುತ್ತಾರೆ. ಅಲ್ಲಿ ಸುಡುವ ಧರ್ಮವು ಅಗ್ನಿಯದೇ ಹೊರತು ಕಬ್ಬಿಣದ ಧರ್ಮವಲ್ಲ. ಪರಂತು ಕಬ್ಬಿಣದಲ್ಲಿ ಅಗ್ನಿಯ ಧರ್ಮ ಅಧ್ಯಾಸವಾದಂತಾಯಿತು.

ಪ್ರ ೧೧೬ : **ದೃಷ್ಟಾಂತವೇನು ?**

ತಪ್ತಾಯಃ ಪಿಂಡದಂತೆ ಅಹಂಕಾರಾದಿ ಧರ್ಮಗಳು ಆತ್ಮನಲ್ಲಿ ಪರಸ್ಪರ ಅಧ್ಯಾಸವಾಗಿವೆ. ಅಂದರೆ ಅಹಂಕಾರದ ಧರ್ಮವು ಆತ್ಮನಲ್ಲಿಯೂ, ಆತ್ಮನ ಧರ್ಮವು ಅಹಂಕಾರದಲ್ಲಿಯೂ ತೋರುತ್ತದೆ.

ಹೇಗೆಂದರೆ – ಸತ್ತು, ಚಿತ್ತು, ಆನಂದ, ಅದ್ವೈತ ಆತ್ಮನ ಧರ್ಮಗಳು. ಅನೃತ, ಜಡ, ದುಃಖ, ದ್ವೈತಗಳು ಅಹಂಕಾರ ಧರ್ಮಗಳು. ಇವುಗಳಲ್ಲಿ ಅಹಂಕಾರ ಧರ್ಮಗಳಾದ ಅಸತ್ತು, ಜಡವೆಂಬೆರಡು ಆತ್ಮನ ಧರ್ಮಗಳಾದ ಸತ್ತು, ಚಿತ್ತುಗಳನ್ನು ಆವರಿಸಿ, ಅಹಂಕಾರವು ಇದೆ, ತೋರುತ್ತಿದೆ ಎಂಬ ರೂಪದಲ್ಲಿ ಭಾಸಿಸುತ್ತದೆ. ಅನಾತ್ಮ ಧರ್ಮಗಳಾದ ದುಃಖ ದ್ವೈತವೆಂಬೆರಡು ಆತ್ಮನ ಧರ್ಮಗಳಾದ ಆನಂದ – ಅದ್ವೈತಗಳನ್ನು ಆವರಿಸಿ, ನಾನು ದುಃಖಿ, ನಾನು ಪರಿಚ್ಛಿನ್ನ ಎಂಬ ರೂಪದಲ್ಲಿ ವ್ಯವಹಾರದಲ್ಲಿ ಭಾಸಿಸುತ್ತವೆ.

ಈ ಪ್ರಕಾರ ಆತ್ಮಾನಾತ್ಮಗಳ ಪರಸ್ಪರ ಅನ್ಯೋನ್ಯಾಧ್ಯಾಸವಾಗಿವೆ.

ಪ್ರ ೧೧೭ : **ಇದನ್ನು ತಿಳಿಯುವುದರಿಂದಾಗುವ ಪ್ರಯೋಜನವೇನು ?**

ಉ : ಆತ್ಮನಿಗೆ ಅಹಂಕಾರಾದಿ ಅನಾತ್ಮ ಧರ್ಮಗಳ ಸಂಗವು ತ್ರಿಕಾಲದಲ್ಲೂ ಇರುವುದಿಲ್ಲವೆಂಬುದೇ ಪ್ರಯೋಜನ.

ಉದಾ : ಕಾದ ಕಬ್ಬಿಣದ ಗುಂಡನ್ನು ಚಮ್ಮಟಿಗೆಯಿಂದ ಹೊಡೆದರೆ ಆ ಪೆಟ್ಟು ಬೀಳುವುದು ಕಬ್ಬಿಣಕ್ಕೇ ಹೊರತು ಅಗ್ನಿಗಲ್ಲ. ಇದರಂತೆ ಅಧ್ಯಾಸ ರೂಪವಾದ ಪ್ರಪಂಚ ಧರ್ಮಗಳೂ, ಗುಣದೋಷಗಳೂ ಅಧಿಷ್ಠಾನವಾದ ಆತ್ಮನಿಗೆ ತ್ರಿಕಾಲದಲ್ಲಿಯೂ ಸಂಬಂಧವಾಗಿಲ್ಲ. ಇದುವೇ ಅನ್ಯೋನ್ಯಾಧ್ಯಾಸದ ರೀತಿ.

ಈ ರೀತಿ ವಿಚಾರದಿಂದ ಅನ್ಯೋನ್ಯಾಧ್ಯಾಸವನ್ನು ಬಿಡಿಸಿಕೊಳ್ಳುವುದರಿಂದ ದೇಹದ ಧರ್ಮಗಳು ತನಗಿಲ್ಲವೆಂತಲೂ, ಸಚ್ಚಿದಾನಂದ ರೂಪ ಆತ್ಮನೇ ತಾನೆಂತಲೂ ತಿಳಿದುಬರುವುದೇ ಪ್ರಯೋಜನ.

ಈ ಅಧ್ಯಾಸದ ಸ್ವರೂಪವನ್ನು ಮುಮುಕ್ಷುಗಳು ಸಾವಧಾನವಾಗಿ ತಿಳಿದು, ಯೋಚಿಸಿ, ಮನನ ಮಾಡಿ, ಅನುಭವಕ್ಕೆ ತಂದುಕೊಂಡು ಜೀವನ್ಮುಕ್ತರಾಗಬೇಕು.

ಓಂ ತತ್ಸತ್

ಇಲ್ಲಿಗೆ "ಪ್ರಪಂಚ ಮಿಥ್ಯತ್ವ ಪ್ರಕರಣ" ಎಂಬ ಆರನೇ ಕಲಾ ಸಮಾಪ್ತಿ.

ಓಂ

ನಮೋ ಭಗವತೇ ಶಂಕರಾನಂದಾಯ

**ಸಪ್ತಮ ಕಲಾ ಪ್ರಾರಂಭಃ**

# ಆತ್ಮನ ವಿಶೇಷಣಗಳು

ಹಿಂದಿನ ಆರು ಕಲಾಗಳನ್ನು ಪಠನ ಪಾಠನ ಮಾಡುವುದಕ್ಕೆ ಅವಕಾಶ ವನ್ನು ಕೊಟ್ಟ ಗ್ರಂಥಕರ್ತರಾದ ಶ್ರೋತ್ರೀಯ ಬ್ರಹ್ಮನಿಷ್ಠರಾದ ಪಂಡಿತ ಪೀತಾಂಬರಜೀಯವರಿಗೆ ಹೃತ್ಪೂರ್ವಕ ನಮಸ್ಕಾರಗಳು.

ಪ್ರ ೧ : **ಆತ್ಮನ ವಿಶೇಷಣ ಎಷ್ಟು ವಿಧ ?**

ಉ : ಎರಡು ವಿಧ.

ಪ್ರ ೨ : **ಅವು ಯಾವುವು ?**

ಉ : ೧. ವಿಧೇಯ ವಿಶೇಷಣ, ೨. ನಿಷೇಧ್ಯ ವಿಶೇಷಣ.

ಪ್ರ ೩ : **ವಿಧೇಯ ವಿಶೇಷಣವೆಂದರೇನು ?**

ಉ : ಸಾಕ್ಷಾತ್ತಾಗಿ ಬೋಧಿಸುವುದು ವಿಧೇಯ ವಿಶೇಷಣ.

ಪ್ರ ೪ : **ಹಾಗೆಂದರೇನು ?**

ಉ : ''ಸಧವಾ ಸ್ತ್ರೀ'' ಅಂದರೆ ಈ ಪದವು ವಿಧವಾ ಸ್ತ್ರೀಯನ್ನು ನಿಷೇಧಿಸುತ್ತಾ, ಸೌಭಾಗ್ಯವತಿಯಾದ ಸ್ತ್ರೀಯನ್ನು ಸಾಕ್ಷಾತ್ತಾಗಿ ಬೋಧಿಸುತ್ತದೆ.

ಪ್ರ ೫ : **ಇದಕ್ಕೆ ದ್ರಾಷ್ಟಾಂತವೇನು ?**

ಉ : ಇದರಂತೆ ಸತ್ತು ಚಿತ್ತು ಮೊದಲಾದ ಆತ್ಮನ ವಿಶೇಷಣಗಳು, ಅಸತ್ತು ಜಡ ಮೊದಲಾದ ಪ್ರಪಂಚ ಸಂಬಂಧವಾದ ವಿಶೇಷಣಗಳನ್ನು ನಿಷೇಧಿಸುವುದಲ್ಲದೆ ಬ್ರಹ್ಮವನ್ನು ಸಾಕ್ಷಾತ್ತಾಗಿ ಬೋಧಿಸುತ್ತವೆ.

ಪ್ರ ೬ : **ನಿಷೇಧ್ಯ ವಿಶೇಷಣಗಳೆಂದರೇನು ?**

ಉ : ಪ್ರಪಂಚವನ್ನು ನಿಷೇಧ ಮಾಡುವುದರ ದ್ವಾರ ಬೋಧಿಸುವ ವಿಶೇಷಣಗಳು.

ಪ್ರ ೭ : **ಹಾಗೆಂದರೇನು ?**

ಉ : ''ಅವಿಧವಾ ಸ್ತ್ರೀ'' ಎಂಬ ಪದವು ವಿಧವಾ ಸ್ತ್ರೀಯನ್ನು ನಿಷೇಧ ಮಾಡುವುದರ ಮೂಲಕ ತದ್ವಿಲಕ್ಷಣವಾದ ಸೌಭಾಗ್ಯವತಿಯಾದ ಸ್ತ್ರೀಯನ್ನು ಬೋಧಿಸುತ್ತದೆ.

ದಾರ್ಷ್ಟಾಂತ : ''ಅನಂತ'' ಮೊದಲಾದ ಶಬ್ದಗಳು ಆತ್ಮನಿಗೆ ಸಂಬಂಧಿಸಿದ ನಿಷೇಧ್ಯ ವಿಶೇಷಣಗಳು. ಅವು ಅಂತ್ಯವುಳ್ಳ ಪ್ರಾಪಂಚಿಕ ಪದಾರ್ಥಗಳ ಧರ್ಮವನ್ನು ನಿಷೇಧಿಸುವುದರ ಮೂಲಕ ಅದಕ್ಕೆ ವಿಲಕ್ಷಣ ವಾದ, ಬ್ರಹ್ಮಸ್ವರೂಪವಾದ ಆತ್ಮವನ್ನು ಬೋಧಿಸುತ್ತವೆ. ಈ ಕಾರಣ ಗಳಿಂದ ಇವುಗಳಿಗೆ ನಿಷೇಧ್ಯ ವಿಶೇಷಣವೆನ್ನುತ್ತಾರೆ.

ಪ್ರ ೮ : **ಆತ್ಮನ ವಿಧೇಯ ವಿಶೇಷಣಗಳು ಎಷ್ಟು?**

ಉ : ಆತ್ಮನ ವಿಧೇಯ ವಿಶೇಷಣಗಳು ಅನೇಕವಾಗಿವೆ. ಆದರೂ ಅವುಗಳನ್ನು ಕ್ರೋಢೀಕರಿಸಿ (ಸಂಕ್ಷೇಪ ಮಾಡಿ) ಹತ್ತನ್ನು ಮಾತ್ರ ಇಲ್ಲಿ ಹೇಳಿದೆ :

೧. ಸತ್ತು, ೨. ಚಿತ್ತು, ೩. ಆನಂದ, ೪. ಬ್ರಹ್ಮ, ೫. ಸ್ವಯಂ ಪ್ರಕಾಶ, ೬. ಕೂಟಸ್ಥ, ೭. ಸಾಕ್ಷಿ, ೮. ದ್ರಷ್ಟ, ೯. ಉಪದ್ರಷ್ಟ, ೧೦. ಏಕ.

ಪ್ರ ೯ : **ಆತ್ಮನು ಸದ್ರೂಪನು ಅಂದರೇನು ?**

ಉ : ಯಾವ ವಸ್ತುವಿಗೆ ಜ್ಞಾನದಿಂದಲೇ ಆಗಲಿ, ಮತ್ತೆ ಯಾವುದ ರಿಂದಲೇ ಆಗಲಿ, ನಿವೃತ್ತಿಯಾಗುವುದಿಲ್ಲವೋ ಅದೇ ಸತ್. ಇದನ್ನೇ ಶಾಸ್ತ್ರಗಳಲ್ಲಿ ''ತ್ರಿಕಾಲಾಬಾಧ್ಯಂಸತ್'' ಎಂದು ಹೇಳಿದೆ. ಆದುದರಿಂದ ಆತ್ಮನು ಮೂರೂ ಕಾಲಗಳಲ್ಲಿ ಬಾಧೆಯಾಗದಿರುವ ವಸ್ತುವೆಂದು ಶಾಸ್ತ್ರ ಕಾರರು ನಿರ್ಣಯಿಸಿರುತ್ತಾರೆ.

ಪ್ರ ೧೦ : **ಉದಾಹರಣೆ ಏನು ?**

ಉ : ಉಪಲಕ್ಷಣಾತ್ಮಕವಾಗಿ ಅವಸ್ಥಾತ್ರಯಗಳನ್ನು ವಿಮರ್ಶಿಸೋಣ. ಮೂರೂ ಅವಸ್ಥೆಗಳಲ್ಲಿಯೂ ಆತ್ಮನು ಇದ್ದಾನೆ. ಮೂರೂ ಅವಸ್ಥೆ ಗಳು ಬಾಧೆಯಾದ ಮೇಲೂ ಆತ್ಮನಿದ್ದಾನೆ. ಮೂರೂ ಅವಸ್ಥೆಗಳು ಬರು

ವುದಕ್ಕೆ ಮೊದಲೂ ಇದ್ದಾನೆ. ಆದ್ದರಿಂದ ಅವನು ಸದ್ರೂಪನು. ಛಾಂದೋಗ್ಯೋಪನಿಷತ್ತಿನಲ್ಲಿಯೂ ಸಹ ''ಸದೇವ ಸೌಮ್ಯ ಇದಮುಗ್ರ ಆಸೀತ್'' ಎಂದು ಹೇಳಿದೆ. ಈ ವಾಕ್ಯಕ್ಕೆ ಸತ್ ಎಂದು ತಾತ್ಪರ್ಯ.

ಪ್ರ ೧೧ : **ಆತ್ಮನು ಚಿದ್ರೂಪನೆಂದರೇನು ?**

ಉ : ಅಲುಪ್ತ ಪ್ರಕಾಶವುಳ್ಳದ್ದು ''ಚಿತ್''.

ಪ್ರ ೧೨ : **ಅಲುಪ್ತ ಪ್ರಕಾಶವೆಂದರೇನು ?**

ಉ : ''ಲುಪ್ತವಿಲ್ಲದ ಪ್ರಕಾಶ'' ಅರ್ಥಾತ್ ಲೋಪವಿಲ್ಲದ ಪ್ರಕಾಶ. ಆತ್ಮನ ಪ್ರಕಾಶಕ್ಕೆ ಯಾವಾಗಲೂ ಲೋಪವಿಲ್ಲೆಂದು ಅರ್ಥ.

೨ನೇ ಅರ್ಥ : ಆತ್ಮನು ಸ್ವಯಂ ನಿರಂತರ ಪ್ರಕಾಶವುಳ್ಳ ಸ್ವರೂಪ. ಆದುದರಿಂದ ''ಚಿತ್''.

೩ನೇ ಅರ್ಥ : ತನ್ನ ಬೆಳಕಿನಲ್ಲಿ ತಾನು ಬೆಳಗಿ, ತನ್ನಲ್ಲಿ ಕಲ್ಪಿತವಾದ ಎಲ್ಲಾ ಪದಾರ್ಥಗಳನ್ನು ಮತ್ತೊಂದು ಪ್ರಕಾಶದ ಅಪೇಕ್ಷೆಯಿಲ್ಲದೆ ಬೆಳಗುವುದು.

೪ನೇ ಅರ್ಥ : ''ಅದೃಶ್ಯತ್ವೇ ಸತಿ ಅಪರೋಕ್ಷತ್ವಂ ಸ್ವಯಂಪ್ರಕಾಶಂ'' ಅಂದರೆ ದೃಶ್ಯವಾಗದೆ ಅಪರೋಕ್ಷವಾಗಿರುವುದು, ಸ್ವಯಂಪ್ರಕಾಶವಾದುದು. ಅದೇ "ಚಿತ್.'' ಇದೇ ವಿಷಯವನ್ನು ಕಠೋಪನಿಷತ್ತಿನ ೨ ಅ. ೨ ರಲ್ಲಿಯ ೧೫ನೇ ಮಂತ್ರದಲ್ಲಿ ಹೀಗೆ ಹೇಳಿದೆ :

**ನತತ್ರ ಸೂರ್ಯೋ ಭಾತಿನಚಂದ್ರತಾರಕಂ**
**ನೇಮಾ ವಿದ್ಯುತೋ ಭಾಂತಿ ಕುತೋಯಮಗ್ನಿಃ ।**
**ತಮೇವಭಾಂತ ಮನುಭಾತಿ ಸರ್ವಂ**
**ತಸ್ಯಭಾಸಾ ಸರ್ವಮಿದಂ ವಿಭಾತಿ ॥**

ಅರ್ಥ : ಅಲ್ಲಿ, ಅಂದರೆ ಆತ್ಮನನ್ನು, ಸೂರ್ಯನೂ ಪ್ರಕಾಶಿಸುವುದಿಲ್ಲ. ಚಂದ್ರ ನಕ್ಷತ್ರಗಳೂ ಪ್ರಕಾಶಿಸುವುದಿಲ್ಲ. ಈ ಅಗ್ನಿಯು ಪ್ರಕಾಶಿಸುವುದೆಲ್ಲಿ ? ಸ್ವಯಂಪ್ರಕಾಶನಾದ ಅವನನ್ನೇ ಎಲ್ಲವೂ ಅನುಸರಿಸಿ ಪ್ರಕಾಶಿಸುತ್ತಿರುವುದು. ಇದೇ ವಿಷಯವನ್ನು ಶ್ರೀಮದ್ಭಗವದ್ಗೀತೆಯು ೧೫ನೇ ಅಧ್ಯಾಯದ ೬ನೇ

ಶ್ಲೋಕದಲ್ಲಿ "ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ" ಎಂದು ಹೇಳಿದೆ. ಈ ವಾಕ್ಯಕ್ಕೆ ಆತ್ಮನು ಸ್ವಯಂಪ್ರಕಾಶನೆಂದರ್ಥ.

ಮೇಲೆ ಹೇಳಿದವುಗಳೆಲ್ಲವೂ ಆತ್ಮನ ಚಿದ್ರೂಪಗಳು.

ಪ್ರ ೧೩ : **ಆತ್ಮನು ಆನಂದರೂಪನು ಅಂದರೇನು ?**

ಉ : ಆತ್ಮನು ಪರಮ ಪ್ರೇಮಾಸ್ಪದನು. ಅಂದರೆ ಸರ್ವೋತ್ತಮ ಪ್ರೀತಿಗೆ ವಿಷಯನಾದುದರಿಂದ ಆನಂದಸ್ವರೂಪನೆಂದು ಹೇಳಿಸಿಕೊಳ್ಳುತ್ತಾನೆ.

೨ನೇ ಲಕ್ಷಣ : ಆತ್ಮನಲ್ಲಿ, ಅಂದರೆ ತಮ್ಮ ಸ್ವರೂಪದಲ್ಲಿ, ಪ್ರತಿಯೊಬ್ಬರಿಗೂ ಪರಮ ಪ್ರೀತಿಯಿರುವುದರಿಂದ ಆನಂದರೂಪನೆಂದು ಎನಿಸಿಕೊಳ್ಳುತ್ತಾನೆ.

ಪ್ರಮಾಣ : ಯಾಜ್ಞವಲ್ಕ್ಯ ಮಹರ್ಷಿಗಳು ತಮ್ಮ ಪತ್ನಿಯಾದ ಮೈತ್ರೇಯಿಯನ್ನು ಕುರಿತು "ಮೈತ್ರೇಯಿ, ಪತ್ನಿಯು ಪತಿಯನ್ನು ವಿಶೇಷವಾಗಿ ಪ್ರೇಮಿಸುತ್ತಾಳೆ. ಆ ಪ್ರೇಮವು ನಿಜವಾಗಿ ನೋಡಿದರೆ ತನ್ನ ಕೋರಿಕೆಯನ್ನು ಪೂರ್ಣ ಮಾಡಿಕೊಳ್ಳುವುದಕ್ಕೆ" ಎಂದು ಹೇಳಿದ್ದಾರೆ.

ಅದರಂತೆ ಪತಿಯು ಪತ್ನಿಯನ್ನು ವಿಶೇಷವಾಗಿ ಪ್ರೇಮಿಸುತ್ತಾನೆಂದರೆ, ಪತ್ನಿಯ ಇಚ್ಛೆಯನ್ನು ಪೂರ್ಣ ಮಾಡುವುದಕ್ಕಾಗಿ ಅಲ್ಲ ; ತನ್ನ ಇಚ್ಛೆಯನ್ನು ಪೂರ್ಣ ಮಾಡಿಕೊಳ್ಳುವುದಕ್ಕೆ. ಅದರಂತೆ ಧನದ ಮೇಲಿನ ಪ್ರೀತಿಯು ಧನಕ್ಕಾಗಿ ಅಲ್ಲ. ಆ ಧನವು ತನ್ನ ಇಷ್ಟಸಿದ್ಧಿಯನ್ನು ಉಂಟು ಮಾಡುವುದರಿಂದಲೇ ಪ್ರೇಮಿಸಲ್ಪಡುತ್ತದೆ.

ಸಾರಾಂಶವೇನೆಂದರೆ : ಪ್ರಪಂಚದ ಯಾವುದೇ ಪದಾರ್ಥದ ಮೇಲೆ ಪ್ರೇಮ ತೋರಿಸುತ್ತಿದ್ದರೂ ಅದು ಪ್ರಪಂಚಕ್ಕಾಗಿ ಅಲ್ಲ, ತನಗಾಗಿ. ಇದರಂತೆ ಯಾಜ್ಞವಲ್ಕ್ಯ ಮಹರ್ಷಿಗಳು ಹನ್ನೊಂದು ವಿಧವಾಗಿ ಹೇಳಿರುತ್ತಾರೆ. ಇದರ ಮೇಲೆ ನೋಡಿದರೆ, ಆತ್ಮನು ಸರ್ವ ಪದಾರ್ಥಗಳಿಗಿಂತಲೂ ಪರಮ ಪ್ರೇಮಾಸ್ಪದನು.

ಆತ್ಮನ ಆನಂದಸ್ವರೂಪಕ್ಕೆ ೨ ಲಕ್ಷಣ.

ಪ್ರ ೧೪ : **ಆನಂದಸ್ವರೂಪನೆಂದರೇನು ?**

ಉ : ನಿತ್ಯವಾದ, ನಿರತಿಶಯವಾದ, ನಿರುಪಾಧಿಕವಾದ ಸುಖವೇ

ಆನಂದ. ಈ ಲಕ್ಷಣವು ಆತ್ಮನಲ್ಲಿ ಅಲ್ಲದೆ ಬೇರೆ ಇನ್ನೆಲ್ಲಿಯೂ ತೋರುವುದಿಲ್ಲ. ಪ್ರಪಂಚದ ಯಾವ ಸುಖವೂ ನಿತ್ಯವಲ್ಲ, ನಿರತಿಶಯವೂ **ಅಲ್ಲ**, ನಿರುಪಾಧಿಕವೂ ಅಲ್ಲ.

ಪ್ರ ೧೫ : **ಇದಕ್ಕೆ ಅನುಭವವೇನು ?**

ಉ : ಸುಷುಪ್ತಿಯೇ ಅನುಭವ. ಮಲಗಿ ಎದ್ದ ಮನುಷ್ಯನನ್ನು ಕೇಳಿದರೆ ನಾನು ಸುಖವಾಗಿ ಮಲಗಿದ್ದೆನೆಂದು ಹೇಳುತ್ತಾನೆ. ಈ ಅನುಭವದ ಮೇಲಿಂದ ಸುಷುಪ್ತಿಯಲ್ಲಿ ಆತ್ಮನು ಸುಖ ಸ್ವರೂಪನೆಂದು ಹೇಳಿದಂತಾಯಿತು.

ಶಂಕಾ : ಸುಷುಪ್ತಿಯಲ್ಲಿ ದುಃಖದ ಅಭಾವವಿದೆ, ಸುಖವಿಲ್ಲ ಎಂದರೆ ಬರುವ ದೋಷ ಏನು ?

ಸಮಾಧಾನ : ಮಲಗಿ ಎದ್ದವನು ದುಃಖದ ಅಭಾವವನ್ನು ನೋಡಿದೆನೆಂದು ಹೇಳುವುದಿಲ್ಲ. ಸುಖದ ಭಾವವನ್ನು ನೋಡಿದೆನೆಂದು ಹೇಳುತ್ತಾನೆ. ಈ ಅನುಭವದ ಮೇಲೆ ನೋಡಿದರೆ, ಸುಷುಪ್ತಿಯಲ್ಲಿ ಸುಖದ ಭಾವವೊಂದೇ ಹೊರತು ದುಃಖದ ಅಭಾವವಿಲ್ಲವೆಂದು ಗೊತ್ತಾಗುತ್ತದೆ.

ಪ್ರ ೧೬ : **ಸುಷುಪ್ತಿಯ ಸುಖವು ಎಷ್ಟು ವಿಧವಾಗಿದೆ ?**

ಉ : ಮೂರು ವಿಧ.

ಪ್ರ ೧೭ : **ಅವು ಯಾವುವು ?**

ಉ : ೧. ಸುಷುಪ್ತಿಯ ಸುಖವು ನಿತ್ಯವಾದದ್ದು.
೨. ಸುಷುಪ್ತಿಯ ಸುಖವು ನಿರುಪಾಧಿಕವಾದದ್ದು.
೩. ಸುಷುಪ್ತಿಯ ಸುಖವು ನಿರತಿಶಯವಾದದ್ದು.

ಪ್ರ ೧೮ : **ಸುಷುಪ್ತಿಯ ಸುಖವು ನಿತ್ಯವಾದದ್ದು ಅಂದರೇನು ?**

ಉ : ಅದು ಸದಾ ಒಂದೇ ನಮೂನೆಯಾಗಿರುವುದರಿಂದ ಆ ಸುಖವು ನಿತ್ಯವಾದದ್ದು.

ಪ್ರ ೧೯ : **ಸುಷುಪ್ತಿಯ ಸುಖವು ನಿರುಪಾಧಿಕವಾದದು ಅಂದರೇನು ?**

ಉ : ವಿಷಯಗಳೆಂಬ ಉಪಾಧಿಗಳ ಅಪೇಕ್ಷೆಯಿಲ್ಲದೆ ನಿರ್ವಿಷಯವಾದುದರಿಂದ ಆ ಸುಖವು ನಿರುಪಾಧಿಕವಾದದ್ದು.

ಪ್ರ ೨೦ : **ಸುಷುಪ್ತಿಯ ಸುಖವು ನಿರತಿಶಯವಾದುದು ಅಂದರೇನು ?**

ಉ : ರಾಜನ ಮತ್ತು ಭಿಕ್ಷುಕನ ಸುಷುಪ್ತಿಯ ಸುಖದಲ್ಲಿ ಯಾವ ತಾರತಮ್ಯವೂ ಇಲ್ಲದಿರುವುದರಿಂದ ಆ ಸುಖವು ನಿರತಿಶಯವಾದದ್ದು. ಸುಷುಪ್ತಿಯಲ್ಲಿ, ಅಂದರೆ ಆತ್ಮನಲ್ಲಿ, ಈ ಮೂರೂ ಸುಖಗಳು ತೋರುವುದರಿಂದ ಆನಂದಸ್ವರೂಪನು.

ಮತ್ತೊಂದು ವಿಚಾರ : ಆತ್ಮನು ಆನಂದವನ್ನು ಭೋಗಿಸುವವನಲ್ಲ. ಆನಂದಸ್ವರೂಪನೇ ಆಗಿದ್ದಾನೆ. ಅವನ ಆನಂದದ ಒಂದಂಶದಿಂದಲೇ ಪ್ರಪಂಚದ ಪ್ರತಿ ಪದಾರ್ಥಗಳೂ ಜೀವಿಸಿರುತ್ತವೆ.

ಇದಕ್ಕೆ ಪ್ರತ್ಯಕ್ಷ ಅನುಭವ : ರಾಜ ಮಂತ್ರಿಗಳಿಬ್ಬರು ಮಾತನಾಡಲು ಕುಳಿತಾಗ ರಾಜನು ಪ್ರಪಂಚದ ಪ್ರತಿ ಪ್ರಾಣಿಗೂ ತನ್ನ ಸಂತಾನದ ಮೇಲೆ ವಿಶೇಷ ಪ್ರೀತಿಯಿದೆ. ಅದರಲ್ಲಿಯೂ ಕೋತಿಗಳಲ್ಲಿ ಇದು ಪೂರ್ಣಾವಸ್ಥೆಗೇರಿದೆ. ಅವು ಮರಿಯು ಸತ್ತರೂ ಬಿಡದೆ ಕಚ್ಚಿಕೊಂಡು ಓಡಾಡುತ್ತವೆ ಎಂದು ಹೇಳಿದನು. ಅದಕ್ಕೆ ಮಂತ್ರಿಯು ಸಮ್ಮತಿಸಲಿಲ್ಲ. ಮಹಾರಾಜರೇ ! ತಮ್ಮ ಅಭಿಪ್ರಾಯದಲ್ಲಿ ತಪ್ಪಿದೆ. ಜಗತ್ತಿನಲ್ಲಿ ಆತ್ಮನಿಗಿಂತ ಪ್ರಿಯವಾದ ವಸ್ತುವು ಇಲ್ಲವೇ ಇಲ್ಲವೆಂದು ಹೇಳಿದನು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ, ಒಂದು ಎತ್ತರವಾದ ಸಿಮೆಂಟ್ ತೊಟ್ಟಿಯಲ್ಲಿ ಒಂದು ಮರಿಯುಳ್ಳ ಕೋತಿಯನ್ನು ತಂದು ಮೇಲಕ್ಕೆ ಬರದಂತೆ ಕಟ್ಟಿಹಾಕಿದರು. ನಂತರ ಯಂತ್ರದಿಂದ ನೀರನ್ನು ಬಿಡಲು ಆರಂಭ ಮಾಡಿದರು. ನೀರು ಏರುತ್ತಾ ಬಂದಂತೆಲ್ಲಾ ಕೋತಿಯು ತನ್ನ ಮರಿಯನ್ನು ರಕ್ಷಿಸುವುದಕ್ಕಾಗಿ ತಲೆಯ ಮೇಲೆ ಕೂಡ್ರಿಸಿಕೊಂಡಿತು. ಬಾಯಿಯವರೆಗೆ ನೀರು ಬಂತು. ಇನ್ನು ಕೋತಿಗೆ ಉಳಿಗಾಲವಿಲ್ಲವಾಯಿತು. ಅದು ತನ್ನ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ಮರಿಯನ್ನು ಕಾಲ ಕೆಳಗೆ ಹಾಕಿ ಅದರ ಮೇಲೆ ನಿಂತುಕೊಂಡಿತು! ಆಗ ಮಂತ್ರಿಯು ಸರ್ವರಿಗೂ ಯಾವುದರ ಮೇಲೆ ಪ್ರೇಮ, ಗೊತ್ತಾಯಿತೆ ? ಎಂದು ಕೇಳಿದನು. ಈ ಅನುಭವದ ಮೇಲೆ ಆತ್ಮನು ಪರಮ ಪ್ರೇಮಕ್ಕೆ ವಿಷಯನು ಎಂದು ನಿಶ್ಚಯವಾಗುತ್ತದೆ. ಅಲ್ಲದೆ ಆತ್ಮನು ಬ್ರಹ್ಮಸ್ವರೂಪನೆಂದು ತಿಳಿದುಬರುತ್ತದೆ.

ಪ್ರ ೨೧ : **ಆತ್ಮನು ಬ್ರಹ್ಮಸ್ವರೂಪನೆಂದರೇನು ?**

ಉ: ಇಲ್ಲಿಯವರೆಗೆ ಆತ್ಮನು ಸತ್ತು ಚಿತ್ತು ಆನಂದರೂಪನೆಂದು ಶಾಸ್ತ್ರಗಳಿಂದಲೂ, ಯುಕ್ತಿಗಳಿಂದಲೂ, ಅನುಭವದಿಂದಲೂ ಸಿದ್ಧವಾದಂತಾಯಿತು. ಇನ್ನು ಉಪನಿಷತ್ತುಗಳು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂದು ಬ್ರಹ್ಮಸ್ವರೂಪವನ್ನು ಪ್ರತಿಪಾದಿಸಿವೆ. ಆದ್ದರಿಂದ ಇಲ್ಲಿಯವರೆಗೆ ವರ್ಣಿಸಿದ ಸತ್ತು ಚಿತ್ತು ಆನಂದ ರೂಪನಾದ ಆತ್ಮನೇ ಬ್ರಹ್ಮನೆಂದು ನಿರ್ಣಯವಾಯಿತು.

ಪ್ರ ೨೨ : **ಬ್ರಹ್ಮವೆಂಬ ಪದಕ್ಕೆ ಅರ್ಥವೇನು ?**

ಉ : "ವ್ಯಾಪಕ"ವೆಂದರ್ಥ.

ಪ್ರ ೨೩ : **ವ್ಯಾಪಕವೆಂದರೇನು ?**

ಉ : ಯಾವ ವಸ್ತುವಿಗೆ ದೇಶ, ಕಾಲ, ವಸ್ತುಗಳಿಂದ ಅಂತವಿಲ್ಲವೋ ಅದು ವ್ಯಾಪಕ.

ಪ್ರ ೨೪ : **ಆತ್ಮನು ಬ್ರಹ್ಮಕ್ಕಿಂತ ಬೇರೆಯೆಂದರೆ ಬರುವ ದೋಷವೇನು ?**

ಉ : ಹಾಗೆಂದರೆ ಅದಕ್ಕೆ ದೇಶಕೃತ ಪರಿಚ್ಛೇದ ಉಂಟಾಗುತ್ತದೆ. ದೇಶಕೃತ ಪರಿಚ್ಛೇದ ಉಂಟಾದರೆ, ಕಾಲಕೃತ ಪರಿಚ್ಛೇದವು ತಪ್ಪಿದ್ದಲ್ಲ. ದೇಶಕೃತ – ಕಾಲಕೃತ ಎರಡೂ ಪರಿಚ್ಛೇದ ಉಂಟಾದರೆ ಆ ವಸ್ತುವು ಅನಿತ್ಯವಾಗುತ್ತದೆ. ಶಾಸ್ತ್ರದಲ್ಲಿ ಆತ್ಮನನ್ನು ಕುರಿತು ನಿತ್ಯವೆಂದು ಹೇಳಿದೆ. ಆದ್ದರಿಂದ ಆತ್ಮನು ಬ್ರಹ್ಮಕ್ಕಿಂತ ಬೇರೆಯಲ್ಲ.

ಪ್ರ ೨೫ : **ಇನ್ನು ಆತ್ಮನಿಗಿಂತ ಬ್ರಹ್ಮವು ಬೇರೆಯೆಂದರೆ ಬರುವ ದೋಷವೇನು ?**

ಉ : ಆತ್ಮನಿಗಿಂತ ಬೇರೆಯಾದದ್ದು ಅನಾತ್ಮ. ಬ್ರಹ್ಮವು ಆತ್ಮನಿಗಿಂತ ಬೇರೆಯಾದರೆ ಅದು ಅನಾತ್ಮವಾಗಬೇಕಾಗುತ್ತದೆ. ಘಟಾದಿಗಳು ಅನಾತ್ಮವಾದುದರಿಂದ ಜಡ ಪದಾರ್ಥಗಳು. ಇದರಿಂದ, ಬ್ರಹ್ಮವು ಆತ್ಮಕ್ಕಿಂತ ಬೇರೆಯಾದುದಾದರೆ ಅನಾತ್ಮವಾಗಿ ಜಡವಾಗಬೇಕಾಗುತ್ತದೆ. ಇದು ಶ್ರುತಿಗೂ ಅನುಭವಕ್ಕೂ ವಿರೋಧ. ಆದುದರಿಂದ ಸಾಧಕ ಬಾಧಕಗಳನ್ನನುಸರಿಸಿ ಆತ್ಮಕ್ಕಿಂತ ಬ್ರಹ್ಮವು ಭಿನ್ನವಲ್ಲ, ಆತ್ಮವು ಬ್ರಹ್ಮಸ್ವರೂಪವೇ ಎಂದು ತಿಳಿಯಬೇಕು.

**ಪ್ರ ೨೬ : ಆತ್ಮನು ಸ್ವಯಂ ಪ್ರಕಾಶನೆಂದರೇನು ?**

ಉ : ದೀಪದಂತೆ ಯಾವುದು ತನ್ನ ಪ್ರಕಾಶದಲ್ಲಿ ತಾನು ಪ್ರಕಾಶಿಸುತ್ತಾ ತನ್ನ ಪ್ರಕಾಶಕ್ಕೆ ಮತ್ತೊಂದು ಪ್ರಕಾಶದ ಸಹಾಯವನ್ನು ಬಯಸದೆ, ತನ್ನ ಪ್ರಕಾಶಕ್ಕೆ ಸಂಬಂಧಪಟ್ಟ ವಸ್ತುಗಳನ್ನೆಲ್ಲಾ ಪ್ರಕಾಶ ಮಾಡುವುದೋ ಅದು ಸ್ವಯಂ ಪ್ರಕಾಶ. ಇದರಂತೆ ಆತ್ಮನು ಪ್ರಕಾಶಕ್ಕೆ ಸೂರ್ಯ, ಚಂದ್ರ, ಅಗ್ನಿ, ನಕ್ಷತ್ರ ಮುಂತಾದ ಹೊರಗಿನ ಪ್ರಕಾಶವನ್ನು ಅಪೇಕ್ಷಿಸುವುದಿಲ್ಲ. ಆದುದರಿಂದ ಆತ್ಮನು ಸ್ವಯಂಪ್ರಕಾಶನು. ಭಗವದ್ಗೀತೆಯ ೧೩ನೇ ಅಧ್ಯಾಯದಲ್ಲಿ "ಜ್ಯೋತಿಷಾಮಪಿ ತಜ್ಜ್ಯೋತಿ ತಮಸಃ ಪರಮುಚ್ಯತೇ" ಎಂದು ಹೇಳಿದೆ.

ಮತ್ತೊಂದು ಲಕ್ಷಣ : ಯಾವುದು ಸದಾ ಸ್ವಯಂ ಅಪರೋಕ್ಷವಾಗಿರುವುದೋ, ಯಾವುದು ಇತರೇ ಯಾವ ಜ್ಞಾನಕ್ಕೂ ವಿಷಯವಾಗುವುದಿಲ್ಲವೋ ಅದನ್ನು ಸ್ವಯಂ ಪ್ರಕಾಶವೆನ್ನುತ್ತಾರೆ. ಇದಕ್ಕೆ ಶಾಸ್ತ್ರದಲ್ಲಿ "ಅವೇದ್ಯತ್ವೆ ಸತಿ ಅಪರೋಕ್ಷತ್ವಂ ವ್ಯವಹಾರ ಯೋಗ್ಯತ್ವಂ ಸ್ವಯಂಪ್ರಕಾಶತ್ವಂ" ಎಂದು ಲಕ್ಷಣ ವಾಕ್ಯವನ್ನು ಹೇಳಿದೆ. ಈ ಲಕ್ಷಣವನ್ನು ಅನುಸರಿಸಿ ನೋಡಿದರೆ ಆತ್ಮನು ಸದಾ ಅಪರೋಕ್ಷ ಸ್ವರೂಪನಾಗಿದ್ದು ಇತರೇ ಯಾವ ಜ್ಞಾನಕೂ ವಿಷಯನಾಗದೇ ಇರುವುದರಿಂದ ಅವನು ಸ್ವಯಂಪ್ರಕಾಶನು.

ಪ್ರ ೨೭ : **ಆತ್ಮನು ಕೂಟಸ್ಥನೆಂದರೇನು ?**

ಉ : ಗೃಹದಲ್ಲಿರುವವನು ಗೃಹಸ್ಥನೆಂಬಂತೆ, ಕೂಟದಲ್ಲಿ ಇರುವವನು ಕೂಟಸ್ಥ.

ಪ್ರ ೨೮ : **ಕೂಟವೆಂದರೇನು ?**

ಉ : ಕಮ್ಮಾರನ ಶಾಲೆಯಲ್ಲಿರುವ ಅಡಿಗಲ್ಲು. ಅದು ನಿರ್ವಿಕಾರವಾಗಿರುತ್ತದೆ. ಹೇಗೆಂದರೆ, ಕಮ್ಮಾರನು ಅಡಿಗಲ್ಲಿನ ಮೇಲೆ ಅನೇಕ ವಸ್ತುಗಳನ್ನು ಮಾಡಿದರೂ ಅದು ತಾನೇ ತಾನಾಗಿರುತ್ತದೆ. ಯಾವ ವಸ್ತುವಿನ ಆಕಾರವೂ ಆಗುವುದಿಲ್ಲ. ತಾನು ಏನೂ ಆಗದೆ ಮತ್ತೊಂದಾಗುವುದಕ್ಕೆ ಅವಕಾಶವನ್ನು ಕೊಡುವುದೇ ಅದರ ಮುಖ್ಯ ಲಕ್ಷಣ. ಇದರಂತೆ ಮನಸ್ಸೆಂಬ ಕಮ್ಮಾರನು ಆತ್ಮನೆಂಬ ಅಡಿಗಲ್ಲಿನ ಮೇಲೆ ತನ್ನ ಸಂಕಲ್ಪಕ್ಕನುಸಾರವಾಗಿ

ಅನೇಕ ವಸ್ತುಗಳನ್ನು ರಚಿಸುತ್ತಾನೆ. ಆದರೂ ಆತ್ಮನು ತಾನೇ ತಾನಾಗಿದ್ದು ಎಲ್ಲಾ ವಸ್ತುಗಳು ಆಗುವುದಕ್ಕೆ ಅವಕಾಶವನ್ನು ಕೊಡುತ್ತಾನೆ. ಕೂಟಸ್ಥ ನೆಂಬ ಪದಕ್ಕೆ ಅಚಲ, ಅಕ್ರಿಯ, ನಿರ್ವಿಕಾರನೆಂದು ಬೇರೆ ಬೇರೆ ಅರ್ಥಗಳು.

ಕೂಟಸ್ಥನೆಂಬುದಕ್ಕೆ ಮತ್ತೊಂದು ಲಕ್ಷಣ : ಕೂಟವೆಂದರೆ ಮಾಯೆ. ಸುಳ್ಳಾದ ಮಾಯೆಗೆ ಅಧಿಷ್ಠಾನನಾಗಿರುವವನು ಆತ್ಮ ; ಆದುದರಿಂದ ಅವನು ಕೂಟಸ್ಥನು.

ಪ್ರ ೨೯ : **ಆತ್ಮನು ಸಾಕ್ಷಿಯೆಂದರೇನು ?**

ಉ : ಸಾಕ್ಷಿಗೆ ಪ್ರಧಾನವಾಗಿ ಮೂರು ಲಕ್ಷಣಗಳು :

೧. ಯಾವ ಪಕ್ಷಕ್ಕೂ ಸೇರದೆ, ರಾಗ ದ್ವೇಷಗಳಿಲ್ಲದೆ ಉದಾಸೀನ ನಾಗಿರುವುದು.

೨. ಸಮೀಪದಲ್ಲಿರುವುದು.

೩. ಚೇತನನಾಗಿರುವುದು.

ಈ ಮೂರು ಲಕ್ಷಣಗಳುಳ್ಳ ಪದಾರ್ಥವು ಸಾಕ್ಷಿಯೆಂದು ಲೋಕ ವ್ಯವಹಾರದ ಸಿದ್ಧಿ. ಇದರಂತೆ ಆತ್ಮನಲ್ಲಿ ಈ ಮೂರೂ ಲಕ್ಷಣಗಳಿವೆ.

೧. ಆತ್ಮನು ದೇಹಾದಿ ಸಂಘಾತದಲ್ಲಿ ಉದಾಸೀನನಾಗಿರುತ್ತಾನೆ.

೨. ಆತ್ಮನು ದೇಹಾದಿ ಸಂಘಾತದಲ್ಲಿ ಅತ್ಯಂತ ಸಮೀಪನಾಗಿರು ತ್ತಾನೆ. ಮತ್ತು ಜಡ ದೇಹಾದಿ ಸಂಘಾತದಲ್ಲಿ ಚೇತನನಾಗಿರುತ್ತಾನೆ.

ಈ ಲಕ್ಷಣಗಳಿಂದ ಆತ್ಮನು ಸಾಕ್ಷಿ. ಶಾಸ್ತ್ರ ಪರಿಭಾಷೆಯಲ್ಲಿ ಅಂತಃ ಕರಣ ಉಪಾಧಿಯಾಗಿರುವ ಚೇತನಕ್ಕೆ ಸಾಕ್ಷಿಯೆನ್ನುತ್ತಾರೆ.

ಮತ್ತೊಂದು ಅರ್ಥ : ಅಂತಃಕರಣದಲ್ಲಿಯೂ, ಅಂತಃಕರಣದಲ್ಲಿಯ ವೃತ್ತಿಗಳಲ್ಲಿಯೂ ಇರುವ ಕೇವಲ ಚೇತನವನ್ನು ಸಾಕ್ಷಿಯೆನ್ನುತ್ತಾರೆ. ಆತ್ಮನು ಈ ವಿಧವಾಗಿಯೇ ಇರುವುದರಿಂದ ಅವನು ಸಾಕ್ಷಿ.

ಪ್ರ ೩೦ : **ಬ್ರಹ್ಮಕ್ಕೆ ಸಾಕ್ಷಿಯೆಂಬ ಹೆಸರೂ, ಅಂತಃಕರಣವನ್ನು ಬೆಳಗುವುದೆಂಬ ಕ್ರಿಯೆಯೂ ಏಕೆ ಬಂದವು ?**

ಉ : ಆಕಾಶಕ್ಕೆ ಘಟಾಕಾಶವೆಂಬ ಹೆಸರೂ, ನೀರು ತರುವುದೆಂಬ ಕ್ರಿಯೆಯೂ ಘಟದ ಉಪಾಧಿಯಿಂದ ಬಂದಂತೆ, ಬ್ರಹ್ಮಕ್ಕೆ ಸಾಕ್ಷಿಯೆಂಬ

ಹೆಸರೂ, ಅಂತಃಕರಣವನ್ನು ಬೆಳಗುವುದೆಂಬ ಕ್ರಿಯೆಯೂ ಉಪಾಧಿಯಿಂದ ಬಂದಿದೆ.

**ಪ್ರ ೩೧ : ಆತ್ಮನು ದ್ರಷ್ಟನೆಂದರೇನು ?**

ಉ : ದ್ರಷ್ಟನೆಂದರೆ ನೋಡುವವನು. ಅಂದರೆ ಕಾಣುವ ಪದಾರ್ಥಕ್ಕಿಂತ ವಿಲಕ್ಷಣನಾಗಿದ್ದು, ಯಾವ ವಿಕಾರವೂ ಆಗದೆ ನೋಡುವವನು.

**ಪ್ರ ೩೨ : ಶಾಸ್ತ್ರ ಪರಿಭಾಷೆಯಲ್ಲಿ ಕಾಣುವ ಪದಾರ್ಥವನ್ನು ಏನೆಂದು ಹೇಳುತ್ತಾರೆ ?**

ಉ : "ದೃಶ್ಯ"ವೆನ್ನುತ್ತಾರೆ. ಹೀಗೆನ್ನುವುದರಿಂದ ಆತ್ಮನು ದೃಶ್ಯ ಪದಾರ್ಥಗಳಿಗಿಂತ ಬೇರೆಯಾಗಿರುವುದರಿಂದ ದ್ರಷ್ಟನೆನಿಸುತ್ತಾನೆ.

ಇದಕ್ಕೆ ಪ್ರಮಾಣ : ಭಗವದ್ಗೀತೆಯ ೭ನೇ ಅಧ್ಯಾಯದ ೨೬ನೇ ಶ್ಲೋಕದಲ್ಲಿ ಹೀಗೆ ಹೇಳಿದೆ :

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ |**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ||**

ಅರ್ಥ : ನಾನು ಹಿಂದೆ ಆಗಿಹೋದ, ಈಗಿರುವ, ಮುಂದೆ ಬರುವ ಭೂತಗಳೆಲ್ಲವನ್ನೂ ನೋಡುತ್ತೇನೆ. ನನ್ನನ್ನು ಯಾರೂ ನೋಡಲಾರರು. ಅಂದರೆ ಇಲ್ಲಿ ಶ್ರೀಕೃಷ್ಣನು ದ್ರಷ್ಟನೆಂತಲೂ, ಭೂತಗಳು ದೃಶ್ಯವೆಂತಲೂ ಹೇಳಿದಂತಾಯಿತು. ಶ್ರೀಕೃಷ್ಣನೆಂದರೂ ಆತ್ಮನೆಂದರೂ ಒಂದೇ ಅರ್ಥ. ಆದುದರಿಂದ ಆತ್ಮನು ದ್ರಷ್ಟನೆಂದು ತಿಳಿದರೆ ಅವನು ಯಾವುದಕ್ಕೂ ಅಂಟದ ಪರಿಶುದ್ಧ ಪದಾರ್ಥವೆಂದರ್ಥ. ಇದೇ ವಿಷಯವನ್ನು ವೇದಾಂತ ಡಿಂಡಿಮವೆಂಬ ಗ್ರಂಥದಲ್ಲಿ ಶ್ರೀಮದಾಚಾರ್ಯರು ಹೀಗೆ ಹೇಳಿದ್ದಾರೆ :

**ದೃಗ್ ದೃಶ್ಯೌ ದ್ವೌ ಪದಾರ್ಥೌ ತೌ ಪರಸ್ಪರ ವಿಲಕ್ಷಣಂ |**
**ದೃಗ್ ಬ್ರಹ್ಮ ದೃಶ್ಯಂ ಮಾಯೇತಿ ವೇದಾಂತ ಡಿಂಡಿಮಃ ||**

ಅರ್ಥ : ದೃಗ್ ದೃಶ್ಯಗಳೆಂದು ಎರಡು ಪದಾರ್ಥಗಳಿವೆ. ಅವೆರಡು ಪರಸ್ಪರ ವಿಲಕ್ಷಣವಾಗಿವೆ. ಅವುಗಳಲ್ಲಿ ದೃಗ್ ಬ್ರಹ್ಮ, ದೃಶ್ಯ ಮಾಯೆಗೆ ಸೇರಿದ್ದು ಎಂಬುದು ವೇದಾಂತದ ಡಂಗುರ.

ಪ್ರ ೩೩ : **ಉಪದ್ರಷ್ಟ ಅಂದರೇನು ?**

ಉ : ಸಮೀಪದಲ್ಲಿದ್ದು ನೋಡುವವನಿಗೆ ಉಪದ್ರಷ್ಟನೆನ್ನುತ್ತಾರೆ.

ಪ್ರ ೩೪ : **ಆತ್ಮನು ದ್ರಷ್ಟನೆಂದು ಹೇಳಿದ ಮೇಲೆ ಉಪದ್ರಷ್ಟನೆಂದು ಹೇಳಲು ಕಾರಣವೇನು ?**

ಉ : ಆತ್ಮನು ದ್ರಷ್ಟನೆಂದು ಮಾತ್ರ ಹೇಳಿದರೆ ಅತಿವ್ಯಾಪ್ತಿ ದೋಷ ಬರುತ್ತದೆ.

ಪ್ರ ೩೫ : **ಎಲ್ಲಿ ಬರುತ್ತದೆ ?**

ಉ : ಎದುರಿಗೆ ಕಾಣುವ ಪುಸ್ತಕವು ದೃಶ್ಯ, ಅದನ್ನು ನೋಡುವ ಕಣ್ಣು ದ್ರಷ್ಟ. ಆತ್ಮನು ದ್ರಷ್ಟನೆಂದು ಮಾತ್ರ ಹೇಳಿದರೆ, ಕಣ್ಣೂ ಸಹ ಆತ್ಮನೆಂದು ಹೇಳಬೇಕಾಗುತ್ತದೆ. ಕಣ್ಣೂ ಸಹ ನಿಜವಾದ ದ್ರಷ್ಟನಲ್ಲ. ಮನಸ್ಸಿಗೆ ದೃಶ್ಯವಾಗುತ್ತದೆ. ಈಗ ಮನಸ್ಸು ದ್ರಷ್ಟ, ಕಣ್ಣು ದೃಶ್ಯವಾಯಿತು. ಮನಸ್ಸೂ ಸಹ ದೃಶ್ಯವಾಯಿತು. ಆಗ ಆತ್ಮನು ದ್ರಷ್ಟನೆನಿಸುತ್ತಾನೆ. ಈ ವಿಷಯವನ್ನು ತಿಳಿಸುವುದಕ್ಕೆ ಆತ್ಮನು ಉಪದ್ರಷ್ಟನೆನ್ನಬೇಕು.

ಇದೇ ವಿಷಯವನ್ನು ಭಗವದ್ಗೀತೆಯ ೧೩ನೇ ಅಧ್ಯಾಯದ ೨೨ನೇ ಶ್ಲೋಕದಲ್ಲಿ ಹೀಗೆ ಹೇಳಿದೆ :

**ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥**

ಭಗವದ್ಗೀತೆಯ ವ್ಯಾಖ್ಯಾನದಂತೆ ಯಜ್ಞ ಶಾಲೆಯಲ್ಲಿ ಯಜ್ಞಕ್ರಿಯೆಗಳನ್ನು ಮಾಡುವುದಕ್ಕಾಗಿ ಹದಿನೈದು ಜನ ಋತ್ವಿಕರು ಇರುತ್ತಾರೆ. ಹದಿನಾರನೆಯವನು ಯಜಮಾನ. ಹದಿನೇಳನೆಯವಳು ಯಜಮಾನಿ. ಈ ಹದಿನೇಳು ಜನಗಳ ಕ್ರಿಯೆಗಳನ್ನು ನಿರೀಕ್ಷಿಸುವುದಕ್ಕಾಗಿ ಹದಿನೆಂಟನೆಯವನು ಒಬ್ಬನಿರುತ್ತಾನೆ. ಅವನೇ ಉಪದ್ರಷ್ಟ. ಉಪದ್ರಷ್ಟನು ಯಾವ ಕ್ರಿಯೆಯನ್ನೂ ಮಾಡುವವನಲ್ಲ, ನೋಡುವವನು.

ದ್ರಾಷ್ಟಾಂತ : ಲಿಂಗದೇಹವು ಯಜ್ಞಶಾಲೆ. ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಪಂಚಪ್ರಾಣಗಳು ಹದಿನೈದು. ಮನಸ್ಸು ಯಜಮಾನ.

ಬುದ್ಧಿ ಯಜಮಾನಿ. ಈ ಹುನೇಳನ್ನೂ ನೋಡುವವನು ಆತ್ಮ. ಅವನೇ ಉಪದ್ರಷ್ಟ. ಅವನು ಮಾಡುವವನಲ್ಲ, ನೋಡುವವನು. ಆದುದರಿಂದ ಅವನಿಗೆ ಉಪದ್ರಷ್ಟನೆನ್ನುತ್ತಾರೆ.

ಪ್ರ ೩೬ : **ಆತ್ಮನು ಏಕನೆಂದರೇನು ?**

ಉ : ಏಕನೆಂದರೆ ಒಬ್ಬನೇ. ಅವನಿಗೆ ಸಜಾತೀಯವಾದ ಆತ್ಮ ಮತ್ತೊಂದು ಇಲ್ಲದ್ದರಿಂದ ಅವನನ್ನು ಏಕನೆನ್ನುತ್ತಾರೆ. ''ಏಕ'' ಎಂಬುದು ಆತ್ಮನ ಲಾಕ್ಷಣಿಕವಾದ ಹೆಸರು. ಉಪನಿಷತ್ತುಗಳಲ್ಲಿಯೂ ''ಏಕೋದೇವ'' ಎಂತಲೂ, ''ಏಕಮೇವಾದ್ವಿತೀಯಮ್'' ಎಂತಲೂ ಹೇಳಿದೆ. ಆದುದರಿಂದ ಆತ್ಮನು ಏಕನು.

ಪ್ರ ೩೭ : **ಆತ್ಮನ ನಿಷೇಧ್ಯ ವಿಶೇಷಣಗಳು ಎಷ್ಟು?**

ಉ : ೧. ಅನಂತ, ೨. ಅಖಂಡ, ೩. ಅಸಂಗ, ೪. ಅದ್ವಿತೀಯ, ೫. ಅಜನ್ಮ, ೬. ನಿರ್ವಿಕಾರ, ೭. ನಿರಾಕಾರ, ೮. ಅವ್ಯಕ್ತ, ೯. ಅವ್ಯಯ, ೧೦. ಅಕ್ಷರ – ಇವೇ ಮೊದಲಾದ ಹತ್ತು ಆತ್ಮನ ನಿಷೇಧ್ಯ ವಿಶೇಷಣಗಳು.

ಪ್ರ ೩೮ : **ಆತ್ಮನು ಅನಂತವೆಂದರೇನು ?**

ಉ : **ವ್ಯಾಪಿತ್ವಾತ್ ದೇಶತೋಽನಂತೋನ ನಿತ್ಯತ್ವಾಪಿ ಕಾಲತಃ।**
**ನವಸ್ತು ತೋಪಿಸರ್ವಾತ್ಮಾದಾನಂತ್ಯಂ ಬ್ರಹ್ಮಣಿಸ್ತ್ರಿಧಾ ॥**

ಅರ್ಥ : ಆತ್ಮನು ವ್ಯಾಪಕನಾದುದರಿಂದ ಆತ್ಮನಿಗೆ ದೇಶಗತ ಅಂತ್ಯವಿಲ್ಲ. ಆತ್ಮನು ನಿತ್ಯವಾದುದರಿಂದ ಆತ್ಮನಿಗೆ ಕಾಲಗತ ಅಂತ್ಯವಿಲ್ಲ. ಆತ್ಮನು ಸರ್ವಕ್ಕೂ ಅಧಿಷ್ಠಾನನಾದುದರಿಂದ, ಸರ್ವ ರೂಪಗಳೂ ಅವನವೇ ಆದುದರಿಂದ ವಸ್ತುಗತ ಅಂತ್ಯವಿಲ್ಲ. ದೇಶಗತ, ಕಾಲಗತ, ವಸ್ತುಗತ ಅಂತ್ಯವಿಲ್ಲದ ವಸ್ತುವನ್ನು ಅನಂತವೆನ್ನುತ್ತಾರೆ. ಅನಂತ, ಅಪಾರ, ಅಪರಿಚ್ಛಿನ್ನ ಇವು ಪರ್ಯಾಯ ಪದಗಳು.

ಪ್ರ ೩೯ : **ಆತ್ಮನು ಅನಂತನೆಂಬುದಕ್ಕೆ ಉದಾಹರಣೆ ಏನು ?**

ಉ : ೧. ಒಂದು ಪ್ರದೇಶದಲ್ಲಿದ್ದು, ಮತ್ತೊಂದು ಪ್ರದೇಶದಲ್ಲಿ ಇಲ್ಲದೇ ಹೋದರೆ, ಅದಕ್ಕೆ ದೇಶಗತ ಪರಿಚ್ಛಿನ್ನವೆನ್ನುತ್ತಾರೆ.

ಕಾಶೀ ವಿಶ್ವನಾಥನು ಕಾಶಿಯಲ್ಲೇ ಇದ್ದಾನೆ. ಇತರ ಸ್ಥಳಗಳಲ್ಲಿ ಇಲ್ಲ. ತಿರುಪತಿ ವೆಂಕಟೇಶ್ವರನು ತಿರುಪತಿಯಲ್ಲೇ ಇದ್ದಾನೆ. ಇತರ ಸ್ಥಳಗಳಲ್ಲಿ ಇಲ್ಲ. ಆದುದರಿಂದ ಅವರಿಗೆ ದೇಶಗತ ಪರಿಚ್ಛಿನ್ನವುಂಟು. ಇನ್ನು ಆತ್ಮನಾದರೋ ಕಾಶಿಯಲ್ಲೂ ಇದ್ದಾನೆ, ತಿರುಪತಿಯಲ್ಲೂ ಇದ್ದಾನೆ, ಮತ್ತೆಲ್ಲೆಲ್ಲಿಯೂ ಇದ್ದಾನೆ. ಆದುದರಿಂದ ಆತ್ಮನಿಗೆ ದೇಶಗತ ಪರಿಚ್ಛಿನ್ನವಿಲ್ಲ.

೨. ರಾಮಕೃಷ್ಣಾದಿಗಳು ಹಿಂದೆ ಒಂದಾನೊಂದು ಕಾಲದಲ್ಲಿ ಇದ್ದರೂ ಈಗ ಕಂಡುಬರುವುದಿಲ್ಲ. ಆದುದರಿಂದ ಅವರಿಗೆ ಕಾಲಗತ ಪರಿಚ್ಛೇದವು ಸಂಭವಿಸುತ್ತದೆ. ಆತ್ಮನು ಅವರಿದ್ದ ಆ ಕಾಲದಲ್ಲಿಯೂ, ಅವರಿಲ್ಲದ ಈ ಕಾಲದಲ್ಲಿಯೂ, ಅವರಿರುವುದನ್ನೂ ಅವರಿಲ್ಲದ್ದನ್ನೂ ಅರಿಯುತ್ತಾ ಇರುವುದರಿಂದ ಆತ್ಮನಿಗೆ ಕಾಲಗತ ಪರಿಚ್ಛಿನ್ನವು ಸಂಭವಿಸುವುದಿಲ್ಲ.

೩. ಪ್ರಪಂಚದಲ್ಲಿ ಅನೇಕ ವಸ್ತುಗಳಿರುತ್ತವೆ. ಅವು ಒಂದರಂತೆ ಮತ್ತೊಂದಿಲ್ಲ. ಅವು ಇವಲ್ಲ, ಇವು ಅವಲ್ಲ. ಪ್ರತಿ ಪದಾರ್ಥವೂ ತನ್ನ ಹದ್ದಿನಲ್ಲಿ ಪರಿಚ್ಛಿನ್ನವೇ ಆಗಿರುತ್ತದೆ. ಅಂದರೆ ಪ್ರಪಂಚದಲ್ಲಿರುವ ಎಲ್ಲ ವಸ್ತುಗಳೂ ವಸ್ತುಗತ ಪರಿಚ್ಛೇದವುಳ್ಳವುಗಳೆಂದರ್ಥ.

ಆತ್ಮನು ಸರ್ವ ವಸ್ತುಗಳಿಗೆ ಅಧಿಷ್ಠಾನನಾದುದರಿಂದ ಆತ್ಮನಿಗೆ ವಸ್ತುಗತ ಪರಿಚ್ಛಿನ್ನವು ಸಂಭವಿಸುವುದಿಲ್ಲ. ಈ ವಿಧವಾಗಿ ಆತ್ಮನು ತ್ರಿವಿಧ ಪರಿಚ್ಛಿನ್ನ ಶೂನ್ಯನೆಂಬುದು ಸಾರಾಂಶ. ಆದುದರಿಂದ ಆತ್ಮನು ಅನಂತ.

ಪ್ರ ೪೦ : **ಆತ್ಮನು ಅಖಂಡನೆಂದರೇನು ?**

ಉ : ಆತ್ಮನು ಖಂಡವಿಲ್ಲದವನು, ಭೇದಶೂನ್ಯನು ಎಂದರ್ಥ.

ಪ್ರ ೪೧ : **ಭೇದಗಳೆಂದರೇನು ? ಅವು ಎಷ್ಟು?**

ಉ : ೧. ಜೀವೇಶ್ವರ ಭೇದ, ೨. ಜೀವ ಜೀವರ ಪರಸ್ಪರ ಭೇದ, ೩. ಜೀವ ಜಡಭೇದ, ೪. ಈಶ್ವರ ಜಡಭೇದ, ೫. ಜಡಗಳ ಪರಸ್ಪರ ಭೇದ ಇವು ಪಂಚವಿಧ ಭೇದಗಳು. ಈ ಭೇದಗಳು ಇಲ್ಲದ್ದರಿಂದ ಆತ್ಮನು ಅಖಂಡನು.

ಮತ್ತೊಂದು ಅರ್ಥ : ೧. ಸಜಾತೀಯ, ೨. ವಿಜಾತೀಯ, ೩. ಸ್ವಗತ – ಈ ಮೂರೂ ವಿಧವಾದ ಭೇದವಿಲ್ಲದವನು. ಆದ್ದರಿಂದ ಆತ್ಮನು ಅಖಂಡನು.

**ವೃಕ್ಷಸ್ಯ ಸ್ವಗತೋಭೇದ ಪತ್ರಪುಷ್ಪ ಫಲಾದಿತಃ ।**
**ವೃಕ್ಷಾಂತರ ಸ್ಸಜಾತೀಯ ವಿಜಾತೀಯ ಶ್ಶಿಲಾಜಿತಃ ॥**

ಅರ್ಥ : ಪತ್ರ ಪುಷ್ಪ ಫಲಗಳು ವೃಕ್ಷದ ಸ್ವಗತ ಭೇದಗಳು. ಒಂದು ವೃಕ್ಷದಂತೆ ಮತ್ತೊಂದು ವೃಕ್ಷವಿರುವುದು ಸಜಾತೀಯ ಭೇದ. ವೃಕ್ಷಕ್ಕೆ ಭಿನ್ನವಾದ ಶಿಲೆಯಿರುವುದು ವಿಜಾತೀಯ ಭೇದ. ಇದರಂತೆ ಆತ್ಮನಲ್ಲಿ ಯಾವ ಭೇದವೂ ಇಲ್ಲದ್ದರಿಂದ ಸ್ವಗತಭೇದವಿಲ್ಲ. ಆತ್ಮನಂತೆ ಮತ್ತೊಂದು ಆತ್ಮನಿಲ್ಲದ್ದರಿಂದ ಸಜಾತೀಯ ಭೇದವಿಲ್ಲ. ಆತ್ಮನ ವ್ಯತಿರಿಕ್ತವಾಗಿರುವ ಅನಾತ್ಮವು ಸತ್ಯವಲ್ಲವಾದ್ದರಿಂದ ವಿಜಾತೀಯ ಭೇದವೂ ಇಲ್ಲ.

ಪ್ರ ೪೨ : **ಆತ್ಮನು ಅಸಂಗನೆಂದರೇನು ?**

ಉ : ಸಂಗವೆಂಬ ಪದಕ್ಕೆ ಸಂಬಂಧವೆಂದರ್ಥ. ಆ ಸಂಬಂಧಗಳು ಮೂರು ವಿಧ: ೧. ಸಜಾತೀಯ ಸಂಬಂಧ, ೨. ವಿಜಾತೀಯ ಸಂಬಂಧ, ೩. ಸ್ವಗತ ಸಂಬಂಧ.

ಪ್ರ ೪೩ : (ಅ) **ಸಜಾತೀಯ ಸಂಬಂಧದ ವಿವರಣೆ ಏನು ?**

ಉ : ತನ್ನ ಜಾತಿಯವರೊಂದಿಗೆ ಇರುವ ಸಂಬಂಧಕ್ಕೆ ಸಜಾತೀಯ ಸಂಬಂಧವೆನ್ನುತ್ತಾರೆ.

ಉದಾ : ಒಬ್ಬ ಬ್ರಾಹ್ಮಣನಿಗೆ ಮತ್ತೊಬ್ಬ ಬ್ರಾಹ್ಮಣನೊಂದಿಗೆ ಇರುವ ಸಂಬಂಧವು ಸಜಾತೀಯ ಸಂಬಂಧ.

ಪ್ರ : (ಆ) **ವಿಜಾತೀಯ ಸಂಬಂಧವೆಂದರೇನು ?**

ಉ : ತನ್ನ ಜಾತಿಯವರೊಂದಿಗಲ್ಲದೆ ಇತರೆ ಜಾತಿಯವರೊಂದಿಗೆ ಇರುವ ಸಂಬಂಧವು ವಿಜಾತೀಯ ಸಂಬಂಧವೆನಿಸುತ್ತದೆ.

ಉದಾ : ಬ್ರಾಹ್ಮಣನಿಗೂ ಶೂದ್ರನಿಗೂ ಇರುವ ಸಂಬಂಧ.

ಪ್ರ : (ಇ) **ಸ್ವಗತ ಸಂಬಂಧವೆಂದರೇನು ?**

ಉ : ತನ್ನ ಅವಯವಗಳೊಂದಿಗೆ ಇರುವ ಸಂಬಂಧಕ್ಕೆ ಸ್ವಗತ ಸಂಬಂಧವೆನ್ನುತ್ತಾರೆ.

ಉದಾ : ಮನುಷ್ಯನಿಗೆ ತನ್ನ ಕೈ ಕಾಲು ಮೊದಲಾದವುಗಳಲ್ಲಿರುವ ಸಂಬಂಧದಂತೆ.

ಪ್ರ ೪೪ : (ಅ) **ಆತ್ಮನಿಗೆ ಸಜಾತೀಯ ಸಂಬಂಧವಿಲ್ಲವೆಂಬುದಕ್ಕೆ ಕಾರಣವೇನು ?**

ಉ : ಆತ್ಮನು ಚೈತನ್ಯ ವಸ್ತುವು. ಆತ್ಮನು ಏಕನು. ಅದರಂತಹ ವಸ್ತುವು ಮತ್ತೊಂದಿಲ್ಲ. ಜೀವ, ಈಶ್ವರ, ಬ್ರಹ್ಮ, ವಿಷ್ಣು, ರುದ್ರ, ಶಿವ, ನೀನು, ನಾನು ಎಂದು ತೋರುವ ಭೇದಗಳು ಉಪಾಧಿಗಳನ್ನು ಆಶ್ರಯಿಸಿರುವುದರಿಂದ ಅವು ನಿಜವಲ್ಲ; ಮಿಥ್ಯೆಗಳು. ಆದುದರಿಂದ ಆತ್ಮನಿಗೆ ಯಾವುದರಿಂದಲೂ ಸಜಾತೀಯ ಸಂಬಂಧವು ಸಂಭವಿಸಲಾರದು.

ಪ್ರ : (ಆ) **ಆತ್ಮನಿಗೆ ವಿಜಾತೀಯ ಸಂಬಂಧವಿಲ್ಲವೆಂಬುದಕ್ಕೆ ಕಾರಣವೇನು ?**

ಉ : ಆತ್ಮನು ಅದ್ವೈತ ಸ್ವರೂಪನು. ಆದುದರಿಂದ ಸತ್ಯಸ್ವರೂಪನು. ಆತ್ಮನಿಗಿಂತ ಭಿನ್ನವಾಗಿ ತೋರುವ ಮಾಯೆ ಮತ್ತು ಮಾಯಾ ಕಾರ್ಯಗಳಾದ ಸ್ಥೂಲ, ಸೂಕ್ಷ್ಮ, ಪ್ರಪಂಚಗಳು ಪ್ರತೀತಿಯಾಗುತ್ತಿದ್ದರೂ, ಅವು "ಅಸತ್" ಎಂದು ಹೇಳಿಸಿಕೊಳ್ಳುತ್ತವೆ. ಅಸತ್ ಎಂಬುದು ಒಂದು ವಸ್ತುವೇ ಅಲ್ಲ. ಅದು ಅವಸ್ತುವು. ಆದುದರಿಂದ ಆತ್ಮನಿಗೆ ವಿಜಾತೀಯ ಸಂಬಂಧವು ಸಂಭವಿಸಲಾರದು.

ಪ್ರ : (ಇ) **ಆತ್ಮನಿಗೆ ಸ್ವಗತ ಸಂಬಂಧವಿಲ್ಲವೆಂಬುದಕ್ಕೆ ಕಾರಣವೇನು ?**

ಉ : ಆತ್ಮನು ನಿರವಯವನಾದುದರಿಂದ ಅವನಿಗೆ ಅವಯವಗಳಿಲ್ಲ. ಸತ್ತು, ಚಿತ್ತು, ಆನಂದಾದಿಗಳು ಆತ್ಮನ ಅವಯವಗಳಲ್ಲ. ಅವು ಆತ್ಮನ ಸ್ವರೂಪಗಳು. ಆದುದರಿಂದ ಆತ್ಮನಿಗೆ ಯಾವ ಪದಾರ್ಥದೊಂದಿಗೂ ಸ್ವಗತ ಭೇದವು ಸಂಭವಿಸುವುದಿಲ್ಲ.

ಈ ವಿಧವಾಗಿ ಆತ್ಮನು ಸರ್ವ ಸಂಬಂಧ ರಹಿತನಾದುದರಿಂದ ಅಸಂಗನೆಂದು ಹೇಳಿಸಿಕೊಳ್ಳುತ್ತಾನೆ.

ಪ್ರ ೪೫ : **ಆತ್ಮನು ಅದ್ವೈತನೆಂದರೇನು ?**

ಉ : ಅದ್ವೈತವೆಂದರೆ ದ್ವೈತಶೂನ್ಯವಾದದ್ದು. ದ್ವೈತ ರೂಪವಾಗಿ ತೋರುವ ಪ್ರಪಂಚವು ಸ್ವಪ್ನದಂತೆ ಕಲ್ಪಿತ. ಆದುದರಿಂದ ದ್ವೈತ ಪ್ರಪಂಚವು ಮೃಗಜಲದ ನೀರಿನಂತೆ ಇರುವಿಕೆ ಇಲ್ಲದೆ ತೋರುತ್ತದೆ. ಹೀಗಿರುವುದರಿಂದ

ದ್ವೈತ ಪ್ರಪಂಚವು ನಿಜವಾಗಿ ಇಲ್ಲವೇ ಇಲ್ಲ. ಆತ್ಮನು ದ್ವೈತ ರಹಿತನಾದುದ ರಿಂದ ಅದ್ವೈತನೆಂದು ಹೇಳಿಸಿಕೊಳ್ಳುತ್ತಾನೆ.

ಪ್ರ ೪೬ : **ಆತ್ಮನು ಅಜನ್ಮನೆಂದರೇನು ?**

ಉ : ಜನ್ಮವೆಂದರೆ ಮೊದಲು ತೋರದಿದ್ದು ನಂತರ ತೋರುವುದು. ಇದು ಸ್ಥೂಲ ದೇಹದ ಧರ್ಮ. ಸೂಕ್ಷ್ಮದೇಹದ ಧರ್ಮವೂ ಸಹ ಅಲ್ಲ. ಅಂದರೆ ಜನ್ಮವು ಸೂಕ್ಷ್ಮ ದೇಹದಲ್ಲೂ ಕಂಡುಬರುವುದಿಲ್ಲ. ಸೂಕ್ಷ್ಮದೇಹ ದಲ್ಲಿಯೇ ಕಂಡುಬರದ ಮೇಲೆ ಆತ್ಮನಿಗೆಲ್ಲಿ ಕಂಡುಬರುತ್ತದೆ ?

ಪ್ರ ೪೭ : **ಆತ್ಮನಿಗೆ ಜನ್ಮವನ್ನು ಒಪ್ಪಿಕೊಂಡರೆ ಬರುವ ದೋಷ ವೇನು ?**

ಉ : ಆತ್ಮನಿಗೆ ಜನ್ಮವನ್ನು ಒಪ್ಪಿಕೊಂಡರೆ ಮರಣವನ್ನೂ ಒಪ್ಪಿ ಕೊಳ್ಳಬೇಕು. ಆತ್ಮನಿಗೆ ಜನನ ಮರಣಗಳು ಇರುತ್ತವೆಯೆಂದರೆ ಅದು ಅನಿತ್ಯವಾಗುತ್ತದೆ. ಆತ್ಮನು ಅನಿತ್ಯನೆಂಬ ವಿಷಯವನ್ನು ಪರಲೋಕವಾದಿ ಗಳಾದ ಆಸ್ತಿಕರೂ ಸಹ ಒಪ್ಪಿಕೊಳ್ಳುವುದಿಲ್ಲ. ವೇದವು ಅದನ್ನು ಎಲ್ಲಿಯೂ ಒಪ್ಪಿಲ್ಲ.

ಪ್ರ ೪೮ : **ವೇದವು ಒಪ್ಪದಿದ್ದರೆ ಹೋಗಲಿ ! ಬರುವ ದೋಷ ವೇನು ?**

ಉ : ಅಕೃತಾಭ್ಯಾಗಮ, ಕೃತಪ್ರಣಾಶವೆಂಬ ಎರಡು ದೋಷಗಳು ಬರುತ್ತವೆ.

ಪ್ರ ೪೯ : **ಅಕೃತಾಭ್ಯಾಗಮ ದೋಷವೆಂದರೇನು ?**

ಉ : ಜನನ ಮರಣವಿರುವ ವಸ್ತುವು ಜನನ ಪೂರ್ವ, ಮರಣ ನಂತರ ಇರುವುದಿಲ್ಲ. ಆದುದರಿಂದ ಆತ್ಮನಿಗೆ ಪೂರ್ವ ಜನ್ಮವಿರುವುದೆಂತಲೂ, ಆ ಜನ್ಮದಲ್ಲಿ ಮಾಡಿದ ಕರ್ಮಗಳಿರುವುದೆಂತಲೂ ಸಂಭವಿಸುವುದಿಲ್ಲ. ಈ ಜನ್ಮ ದಲ್ಲಂತೂ ಆತ್ಮನು ಸುಖದುಃಖಗಳನ್ನು ಭೋಗಿಸುವುದು ಕಂಡುಬರುತ್ತದೆ. ಕರ್ಮವನ್ನು ಮಾಡದೆ ಸುಖದುಃಖಗಳನ್ನು ಭೋಗಿಸುವುದು ಅಸಂಬದ್ಧ. ಇದಕ್ಕೆ ಅಕೃತಾಭ್ಯಾಗಮ ದೋಷವೆನ್ನುತ್ತಾರೆ.

ಪ್ರ ೫೦ : **ಅಕೃತಾಭ್ಯಾಗಮವೆಂಬ ಪದಕ್ಕೆ ಅರ್ಥವೇನು ?**

ಉ : ಅಕೃತವೆಂದರೆ ಮಾಡದೇ ಇರುವುದು. ಅಭ್ಯಾಗಮವೆಂದರೆ ಗಂಟು ಬೀಳುವುದು. ಮಾಡದೆ ಇರುವುದು ಬಂದು ಗಂಟು ಬೀಳುವುದೆಂದರ್ಥ.

ಪ್ರ ೫೧ : **ಕೃತಪ್ರಣಾಶ ದೋಷವೆಂದರೇನು ?**

ಉ : ಕೃತಪ್ರಣಾಶವೆಂದರೆ ಮಾಡಿದ್ದನ್ನು ಭೋಗಿಸದೆ ನಾಶವಾಗುವುದು ಎಂದರ್ಥ.

ಮರಣದ ನಂತರ ಆತ್ಮನು ಇಲ್ಲದೆ ಹೋದರೆ ಈ ಜನ್ಮದಲ್ಲಿ ಮಾಡಿದ ಕರ್ಮಗಳು ಅನುಭವಿಸದೆ ನಾಶವಾಗುತ್ತವೆ ಎಂದು ಹೇಳಬೇಕಾಗುತ್ತದೆ. ಇದೇ ಕೃತಪ್ರಣಾಶ ದೋಷ. ಹೀಗೆ ಹೇಳಿದರೆ ವೇದೋಕ್ತ ಕರ್ಮಗಳು ವ್ಯರ್ಥವಾಗುತ್ತವೆ. ಈ ದೋಷಗಳನ್ನು ನಿವಾರಿಸುವುದಕ್ಕಾಗಿ ಆತ್ಮನು ಅಜನ್ಮನೆಂದು ಹೇಳಬೇಕು. ಅಜನ್ಮನೆಂದು ಹೇಳಿದರೆ ಅಜರನೆಂತಲೂ, ಅಮರನೆಂತಲೂ ಹೇಳಿದಂತಾಯಿತು.

ಪ್ರ ೫೨ : **ಆತ್ಮನು ನಿರ್ವಿಕಾರನೆಂದರೇನು ?**

ಉ : ನಿರ್ವಿಕಾರನೆಂದರೆ ವಿಕಾರವಿಲ್ಲದವನು. - ವಿಕಾರವೆಂದರೆ ಬದಲಾವಣೆ ಅಥವಾ ರೂಪಾಂತರ ; ರೂಪಾಂತರವಾಗದವನು.

ಉದಾ : ಒಂದು ಘಟವಿದೆ. ಅದಕ್ಕೆ ಜನ್ಮ, ಅಸ್ತಿ, ವೃದ್ಧಿ, ಪರಿಣಾಮ, ಅಪಕ್ಷಯ, ವಿನಾಶ – ಈ ಆರು ವಿಕಾರಗಳು ಕಂಡುಬರುತ್ತವೆ. ಈ ಆರು ವಿಕಾರಗಳು ಘಟಕ್ಕೆ ಸಂಬಂಧಪಟ್ಟದ್ದೇ ವಿನಾ ಘಟದ ಒಳಗಿರುವ ಆಕಾಶಕ್ಕೆ ಸಂಬಂಧಪಡದ ಮೇಲೆ ಮಹಾಕಾಶಕ್ಕೆ ಎಲ್ಲಿಯ ಸಂಬಂಧ ?

**ದ್ರಾಷ್ಟಾಂತ** : ದೇಹವು ಹುಟ್ಟಿತು; ಇದು ಜನ್ಮ. ಹುಟ್ಟುವ ಮೊದಲು ಇಲ್ಲದ ವಸ್ತುವು ಈಗ ಇದೆ; ಇದು ಅಸ್ತಿ. ಹುಟ್ಟಿದ ಮೇಲೆ ಬಾಲ್ಯಾವಸ್ಥೆಗೆ ಬಂತು; ಇದು ವೃದ್ಧಿ. ಬಾಲ್ಯಾವಸ್ಥೆಯ ನಂತರ ಯೌವನಾವಸ್ಥೆಗೆ ಬಂದರೆ, ಅದು ಪರಿಣಾಮ. ಆ ಮೇಲೆ ವಾರ್ಧಿಕ್ಯವು ಬಂದರೆ, ಅದು ಅಪಕ್ಷಯ. ಸತ್ತರೆ ನಾಶ. ಈ ಆರೂ ವಿಕಾರಗಳು ದೇಹ ಧರ್ಮಗಳು. ದೇಹವನ್ನು ಅರಿಯುತ್ತಾ ದೇಹಕ್ಕಿಂತ ಬೇರೆಯಾಗಿರುವ ಆತ್ಮನಿಗೆ ಈ ವಿಕಾರಗಳು ಸಂಭವಿಸುವುದಿಲ್ಲ. ಈ ರೀತಿ ಆತ್ಮನು ಷಡ್‌ಭಾವ ವಿಕಾರರಹಿತನಾದುದರಿಂದ ನಿರ್ವಿಕಾರನೆಂದು ಹೇಳಿಸಿಕೊಳ್ಳುತ್ತಾನೆ.

ಪ್ರ ೫೩ : **ಆತ್ಮನು ನಿರಾಕಾರನೆಂದರೇನು ?**

ಉ : ಪ್ರಪಂಚದಲ್ಲಿ ಅನೇಕ ಆಕಾರಗಳು ಕಂಡುಬರುತ್ತವೆ. ಅವುಗಳೆ

ಲ್ಲವೂ ಸ್ಥೂಲ, ಸೂಕ್ಷ್ಮ, ಎತ್ತರ, ಗಿಡ್ಡ ಈ ನಾಲ್ಕರಲ್ಲಿಯೇ ಸೇರಿಹೋಗುತ್ತವೆ. ಆತ್ಮನಿಗೆ ಸ್ಥೂಲವೆಂಬ ಆಕಾರವಿಲ್ಲ. ಏಕೆಂದರೆ, ಅವನು ಇಂದ್ರಿಯಗಳಿಗೂ ಮನಸ್ಸಿಗೂ ಗೋಚರನಾಗುವವನಲ್ಲ.

ಆತ್ಮನಿಗೆ ಸೂಕ್ಷ್ಮವೆಂಬ ಆಕಾರವಿಲ್ಲ. ಏಕೆಂದರೆ, ಅವನು ವ್ಯಾಪಕನು. ಆತ್ಮನಿಗೆ ಎತ್ತರ ಗಿಡ್ಡಗಳೆಂಬ ಆಕಾರವಿಲ್ಲ. ಏಕೆಂದರೆ, ಅವನು ಎಲ್ಲೆಲ್ಲಿಯೂ ಓತಪ್ರೋತನಾಗಿರುತ್ತಾನೆ. ಆದುದರಿಂದ ಆತ್ಮನು ನಿರಾಕಾರನು.

ಪ್ರ ೫೪ : **ಆತ್ಮನು ಅವ್ಯಕ್ತನೆಂದರೇನು ?**

ಉ : ಅವ್ಯಕ್ತನೆಂದರೆ ವ್ಯಕ್ತವಾಗದಿರುವುದು. ಸ್ಪಷ್ಟವಾಗಿ ತೋರದಿರುವುದು. ಅವಯವಗಳಿಲ್ಲದೆ, ಮನಸ್ಸು ವಾಣಿಗಳಿಗೆ ಸಿಗದೆ ಇರುವುದು ಎಂದರ್ಥ. ಇವುಗಳಲ್ಲಿ ಮುಖ್ಯವಾಗಿ ಆತ್ಮನು ಮನಸ್ಸಿಗೂ, ಇಂದ್ರಿಯಗಳಿಗೂ ಅಗೋಚರನಾದುದರಿಂದ ಅವನು ಅವ್ಯಕ್ತನೆಂದು ಹೇಳಬಹುದು. ಇದೇ ವಿಷಯವನ್ನು ಭಗವದ್ಗೀತೆಯ ೨ನೇ ಅಧ್ಯಾಯದ ೨೫ನೇ ಶ್ಲೋಕದಲ್ಲಿ ಹೀಗೆ ಹೇಳಿದೆ :–

**ಅವ್ಯಕ್ತೋಽಯಮಚಿಂತ್ಯೋಽಯ**
**ಮವಿಕಾರ್ಯೋಽಯ ಮುಚ್ಯತೇ ।**

ಅಂದರೆ, ಅಯಂ ಅವ್ಯಕ್ತಃ ಅಯಂ ಅಚಿಂತ್ಯಃ, ಅಯಂ ಅವಿಕಾರ್ಯಃ – ಈ ಅಪರೋಕ್ಷನಾದ ಆತ್ಮನು ಅವ್ಯಕ್ತನೆಂದು ಸ್ಪಷ್ಟವಾಗಿ ಹೇಳಿದೆ. ಆದುದರಿಂದ ಆತ್ಮನು ಅವ್ಯಕ್ತನು.

ಪ್ರ ೫೫ : **ಆತ್ಮನು ಅವ್ಯಯನೆಂದರೇನು ?**

ಉ : ಅವ್ಯಯನೆಂದರೆ ವ್ಯಯವಿಲ್ಲದವನು. ವ್ಯಯವೆಂದರೆ ನಾಶ, ಕ್ಷೀಣಿಸುವುದು. ಅದಿಲ್ಲದವನು ಅವ್ಯಯನು.

ಉದಾ : ನೀವು ಒಂದು ಬ್ಯಾಂಕಿನಲ್ಲಿ ಹತ್ತು ಸಾವಿರ ರೂಪಾಯಿಗಳನ್ನು ಶೇಖರಿಸಿರುತ್ತೀರಿ. ಮತ್ತೊಂದು ಸಾವಿರವನ್ನು ಅದಕ್ಕೆ ಹಾಕಿದರೆ ಹನ್ನೊಂದು ಸಾವಿರ ಆಗುತ್ತದೆ. ಈ ರೀತಿ ಜಡ ಪದಾರ್ಥಗಳು ಬೆಳೆಯುವುದುಂಟು, ವ್ಯಯವಾಗುವುದುಂಟು. ಆತ್ಮನಿಗೆ ಈ ಎರಡೂ ಧರ್ಮಗಳಿಲ್ಲ. ಅವನು

ಬೆಳೆಯುವುದೂ ಇಲ್ಲ, ಕ್ಷಯಿಸುವುದೂ ಇಲ್ಲ. ಆದುದರಿಂದ ಆತ್ಮನು ಅವ್ಯಯನು.

ಪ್ರ ೫೬ : **ಆತ್ಮನು ಅಕ್ಷರನೆಂದರೇನು ?**

ಉ : ಕ್ಷರವೆಂದರೆ ನಾಶ. ಅಕ್ಷರವೆಂದರೆ ನಾಶವಿಲ್ಲದ್ದು. ಇದನ್ನು ಶ್ರುತಿಯಲ್ಲಿ ''ನನಶ್ಯತಿ ನಕ್ಷರತಿ ಇತಿ ಅಕ್ಷರಃ'' ಎಂದು ಹೇಳಿದೆ. ಅಂದರೆ ಆತ್ಮನು ಕ್ಷಯವೂ ನಾಶವೂ ಇಲ್ಲದವನು ಎಂದರ್ಥ. ಬೇರೆ ಶಾಸ್ತ್ರಗಳಲ್ಲಿ ಅಕ್ಷರ ಸ್ವರೂಪನಾದ ಆತ್ಮನನ್ನು ಕುರಿತು ಅಮೃತ ಮತ್ತು ಅವಿನಾಶಿ ಎಂದು ಹೇಳಿದೆ. ಇವೆಲ್ಲವೂ ಪರ್ಯಾಯ ಪದಗಳು.

ಪ್ರ ೫೭ : **ಆತ್ಮನ ವಿಶೇಷಣಗಳು ಎಂಬ ಏಳನೇ ಕಲೆಯಿಂದ ನಾವು ತಿಳಿದುಕೊಳ್ಳಬೇಕಾದ ಅಂಶವೇನು ?**

ಉ : ಈ ವಿಶೇಷಣಗಳು ಆತ್ಮನ ಗುಣಗಳಲ್ಲ, ಸ್ವರೂಪಗಳು. ಮತ್ತು ಇವು ಪರಸ್ಪರ ಅಭಿನ್ನವಾಗಿವೆ.

ಪ್ರ ೫೮ : **ಅದು ಹೇಗೆ ?**

ಉ : ಸತ್ತು ಚಿತ್ತು ಆನಂದ ಮೊದಲಾದ ವಿಶೇಷಣಗಳು ಆತ್ಮನ ಗುಣಗಳಾಗಿದ್ದರೆ ಪರಸ್ಪರ ಭಿನ್ನವಾಗಿರುತ್ತಿದ್ದುವು. ಇವು ಆತ್ಮನ ಸ್ವರೂಪಗಳೇ ಆದುದರಿಂದ ಇವು ಪರಸ್ಪರ ಭಿನ್ನಗಳಲ್ಲ, ಅಭಿನ್ನವಾಗಿವೆ.

ಪ್ರ ೫೯ : **ಈ ವಿಷಯವನ್ನು ಮತ್ತಷ್ಟು ವಿವರಿಸಿರಿ.**

ಉ : ಆತ್ಮನು ನಾಶವಿಲ್ಲದವನು; ಆದುದರಿಂದ ಅವನು ಸದ್ರೂಪನು. ಜಡಕ್ಕೆ ವಿಲಕ್ಷಣನಾದುದರಿಂದ ಚಿದ್ರೂಪನು; ದುಃಖದ ಸಂಬಂಧವಿಲ್ಲದವನಾದುದರಿಂದ ಆನಂದರೂಪನು. ಉಳಿದ ವಿಶೇಷಣಗಳ ವಿಷಯದಲ್ಲೂ ಹೀಗೆಯೇ ತಿಳಿದುಕೊಳ್ಳಬೇಕು.

ಒಬ್ಬ ಮನುಷ್ಯನಿದ್ದಾನೆಂದು ಭಾವಿಸಿರಿ. ಅವನು ತಂದೆಯ ದೃಷ್ಟಿಯಲ್ಲಿ ಮಗನು, ತಾತನ ದೃಷ್ಟಿಯಲ್ಲಿ ಮೊಮ್ಮಗನು, ಮಾವನ ದೃಷ್ಟಿಯಲ್ಲಿ ಅಳಿಯನು, ಪತ್ನಿಯ ದೃಷ್ಟಿಯಲ್ಲಿ ಗಂಡನು. ಆದರೆ ಅವನು ಮಾತ್ರ ಒಬ್ಬನೇ.

ಬೀದಿಯಲ್ಲಿ ನಿಂತಿದ್ದ ಒಬ್ಬ ಸನ್ಯಾಸಿಯನ್ನು ಪಶುವು ನೋಡಿ ಮನುಷ್ಯನೆಂದು ಭಾವಿಸುತ್ತದೆ. ಆ ಸನ್ಯಾಸಿಯು ಸ್ತ್ರೀಯರ ದೃಷ್ಟಿಯಲ್ಲಿ ಪುರುಷನು

ಗೃಹಸ್ಥ ಭಕ್ತರ ದೃಷ್ಟಿಯಲ್ಲಿ ಸ್ವಾಮಿ. ಒಬ್ಬನೇ ಸನ್ಯಾಸಿಯು ಮನುಷ್ಯನೂ, ಪುರುಷನೂ, ಸ್ವಾಮಿಯೂ ಎಂಬುವುದು ವಿಧೇಯ ವಿಶೇಷಣಗಳು. ಆ ಸನ್ಯಾಸಿಯನ್ನು ಘಟ, ಪಾಷಾಣ, ವೃಕ್ಷ ಇವುಗಳ ದೃಷ್ಟಿಯಿಂದ ಹೇಳಬೇಕಾದರೆ, ಸನ್ಯಾಸಿಯು ಅಘಟ, ಅಪಾಷಾಣ, ಅವೃಕ್ಷ ಎಂದು ನಿಷೇಧ್ಯ ವಿಶೇಷಣಗಳನ್ನು ಹೇಳಬೇಕಾಗುತ್ತವೆ. ಇದರಂತೆ ಒಬ್ಬನೇ ಆತ್ಮನು ಪ್ರಪಂಚ ಸಂಬಂಧವಾದ ಅಸತ್, ಜಡ, ದುಃಖ, ಅಂತ, ಖಂಡ, ಸಂಗ ಮೊದಲಾದ ವಿಶೇಷಣಗಳ ದೃಷ್ಟಿಯಿಂದ ಹೇಳಬೇಕಾದರೆ, ಆತ್ಮನು ಸತ್ತು, ಚಿತ್ತು, ಆನಂದ, ಅಖಂಡ, ಅಸಂಗ ಮೊದಲಾದ ಹೆಸರುಗಳಿಂದ ಹೇಳಬೇಕಾಗುತ್ತದೆ.

ನಿತ್ಯಾನಂದ ಸ್ವಾಮಿಗಳು ಜಾಣರು ಎಂಬುದು ವಿಧೇಯ ವಿಶೇಷಣ.

ನಿತ್ಯಾನಂದ ಸ್ವಾಮಿಗಳು ದಡ್ಡರಲ್ಲ ಎಂಬುದು ನಿಷೇಧ್ಯ ವಿಶೇಷಣ.

ಈ ರೀತಿಯಾಗಿ ಆತ್ಮನನ್ನು ಕುರಿತು ಹೇಳಿದ ವಿಶೇಷಣಗಳು ಪರಸ್ಪರ ಭಿನ್ನಗಳಲ್ಲ.

ಓಂ ತತ್ಸತ್

ಇಲ್ಲಿಗೆ ''ಆತ್ಮನ ವಿಶೇಷಣಗಳು'' ಎಂಬ
ಏಳನೆ ಕಲಾ ಮುಗಿಯಿತು.

ಓಂ

ನಮೋ ಭಗವತೇ ಶಂಕರಾನಂದಾಯ

## ಎಂಟನೆಯ ಕಲಾ ಪ್ರಾರಂಭ

# ಸಚ್ಚಿದಾನಂದ ವಿಶೇಷ ವರ್ಣನೆ

ಪ್ರ ೧ : **ಆತ್ಮನ ಲಕ್ಷಣಗಳೇನು ?**

ಉ : ತೈತ್ತರೀಯೋಪನಿಷತ್ತಿನಲ್ಲಿ ಆತ್ಮನನ್ನು ಕುರಿತು ಹೇಳುವಾಗ ಸತ್ತು ಚಿತ್ತು ಆನಂದ ಸ್ವರೂಪನೆಂದು ಹೇಳಿದೆ.

ಪ್ರ ೨ : **'ಸತ್" ಎಂದರೇನು** ?

ಉ : ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿಯೂ, ಜ್ಞಾನದಿಂದಲೂ, ಅಜ್ಞಾನದಿಂದಲೂ, ಮತ್ತೆ ಯಾವುದರಿಂದಲೂ ಬಾಧೆಯಾಗದಿರುವುದನ್ನು ಸತ್ ಎನ್ನುತ್ತಾರೆ. ಇದನ್ನು ಕುರಿತು ಪಂಡಿತರು ''ತ್ರಿಕಾಲಾಬಾಧ್ಯ" ವೆಂದು ಹೇಳುತ್ತಾರೆ. ಸತ್ ಎಂಬುವ ಪದಕ್ಕೆ ಇರುವಿಕೆ ಎಂದರ್ಥ. ಇದನ್ನು ಕುರಿತು ಗೀತೆಯ ೨ನೇ ಅಧ್ಯಾಯದ ೧೬ನೇ ಶ್ಲೋಕದಲ್ಲಿ ''ನಾಭಾವೋ ವಿದ್ಯತೇ ಸತಃ'' ಅಂದರೆ ಸತ್ತಿಗೆ ಅಭಾವವಿಲ್ಲವೆಂದು ಹೇಳಿದೆ.

ಪ್ರ ೩ : **"ಚಿತ್" ಎಂದರೇನು ?**

ಉ : ಯಾವುದು ಮೂರೂ ಕಾಲದಲ್ಲಿಯೂ ಸರ್ವವನ್ನೂ ತಿಳಿದು ಕೊಳ್ಳುತ್ತದೆಯೋ ಅದು "ಚಿತ್''. ಇದು ಅಲುಪ್ತ ಪ್ರಕಾಶವುಳ್ಳದ್ದೆಂದು ಶಾಸ್ತ್ರಗಳು ಹೇಳುತ್ತವೆ. ಬೃಹದಾರಣ್ಯಕ ಶ್ರುತಿಯಲ್ಲಿ ಇದನ್ನು ಕುರಿತು ''ಅತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ'' ಎಂದು ಹೇಳಿದೆ. ''ಪ್ರಜ್ಞಾನಂ ಬ್ರಹ್ಮ'' ಎಂಬ ಮಹಾ ವಾಕ್ಯದಲ್ಲಿರುವ ''ಪ್ರಜ್ಞಾನ'' ಎಂಬ

ಪದಕ್ಕೆ ಚಿತ್ ಅಥವಾ ಅರಿವು ಎಂದರ್ಥ. ಈ ಎಲ್ಲಾ ಕಾರಣಗಳಿಂದ ಚಿತ್ ಎಂದರೆ ನಿರ್ವಿಕಾರವಾಗಿದ್ದು ಸರ್ವವನ್ನೂ ತಿಳಿದುಕೊಳ್ಳುವುದು ಎಂದರ್ಥ.

ಪ್ರ ೪ : **ಆನಂದವೆಂದರೇನು ?**

ಉ : ಮೂರೂ ಕಾಲದಲ್ಲಿ ಪರಮ ಪ್ರೀತಿಗೆ ವಿಷಯವಾದದ್ದನ್ನು ಆನಂದವೆನ್ನುತ್ತಾರೆ. ನಿತ್ಯವಾದ, ನಿರತಿಶಯವಾದ, ನಿರುಪಾಧಿಕವಾದ ಸುಖವೇ ಆನಂದವೆಂಬುದು ಮತ್ತೊಂದು ಅರ್ಥ.

ಪ್ರ ೫ : **ಸಾಮಾನ್ಯವಾಗಿ ಸತ್ತು, ಚಿತ್ತು, ಆನಂದವೆಂಬ ಪದಗಳ ಅರ್ಥವನ್ನು ತಿಳಿದಂತಾಯಿತು. ಇನ್ನು ನಾನು ಸದ್ರೂಪನು, ನಾನು ಚಿದ್ರೂಪನು, ನಾನು ಆನಂದರೂಪನು ಎಂಬುದನ್ನು ತಿಳಿಯುವುದು ಹೇಗೆ ?**

ಉ : ನೀನು ಮೂರೂ ಕಾಲದಲ್ಲಿ ಇರುವವನಾದುದರಿಂದ ಸದ್ರೂಪನು.

ಪ್ರ ೬ : **ನಾನು ಮೂರೂ ಕಾಲದಲ್ಲಿ ಇರುವವನಾದುದರಿಂದ ಸದ್ರೂಪನು ಎಂಬುದನ್ನು ಯಾವ ಆಧಾರದಿಂದ ತಿಳಿಯಬೇಕು ?**

ಉ : ನಿನ್ನ ಅನುಭವವೇ ಇದಕ್ಕೆ ಆಧಾರ. ನೀನು ಜಾಗ್ರತ್‌ನಲ್ಲಿ ಇರುವಿ, ಸ್ವಪ್ನದಲ್ಲಿ ಇರುವಿ, ಸುಷುಪ್ತಿಯಲ್ಲಿ ಇರುವಿ ; ಅದರಂತೆ ಪ್ರಾತಃಕಾಲದಲ್ಲಿ ಇರುವಿ, ಮಧ್ಯಾಹ್ನಕಾಲದಲ್ಲಿ ಇರುವಿ, ಸಾಯಂಕಾಲದಲ್ಲಿಯೂ ಇರುವಿ ; ಹಗಲೂ ಇರುವಿ, ರಾತ್ರಿಯಲ್ಲೂ ಇರುವಿ ; ಪಕ್ಷದಲ್ಲಿ ಇರುವಿ, ತಿಂಗಳಲ್ಲಿ ಇರುವಿ, ಋತುಗಳಲ್ಲಿ ಇರುವಿ, ಸಂವತ್ಸರಗಳಲ್ಲಿ ಇರುವಿ ; ಬಾಲ್ಯದಲ್ಲಿ ಇರುವಿ, ಯೌವನದಲ್ಲಿ ಇರುವಿ, ವೃದ್ಧಾಪ್ಯದಲ್ಲಿ ಇರುವಿ ; ಹಿಂದಿನ ದೇಹದಲ್ಲಿ ಇರುವಿ, ಈಗಿನ ದೇಹದಲ್ಲಿರುವಿ, ಮುಂದಿನ ದೇಹದಲ್ಲಿರುವಿ; ಯುಗಗಳಲ್ಲಿ ಇರುವಿ, ಮನ್ವಂತರಗಳಲ್ಲಿ ಇರುವಿ, ಕಲ್ಪಗಳಲ್ಲಿ ಇರುವಿ ; ಭೂತ, ವರ್ತಮಾನ, ಭವಿಷ್ಯತ್ಕಾಲಗಳಲ್ಲಿಯೂ ಇರುವಿ.

ಪ್ರ ೭ : **ಹಿಂದಿನ ದೇಹದಲ್ಲಿ ಇರುವೆ, ಈ ದೇಹದಲ್ಲಿ ಇರುವೆ, ಮುಂದಿನ ದೇಹದಲ್ಲೂ ಇರುವೆ ಎಂದು ಹೇಳುವುದರಲ್ಲಿ ಒಂದು ಶಂಕೆ ಬರುತ್ತದೆ. ಹಿಂದಿನ ದೇಹದಲ್ಲಿ ಇದ್ದೆ, ಈಗಿನ ದೇಹದಲ್ಲಿ ಇರುವೆ, ಮುಂದಿನ ದೇಹದಲ್ಲಿ ಇರುತ್ತೀಯೆ ಎಂದು ಹೇಳಿದ್ದರೆ ಭೂತ, ವರ್ತಮಾನ, ಭವಿಷ್ಯತ್ ಕಾಲಗಳ ಪ್ರಯೋಗಗಳು ಸರಿಯಾಗುತ್ತಿದ್ದವು.**

**ಹಿಂದಿನ ದೇಹದಲ್ಲಿ ಇರುವೆ ಎನ್ನುವುದು ಭೂತಕಾಲ. ಈ ದೇಹದಲ್ಲಿ ಇರುವೆ ಎಂಬುದು ವರ್ತಮಾನ ಕಾಲ. ಮುಂದಿನ ದೇಹದಲ್ಲಿರುವೆ ಎಂಬುದು ಭವಿಷ್ಯತ್ ಕಾಲ. ಆದುದರಿಂದ ಹೀಗೆ ಹೇಳಲು ಕಾರಣ ವೇನು?**

ಉ : ಶಾಸ್ತ್ರಗಳಲ್ಲಿ ಆತ್ಮನೊಬ್ಬನೇ ಸತ್ಯವೆಂತಲೂ, ತದ್ವ್ಯತಿರಿಕ್ತ ವಾದ ಪದಾರ್ಥಗಳೆಲ್ಲವೂ ಕಲ್ಪನಾ ಮಾತ್ರವೆಂತಲೂ, ಆತ್ಮನ ದೃಷ್ಟಿಯಲ್ಲಿ ಅವು ಇಲ್ಲನೇ ಇಲ್ಲವೆಂತಲೂ ಹೇಳಿವೆ; ಮತ್ತು ಆತ್ಮನ ಸದ್ರೂಪವನ್ನು ಕುರಿತು ಶ್ರುತಿಗಳಲ್ಲಿ ಅನೇಕ ಪ್ರಮಾಣಗಳಿರುತ್ತವೆ. ಆತ್ಮನು ಅಸದ್ರೂಪ ನೆಂದು ಹೇಳುವ ಒಂದು ಪ್ರಮಾಣವೂ ಕಂಡುಬರುವುದಿಲ್ಲ. ಆದುದರಿಂದ ಈ ಸತ್ಯತ್ವವನ್ನು ತಿಳಿಸುವುದಕ್ಕೋಸ್ಕರ ವರ್ತಮಾನ ಕಾಲವು ಪ್ರಯೋಗಿಸ ಲ್ಪಟ್ಟಿದೆ. ಇದೂ ಕೂಡ ಕಲ್ಪನಾ ಮಾತ್ರವೇ.

ಸಾರಾಂಶವೇನೆಂದರೆ : ಮೇಲೆ ಹೇಳಿದಂತೆ ನೀನು ತ್ರಿಕಾಲದಲ್ಲೂ ಇರುವುದರಿಂದ ನಾನು ಸದ್ರೂಪನೆಂದು ನಿಶ್ಚಯ ಮಾಡಿಕೊ.

ಪ್ರ ೮ : **ನಾನು ನನ್ನನ್ನು ಸದ್ರೂಪನೆಂದು ನಿಶ್ಚಯಮಾಡಿಕೊಂಡ ಮೇಲೆ ನನಗಿಂತ ಭಿನ್ನವಾದ ಸರ್ವನಾಮರೂಪ ವಸ್ತುಗಳು ಕಾಲತ್ರಯ ದಲ್ಲಿ ಹೇಗಿರುತ್ತವೆಂದು ತಿಳಿಯಬೇಕು?**

ಉ : ಸದ್ರೂಪನಾದ ನಿನಗಿಂತ ಭಿನ್ನವಾದ ಸರ್ವ ನಾಮರೂಪ ವಸ್ತುಗಳೂ ಮತ್ತು ವಸ್ತುಗಳು ತೋರುವ ಕಾಲತ್ರಯಗಳೂ ಅಸತ್ತೆಂದು ನಿಶ್ಚಯಿಸಿಕೊಳ್ಳಬೇಕು.

ಪ್ರ ೯ : **ಧಾನ್ಯವನ್ನು ಅಳೆಯಲು ಸೇರು ಪ್ರಮಾಣವಾಗಿರುವಂತೆ ಸತ್ ಅಸತ್‌ಗಳನ್ನು ಅಳೆಯುವ ಪ್ರಮಾಣ ಯಾವುದು?**

ಉ : ಸತ್, ಅಸತ್‌ಗಳ ನಿರ್ಣಯವನ್ನು ಅನ್ವಯ ವ್ಯತಿರೇಕದಿಂದ ತಿಳಿದುಕೊಳ್ಳಬೇಕು.

ಪ್ರ ೧೦ : **ಅನ್ವಯ ವ್ಯತಿರೇಕಗಳ ವಿಧಾನ ಯಾವುದು?**

ಉ : ಅನ್ವಯವೆಂದರೆ ಸಂಬಂಧಿಸಿರುವುದು ಅಥವಾ ಅನುಸರಿಸಿರು ದವು. ವ್ಯತಿರೇಕವೆಂದರೆ ಬೇರೆಯಾಗಿರುವುದು ಅಥವಾ ಇಲ್ಲದಿರುವುದು.

ಇದಕ್ಕೊಂದು ಉದಾ : ಮಣ್ಣಿನಲ್ಲಿ ಘಟವಿಲ್ಲ; ಇದು ಘಟದ ವ್ಯತಿರೇಕ. ಘಟದಲ್ಲಿ ಮಣ್ಣನ್ನು ಬಿಟ್ಟು ಬೇರೆ ಏನೂ ಇಲ್ಲ; ಇದು ಅನ್ವಯ.

ದ್ರಾಷ್ಟಾಂತ : ಜಾಗ್ರದಾವಸ್ಥೆಯಲ್ಲಿರುವ ನೀನೇ ಸ್ವಪ್ನಾವಸ್ಥೆಯಲ್ಲೂ ಸಹ ಇರುವೆ. ಆದುದರಿಂದ ನೀನು ಅನ್ವಯ ಸ್ವರೂಪನು. ಈ ಕಾರಣದಿಂದ ನೀನು ಸದ್ರೂಪನು. ಜಾಗ್ರದಾವಸ್ಥೆಯು ನಿನಗೆ ಯಾವಾಗಲೂ ಸಂಬಂಧಪಟ್ಟಿಲ್ಲ. ಸಾಕ್ಷ್ಯ ಪದಾರ್ಥವು ಸಾಕ್ಷಿಗೆ ಸಂಬಂಧಪಟ್ಟಿದ್ದು ಎಲ್ಲಿಯೂ ಕಂಡುಬಂದಿಲ್ಲ. ಆದುದರಿಂದ ಜಾಗ್ರದಾವಸ್ಥೆಯು ಅಸತ್; ಇದು ವ್ಯತಿರೇಕ. ಇನ್ನು ಸ್ವಪ್ನದಲ್ಲಿದ್ದ ನೀನೇ ಸುಷುಪ್ತಿಯಲ್ಲೂ ಸಹ ಇರುವೆಯಾದುದರಿಂದ ನೀನು ಸದ್ರೂಪನು; ಇದು ಅನ್ವಯ. ಸ್ವಪ್ನವು ನಿನ್ನಲ್ಲಿ ಇಲ್ಲವೇ ಇಲ್ಲ. ಹಿಂದಿನ ನಿಯಮವನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಆದುದರಿಂದ ಸ್ವಪ್ನಾವಸ್ಥೆಯು ಅಸತ್ ; ಇದು ವ್ಯತಿರೇಕ. ನಿದ್ರೆಯಲ್ಲಿದ್ದ ನೀನೇ ಈಗ ಎಚ್ಚರದಲ್ಲಿರುವೆ. ಆದುದರಿಂದ ನೀನು ಸದ್ರೂಪನು. ಇದು ಅನ್ವಯ. ಸುಷುಪ್ತಿಯು ನಿನ್ನಲ್ಲಿ ಇಲ್ಲವೇ ಇಲ್ಲ. ಆದುದರಿಂದ ಸುಷುಪ್ತಿಯು ಅಸತ್ತು. ಆದುದರಿಂದ ಇದು ವ್ಯತಿರೇಕ.

ಈ ವಿಧವಾಗಿ ಬೆಳಿಗ್ಗೆ ಮಧ್ಯಾಹ್ನ ಸಾಯಂಕಾಲಾದಿ ಕಾಲಗಳಲ್ಲಿಯೂ, ಹಗಲು, ರಾತ್ರಿ, ಪಕ್ಷ, ಮಾಸ, ಋತು ಮೊದಲಾದ ಕಾಲ ವಿಭಾಗಗಳಲ್ಲಿಯೂ, ಬಾಲ್ಯ, ಯೌವನ, ವಾರ್ಧಿಕ್ಯಾದಿ ಅವಸ್ಥೆಗಳಲ್ಲಿಯೂ, ಹಿಂದಿನ ಈಗಿನ ಮುಂದಿನ ಜನ್ಮಗಳಲ್ಲಿಯೂ, ಯುಗಾಂತರ, ಮನ್ವಂತರ, ಕಲ್ಪಾಂತರಗಳಲ್ಲಿಯೂ, ಭೂತ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿಯೂ ಇರುವುದರಿಂದ ನೀನು ಸದ್ರೂಪನಾದ ಆತ್ಮನು. ಮೇಲೆ ಹೇಳಿದ ಇವುಗಳೆಲ್ಲ ನಿನ್ನಲ್ಲಿ ಇಲ್ಲದೇ ಇರುವುದರಿಂದ ಅವು ಅಸತ್ ಪದಾರ್ಥಗಳು. ಈ ರೀತಿಯಾಗಿ ಅನ್ವಯ, ವ್ಯತಿರೇಕ ರೂಪವಾದ ಯುಕ್ತಿಯಿಂದ ಸತ್, ಅಸತ್ ಗಳನ್ನು ನಿರ್ಣಯಿಸಿಕೊಂಡು, ಅಸತ್ತನ್ನು ದೂರೀಕರಿಸಿ, ನಾನು ಸದ್ರೂಪನೆಂದು ನಿಶ್ಚಯ ಮಾಡಿಕೊಳ್ಳಬೇಕು.

ಪ್ರ ೧೧ : **ನಾನು ಚಿದ್ರೂಪನು ಎಂದು ಹೇಗೆ ನಿರ್ಣಯಿಸಿಕೊಳ್ಳಬೇಕು ?**

ಉ : ಮೂರೂ ಕಾಲಗಳನ್ನು ನೀನು ನಿರ್ವಿಕಾರವಾಗಿದ್ದು ತಿಳಿದು ಕೊಳ್ಳುವುದರಿಂದ ಚಿದ್ರೂಪನು.

ಪ್ರ ೧೨ : **ಮೂರೂ ಕಾಲಗಳನ್ನು ನಾನು ತಿಳಿದುಕೊಳ್ಳುತ್ತೇನೆ, ಆದುದರಿಂದ ನಾನು ಚಿದ್ರೂಪನು ಎಂಬುವುದನ್ನು ತಿಳಿಯುವುದು ಹೇಗೆ? ವಿವರಿಸಿ.**

ಉ : ಜಾಗ್ರದಾವಸ್ಥೆಯನ್ನು ನೀನು ತಿಳಿದುಕೊಳ್ಳುವೆ; ಸ್ವಪ್ನಾವಸ್ಥೆ ಯನ್ನು ನೀನು ತಿಳಿದುಕೊಳ್ಳುವೆ; ಸುಷುಪ್ತಾವಸ್ಥೆಯನ್ನು ನೀನು ತಿಳಿದು ಕೊಳ್ಳುವೆ; ಅದರಂತೆ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳನ್ನೂ, ರಾತ್ರಿ, ಹಗಲು, ಪಕ್ಷ, ಮಾಸ, ಋತು, ಸಂವತ್ಸರ ಮೊದಲಾದುವು ಗಳನ್ನು ತಿಳಿದುಕೊಳ್ಳುವೆ. ಈ ವಿಧವಾಗಿ ಬಾಲ್ಯ, ಯೌವನ, ವಾರ್ಧಿಕ್ಯ ದಿಶೆ ಗಳನ್ನೂ ತಿಳಿಯುವೆ. ಅತೀತ, ವರ್ತಮಾನ, ಅನಾಗತ ದೇಹಗಳೂ, ಯುಗಾಂತರ, ಮನ್ವಂತರ, ಕಲ್ಪಾಂತರಗಳೂ, ಹಾಗೆಯೇ ಭೂತ, ಭವಿಷ್ಯತ್, ವರ್ತಮಾನ ಕಾಲಗಳೆಲ್ಲವೂ ನಿನ್ನಿಂದ ಅರಿಸಿಕೊಳ್ಳುತ್ತವೆ. ನೀನು ಅವುಗಳನ್ನು ಅರಿಯುವವನು. ಆದುದರಿಂದ ನೀನು ಚಿದ್ರೂಪನು. ಈ ವಿಚಾರ ಮಾರ್ಗವನ್ನು ಅನುಸರಿಸಿ ನಾನು ಚಿದ್ರೂಪನೆಂದು ನಿಶ್ಚಯ ಮಾಡಿಕೊ.

ಪ್ರ ೧೩ : **ಹಿಂದೆ ಎಲ್ಲವುಗಳಲ್ಲಿಯೂ ಇದ್ದ ನಾನೇ ಅವೆಲ್ಲವು ಗಳನ್ನೂ ತಿಳಿದುಕೊಳ್ಳುತ್ತೇನೆಯೆ ? ಅಥವಾ ಇರುವವನು ಬೇರೆ, ತಿಳಿಯುವವನು ಬೇರೆಯೆ ?**

ಉ : ಇರುವವನೇ ಅರಿಯುಬೇಕು. ಇರುವವನೊಬ್ಬ, ಅರಿಯು ವವನೊಬ್ಬನಲ್ಲ. ಆದ್ದರಿಂದ ಹಿಂದೆ ಇದ್ದವನೂ ನೀನೆ. ಈಗ ಅರಿಯು ವವನೂ ನೀನೆ. ಆದುದರಿಂದ ನೀನೇ ಸದ್ರೂಪನು, ಚಿದ್ರೂಪನು.

ಪ್ರ ೧೪ : **ಹಾಗಾದರೆ ನನ್ನಿಂದ ಅರಿಸಿಕೊಳ್ಳುವ ದೇಶ, ಕಾಲ, ನಾಮರೂಪ ವಸ್ತುಗಳ ಸ್ವರೂಪವನ್ನು ಹೇಗೆ ನಿಶ್ಚಯಮಾಡಿಕೊಳ್ಳ ಬೇಕು ?**

ಉ : ಸರ್ವವನ್ನೂ ಅರಿಯುವ ಚಿದ್ರೂಪನಾದ ನಿನಗಿಂತ ಭಿನ್ನ

ವಾದ ಪದಾರ್ಥಗಳು ಸ್ವಯಮಿತರ ಜ್ಞಪ್ತಿ ಇಲ್ಲದವುಗಳಾದುದರಿಂದ ಅವು ಜಡ ಪದಾರ್ಥಗಳೆಂದು ನಿಶ್ಚಯಿಸಬೇಕು.

ಪ್ರ ೧೫ : **ಚಿತ್ತು, ಜಡಗಳನ್ನು ನಿರ್ಣಯಿಸಲು ಪ್ರಮಾಣವೇನು?**

ಉ : ಚಿತ್ತು, ಜಡಗಳ ನಿರ್ಣಯವನ್ನು ಅನ್ವಯ ವ್ಯತಿರೇಕದಿಂದ ನಿರ್ಣಯಿಸಿಕೊಳ್ಳಬೇಕು.

ಪ್ರ ೧೬ : **ಈ ಸಂದರ್ಭದಲ್ಲಿ ಅನ್ವಯ ವ್ಯತಿರೇಕ ಸ್ವರೂಪವನ್ನು ತಿಳಿಸಿರಿ.**

ಉ : ಜಾಗ್ರದಾವಸ್ಥೆಯನ್ನು ತಿಳಿಯುವವನಾರು ? ನೀನೇ ಅಲ್ಲವೆ ? ಜಾಗ್ರದಾವಸ್ಥೆಯನ್ನು ತಿಳಿದ ನೀನೇ ಸ್ವಪ್ನಾವಸ್ಥೆಯನ್ನೂ ತಿಳಿಯುವೆ, ಅಲ್ಲವೆ ? ಆದುದರಿಂದ ನೀನು ಚಿದ್ರೂಪನು. ಇದು ಅನ್ವಯ. ಜಾಗ್ರದಾವಸ್ಥೆಯು ನಿನ್ನನ್ನು ತಿಳಿಯಲಾರದು, ಆದುದರಿಂದ ಅದು ಜಡ ; ಇದು ಜಾಗ್ರದಾವಸ್ಥೆಯ ವ್ಯತಿರೇಕ. ಸ್ವಪ್ನವನ್ನು ತಿಳಿದ ನೀನೇ ಸುಷುಪ್ತಿಯನ್ನೂ ತಿಳಿಯುವೆ. ಆದುದರಿಂದ ನೀನು ಚಿದ್ರೂಪನು ; ಇದು ನಿನ್ನ ಅನ್ವಯ. ಸ್ವಪ್ನಾವಸ್ಥೆಯು ನಿನ್ನನ್ನು ತಿಳಿಯಲಾರದು. ಆದುದರಿಂದ ಅದು ಜಡ ; ಇದು ಸ್ವಪ್ನಾವಸ್ಥೆಯ ವ್ಯತಿರೇಕ. ಸುಷುಪ್ತಾವಸ್ಥೆಯನ್ನು ತಿಳಿದ ನೀನೇ ತೂರ್ಯಾವಸ್ಥೆಯನ್ನೂ ತಿಳಿಯುವೆ. ಆದುದರಿಂದ ನೀನು ಚಿದ್ರೂಪನು; ಇದು ನಿನ್ನ ಅನ್ವಯ. ಸುಷುಪ್ತಾವಸ್ಥೆಯು ನಿನ್ನನ್ನು ತಿಳಿಯಲಾರದು ; ಆದುದರಿಂದ ಇದು ಜಡ, ಇದು ಸುಷುಪ್ತಾವಸ್ಥೆಯ ವ್ಯತಿರೇಕ – ಈ ವಿಧವಾಗಿ ಅನ್ವಯ ವ್ಯತಿರೇಕ ಯುಕ್ತಿಯನ್ನು ಉಪಯೋಗಿಸಿಕೊಂಡು ಚಿತ್ ಜಡಗಳ ನಿರ್ಣಯವನ್ನು ಮಾಡಿಕೊಳ್ಳಬೇಕು.

ಪ್ರ ೧೭ : **ನಾನು ಆನಂದರೂಪನೆಂದು ತಿಳಿಯುವುದು ಹೇಗೆ ?**

ಉ : ಮೂರು ಕಾಲಗಳಲ್ಲಿಯೂ ನೀನು ಪರಮ ಪ್ರೀತಿಗೆ ವಿಷಯನಾದುದರಿಂದ ಆನಂದರೂಪನು.

ಪ್ರ ೧೮ : **ಮೂರು ಕಾಲಗಳಲ್ಲಿಯೂ ನಾನು ಪರಮ ಪ್ರಿಯನೂ, ಆನಂದರೂಪನೂ ಆಗಿರುವೆನು ಎಂಬುದಕ್ಕೆ ನಿದರ್ಶನವೇನು ?**

ಉ : ಜಾಗ್ರತ್‌ನಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಸ್ವಪ್ನಾವಸ್ಥೆಯಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಸುಷುಪ್ತಾವಸ್ಥೆಯಲ್ಲಿಯೂ

ನೀನು ನಿನಗೆ ಪ್ರಿಯನಾಗಿರುವೆ. ಅದರಂತೆ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಹಗಲು, ಪಕ್ಷ, ಮಾಸ, ಋತು, ವರ್ಷಗಳಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಬಾಲ್ಯ, ಯೌವನ, ವಾರ್ಧಿಕ್ಯಗಳಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಗತ ದೇಹ, ವರ್ತಮಾನ ದೇಹ, ಭಾವೀ ದೇಹಗಳಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಯುಗಾಂತರ, ಮನ್ವಂತರ, ಕಲ್ಪಾಂತರಗಳಲ್ಲಿಯೂ ನೀನು ನಿನಗೆ ಪ್ರಿಯ ನಾಗಿರುವೆ. ಭೂತ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿಯೂ ನೀನು ನಿನಗೆ ಪ್ರಿಯನಾಗಿರುವೆ. ಎಲ್ಲಾ ಕಾಲಗಳಲ್ಲಿಯೂ ನೀನು ನಿನಗೆ ಪ್ರಿಯನಾಗಿರುವುದ ರಿಂದ ನೀನು ಆನಂದಸ್ವರೂಪನು.

ಪ್ರ ೧೯ : **ನನಗಿಂತ ಭಿನ್ನವಾದ ನಾಮರೂಪ ವಸ್ತು ಸಹಿತ ಕಾಲತ್ರಯಗಳನ್ನು ಏನೆಂದು ತಿಳಿದುಕೊಳ್ಳಬೇಕು ?**

ಉ : ಆನಂದ ಸ್ವರೂಪನಾದ ನಿನಗಿಂತ ಭಿನ್ನವಾದ ವಸ್ತುಸಹಿತ ಕಾಲತ್ರಯಗಳು ದುಃಖರೂಪಗಳೆಂದು ತಿಳಿಯಬೇಕು.

ಪ್ರ ೨೦ : **ಇದು ಆನಂದವೆಂತಲೂ, ಇದು ದುಃಖವೆಂತಲೂ ವಿಂಗಡಿಸಿ ತಿಳಿದುಕೊಳ್ಳುವ ಪದ್ಧತಿ ಯಾವುದು ?**

ಉ : ಹಿಂದೆ ಹೇಳಿದ ಅನ್ವಯ ವ್ಯತಿರೇಕ ಪದ್ಧತಿಯನ್ನೇ ಇಲ್ಲಿಯೂ ಅನುಸರಿಸಬೇಕು. ಹೇಗೆಂದರೆ, ಜಾಗ್ರದಾವಸ್ಥೆಯಲ್ಲಿ ಪರಮ ಪ್ರಿಯನಾದ ನೀನೆ ಸ್ವಪ್ನದಲ್ಲಿಯೂ ಪರಮಪ್ರಿಯನಾಗಿರುವೆ. ಆದುದರಿಂದ ನೀನು ಆನಂದ ರೂಪನು. ಇದು ನಿನ್ನ ಅನ್ವಯ. ಜಾಗ್ರದಾವಸ್ಥೆಯು ನಿನಗೆ ಪ್ರೀತಿಪಾತ್ರ ವಲ್ಲ. ಆದುದರಿಂದ ಅದು ದಃಖರೂಪವಾಗಿದೆ. ಇದು ವ್ಯತಿರೇಕ.

ಪ್ರ ೨೧ : **ಜಾಗ್ರದಾವಸ್ಥೆಯು ದುಃಖರೂಪವೆಂದು ಹೇಳಿದ್ದು ಸರಿಯಾಗಿ ಗೊತ್ತಾಗಲಿಲ್ಲ. ವಿವರಿಸಿ ತಿಳಿಸಿರಿ.**

ಉ : ಆತ್ಮನಲ್ಲಿ ತೋರಿದ ಜಾಗ್ರತ್ ಮೊದಲಾದ ಅವಸ್ಥೆಗಳು ನಿಜ ವಾಗಿ ನೋಡಿದರೆ ದುಃಖರೂಪಗಳೇ. ಆದರೂ ಅಧ್ಯಾಸಬಲದಿಂದ ಆಯಾ ಅವಸ್ಥೆಗಳು ಆತ್ಮನ ಚಿದಾಭಾಸನ ದ್ವಾರ ಪ್ರಿಯವಾಗಿ ತೋರುತ್ತವೆ. ಈಗ ಅನುಭವಿಸುತ್ತಿರುವ ಅವಸ್ಥೆಯನ್ನು ಬಿಟ್ಟರೆ ಅದಕ್ಕಿಂತ ಭಿನ್ನವಾದ ಅವಸ್ಥೆಗಳೇ ಆಗಲಿ, ಫಲಗಳೇ ಆಗಲಿ, ಪ್ರೀತಿಪಾತ್ರವಾಗಿ ತೋರಿಬರಲಾರವು. ಅವುಗಳಲ್ಲಿ

ಏನಾದರೂ ಪ್ರೀತಿ ತೋರಿಬಂದರೆ ಅದು ವ್ಯಭಿಚಾರ ಪ್ರೀತಿಯೆಂದು ತಿಳಿಯು ಬೇಕು. ವಾಸ್ತವವಾಗಿ ಅದು ದುಃಖರೂಪವೇ. ಆತ್ಮನಿಗೆ ತನ್ನ ಮೇಲೆ ತನಗೆ ತೋರುವ ಪ್ರೀತಿಯು ವ್ಯಭಿಚಾರ ಪ್ರೀತಿಯಲ್ಲ. ಅದು ನಿರತಿಶಯ ಪ್ರೀತಿ. ಆದುದರಿಂದ ಆತ್ಮನು ಆನಂದಸ್ವರೂಪನೆಂದು ಹೇಳಿದೆ.

ಪ್ರ ೨೨ : **ನಾನು ಪರಮ ಪ್ರಿಯನು ಎಂದು ತಿಳಿದುಕೊಳ್ಳುವುದು ಹೇಗೆ ?**

ಉ : ಉದಾ : ನಿನ್ನ ಮಗನಿಗೊಬ್ಬ ಮಿತ್ರನಿರುವನೆಂದು ತಿಳಿದುಕೊ. ನೀನು ಆ ಮಿತ್ರನನ್ನೂ ಸಹ ಪ್ರೀತಿಸುವೆ. ಏಕೆ? ನಿನ್ನ ಮಗನ ಮೇಲಿರುವ ಪ್ರೇಮಕ್ಕಾಗಿ ಅವನನ್ನೂ ಪ್ರೇಮಿಸುವೆ, ಅಷ್ಟೆ. ಅವನು ನಿನ್ನ ಮಗನ ಮಿತ್ರನಾಗದಿದ್ದರೆ ಪ್ರೀತಿಸುತ್ತಿರಲಿಲ್ಲ. ಹೀಗಾದ ಮೇಲೆ ನಿನ್ನ ಮಗನ ಮಿತ್ರನ ಪ್ರೇಮವು ನಿಜವಾದ ಪ್ರೇಮವಲ್ಲ. ಮತ್ತು ನಿನ್ನ ಮಗನನ್ನು ಪ್ರೀತಿಸುವುದು ನಿನ್ನ ಮಗನ ಮಿತ್ರನಿಗಾಗಿ ಅಲ್ಲ. ಅದು ಸ್ವಂತ ಪ್ರೇಮ. ಆದುದರಿಂದ ಪುತ್ರನು ಅಧಿಕ ಪ್ರೇಮಾಸ್ಪದನು. ಇದರಂತೆ ಧನ, ಧಾನ್ಯ, ಸ್ತ್ರೀ, ಪುತ್ರಾದಿಗಳಲ್ಲಿ ತೋರಿಸುವ ಪ್ರೇಮವು ತನ್ನನ್ನು ಆಶ್ರಯಿಸಿ ಅಂದರೆ ಆತ್ಮನನ್ನು ಅಪೇಕ್ಷಿಸಿ ಉಂಟಾಗುತ್ತದೆ. ಆದರೆ ತನ್ನ ಮೇಲಿರುವ ಪ್ರೇಮವು ಅಂದರೆ ತನಗೆ ತಾನು ತೋರಿಸುವ ಪ್ರೇಮವು ಮತ್ತೆ ಯಾವುದನ್ನೂ ಆಶ್ರ ಯಿಸಿರುವುದಿಲ್ಲ. ಅದು ನಿರಪೇಕ್ಷಿಕ ಪ್ರೇಮ. ಆದುದರಿಂದ ಎಲ್ಲವುಗಳಿ ಗಿಂತಲೂ ತನಗೆ ತಾನೇ ಅಧಿಕ ಪ್ರಿಯಸ್ವರೂಪನು. ಈ ವಿಧವಾಗಿ ನಾನು ಪರಮ ಪ್ರಿಯನು ಎಂದು ನಿಶ್ಚಯಮಾಡಿಕೊಳ್ಳಬೇಕು.

ಪ್ರ ೨೩ : **ನೀವು ಹೇಳಿದ ಮಾತಿನ ಮೇಲೆ ನನಗೊಂದು ಸಂದೇಹ ಬರುತ್ತಿದೆ. ನನ್ನ ಮೇಲಿರುವ ಪ್ರೇಮವು ನಿರಪೇಕ್ಷಿಕ ಪ್ರೇಮವೆಂತಲೂ, ನನಗಿಂತ ಭಿನ್ನವಾದ ವಸ್ತುಗಳಲ್ಲಿರುವ ಪ್ರೇಮವು ಸಾಪೇಕ್ಷಕ ಪ್ರೇಮ ವೆಂತಲೂ ಹೇಳಿದಂತಾಯಿತು. ಹಾಗಾದರೆ ಪ್ರೇಮದಲ್ಲಿ ಹೆಚ್ಚುಕಡಿಮೆ ಯೆಂಬ ತಾರತಮ್ಯವಿರುವುದೆ ?**

ಉ : ಶ್ರೀಮದ್ ವಿದ್ಯಾರಣ್ಯ ಸ್ವಾಮಿಗಳು ಪಂಚದಶಿ ಗ್ರಂಥದಲ್ಲಿ ಪ್ರೇಮದಲ್ಲಿ ತಾರತಮ್ಯವನ್ನು ಹೀಗೆ ಹೇಳಿರುತ್ತಾರೆ :

''ವಿತ್ತಾತ್ ಪುತ್ರಪ್ರಿಯಃ ಪುತ್ರಾತ್
ಪಿಂಡಃ ಪಿಂಡಾತ್ ತಥೇಂದ್ರಿಯಮ್ |
ಇಂದ್ರಿಯಾಚ ಪ್ರಿಯಃ ಪ್ರಾಣಾಃ
ಪ್ರಾಣಾದಾತ್ಮಪರಃ ಪ್ರಿಯಃ ||

೧. ಪ್ರಪಂಚದಲ್ಲಿ ಸರ್ವರಿಗೂ ಹಣದ ಮೇಲೆ ಪ್ರೀತಿಯು ಕಂಡು ಬರುತ್ತದೆ. ಅದಕ್ಕಾಗಿಯೇ ಜನರು ದೇಶ ದೇಶಾಂತರಗಳನ್ನು ತಿರುಗುತ್ತಾರೆ. ಅನೇಕ ವಿಧವಾಗಿ ಕಷ್ಟಪಡುತ್ತಾರೆ. ಅವರಿಗೆ ಧರ್ಮ, ಕರ್ಮಗಳ ಕಡೆ ದೃಷ್ಟಿಯೂ ಸಹ ಇರುವುದಿಲ್ಲ. ಇದರಿಂದ, ಧನವು ಅತ್ಯಂತ ಪ್ರಿಯವೆಂದು ಕಂಡುಬರುತ್ತದೆ. ಇದು ನಿಜವೆ ?

೨. ಇದು ನಿಜವಲ್ಲ. ಯಾಕೆಂದರೆ, ಕೆಲವು ಜನರಲ್ಲಿ ದುಡ್ಡಿಗಿಂತಲೂ ಮಗನ ಮೇಲೆ ಹೆಚ್ಚು ಪ್ರೇಮವಿರುತ್ತದೆ. ಮಗನು ಏನಾದರೂ ಕೆಟ್ಟ ಕೆಲಸ ಮಾಡಿ ಜೈಲಿನಲ್ಲಿ ಬಿದ್ದರೆ, ಇದ್ದ ದುಡ್ಡನ್ನೆಲ್ಲಾ ಖರ್ಚು ಮಾಡಿ ಮಗನನ್ನು ಬಿಡಿಸುತ್ತಾನೆ. ಅವನು ಮಗನಿಗಾಗಿ ದುಡ್ಡನ್ನು ಬಿಡುತ್ತಾನೆ. ದುಡ್ಡಿಗಾಗಿ ಮಗನನ್ನು ಬಿಡಲು ಒಪ್ಪುವುದಿಲ್ಲ. ಈ ದೃಷ್ಟಿಯಿಂದ ನೋಡಿದರೆ ದುಡ್ಡಿಗಿಂತ ಮಗನು ಪ್ರೇಮಾಸ್ಪದನೆಂದು ತೋರುತ್ತದೆ.

೩. ಇದು ನಿಜವೆ ? ಇದೂ ನಿಜವಲ್ಲ. ಮಗನಿಗಿಂತಲೂ ತನ್ನ ದೇಹದ ಮೇಲೆ ಅಧಿಕ ಪ್ರೀತಿಯು ಕಂಡುಬರುತ್ತದೆ. ಬರಗಾಲ ಬಂದಾಗ ಅನ್ನ ದೊರೆಯದೆ ಕಷ್ಟಪಡುತ್ತಿದ್ದರೆ, ಮಗನನ್ನು ಮಾರಿ ಹೊಟ್ಟೆ ತುಂಬಿಸಿಕೊಳ್ಳುತ್ತಾನೆ. ಮತ್ತು ಮರಿಯುಳ್ಳ ಕೋತಿಯ ದೃಷ್ಟಾಂತವನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಈ ಎಲ್ಲಾ ಕಾರಣಗಳಿಂದಲೂ ದೇಹವೇ ತನಗೆ ಅಧಿಕ ಪ್ರಿಯ.

೪. ಇದು ನಿಜವೆ ? ಇದೂ ಸಹ ನಿಜವಲ್ಲ. ಶರೀರಕ್ಕಿಂತಲೂ ಇಂದ್ರಿಯಗಳ ಮೇಲೆ ಹೆಚ್ಚು ಪ್ರೀತಿಯು ಕಂಡುಬರುತ್ತದೆ. ಯಾಕೆಂದರೆ, ಯಾರಾದರೂ ಕೋಲು, ಕಟ್ಟಿಗೆಗಳನ್ನು ತಂದು ಹೊಡೆಯಲು ಬಂದರೆ ಕಣ್ಣು ಮುಚ್ಚಿಕೊಳ್ಳುತ್ತಾನೆ. ಆ ಏಟು ಬೆನ್ನಿಗೆ ಬಿದ್ದರೂ ಪರವಾಗಿಲ್ಲ. ಕಣ್ಣಿಗೆ

ಬೀಳಬಾರದೆಂದು ಅವನ ಅಭಿಪ್ರಾಯ. ಇದರಿಂದ, ದೇಹಕ್ಕಿಂತಲೂ ಇಂದ್ರಿಯಗಳ ಮೇಲೆ ಹೆಚ್ಚು ಪ್ರೀತಿಯೆಂದು ಕಂಡುಬರುತ್ತದೆ.

ಪ್ರ ೨೪ : **ದೇಹಕ್ಕಿಂತಲೂ ಇಂದ್ರಿಯಗಳ ಮೇಲೆ ಹೆಚ್ಚು ಪ್ರೀತಿ ಇರಲು ಕಾರಣವೇನು ?**

ಉ : ಆತ್ಮನಾದ ತನಗೆ ದೇಹಕ್ಕಿಂತಲೂ ಇಂದ್ರಿಯಗಳು ಸನ್ನಿಹಿತವಾಗಿವೆ. ಇಂದ್ರಿಯಗಳಿಗಿಂತಲೂ ದೇಹವು ದೂರ. ದೂರದ ಪದಾರ್ಥಕ್ಕಿಂತಲೂ ಹತ್ತಿರದ ಪದಾರ್ಥದ ಮೇಲೆ ಪ್ರೀತಿ ಇರುವುದು ಸಹಜ.

ಪ್ರ ೨೫ : **ಹಾಗಾದರೆ ದೇಹಕ್ಕಿಂತಲೂ ಇಂದ್ರಿಯಗಳ ಮೇಲೆ ಇರುವ ಪ್ರೇಮವು ನಿಜವಾದದ್ದೇ ?**

ಉ : ನಿಜವಲ್ಲ. ಯಾಕೆಂದರೆ, ಇಂದ್ರಿಯಗಳಿಗಿಂತ ಪ್ರಾಣದ ಮೇಲೆ ಹೆಚ್ಚು ಪ್ರೀತಿ ತೋರುತ್ತದೆ. ಯಾಕೆಂದರೆ, ಒಬ್ಬನು ಖೂನಿ ಮಾಡಿದ್ದಾನೆ. ನ್ಯಾಯಾಧಿಪತಿಯು ಅವನಿಗೆ ಮರಣದಂಡನೆಯನ್ನು ವಿಧಿಸುತ್ತಾನೆ. ಆ ತಪ್ಪು ಮಾಡಿದ ಮನುಷ್ಯನು ಪ್ರಾಣವನ್ನು ಬಿಡಿಸಿಕೊಳ್ಳುವುದಕ್ಕಾಗಿ ಧನ, ಧಾನ್ಯ, ಸ್ತ್ರೀ–ಪುತ್ರರನ್ನೂ, ಕೊನೆಗೆ ಕಾಲು, ಕೈ, ಮೂಗು, ಇಂದ್ರಿಯಗಳನ್ನೂ ತೆಗೆಸಿಕೊಳ್ಳಲು ಸಿದ್ಧನಾಗಿರುತ್ತಾನೆ. ಇದರಿಂದ, ಇಂದ್ರಿಯಗಳಿಗಿಂತ ಪ್ರಾಣವು ಅಧಿಕ ಪ್ರಿಯವೆಂದು ತೋರುತ್ತದೆ.

ಇದಾದರೂ ನಿಜವೆ ? ನಿಜವಲ್ಲ. ಯಾಕೆಂದರೆ ಪ್ರಾಣಕ್ಕಿಂತಲೂ ಆತ್ಮ ಅಧಿಕ ಪ್ರಿಯವಾಗಿದೆ. ಹೇಗೆಂದರೆ, ಭಯಂಕರ ರೋಗದಿಂದ ಪೀಡಿತನಾದ ಒಬ್ಬಾನೊಬ್ಬ ಮನುಷ್ಯನು ರೋಗದ ಬಾಧೆಯನ್ನು ತಡೆದುಕೊಳ್ಳಲಾರದೆ "ಅಯ್ಯೋ ! ಪ್ರಾಣ ಹೋದರೆ ನಾನು ಸುಖವಾಗಿರುತ್ತೇನೆ" ಎಂದು ಅಂದುಕೊಳ್ಳುತ್ತಾನೆ. ಅಂದರೆ ಪ್ರಾಣವನ್ನು ಬಿಟ್ಟು ಸುಖವಾಗಿರಬೇಕೆಂದು ಬಯಸುತ್ತಾನೆ. ಈ ದೃಷ್ಟಿಯಿಂದ ಆತ್ಮನು ಪ್ರಾಣಕ್ಕಿಂತಲೂ ಪ್ರಿಯನು ಎಂದರ್ಥ. ಆತ್ಮನ ಮೇಲಿರುವ ಪ್ರೇಮವು ವ್ಯಭಿಚಾರವಾಗಲಾರದು. ಆತ್ಮನು ಸರ್ವಾಧಿಕ ವಸ್ತು ; ನಿರಪೇಕ್ಷಕ ಪ್ರೇಮ ಸ್ವರೂಪನು. ಈ ರೀತಿ ವಿಚಾರಮಾಡಿ ತಾನು ಆನಂದರೂಪನೆಂದು ನಿಶ್ಚಯಿಸಿಕೊಳ್ಳಬೇಕು.

ಓಂ ತತ್ಸತ್

**ಇಲ್ಲಿಗೆ "ಸಚ್ಚಿದಾನಂದ ವಿಶೇಷವರ್ಣನೆ" ಎಂಬ ಎಂಟನೆ ಕಲಾ ಮುಗಿಯಿತು.**

ಓಂ

ನಮೋ ಭಗವತೇ ಶಂಕರಾನಂದಾಯ

## ಒಂಭತ್ತನೆಯ ಕಲಾ ಪ್ರಾರಂಭ

# ಅವಾಚ್ಯ ಸಿದ್ಧಾಂತ

ಪ್ರ ೧ : **ಉಪನಿಷತ್ ಶಾಸ್ತ್ರದಲ್ಲಿ ಆತ್ಮನು ಮನಸ್ಸು ವಾಣಿಗಳಿಗೆ ದೊರೆಯುವವನಲ್ಲ, 'ಅವಾಚ್ಯನು' ಎಂದು ಸಿದ್ಧಾಂತ ಮಾಡಿ ಹೇಳಿದೆ. ನೀವು ಹಿಂದಿನ ಕಲೆಯಲ್ಲಿ ಆತ್ಮನು ಸಚ್ಚಿದಾನಂದರೂಪನೆಂದು ಪ್ರತಿಪಾದಿಸಿದಿರಿ. ಅಂದರೆ ಆತ್ಮನು ವಾಣಿಗೆ ದೊರೆತಂತಾಯಿತು. ಹಾಗಾದರೆ ಅವಾಚ್ಯ ಸಿದ್ಧಾಂತವು ಹೊರಟುಹೋಯಿತಲ್ಲಾ?**

ಉ : ಅಯ್ಯಾ! ಅವಾಚ್ಯ ಸಿದ್ಧಾಂತವು ಕೆಡಲಿಲ್ಲ. ಆತ್ಮನು ಸಚ್ಚಿದಾನಂದ ರೂಪನೆಂಬ ಪ್ರತಿಪಾದನೆಯ ರಹಸ್ಯವನ್ನು ತಿಳಿದುಕೊಳ್ಳಬೇಕು. ಬ್ರಹ್ಮಸ್ವರೂಪನಾದ ಆತ್ಮನಿಗೆ ವಿಧೇಯ ವಿಶೇಷಣಗಳು, ನಿಷೇಧ್ಯ ವಿಶೇಷಣಗಳು ಎಂದು ಎರಡು ವಿಧವಾದ ವಿಶೇಷಣಗಳು ಇರುತ್ತವೆ. ಅವುಗಳಲ್ಲಿ ಸತ್, ಚಿತ್ ಮೊದಲಾದ ವಿಧಿಮುಖದಿಂದ ಬ್ರಹ್ಮಸ್ವರೂಪನಾದ ಆತ್ಮನನ್ನು ಹೇಳುವ ಶಬ್ದಗಳಿಗೆ ವಿಧೇಯ ವಿಶೇಷಣವೆನ್ನುತ್ತಾರೆ. ಅನಂತ, ಅಖಂಡ ಇವುಗಳಿಗೆ ನಿಷೇಧ್ಯ ವಿಶೇಷಣಗಳೆನ್ನುತ್ತಾರೆ.

ಸತ್ ಚಿತ್ ಮೊದಲಾದ ವಿಧೇಯ ವಿಶೇಷಣಗಳು ಆತ್ಮನಿಗಿಂತ ಭಿನ್ನವಾದ ಪ್ರಪಂಚವನ್ನು ನಿಷೇಧಿಸುತ್ತಾ, ಸರ್ವ ನಿಷೇಧಾವಧಿ ಭೂತವಾದ ಬ್ರಹ್ಮವನ್ನು ಲಕ್ಷಣಾವೃತ್ತಿ ದ್ವಾರ ಬೋಧಿಸುತ್ತವೆ. ಅವು ಬೋಧಿಸುವ ಪದ್ಧತಿ ಹೇಗೆಂದರೆ :

### ೧. ಸತ್ ಎಂಬ ವಿಷಯು

ಮಾಯೆಯಲ್ಲಿಯೂ, ಮಾಯಾ ಕಾರ್ಯವಾದ ಪ್ರಪಂಚದಲ್ಲಿಯೂ ಸಾಪೇಕ್ಷಕ ಸತ್ಯತ್ವವಿರುತ್ತದೆ. ಮಾಯಾಧಿಷ್ಠಾನವಾದ ಪರಬ್ರಹ್ಮದಲ್ಲಿ ನಿರಪೇಕ್ಷಕ ಸತ್ಯತ್ವವಿರುತ್ತವೆ. ಈ ಸಾಪೇಕ್ಷಕ ಸತ್ಯತ್ವ, ನಿರಪೇಕ್ಷಕ ಸತ್ಯತ್ವ ಎರಡೂ ಸೇರಿ ಸತ್ ಪದಕ್ಕೆ ವಾಚ್ಯಾರ್ಥ. ಈ ವಾಚ್ಯಾರ್ಥದಲ್ಲಿ ಮಾಯ ಮತ್ತು ಪ್ರಪಂಚದ ಸತ್ಯತ್ವವು ನಿಜವಾದುದಲ್ಲವೆಂದು ತ್ಯಜಿಸಿ ಕೇವಲ ಬ್ರಹ್ಮದ ಸತ್ಯತ್ವವನ್ನು ಮಾತ್ರ ಗ್ರಹಿಸುವುದು ಸತ್ ಪದದ ಲಕ್ಷ್ಯಾರ್ಥ.

### ೨. ಚಿತ್ತಿನ ವಿಷಯು

ಅಂತಃಕರಣದ ವೃತ್ತಿರೂಪ ಜ್ಞಾನವೂ, ಆ ವೃತ್ತಿಯನ್ನು ಬೆಳಗುವ ಚೇತನರೂಪ ಜ್ಞಾನವೂ ಎರಡೂ ಸೇರಿ ಚಿತ್ ಪದಕ್ಕೆ ವಾಚ್ಯಾರ್ಥ. ಅವು ಗಳಲ್ಲಿ ವೃತ್ತಿರೂಪ ಜ್ಞಾನವು ನಿಜವಲ್ಲವೆಂದು ತ್ಯಜಿಸಿ, ಕೇವಲ ಚೈತನ್ಯರೂಪ ಜ್ಞಾನವನ್ನು ಗ್ರಹಿಸುವುದು ಚಿತ್ ಪದದ ಲಕ್ಷ್ಯಾರ್ಥ.

### ೩. ಆನಂದರೂಪದ ವಿಷಯು

೧. ವಿಷಯಾನಂದ, ೨. ವಾಸನಾನಂದ, ೩. ಬ್ರಹ್ಮಾನಂದ – ಈ ಮೂರೂ ಸೇರಿ ಆನಂದ ಪದಕ್ಕೆ ವಾಚ್ಯಾರ್ಥ. ವಿಷಯಾನಂದ, ವಾಸನಾ ನಂದಗಳು ಸ್ವತಂತ್ರವಾದವುಗಳಲ್ಲವೆಂದು ತ್ಯಜಿಸಿ, ಕೇವಲ ಬ್ರಹ್ಮಾನಂದವನ್ನು ಗ್ರಹಿಸುವುದು ಆನಂದ ಪದಕ್ಕೆ ಲಕ್ಷ್ಯಾರ್ಥ.

### ೪. ವ್ಯಾಪಕದ ವಿಷಯು (ಬ್ರಹ್ಮ)

ಮಾಯೆಯಲ್ಲಿಯೂ, ಮಾಯಾ ಕಾರ್ಯವಾದ ಆಕಾಶಾದಿ ಪಂಚ ಭೂತಗಳಲ್ಲಿಯೂ ಸಾಪೇಕ್ಷಕ ವ್ಯಾಪಕತ್ವವಿರುತ್ತದೆ. ಬ್ರಹ್ಮರೂಪವಾದ ಆತ್ಮನಲ್ಲಿ ನಿರಪೇಕ್ಷಕ ವ್ಯಾಪಕತ್ವವಿದೆ. ಈ ಸಾಪೇಕ್ಷಕ ವ್ಯಾಪಕತ್ವ ನಿರಪೇಕ್ಷಕ ವ್ಯಾಪಕತ್ವ ಎರಡೂ ಸೇರಿ ಬ್ರಹ್ಮ ಅಥವಾ ವ್ಯಾಪಕವೆಂಬ ಪದಕ್ಕೆ ವಾಚ್ಯಾರ್ಥ. ನಿರಪೇಕ್ಷಕ ವ್ಯಾಪಕವಾದ ಬ್ರಹ್ಮವು ಮಾತ್ರ ಬ್ರಹ ಪದಕ್ಕೆ ಲಕ್ಷ್ಯಾರ್ಥ.

### ೫. ಸ್ವಯಂಪ್ರಕಾಶವೆಂಬ ಪದದ ವಿಷಯ

ಆಭಾಸ ಸಹಿತವಾದ ಬುದ್ಧಿಯಲ್ಲಿ ಸಾಪೇಕ್ಷಕ ಸ್ವಯಂಪ್ರಕಾಶವಿದೆ. ಚೇತನದಲ್ಲಿ ನಿರಪೇಕ್ಷಕವಾದ ಸ್ವಪ್ರಕಾಶತ್ವವಿದೆ. ನಿರಪೇಕ್ಷಕ ಸ್ವಪ್ರಕಾಶ, ಸಾಪೇಕ್ಷಕ ಸ್ವಪ್ರಕಾಶ – ಇವೆರಡೂ ಸೇರಿ ಸ್ವಯಂಪ್ರಕಾಶಕ್ಕೆ ವಾಚ್ಯಾರ್ಥ. ನಿರಪೇಕ್ಷಕ ಸ್ವಪ್ರಕಾಶವುಳ್ಳ ಕೇವಲ ಚೇತನವೇ ಸ್ವಯಂಪ್ರಕಾಶತ್ವಕೆ ಲಕ್ಷ್ಯಾರ್ಥ.

### ೬. ಕೂಟಸ್ಥ ಪದದ ವಿಷಯ

ರಜ್ಜು ಮೊದಲಾದವುಗಳಲ್ಲಿಯೂ, ಅವುಗಳಲ್ಲಿ ಕಲ್ಪಿತವಾದ ಹಾವು ಮೊದಲಾದವುಗಳಲ್ಲಿಯೂ ಕೂಟಸ್ಥ ಸ್ವಭಾವವಿದೆ. ಚೇತನದಲ್ಲಿ ನಿರಪೇಕ್ಷಕವಾದ ಕೂಟಸ್ಥ ಸ್ವಭಾವವಿದೆ. ಇಲ್ಲಿ ಕೂಟಸ್ಥವೆಂದರೆ ಅವಿಕಾರತ್ವ. ಈ ಸಾಪೇಕ್ಷಕ ಕೂಟಸ್ಥ ಸ್ವಭಾವ, ನಿರಪೇಕ್ಷಕ ಕೂಟಸ್ಥ ಸ್ವಭಾವ ಎರಡೂ ಸೇರಿ ಕೂಟಸ್ಥ ಪದಕ್ಕೆ ವಾಚ್ಯಾರ್ಥ. ಕೇವಲ ಚೇತನವು ಕೂಟಸ್ಥ ಪದಕ್ಕೆ ಲಕ್ಷ್ಯಾರ್ಥ.

### ೭. ಸಾಕ್ಷಿ ಪದದ ವಿಷಯ

ಸಾಕ್ಷಿಯೆಂಬ ಪದವು ಕೋರ್ಟಿನಲ್ಲಿ ಸಾಕ್ಷಿ ಹೇಳುವವರಿಗೂ, ಮಾಯಾ ಅಂದರೆ ಅವಿದ್ಯಾ ಉಪಹಿತ ಚೇತನಕ್ಕಾಗಿಯೂ ಉಪಯೋಗಿಸಲ್ಪಡುತ್ತದೆ. ಈ ಎರಡೂ ಸೇರಿ ಸಾಕ್ಷಿಪದದ ವಾಚ್ಯಾರ್ಥ. ಇವುಗಳಲ್ಲಿ ಕೋರ್ಟಿನಲ್ಲಿ ಹೇಳುವ ಸಾಕ್ಷಿಯು ನಿಜವಾದುದಲ್ಲ ಎಂದು ತೆಗೆದುಹಾಕಿ, ಕೇವಲ ಅವಿದ್ಯೋಪಹಿತ ಚೇತನವು ಸಾಕ್ಷಿಪದಕ್ಕೆ ಲಕ್ಷ್ಯಾರ್ಥವೆಂದು ಗ್ರಹಿಸಬೇಕು.

### ೮. ದ್ರಷ್ಟ ಪದದ ವಿಷಯ

ದ್ರಷ್ಟನೆಂದರೆ ಕಣ್ಣು ಎಂದರ್ಥವಲ್ಲ, ನೋಡುವವನು ಎಂದರ್ಥ. ಅಥವಾ ದೃಷ್ಟಿಯುಳ್ಳವನು ಎಂದರ್ಥ.

ಆಭಾಸ ಸಹಿತವಾದ ಅಂತಃಕರಣವು ವೃತ್ತಿರೂಪ ದೃಷ್ಟಿಯಿಂದ ವಿಶಿಷ್ಟವಾದ ಚೇತನವು ದ್ರಷ್ಟಾಪದಕ್ಕೆ ವಾಚ್ಯಾರ್ಥ. ಕೇವಲ ಚೇತನ ಭಾಗವು ದ್ರಷ್ಟಾಪದಕ್ಕೆ ಲಕ್ಷ್ಯಾರ್ಥ.

### ೯. ಉಪದ್ರಷ್ಟ ಪದದ ವಿಷಯ

ಉಪದ್ರಷ್ಟನೆಂದರೆ ಸಮೀಪದಲ್ಲಿದ್ದು ನೋಡುವವನು. ಈ ಪದವು ಯಜ್ಞದಲ್ಲಿದ್ದು, ಯಜ್ಞ ಮಾಡುವವರನ್ನು ನೋಡುವ ಮನುಷ್ಯನಿಗೂ, ಪ್ರತ್ಯಗಾತ್ಮನಿಗೂ ಹೇಳಲ್ಪಡುತ್ತದೆ. ಈ ಎರಡು ಉಪದ್ರಷ್ಟ ಪದದ ವಾಚ್ಯಾರ್ಥ. ಕೇವಲ ಪ್ರತ್ಯಗಾತ್ಮನು ಉಪದ್ರಷ್ಟ ಪದಕ್ಕೆ ಲಕ್ಷ್ಯಾರ್ಥ.

### ೧೦. ಏಕ ಪದದ ವಿಷಯ

ಏಕವೆಂದರೆ ಒಂದು, ಅಥವಾ ಜೊತೆಯಲ್ಲಿದ್ದು ಸಜಾತೀಯ, ವಿಜಾತೀಯ, ಸ್ವಗತ ಭೇದರಹಿತವಾದದ್ದು ಎಂದರ್ಥ. ಈ ಪದವು ಪ್ರಪಂಚದಲ್ಲಿ ಜೊತೆಯಿಲ್ಲದ ಒಬ್ಬನನ್ನು ಕುರಿತು ಹೇಳುತ್ತದೆ. ಮತ್ತು ಸಜಾತೀಯ, ವಿಜಾತೀಯ, ಸ್ವಗತ ಭೇದರಹಿತ ಬ್ರಹ್ಮವನ್ನೂ ಸಹ ಹೇಳುತ್ತದೆ. ಈ ಎರಡೂ ಸೇರಿ ಏಕವೆಂಬ ಪದಕ್ಕೆ ವಾಚ್ಯಾರ್ಥ. ಕೇವಲ ಬ್ರಹ್ಮವು ಏಕವೆಂಬ ಪದಕ್ಕೆ ಲಕ್ಷ್ಯಾರ್ಥ. ಆದುದರಿಂದಲೇ ಶ್ರುತಿಯಲ್ಲಿ "ಏಕಮೇವಾದ್ವಿತೀಯಬ್ರಹ್ಮ" ವೆಂದು ಹೇಳಿದೆ. ಈ ರೀತಿಯಾಗಿ ವಿಧೇಯ ವಿಶೇಷಣಗಳೆಲ್ಲವುಗಳ ವಾಚ್ಯಾರ್ಥ ಲಕ್ಷ್ಯಾರ್ಥಗಳನ್ನು ಗ್ರಹಿಸಿದರೆ, ಬ್ರಹ್ಮರೂಪನಾದ ಆತ್ಮನು ಅವಾಚ್ಯನೆಂಬುದು ಅನುಭವಕ್ಕೆ ಬರುತ್ತದೆ.

ಮತ್ತು ಅನಂತ, ಅಖಂಡ ಮೊದಲಾದ ನಿಷೇಧ್ಯ ವಿಶೇಷಣಗಳು ಸಾಕ್ಷಾತ್ತಾಗಿ ಪ್ರಪಂಚವನ್ನು ನಿಷೇಧಿಸುತ್ತವೆ. ಈ ರೀತಿ ಪ್ರಪಂಚವನ್ನು ನಿಷೇಧಿಸುವುದರಿಂದ ಪ್ರಪಂಚಕ್ಕೆ ವಿಲಕ್ಷಣವಾದ ಬ್ರಹ್ಮರೂಪವಾದ ಆತ್ಮವು ಸಹಜವಾಗಿ ಸಿದ್ಧಿಸುತ್ತದೆ.

ಪ್ರ ೨ : **ಬ್ರಹ್ಮವು ಅವಾಚ್ಯವೆಂದರೇನು ?**

ಉ : ಬ್ರಹ್ಮರೂಪವಾದ ಆತ್ಮವು ಸಹಜ ಸಿದ್ಧವಾದುದರಿಂದ ಅದು ಅವಾಚ್ಯ. ಅದನ್ನು ಯಾವ ವಿಶೇಷಣಗಳಿಂದಲೂ ಹೇಳಲಾಗುವುದಿಲ್ಲ.

ಪ್ರ ೩ : **ಸತ್, ಚಿತ್, ಆನಂದ ಮೊದಲಾದ ವಿಧೇಯ ವಿಶೇಷಣಗಳು ಪ್ರಪಂಚವನ್ನು ನಿಷೇಧಿಸುತ್ತಾ, ನಿಷೇಧಾವಧಿಭೂತವಾದ ಬ್ರಹ್ಮವನ್ನು ಯಾವ ವಿಧವಾಗಿ ಬೋಧಿಸುತ್ತವೆ ಎಂದು ಹಿಂದೊಂದು ಸಾರಿ ಹೇಳಿದೆ. ಆದರೂ ಮತ್ತಷ್ಟು ಸುಲಭವಾಗಿ ತಿಳಿಯುವಂತೆ ಮತ್ತೊಂದು ಸಾರಿ ಹೇಳಿರಿ.**

ಉ : ೧. ಬ್ರಹ್ಮರೂಪನಾದ 'ಆತ್ಮವು ಸತ್ ಎಂದು ಹೇಳುವುದರಿಂದ ಅಸತ್ತನ್ನು ನಿಷೇಧ ಮಾಡಿದಂತಾಯಿತು. ಅಸತ್ ನಿಷೇಧವಾದ ಮೇಲೆ ಉಳಿಯುವುದೇ ಸತ್; ಅದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೨. ಚಿತ್ ಎಂದು ಹೇಳುವುದರಿಂದ ಜಡದ ನಿಷೇಧವಾಯಿತು. ಜಡದ ನಿಷೇಧವಾದ ಮೇಲೆ ಚಿದ್ರೂಪವೇ ಉಳಿಯಿತು. ಅದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೩. ಆನಂದವೆಂದು ಹೇಳುವುದರಿಂದ ದುಃಖವು ನಿಷೇಧವಾಯಿತು. ದುಃಖದ ನಿಷೇಧವಾದ ಮೇಲೆ ಆನಂದವೇ ಉಳಿಯಿತು. ಆನಂದರೂಪವು ಲಕ್ಷಣಾವೃತ್ತಿಯಿಂದ ಲಭಿಸುತ್ತದೆ.

೪. ಆತ್ಮನು ಬ್ರಹ್ಮರೂಪನೆಂದು ಹೇಳುವುದರಿಂದ ಪರಿಚ್ಛಿನ್ನತ್ವವು ನಿಷೇಧವಾಯಿತು. ಪರಿಚ್ಛಿನ್ನತ್ವವು ನಿಷೇಧವಾದ ಮೇಲೆ ವ್ಯಾಪಕವಾದ ಬ್ರಹ್ಮವೇ ಉಳಿಯಿತು. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೫. ಆತ್ಮವು ಸ್ವಯಂಪ್ರಕಾಶವೆಂದು ಹೇಳುವುದರಿಂದ ಪರಪ್ರಕಾಶವು ನಿಷೇಧಿಸಲ್ಪಟ್ಟಿತು. ಪರಪ್ರಕಾಶವು ನಿಷೇಧವಾದ ಮೇಲೆ ಸ್ವಯಂಪ್ರಕಾಶವೇ ಉಳಿಯಿತು. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೬. ಆತ್ಮನು ಕೂಟಸ್ಥನೆಂದು ಹೇಳಿದ್ದರಿಂದ ವಿಕಾರತ್ವವು ನಿಷೇಧವಾದಂತಾಯಿತು. ವಿಕಾರತ್ವವು ನಿಷೇಧವಾದ ಮೇಲೆ, ಅವಿಕಾರಿಯಾದ ಕೂಟಸ್ಥವೇ ಉಳಿಯಿತು. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೭. ಆತ್ಮನು ಸಾಕ್ಷಿಯೆಂದು ಹೇಳುವುದರಿಂದ ಸಾಕ್ಷ್ಯವಸ್ತುಗಳು ನಿಷೇಧವಾದಂತಾಯಿತು. ಸಾಕ್ಷ್ಯಪದಾರ್ಥವು ನಿಷೇಧವಾದ ಮೇಲೆ ಉಳಿಯುವುದು ಸಾಕ್ಷಿ ಮಾತ್ರ. ಅದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೮. ಆತ್ಮನು ದ್ರಷ್ಟನೆಂದು ಹೇಳುವುದರಿಂದ ದೃಶ್ಯ ಪದಾರ್ಥಗಳು ನಿಷೇಧವಾದಂತಾಯಿತು. ದೃಶ್ಯವು ನಿಷೇಧವಾದ ಮೇಲೆ ಉಳಿಯುವುದು ದ್ರಷ್ಟ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೯. ಆತ್ಮನು ಉಪದ್ರಷ್ಟನೆಂದು ಹೇಳುವುದರಿಂದ ದೂರದ್ರಷ್ಟ ಪದಾರ್ಥ

ಗಳು ನಿಷೇಧವಾದಂತಾಯಿತು. ದೂರದ್ರಷ್ಟ ಪದಾರ್ಥಗಳು ನಿಷೇಧವಾದ ಮೇಲೆ ಉಳಿಯುವುದು ಉಪದ್ರಷ್ಟ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೧೦. ಆತ್ಮನು ಏಕನೆಂದು ಹೇಳುವುದರಿಂದ ಅನೇಕತ್ವವು ನಿಷೇಧವಾದಂತಾಯಿತು. ಅನೇಕತ್ವವು ನಿಷೇಧವಾದ ಮೇಲೆ ಏಕತ್ವವೇ ಉಳಿಯಿತು. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

ಇಲ್ಲಿಯವರೆಗೆ ವಿಧೇಯ ವಿಶೇಷಣಗಳ ಮುಖಾಂತರ ಬ್ರಹ್ಮಸ್ವರೂಪವಾದ ಆತ್ಮವು ಅವಾಚ್ಯನೆಂದು ನಿರ್ಣಯಿಸಿದಂತಾಯಿತು. ಇನ್ನು ಮೇಲೆ ನಿಷೇಧ್ಯ ವಿಶೇಷಣಗಳ ಮೂಲಕ ಬ್ರಹ್ಮಸ್ವರೂಪವಾದ ಆತ್ಮವು ಅವಾಚ್ಯವೆಂದು ನಿರ್ಣಯಿಸುವುದು ಹೇಗೆ ಎಂಬುದನ್ನು ನೋಡೋಣ.

ಪ್ರ ೪ : **ಅನಂತ ಮೊದಲಾದ ನಿಷೇಧ್ಯ ವಿಶೇಷಣಗಳು ಪ್ರಪಂಚವನ್ನು ನಿಷೇಧ್ಯ ಮಾಡಿ ಬ್ರಹ್ಮಸ್ವರೂಪವಾದ ಆತ್ಮವು ಅವಾಚ್ಯನೆಂದು ಹೇಗೆ ಬೋಧಿಸುತ್ತವೆ ?**

ಉ : ೧. ಬ್ರಹ್ಮಸ್ವರೂಪವಾದ ಆತ್ಮವು ಅನಂತವೆಂದು ಹೇಳುವುದರಿಂದ ದೇಶ, ಕಾಲ, ವಸ್ತುಕೃತ ಪರಿಚ್ಛೇದಗಳು ನಿಷೇಧವಾದಂತಾಯಿತು. ಪರಿಚ್ಛೇದಗಳು ನಿಷೇಧವಾದ ಮೇಲೆ ಉಳಿಯುವುದು ಅನಂತ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೨. ಬ್ರಹ್ಮಸ್ವರೂಪನಾದ ಆತ್ಮನು ಅಸಂಗನೆಂದು ಹೇಳುವುದರಿಂದ ಖಂಡವು ನಿಷೇಧವಾದಂತಾಯಿತು. ಖಂಡವೆಂದರೆ ಜೀವೇಶ್ವರಾದಿ ಪಂಚಭೇದಗಳು. ಈ ಖಂಡತ್ವವು ನಿಷೇಧವಾದ ಮೇಲೆ ಉಳಿಯುವುದು ಅಖಂಡತ್ವ. ಅದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೩. ಬ್ರಹ್ಮಸ್ವರೂಪನಾದ ಆತ್ಮನು ಅಸಂಗನೆಂದು ಹೇಳುವುದರಿಂದ ಸಂಗವು ನಿಷೇಧವಾದಂತಾಯಿತು. ಸಂಗವೆಂದರೆ ಸಜಾತೀಯಾದಿ ಸಂಬಂಧಗಳು. ಈ ಸಜಾತೀಯಾದಿ ಸಂಬಂಧಗಳು ನಿಷೇಧವಾದ ಮೇಲೆ ಉಳಿಯುವುದು ಅಸಂಗತ್ವ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ: ಮತ್ತು ಶೃತಿಯಲ್ಲೂ ಸಹ ಬ್ರಹ್ಮರೂಪವಾದ ಆತ್ಮವನ್ನು ಕುರಿತು "ಅಸಂಗೋಹ್ಯಯಂ ಪುರುಷಃ" ಎಂದು ಹೇಳಿದೆ. ಇದಕ್ಕೆ ಬ್ರಹ್ಮರೂಪನಾದ ಆತ್ಮನು ಅಸಂಗನೆಂದರ್ಥ.

೪. ಬ್ರಹ್ಮರೂಪವಾದ ಆತ್ಮವು ಅದ್ವೈತವೆಂದು ಹೇಳುವುದರಿಂದ ದ್ವೈತವು ನಿಷೇಧವಾದಂತಾಯಿತು. ಅದ್ವೈತವೆಂದರೆ ತನಗೆರಡನೆಯದು ಇಲ್ಲದ್ದು. ದ್ವೈತವೆಂದರೆ ಸ್ವಪ್ನದಂತೆ ಕಲ್ಪಿತವಾದದ್ದು. ಸ್ವಪ್ನದಂತೆ ಕಲ್ಪಿತವಾದ ದ್ವೈತವು ನಿಷೇಧವಾದ ಮೇಲೆ ಉಳಿಯುವುದು ಅದ್ವೈತ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೫. ಬ್ರಹ್ಮರೂಪವಾದ ಆತ್ಮವು ಅಜನ್ಮವೆಂದು ಹೇಳುವುದರಿಂದ ಜನ್ಮವು ನಿಷೇಧವಾದಂತಾಯಿತು. ಜನ್ಮವು ನಿಷೇಧವಾದ ಮೇಲೆ ಅಜನ್ಮವು ಸಹಜವಾಗಿ ಸಿದ್ಧಿಸುತ್ತವೆ. ಜನ್ಮವನ್ನು ನಿಷೇಧಿಸಿದನಂತರ ಅವನು ಅಜನ್ಮನೆಂದು ಹೇಳಲೇಬೇಕಾಗಿಲ್ಲ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೬. ಬ್ರಹ್ಮರೂಪವಾದ ಆತ್ಮವು ನಿರ್ವಿಕಾರವೆಂದು ಹೇಳುವುದರಿಂದ ಷಡ್ಭಾವ ವಿಕಾರಗಳನ್ನು ನಿಷೇಧಿಸಿದಂತಾಯಿತು. ಷಡ್ಭಾವ ವಿಕಾರಗಳು ನಿಷೇಧವಾದ ಮೇಲೆ ಉಳಿಯುವುದು ನಿರ್ವಿಕಾರವೊಂದೇ. ಇದು ಲಕ್ಷಣಾವೃತ್ತಿ ದ್ವಾರ ಸಿದ್ಧಿಸುತ್ತದೆ.

೭. ಬ್ರಹ್ಮರೂಪವಾದ ಆತ್ಮವು ನಿರಾಕಾರವೆಂದು ಹೇಳುವುದರಿಂದ ಆಕಾರಗಳೆಲ್ಲವನ್ನೂ ನಿಷೇಧಿಸಿದಂತಾಯಿತು. ಆಕಾರವು ನಿಷೇಧವಾದ ನಂತರ ನಿರಾಕಾರವು ತಾನೇ ಸಿದ್ಧಿಸುತ್ತದೆ. ಅನಂತರ ಆತ್ಮನು ನಿರಾಕಾರನೆಂಬುದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತವೆ.

೮. ಬ್ರಹ್ಮರೂಪವಾದ ಆತ್ಮವು ಅವ್ಯಕ್ತವೆಂದು ಹೇಳುವುದರಿಂದ ವ್ಯಕ್ತವಾದುದೆಲ್ಲವೂ ನಿಷೇಧವಾದಂತಾಯಿತು. ವ್ಯಕ್ತವು ನಿಷೇಧವಾದ ಮೇಲೆ ಉಳಿಯುವುದು ಅವ್ಯಕ್ತವೇ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೯. ಬ್ರಹ್ಮರೂಪವಾದ ಆತ್ಮನು ಅವ್ಯಯನೆಂದು ಹೇಳುವುದರಿಂದ ಅವಯುವಗಳುಳ್ಳ ಪದಾರ್ಥಗಳನ್ನು ನಿಷೇಧ ಮಾಡಿದಂತಾಯಿತು. ಅವಯುವವುಳ್ಳ ಪದಾರ್ಥವೇ ವ್ಯಯುವಾಗುವುದು. ವ್ಯಯುವು ನಿಷೇಧವಾಗುವುದರಿಂದ ಅವ್ಯಯುವೇ ಉಳಿಯುತ್ತದೆ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

೧೦. ಬ್ರಹ್ಮರೂಪವಾದ ಆತ್ಮವು ಅಕ್ಷರವೆಂದು ಹೇಳುವುದರಿಂದ ಕ್ಷರ ಅಥವಾ ನಾಶವು ನಿಷೇಧಿಸಲ್ಪಟ್ಟಂತಾಯಿತು. ಕ್ಷರವು ನಾಶವಾದ ಮೇಲೆ ಉಳಿಯುವುದು ಅಕ್ಷರ. ಇದು ಲಕ್ಷಣಾವೃತ್ತಿಯಿಂದ ಸಿದ್ಧಿಸುತ್ತದೆ.

## ಉಪಸಂಹಾರ

ಪ್ರ : ೫ **ಈ ರೀತಿ ವಿಧೇಯ ವಿಶೇಷಣಗಳನ್ನೂ, ನಿಷೇಧ್ಯ ವಿಶೇಷಣಗಳನ್ನೂ ಅರ್ಥಮಾಡಿ ತಿಳಿಯುವುದರಿಂದ ಪ್ರಯೋಜನವೇನು ?**

ಉ : ಚೇತನವಾದ ಆತ್ಮವು ಮನೋವಾಕ್‌ಕಾಯಗಳಿಗೆ ವಿಷಯವಲ್ಲ, ಅಂದರೆ ಅದು ಅವಾಚ್ಯ ಎಂದು ಶೃತಿ ಹೇಳುತ್ತದೆ. ''ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ.'' ಈ ಶೃತಿ ವಾಕ್ಯಕ್ಕೆ ಸಮನ್ವಯ ಮಾಡಿಕೊಳ್ಳುವುದಕ್ಕಾಗಿ ವಿಧೇಯ ವಿಶೇಷಣಗಳು, ನಿಷೇಧ್ಯ ವಿಶೇಷಣ ಗಳನ್ನು ಹೇಳಿದೆ.

ಪ್ರ ೬ : **ಬ್ರಹ್ಮರೂಪವಾದ ಆತ್ಮವು ಮನಸ್ಸಿಗೂ ವಾಕ್ಕಿಗೂ ಏಕೆ ವಿಷಯವಲ್ಲ ?**

ಉ : ಮನಸ್ಸಿಗೂ, ವಾಕ್ಕಿಗೂ ಪ್ರವೃತ್ತಿಯನ್ನುಂಟುಮಾಡುವ ಜಾತಿ, ಗುಣ, ಕ್ರಿಯೆ, ಸಂಬಂಧ ಮೊದಲಾದ ಧರ್ಮಗಳು ಬ್ರಹ್ಮರೂಪ ನಾದ ಆತ್ಮನಲ್ಲಿಲ್ಲ. ಅದು ಧರ್ಮಕ್ಕೂ ಅಧರ್ಮಕ್ಕೂ ವಿಲಕ್ಷಣವಾದುದ ರಿಂದ ನಿರ್ವಿಶೇಷವೆಂದು ಹೇಳಿಸಿಕೊಳ್ಳುತ್ತದೆ.

ಮತ್ತೊಂದು ವಿಷಯ : ಮಾತುಗಳೆಲ್ಲವೂ ದ್ವೈತಗಳಲ್ಲಿಯೇ ಸಂಭವಿ ಸುತ್ತವೆ. ಮಾತುಗಳೆಲ್ಲವೂ ನಿಂತುಹೋದ ಮೇಲೆಯೇ ಅದ್ವೈತ ಸಿದ್ಧಿ. ಆದುದರಿಂದ ವಿಧೇಯ ವಿಶೇಷಣಗಳಿಗೂ, ನಿಷೇಧ್ಯ ವಿಶೇಷಣಗಳಿಗೂ ಮೇಲೆ ಹೇಳಿದಂತೆ ಅರ್ಥವನ್ನು ಮಾಡಿದರೆ ಶೃತಿಯ (ಅವಾಚ್ಯ) ಸಿದ್ಧಾಂತಕ್ಕೆ ವಿರೋಧವಾಗುವುದಿಲ್ಲ. ಅದ್ವೈತವು ತನ್ನಷ್ಟಕ್ಕೆ ತಾನೇ ಬೆಳಗುತ್ತದೆ.

ಓಂ ತತ್ಸತ್

ಇಲ್ಲಿಗೆ "ಅವಾಚ್ಯ ಸಿದ್ಧಾಂತ'' ಎಂಬ ಒಂಭತ್ತನೆಯ ಕಲಾ ಮುಗಿಯುತು.

ಓಂ

ನಮೋ ಭಗವತೇ ಶಂಕರಾನಂದಾಯ

## ಹತ್ತನೆಯ ಕಲಾ ಪ್ರಾರಂಭ

# ಸಾಮಾನ್ಯ ವಿಶೇಷ ಚೈತನ್ಯ ವರ್ಣನೆ

ಪ್ರ ೧ : **ಈ ಕಲೆಗೆ ಹೆಸರೇನು ?**

ಉ : ಈ ಕಲೆಗೆ ಸಾಮಾನ್ಯ ವಿಶೇಷ ಚೈತನ್ಯ ವಿವರಣೆ ಎಂದು ಹೆಸರು.

ಪ್ರ ೨ : **ಚೈತನ್ಯದಲ್ಲಿ ಸಾಮಾನ್ಯ, ವಿಶೇಷವೆಂಬ ಭೇದವಿರುವುದೇ ?**

ಉ : ಭೇದವಿಲ್ಲದಿದ್ದರೂ ಇದ್ದಂತೆ ತೋರುವುದು.

ಪ್ರ ೩ : **ಹಾಗಾದರೆ ವಿಶೇಷ ಚೈತನ್ಯವೆಂದರೇನು ?**

ಉ : ಬ್ರಹ್ಮವು ಸಾಮಾನ್ಯ ಚೈತನ್ಯ. ಆ ಬ್ರಹ್ಮದ ಸಾಮಾನ್ಯ ಚೈತನ್ಯವು ಅಂತಃಕರಣದಲ್ಲಿಯೂ, ಅಂತಃಕರಣದ ವೃತ್ತಿಗಳಲ್ಲಿಯೂ ಪ್ರತಿಬಿಂಬಿಸುತ್ತದೆ. ಆ ಪ್ರತಿಬಿಂಬಕ್ಕೆ ಚಿದಾಭಾಸವೆಂದು ಹೆಸರು. ಆ ಚಿದಾಭಾಸ ಚೈತನ್ಯವೇ ವಿಶೇಷ ಚೈತನ್ಯ.

ಪ್ರ ೪ : **ಚಿದಾಭಾಸನ ಲಕ್ಷಣಗಳೇನು ?**

ಉ : ಚಿತ್ + ಆಭಾಸ = ಚಿದಾಭಾಸ. ಅಂದರೆ ಚೈತನ್ಯದ ಲಕ್ಷಣವಿಲ್ಲದಿದ್ದರೂ ಚೈತನ್ಯದಂತೆ ತೋರುವುದು ಚಿದಾಭಾಸ.

ಪ್ರ ೫ : **ಚಿದಾಭಾಸನು ವಿಶೇಷ ಚೈತನ್ಯವೆಂದು ಹೇಳಲು ಕಾರಣವೇನು ?**

ಉ : ಯಾವುದೋ ಒಂದು ದೇಶದಲ್ಲಿ, ಯಾವುದೋ ಒಂದು ಕಾಲದಲ್ಲಿ ಇರುವ ವಸ್ತುವು ವಿಶೇಷವೆನಿಸಿಕೊಳ್ಳುತ್ತದೆ. ಈ ನ್ಯಾಯದಂತೆ ಚಿದಾಭಾಸನು ಅಂತಃಕರಣವೆಂಬ ದೇಶದಲ್ಲಿ ಮಾತ್ರ ಇರುತ್ತಾನೆ. ಜಾಗ್ರತ, ಸ್ವಪ್ನ, ಅಜ್ಞಾನ ಕಾಲಗಳಲ್ಲಿ ಮಾತ್ರ ಇರುತ್ತಾನೆ. ಆದುದರಿಂದ ಅವನು ವಿಶೇಷ ಚೈತನ್ಯನೆಂದು ಹೇಳಿಸಿಕೊಳ್ಳುತ್ತಾನೆ.

ಪ್ರ ೬ : **ವಿಶೇಷವು ಎಷ್ಟು ವಿಧ ?**

ಉ : ಅಧಿಷ್ಠಾನ, ಅಧ್ಯಸ್ಥನೆಂದು ಎರಡು ವಿಧ.

ಪ್ರ ೭ : **ಅಧಿಷ್ಠಾನ ವಿಶೇಷವೆಂದರೇನು ?**

ಉ : ಭ್ರಾಂತಿ ಕಾಲದಲ್ಲಿ ತೋರದೇ ಇದ್ದು, ಯಾವುದು ತೋರುವುದರಿಂದ ಭ್ರಾಂತಿ ನಿವೃತ್ತಿಯಾಗುತ್ತದೆಯೋ ಅದು ಅಧಿಷ್ಠಾನ ವಿಶೇಷ.

ಪ್ರ ೮ : **ಅಧ್ಯಸ್ಥ ವಿಶೇಷವೆಂದರೇನು ?**

ಉ : ಭ್ರಾಂತಿ ಕಾಲದಲ್ಲಿ ತೋರಿ, ಅಧಿಷ್ಠಾನದ ಜ್ಞಾನವಾದ ಮೇಲೆ ತೋರದೇ ಇರವುದು ಅಧ್ಯಸ್ಥ ವಿಶೇಷ. ಇದನ್ನು ಕಲ್ಪಿತ ವಿಶೇಷವೆಂದೂ ಸಹ ಹೇಳುತ್ತಾರೆ.

ಪ್ರ ೯ : **ವಿಶೇಷ ಚೈತನ್ಯಗಳನ್ನು ಕುರಿತು ದೃಷ್ಟಾಂತಗಳೇನು ?**

ಉ : ದೃಷ್ಟಾಂತ ೧: ಸೂರ್ಯ ಪ್ರಕಾಶವು ಸರ್ವತ್ರ ವ್ಯಾಪಿಸಿರುತ್ತದೆ. ಹಾಗಿದ್ದರೂ, ಸರ್ವತ್ರವೂ ಸೂರ್ಯ ಪ್ರಕಾಶದ ಪ್ರತಿಬಿಂಬವು ಸಂಭವಿಸುವುದಿಲ್ಲ. ಕನ್ನಡಿ, ನೀರಿನಂತಿರುವ ಉಪಾಧಿಗಳಿರುವಲ್ಲಿ ಮಾತ್ರ ಸೂರ್ಯ ಪ್ರಕಾಶದ ಪ್ರತಿಬಿಂಬವು ಸಂಭವಿಸುತ್ತದೆ.

ದೃಷ್ಟಾಂತ ೨ : ಸರ್ವತ್ರವೂ ವ್ಯಾಪಿಸಿರುವ ಸೂರ್ಯ ಪ್ರಕಾಶವು ಬಟ್ಟೆಯನ್ನೇ ಆಗಲಿ, ಅರಳೆಯನ್ನೇ ಆಗಲಿ ಸುಡಲಾರದು. ಅದೇ ಸೂರ್ಯ ಪ್ರಕಾಶವು ಸೂರ್ಯಕಾಂತಮಣಿ ಅಥವಾ ಭೂತಕನ್ನಡಿ ಇವುಗಳಿಗೆ ಸಂಬಂಧಿಸಿದರೆ ಅದು ಅಗ್ನಿಯಂಥ ವಿಶೇಷ ರೂಪವನ್ನು ಧರಿಸಿ ಬಟ್ಟೆಯನ್ನೂ ಅರಳೆಯನ್ನೂ ಸುಡುತ್ತದೆ.

ಪ್ರ ೧೦ : **ಸಾಮಾನ್ಯ ಚೈತನ್ಯದ ಲಕ್ಷಣವೇನು ?**

ಉ : ಸಾಮಾನ್ಯ ಚೈತನ್ಯವು ಸರ್ವಕಾಲದಲ್ಲಿಯೂ ಸರ್ವತ್ರವೂ ಒಂದೇ ವಿಧವಾಗಿರುತ್ತದೆ. ಆ ಸಾಮಾನ್ಯ ಸ್ವರೂಪವೇ ಯಥಾರ್ಥವಾದದ್ದು.

ಪ್ರ ೧೧ : **ವಿಶೇಷ ಚೈತನ್ಯದ ಸ್ವರೂಪವೇನು ?**

ಉ : ಸಾಮಾನ್ಯ ಚೈತನ್ಯವು ಉಪಾಧಿ ದ್ವಾರ ತೋರಿದರೆ ಅದಕ್ಕೆ ವಿಶೇಷ ಚೈತನ್ಯವೆನ್ನುತ್ತಾರೆ. ಅದು ಅಲ್ಪ ಕಾಲದಲ್ಲಿಯೂ, ಅಲ್ಪ ದೇಶ ದಲ್ಲಿಯೂ ಇರುವುದರಿಂದ ಅದು ವ್ಯಭಿಚಾರಶೀಲವಾದದ್ದು, ಯಥಾರ್ಥವಲ್ಲ.

ಪ್ರ ೧೨ : **ಸಾಮಾನ್ಯ ಚೈತನ್ಯ, ವಿಶೇಷ ಚೈತನ್ಯಕ್ಕೆ ಇರುವ ಭೇದ ವೇನು ?**

ಉ : ಅಸ್ತಿ, ಭಾತಿ, ಪ್ರಿಯ ರೂಪದಿಂದ ಸಾಮಾನ್ಯ ಚೈತನ್ಯವು ಸರ್ವತ್ರವೂ ಸಮಾನವಾಗಿರುತ್ತದೆ. ಹಾಗಿದ್ದರೂ ತಿನ್ನುವುದು, ತಿರುಗಾಡು ವುದು ಮೊದಲಾದ ವಿಶೇಷ ವ್ಯವಹಾರಗಳು ಅದರಿಂದ ಸಿದ್ಧಿಸಲಾರವು. ಎಲ್ಲಿ ಅಂತಃಕರಣವೆಂಬ ಉಪಾಧಿ ಇರುವುದೋ ಅಲ್ಲಿ ವಿಶೇಷ ಚೈತನ್ಯವು ಚಿದಾಭಾಸ ರೂಪದಿಂದ ಪ್ರಕಟವಾಗಿ ತಿನ್ನುವುದು, ತಿರುಗುವುದು, ಕರ್ತೃತ್ವ ಭೋಕ್ತೃತ್ವ ಗಳು, ಲೋಕಾಂತರ ಗಮನಾಗಮನಾದಿಗಳು ಸಿದ್ಧಿಸುತ್ತವೆ.

ಪ್ರ ೧೩ : **ಸಾರಾಂಶವೇನು ?**

ಉ : ವಿಶೇಷ ವ್ಯವಹಾರಗಳೆಲ್ಲವೂ ವಿಶೇಷ ಚೈತನ್ಯದ ದ್ವಾರದಿಂದಲೇ ಸಿದ್ಧಿಸುತ್ತವೆ. ಇದು ಸಾರಾಂಶ.

ಪ್ರ ೧೪ : **ಸಾಮಾನ್ಯ ವಿಶೇಷ ಚೈತನ್ಯಗಳನ್ನು ಕುರಿತು ತಿಳಿದು ಕೊಳ್ಳಬೇಕಾದ ಅಂಶಗಳೇನು ?**

ಉ : ಸಾಮಾನ್ಯ ಚೈತನ್ಯವಾದ ಬ್ರಹ್ಮವಸ್ತುವು ಸತ್ಯವಾದದ್ದು. ಉಪಾಧಿಯಿಂದ ತೋರಿದ ವಿಶೇಷ ಚೈತನ್ಯವಾದ ಚಿದಾಭಾಸನು ಮಿಥ್ಯೆ. ಮತ್ತು ಚಿದಾಭಾಸನಿಗೆ ಸಂಬಂಧಿಸಿದ ಪುಣ್ಯ ಪಾಪಗಳ ಕರ್ತೃತ್ವವೂ, ಪುಣ್ಯ ಪಾಪ ಕರ್ಮಗಳ ಫಲವಾದ ಸುಖ-ದುಃಖಗಳ ಭೋಕ್ತೃತ್ವವೂ, ಲೋಕಾಂತರ ಗಮನಾಗಮನಾದಿಗಳೂ, ಜನನ ಮರಣಗಳೂ, ೮೪ ಲಕ್ಷ ಯೋನಿಗಳಲ್ಲಿ ಪರಿಭ್ರಮಣವೂ, ಮೊದಲಾದ ಈ ಸಂಸಾರ ಧರ್ಮಗಳೆಲ್ಲವೂ ಸಹ ಮಿಥ್ಯವೇ.

ಪ್ರ ೧೫ : **ಸಾಮಾನ್ಯ ವಿಶೇಷ ಚೈತನ್ಯಗಳನ್ನು ಕುರಿತು ಸುಲಭ ವಾಗಿ ತಿಳಿಯುವಂತೆ ದೃಷ್ಟಾಂತವನ್ನು ಹೇಳಿರಿ.**

ಉ : ಒಂದು ಬಯಲಿನಲ್ಲಿರುವ ಗೋಡೆಯನ್ನು ಸೂರ್ಯನ ಸಾಮಾನ್ಯ

ಪ್ರಕಾಶವು ಬೆಳಗಿರುತ್ತದೆ. ಸೂರ್ಯನ ಮುಂದೆ ಒಂದು ಕನ್ನಡಿಯನ್ನು ಹಿಡಿದರೆ, ಆ ಗೋಡೆಯ ಮೇಲೆ ಮತ್ತೊಂದು ಬೆಳಕು ಬೀಳುತ್ತದೆ. ಅದು ವಿಶೇಷ ಪ್ರಕಾಶ. ಎರಡೂ ಸೂರ್ಯನ ಪ್ರಕಾಶವೇ ಆಗಿದ್ದರೂ, ಒಂದು ಸಾಮಾನ್ಯ ಪ್ರಕಾಶ, ಮತ್ತೊಂದು ವಿಶೇಷ ಪ್ರಕಾಶ. ಒಂದು ನಿತ್ಯವಾದುದು, ಮತ್ತೊಂದು ಅನಿತ್ಯವಾದುದು.

ದ್ರಾಷ್ಟಾಂತ : ದೇಹದಲ್ಲಿ ಎರಡು ಪ್ರಕಾಶಗಳಿರುತ್ತವೆ. ಒಂದು ಪ್ರತ್ಯಗಾತ್ಮನ ಸಾಮಾನ್ಯ ಪ್ರಕಾಶ; ಮತ್ತೊಂದು ಅಂತಃಕರಣದಲ್ಲಿ ಪ್ರತಿಬಿಂಬಿಸಿದ ಪ್ರತ್ಯಗಾತ್ಮನ ವಿಶೇಷ ಪ್ರಕಾಶ. ಪ್ರತ್ಯಗಾತ್ಮನ ಸಾಮಾನ್ಯ ಪ್ರಕಾಶದಿಂದ ಯಾವ ವಿಶೇಷ ವ್ಯವಹಾರವೂ ನಡೆಯುವುದಿಲ್ಲ. ಸರ್ವ ವಿಶೇಷ ವ್ಯವಹಾರಗಳೂ ಚಿದಾಭಾಸನ ವಿಶೇಷ ಪ್ರಕಾಶದಿಂದಲೇ ನಡೆಯುತ್ತವೆ. ಮರಣ ಬಂದ ಮೇಲೆ ದೇಹದಿಂದ ಹೊರಗೆ ಹೋಗುವುದು ವಿಶೇಷ ಪ್ರಕಾಶ.

ಪ್ರ ೧೬ : **ಸಾಮಾನ್ಯ ಚೈತನ್ಯವು ಸಂಸಾರಿಯಲ್ಲ, ವಿಶೇಷ ಚೈತನ್ಯವೇ ಸಂಸಾರಿ ಎಂಬುದಕ್ಕೆ ಶಾಸ್ತ್ರ ಪ್ರಮಾಣವೇನು ?**

ಉ : ಶ್ರೀಮದ್ವಿದ್ಯಾರಣ್ಯ ಸ್ವಾಮಿಗಳು ವೇದಾಂತ ಪಂಚದಶಿಯಲ್ಲಿ– ''ಆತ್ಮಾಭಾಸಸ್ಯ ಜೀವಸ್ಯ ಸಂಸಾರೋನಾತ್ಮವಸ್ತುನಿ,'' ಅಂದರೆ: ಆತ್ಮಾಭಾಸನಾದ ಜೀವನಿಗೇ ಸಂಸಾರ, ಆತ್ಮನಿಗಲ್ಲ, ಎಂದು ಹೇಳಿದ್ದಾರೆ.

ಪ್ರ ೧೭ : **ಹಿಂದೆ ಹೇಳಿದ ವಿಶೇಷ ಚೈತನ್ಯದ ಸ್ವರೂಪ ಜ್ಞಾನದಿಂದ ಆಗುವ ನಿಶ್ಚಯವೇನು ?**

ಉ : ವಿಶೇಷ ಚೈತನ್ಯವೆಂದು ಹೇಳಿಸಿಕೊಳ್ಳುತ್ತಿರುವ ಚಿದಾಭಾಸನೂ, ಮೇಲೆ ಹೇಳಿದ ಆತನ ಸಮಸ್ತ ಧರ್ಮಗಳೂ, ೧. ನಾನೂ ಅಲ್ಲ, ೨. ನನ್ನವೂ ಅಲ್ಲ, ೩. ಅವು ನನ್ನಲ್ಲಿ ಕಲ್ಪಿತಗಳು ಮಾತ್ರ, ಮತ್ತು ೪. ಅವುಗಳಿಗೆ ಭಿನ್ನವಾಗಿದ್ದು ಅವುಗಳಿಗೆ ಅಧಿಷ್ಠಾನವಾದ ಚೈತನ್ಯವೇ ನಾನು ಎಂಬ ನಾಲ್ಕು ನಿಶ್ಚಯಗಳಾಗುತ್ತವೆ.

ಪ್ರ ೧೮ : **ವಿಶೇಷ ಚೈತನ್ಯವನ್ನು ಈ ರೀತಿ ತಿಳಿದುಕೊಂಡ ಮೇಲೆ ಸಾಮಾನ್ಯ ಚೈತನ್ಯದ ಲಕ್ಷಣವೇನು ?**

ಉ : ಸಾಮಾನ್ಯ ಚೈತನ್ಯಕ್ಕೆ ನಾಲ್ಕು ಲಕ್ಷಣಗಳು : ೧. ಆಕಾಶದಂತೆ ಸರ್ವತ್ರವೂ ವ್ಯಾಪಕವಾಗಿರುವುದು. ಇದಕ್ಕೆ "ಆಕಾಶವತ್ಸರ್ವಗತಶ್ಚ ನಿತ್ಯಃ"

ಎಂಬ ಶೃತಿಯೇ ಪ್ರಮಾಣ. ೨. ಸಮಸ್ತ ನಾಮರೂಪಗಳಿಗೆ ಅಧಿಷ್ಠಾನವಾಗಿ ರುವುದು. ೩. ಅಸ್ತಿ, ಭಾತಿ, ಪ್ರಿಯ ರೂಪವಾಗಿರುವುದು. ೪. ಸರ್ವ ಶೃತಿಗ ಳಿಂದಲೂ ನಿರ್ವಿಕಾರ ಪರಬ್ರಹ್ಮವೆಂದು ಹೇಳಿಸಿಕೊಳ್ಳುವುದು.

ಪ್ರ ೧೯ : **ಬ್ರಹ್ಮವನ್ನು ಸಾಮಾನ್ಯ ಚೈತನ್ಯವೆಂದು ಏಕೆ ಹೇಳ ಬೇಕು ?**

ಉ : ಅಧಿಕ ಪ್ರದೇಶದಲ್ಲಿ, ಅಧಿಕ ಕಾಲದಲ್ಲಿ ವ್ಯಾಪಿಸಿರುವುದಕ್ಕೆ ಸಾಮಾನ್ಯವೆನ್ನುತ್ತಾರೆ. ಅದು ಬುದ್ಧಿಯಿಂದ ಕಲ್ಪಿತವಾದ ಸರ್ವ ಪ್ರದೇಶ ಗಳಲ್ಲಿಯೂ ಸರ್ವ ಕಾಲಗಳಲ್ಲಿಯೂ ವ್ಯಾಪಿಸಿರುವುದರಿಂದ ಅದಕ್ಕೆ ಬ್ರಹ್ಮ ವೆಂದು ಹೆಸರು. ಅಂಥಾ ಬ್ರಹ್ಮವೇ ಸಾಮಾನ್ಯ ಚೈತನ್ಯ.

ಪ್ರ ೨೦ : **ಸಾಮಾನ್ಯ ಚೈತನ್ಯವನ್ನು ಸುಲಭವಾಗಿ ತಿಳಿದು ಕೊಳ್ಳುವ ದೃಷ್ಟಾಂತಗಳೇನು ?**

ಉ : ೧. ಇರುವುದು ರಜ್ಜು. ಒಬ್ಬನು ಅದಕ್ಕೆ ಭ್ರಾಂತಿಯಿಂದ ಹಾವು ಎನ್ನುತ್ತಾನೆ. ಮತ್ತೊಬ್ಬನು ಅದಕ್ಕೆ ಕೋಲು ಎನ್ನುತ್ತಾನೆ. ಮೂರನೆಯವನು ಅದಕ್ಕೆ ನೆಲದ ಬಿರುಕು ಎನ್ನುತ್ತಾನೆ. ನಾಲ್ಕನೆಯವನು ಅದಕ್ಕೆ ಹೂವಿನ ಮಾಲೆ ಎನ್ನುತ್ತಾನೆ. ಅವರು ಭ್ರಾಂತಿ ಮಾಡುವ ವ್ಯವಹಾರದಲ್ಲಿ ಸಾಮಾ ನ್ಯಾಂಶ, ವಿಶೇಷಾಂಶವೆಂದು ಎರಡು ಅಂಶಗಳಿರುತ್ತವೆ. ಹೇಗೆಂದರೆ, ಇದು ಹಾವು, ಇದು ಕೋಲು, ಇದು ನೆಲದ ಬಿರುಕು, ಇದು ಹೂವಿನ ಮಾಲೆ ಎಂದು ಹೇಳುವಾಗ, ಇದು, ಇದು, ಎಂಬ ಅಂಶವು ನಾಲ್ಕರಲ್ಲಿಯೂ ವ್ಯಾಪಿಸಿರುತ್ತದೆ. ಅಂದರೆ ಭ್ರಾಂತಿ ಕಾಲದ ವ್ಯವಹಾರದಲ್ಲಿಯೂ ಸಹ ಈ ಅಂಶಕ್ಕೆ ಲೋಪವಿಲ್ಲ. ಮತ್ತು ಇದು ಎಂಬುದು ಹಗ್ಗದ ಸ್ವರೂಪವೇ. ಅದಕ್ಕೆ ಸಾಮಾನ್ಯಾಂಶ ವೆನ್ನುತ್ತಾರೆ. ಭ್ರಾಂತಿ ನಿವೃತ್ತಿಯಾದ ಮೇಲೂ ಸಹ ಇದು ಹಗ್ಗವೆಂದು ವ್ಯವಹಾರ ಮಾಡುವಾಗಲೂ "ಇದು" ಎಂಬ ಅಂಶವು ಇದ್ದೇ ಇದೆ. ಈ ಸಾಮಾನ್ಯಾಂಶವು ಅವ್ಯಭಿಚಾರಿ, ಅಂದರೆ ಭ್ರಾಂತಿ ಕಾಲದಲ್ಲಿಯೂ, ಭ್ರಾಂತಿ ನಿವೃತ್ತಿಯಾದ ಮೇಲೂ ಬದಲಾಯಿಸುವುದಿಲ್ಲ. ಆದ ಕಾರಣದಿಂದಲೇ ಇದು ಸತ್ಯ. ಭ್ರಾಂತಿ ಕಾಲದಲ್ಲಿ ತೋರುವ ಸರ್ಪಾದಿಗಳು ಪರಸ್ಪರ ವ್ಯಭಿಚಾರಿಗಳು. ಅವು ಬದಲಾಯಿಸುತ್ತವೆ.

ಆದುದರಿಂದಲೇ ಅವು ವಿಶೇಷಾಂಶಗಳು. ಈ ವಿಶೇಷಾಂಶಗಳನ್ನು ಕಲ್ಪಿತ ಗಳೆನ್ನುತ್ತಾರೆ. ಇವೇ ದೃಷ್ಟಾಂತ.

ಪ್ರ ೨೧ : **ಮೇಲೆ ಹೇಳಿದ ದೃಷ್ಟಾಂತಕ್ಕೆ ದಾರ್ಷ್ಟಾಂತವೇನು ?**

ಉ : ಸರ್ವ ಪದಾರ್ಥಗಳಲ್ಲಿಯೂ ಅಸ್ತಿ, ಭಾತಿ, ಪ್ರಿಯ, ನಾಮ, ರೂಪಗಳೆಂಬ ಐದು ಅಂಶಗಳಿರುತ್ತವೆ.

ಉದಾ : ೧. ಗಡಿಗೆ ಇದೆ. ಇದು ಅಸ್ತಿಯೆಂಬ ಅಂಶ. ಈ ಅಂಶಕ್ಕೆ ಸತ್ ಎಂದು ಮತ್ತೊಂದು ಹೆಸರು.

೨. ಗಡಿಗೆಯು ಪ್ರಕಾಶಿಸುತ್ತವೆ, ಅಂದರೆ ತೋರುತ್ತವೆ. ತೋರುತ್ತವೆ ಎಂಬುವುದು ಭಾತಿ ಎಂಬ ಅಂಶ. ಇದಕ್ಕೆ ಚಿತ್ ಎಂದು ಹೇಳುತ್ತಾರೆ.

೩. ಗಡಿಗೆಯು ಉಪಯೋಗಕ್ಕೆ ಬರುತ್ತವೆ, ಅಂದರೆ ಬೇಕಾಗುತ್ತದೆ. ಇವೇ ಪ್ರಿಯವೆಂಬ ಅಂಶ. ಇದಕ್ಕೆ ಆನಂದವೆಂದು ಮತ್ತೊಂದು ಹೆಸರು.

೪. ಗಡಿಗೆ ಎಂಬ ಮೂರಕ್ಷರಗಳು ಆ ವಸ್ತುವಿಗೆ ಹೆಸರು.

೫. ಗಡಿಗೆಗೆ ಇರುವ ಹೊಟ್ಟೆ, ಕುತ್ತಿಗೆ ಮೊದಲಾದುವುಗಳು ಅದರ ರೂಪವೆಂಬ ಅಂಶ. ಈ ವಿಧವಾಗಿ ಪ್ರತಿ ಭೂತಗಳಲ್ಲಿಯೂ, ಪ್ರತಿ ಭೂತ ಕಾರ್ಯಗಳಲ್ಲಿಯೂ ಅಸ್ತಿ, ಭಾತಿ, ಪ್ರಿಯ, ನಾಮ, ರೂಪಗಳೆಂಬ ಐದು ಅಂಶಗಳನ್ನು ಗ್ರಹಿಸಬೇಕು. ಇದನ್ನೇ ವೇದಾಂತ ಡಿಂಡಿಮವೆಂಬ ಗ್ರಂಥದಲ್ಲಿ–

**ಅಸ್ತಿಭಾತಿ ಪ್ರಿಯಂನಾಮಂರೂಪಂ ಚೇತ್ಯಂಶ ಪಂಚಕಂ ।**
**ಆದ್ಯತ್ರಯಂ ಬ್ರಹ್ಮರೂಪಂ ಮಾಯಾರೂಪಂ ತತೋದ್ವಯಂ ॥**

ಎಂದು ಹೇಳಿವೆ. ಅಂದರೆ ಪ್ರತಿ ಪದಾರ್ಥಗಳಲ್ಲಿಯೂ ಅಸ್ತಿ, ಭಾತಿ, ಪ್ರಿಯ, ನಾಮ, ರೂಪಗಳೆಂದು ಐದು ಅಂಶಗಳಿರುತ್ತವೆ. ಅವುಗಳಲ್ಲಿ ಮೊದಲಿನ ಮೂರು ಅಂಶಗಳು ಬ್ರಹ್ಮಕ್ಕೆ ಸೇರಿದವುಗಳು. ಕೊನೆಯವೆರಡು ಮಾಯಾರೂಪಗಳು.

ಪ್ರ ೨೨ : **ಈ ಐದು ಅಂಶಗಳನ್ನು ವ್ಯಷ್ಟಿ ದೇಹದಲ್ಲಿ ಹೇಗೆ ತಿಳಿದು ಕೊಳ್ಳಬೇಕು ?**

ಉ : ೧. ನಾನು ಇದ್ದೇನೆ ಎಂಬುದು ಅಸ್ತಿ ಅಂಶ. ೨. ನಾನು ತಿಳಿದುಕೊಳ್ಳುತ್ತೇನೆ ಎಂಬುದು ಭಾತಿ ಅಂಶ. ೩. ನಾನು ನನಗೆ ಪ್ರಿಯಾಸ್ಪದನಾಗಿದ್ದೇನೆ ಎಂಬುದು ಪ್ರಿಯಾಂಶ. ೪. ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ, ಚಿತ್ತಗಳು, ಅವುಗಳ ಧರ್ಮಗಳು ನಾಮವೆಂಬ ಅಂಶದೊಳಗೆ ಸೇರಿರುತ್ತವೆ. ೫. ದೇಹಕ್ಕಿರುವ ಆಕಾರವು ರೂಪವೆಂಬ ಅಂಶದಲ್ಲಿ ಸೇರುತ್ತವೆ. ಇದು ವ್ಯಷ್ಟಿದೇಹದ ವಿಚಾರ.

ಇನ್ನು ಘಟಾದಿ ಕಾರ್ಯ ವಸ್ತುಗಳೆಲ್ಲವುಗಳಿಗೂ ಪೃಥ್ವಿಯೇ ಕಾರಣ ವಸ್ತು. ಈ ಪೃಥ್ವಿಯಲ್ಲಿ ಈ ಐದು ಅಂಶಗಳನ್ನು ನೋಡೋಣ.

೧. ಪೃಥ್ವಿಯು ಇದೆ. ಇದು ಅಸ್ತಿ ಅಂಶ.

೨. ಪೃಥ್ವಿಯು ತೋರುತ್ತದೆ. ಇದು ಭಾತಿ ಅಂಶ.

೩. ಪೃಥ್ವಿಯು ನಿವಾಸ ಮಾಡಲು ಬೇಕಾಗಿದೆ. ಇದು ಪ್ರಿಯಾಂಶ.

೪. ಪೃಥ್ವಿಯೆಂಬ ಹೆಸರು. ಇದು ನಾಮಾಂಶ.

೫. ಗಂಧ ಗುಣಗಳಿಂದ ಕೂಡಿದ ಆಕಾರವೇ ಇದಕ್ಕೆ ರೂಪ. ಇದು ರೂಪಾಂಶ.

ಪೃಥ್ವಿಯಲ್ಲಿ ತೋರುವ ನಾಮ ರೂಪಗಳೆಂಬ ಎರಡು ಅಂಶಗಳನ್ನು ತ್ಯಜಿಸಿದರೆ ಉಳಿಯುವುದು ಜಲ. ಪೃಥ್ವಿಯಲ್ಲಿದ್ದಂತೆ ಜಲದಲ್ಲಿಯೂ ಐದು ಅಂಶಗಳಿವೆ. ಜಲದಲ್ಲಿರುವ ನಾಮ ರೂಪಗಳೆಂಬ ಎರಡು ಅಂಶಗಳನ್ನು ತ್ಯಜಿಸಿದರೆ ಉಳಿಯುವುದು ತೇಜಸ್ಸು. ಅದರಲ್ಲಿಯೂ ಐದು ಅಂಶಗಳಿವೆ. ತೇಜಸ್ಸಿನಲ್ಲಿರುವ ನಾಮ ರೂಪಗಳೆಂಬ ಎರಡು ಅಂಶಗಳನ್ನು ತ್ಯಜಿಸಿದರೆ ಉಳಿಯುವುದು ವಾಯು. ವಾಯುವಿನಲ್ಲಿರುವ ನಾಮ ರೂಪಗಳೆಂಬ ಎರಡು ಅಂಶಗಳನ್ನು ತ್ಯಜಿಸಿದರೆ ಉಳಿಯುವುದು ಆಕಾಶ.

ಇದರಂತೆ ಆಕಾಶದಲ್ಲಿರುವ ನಾಮ ರೂಪಗಳನ್ನು ತೆಗೆದುಹಾಕಿದರೆ ಉಳಿಯುವುದು ಅಜ್ಞಾನ. ಅಜ್ಞಾನದಲ್ಲಿಯೂ ಐದು ಅಂಶಗಳಿರುತ್ತವೆ. ೧. ಅಜ್ಞಾನವಿದೆಯೆಂಬುದು ಅಸ್ತಿ ಅಂಶ. ೨. ಅಜ್ಞಾನವು ತೋರುತ್ತದೆ ಎಂಬುದು ಭಾತಿ ಅಂಶ. ಜಾಗ್ರದಾವಸ್ಥೆಯಲ್ಲಿ ಅಜ್ಞಾನವು ನಾನಾರೋ, ನನಗೆ ಗೊತ್ತಿಲ್ಲವೆಂಬ ರೂಪದಲ್ಲಿ ತೋರುತ್ತದೆ. ಸ್ವಪ್ನಾವಸ್ಥೆಯಲ್ಲಿ ಸ್ವಪ್ನಕ್ಕೆ ಕಾರಣವಾದ ನಿದ್ರಾರೂಪದಲ್ಲಿ ಕಂಡುಬರುತ್ತದೆ. ಸುಷುಪ್ತಿಯಲ್ಲಿ ನಾನು

ಇಲ್ಲಿಯವರೆಗೆ ಸುಖವಾಗಿ ಮಲಗಿದ್ದೆ, ನನಗೇನೂ ತೋರಲಿಲ್ಲ ಎಂಬ ರೂಪದಲ್ಲಿ ತೋರುತ್ತದೆ. ಈ ರೀತಿ ಅಜ್ಞಾನವು ಮೂರೂ ಅವಸ್ಥೆಗಳಲ್ಲಿ ತೋರುತ್ತದೆ.

೩. ಅಜ್ಞಾನವು ಅಜ್ಞಾನಿಗಳಿಗೆ ಪ್ರಿಯವಾಗಿದೆ ಎಂಬುದು ಪ್ರಿಯಾಂಶ.

೪. ಅಜ್ಞಾನವೆಂಬ ಹೆಸರು ನಾಮಾಂಶಕ್ಕೆ ಸೇರಿದ್ದು.

೫. ಅಜ್ಞಾನವು ಭಾವರೂಪವಾಗಿದೆ ಎಂಬುದು ರೂಪಾಂಶಕ್ಕೆ ಸೇರಿದ್ದು.

೧. ಅಜ್ಞಾನದ ಈ ಐದು ಅಂಶಗಳಲ್ಲಿ ನಾಮ ರೂಪಗಳನ್ನು ತೆಗೆದು ಹಾಕಿದರೆ ಸರ್ವ ವಸ್ತುಗಳ ಅಭಾವವು ಉಳಿಯುತ್ತದೆ. ಸರ್ವ ವಸ್ತುಗಳ ಅಭಾವವೆಂಬುದು ಅಸ್ತಿಯ ಅಂಶ. ೨. ಏನೂ ಉಳಿಯದ ಶೂನ್ಯವು ತೋರುತ್ತವೆ ಎಂಬುದು ಭಾತಿ. ೩. ಶೂನ್ಯವು ಶೂನ್ಯವಾದಿಗಳಿಗೆ ಪ್ರಿಯವಾಗಿದೆ ಎಂಬುದು ಪ್ರಿಯಾಂಶ. ೪. ಅಭಾವವೆಂಬುದೇ ಅದಕ್ಕೆ ಹೆಸರು. ೫. ನಿಷೇಧ ಮುಖದಿಂದ ಪ್ರತೀತಿಗೆ ವಿಷಯವಾದ ಸರ್ವ ವಸ್ತುಗಳ ಅಭಾವವೇ ಅದಕ್ಕೆ ರೂಪ. ಈ ಅಭಾವದ ನಾಮ ರೂಪಾಂಶಗಳನ್ನು ತ್ಯಜಿಸಿದರೆ ಅಭಾವದ ಸ್ವರೂಪ ಭೂತವಾದ ಅಧಿಷ್ಠಾನವೆಂಬ ಸದ್ವಸ್ತುವು ಉಳಿಯುತ್ತದೆ. ಇದು ಅಧಿಷ್ಠಾನದ ಅಸ್ತಿ ಅಂಶ. ಈ ಅಸ್ತಿ ಅಂಶವು ಅಭಾವವನ್ನು ಪ್ರಕಾಶ ಮಾಡುತ್ತದೆ. ಅದು ಭಾತಿ ಅಂಶ. ಇದಕ್ಕೆ ಚಿತ್ ಎಂದು ಹೇಳುತ್ತಾರೆ. ಈ ಚಿತ್ತು ದುಃಖಕ್ಕೆ ಭಿನ್ನವಾದುದರಿಂದ ಆನಂದವೆಂದು ಹೇಳಿಸಿಕೊಳ್ಳುತ್ತದೆ. ಇದು ಅಧಿಷ್ಠಾನದ ಪ್ರಿಯಾಂಶ. ಇದು ಮಾಯಾಂಶಗಳಾದ ನಾಮ ರೂಪಗಳಿಗೆ ಭಿನ್ನವಾಗಿದೆ. ಈ ವಿಧವಾಗಿ ಸರ್ವ ನಾಮ ರೂಪಗಳಲ್ಲಿಯೂ ಅಧಿಷ್ಠಾನವು ಅಸ್ತಿ, ಭಾತಿ, ಪ್ರಿಯ ರೂಪದಿಂದ ಅನುಗತವಾಗಿರುವುದರಿಂದ ಇದಕ್ಕೆ ವ್ಯಭಿಚಾರವಿಲ್ಲ. ಇದು ಸತ್ಯ ವಸ್ತು. ಇದೇ ಸಾಮಾನ್ಯ ಚೈತನ್ಯ.

ಪ್ರ ೨೩ : **ಸಾಮಾನ್ಯ ಚೈತನ್ಯವನ್ನು ತಿಳಿದ ಮೇಲೆ ಪ್ರತಿ ಪದಾರ್ಥಗಳಲ್ಲಿಯೂ ನಾಮ ರೂಪಗಳೆಂಬ ಅಂಶಗಳ ವಿಚಾರವೇನು ?**

ಉ : ಅವು ಮಿಥ್ಯೆ. ಯಾಕೆಂದರೆ ಘಟದಲ್ಲಿರುವ ನಾಮ ರೂಪಗಳು ಪಟದಲ್ಲಿಲ್ಲ. ಪಟದಲ್ಲಿದ್ದ ನಾಮ ರೂಪಗಳು ಪುಸ್ತಕದಲ್ಲಿಲ್ಲ. ಪುಸ್ತಕದಲ್ಲಿದ್ದ ನಾಮ ರೂಪಗಳು ಗಡಿಯಾರದಲ್ಲಿಲ್ಲ. ಇವು ಪ್ರತಿ ಪದಾರ್ಥಗಳಲ್ಲಿಯೂ ಬೇರೆ ಬೇರೆಯಾಗಿರುವುದರಿಂದ ವ್ಯಭಿಚಾರ ಶೀಲಗಳೆಂದು ಹೇಳಿಸಿಕೊಳ್ಳುತ್ತವೆ.

ಒಂದು ಕಡೆ ಇದ್ದು ಮತ್ತೊಂದು ಕಡೆ ಇಲ್ಲದಿರುವುದರಿಂದಲೇ ಇವು ಮಿಥ್ಯೆಗಳು. ಈ ವಿಚಾರದಿಂದ ಸಾಮಾನ್ಯ ಚೈತನ್ಯದ ವಿಚಾರವು ದೃಢವಾಗುತ್ತದೆ.

ಪ್ರ ೨೪ : **ಸಾಮಾನ್ಯ ಚೈತನ್ಯವು ಸ್ಫುಟವಾಗಿ ತೋರುವುದು ಎಲ್ಲಿ ?**

ಉ : ೧. ಸುಷುಪ್ತಿ, ಮೂರ್ಛೆ, ಸಮಾಧಿ ಈ ಮೂರು ಅವಸ್ಥೆಗಳನ್ನು ಪ್ರಕಾಶ ಮಾಡುವುದೇ ಸಾಮಾನ್ಯ ಚೈತನ್ಯ.

೨. ನಾನು ಘಟವನ್ನು ತಿಳಿಯುತ್ತೇನೆ ಎಂಬಲ್ಲಿ ''ನಾನು'' ಎಂಬುದು ಪ್ರಮಾತೃ, ಘಟವು ಪ್ರಮೇಯ, ತಿಳಿಯುತ್ತೇನೆ ಪ್ರಮಾಣ. ಈ ತ್ರಿಪುಟಿಗಳ ವ್ಯವಹಾರವನ್ನು ಪ್ರಕಾಶ ಮಾಡುವ ಸಾಕ್ಷಿಯೇ ಸಾಮಾನ್ಯ ಚೈತನ್ಯ.

೩. ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳ ಸಂಧಿಯನ್ನು ಪ್ರಕಾಶ ಮಾಡುವುದೇ ಸಾಮಾನ್ಯ ಪ್ರಕಾಶ.

೪. ಒಂದು ಸಂಕಲ್ಪವು ಹೊರಟುಹೋಗಿ, ಮತ್ತೊಂದು ಸಂಕಲ್ಪವು ಹುಟ್ಟುವುದಕ್ಕಿಂತ ಮೊದಲು ಮಧ್ಯೆಯಿರುವ ಸಂಧಿಯನ್ನು ಪ್ರಕಾಶ ಮಾಡುವುದು ಸಾಮಾನ್ಯ ಚೈತನ್ಯ.

೫. ಒಬ್ಬನ ಅಂತಃಕರಣದ ವೃತ್ತಿಯು ಸೂರ್ಯನ ಆಕಾರವಾಗಿದೆ. ಆ ವೃತ್ತಿಯು ಚಂದ್ರನ ಆಕಾರವನ್ನು ಧರಿಸುತ್ತದೆ. ಆ ಎರಡು ವೃತ್ತಿಗಳ ಮಧ್ಯೆ ಇರುವ ಸಂಧಿಯನ್ನು ಪ್ರಕಾಶ ಮಾಡುವುದೇ ಸಾಮಾನ್ಯ ಚೈತನ್ಯ.

೬. ಒಬ್ಬನು ಮತ್ತೊಬ್ಬನನ್ನು 'ಹಿಮಾಲಯ ಪರ್ವತವನ್ನು ನೋಡಿರುವೆಯಾ' ಎಂದು ಕೇಳಿದನು. ಆಗ ಅವನು ನನಗೆ ಗೊತ್ತಿಲ್ಲವೆಂದು ಹೇಳಿದನು. ಈ ಅಜ್ಞಾನ ವಿಶಿಷ್ಟವಾದ ಹಿಮಾಲಯ ಪರ್ವತವನ್ನು ಬೆಳಗುವ ಪ್ರಕಾಶವೇ ಸಾಮಾನ್ಯ ಚೈತನ್ಯ. ಈ ರೀತಿ ಇನ್ನೂ ಅನೇಕ ಸ್ಥಳಗಳಲ್ಲಿ ಊಹಿಸಿ ಸಾಮಾನ್ಯ ಚೈತನ್ಯವನ್ನು ನಿರ್ಣಯಿಸಿಕೊಳ್ಳಬೇಕು.

ಪ್ರ ೨೫ : **ಸಾಮಾನ್ಯ ಚೈತನ್ಯವನ್ನು ವಿಶೇಷ ರೂಪದಿಂದ ವರ್ಣಿಸಿರಿ.**

ಉ : ಸಾಮಾನ್ಯ ಚೈತನ್ಯವು ಎಲ್ಲವುಗಳಿಗಿಂತ ಸೂಕ್ಷ್ಮವೂ, ಎಲ್ಲವುಗಳಿಗಿಂತ ವ್ಯಾಪಕವೂ ಆಗಿದೆ.

ಪ್ರ ೨೬ : **ಅದು ಹೇಗೆ ?**

ಉ : ಕಾರ್ಯ ವಸ್ತುಗಳೆಲ್ಲವೂ ಸ್ಥೂಲವಾಗಿಯೂ, ಪರಿಚ್ಛಿನ್ನವಾಗಿಯೂ ಇರಬೇಕೆಂಬುದು ನಿಯಮ. ಈ ನಿಯಮದಂತೆ ಸಾಮಾನ್ಯ ಚೈತನ್ಯವು ಸರ್ವ ವಸ್ತುಗಳಿಗೂ ಕಾರಣವಾಗಿರುವುದರಿಂದ ಅದು ಸೂಕ್ಷ್ಮವಾಗಿಯೂ ವ್ಯಾಪಕವಾಗಿಯೂ ಇರಲೇಬೇಕು. ಸಾಮಾನ್ಯ ಚೈತನ್ಯವೆಂದರೆ ಬ್ರಹ್ಮ. ಅದು ಸರ್ವಕ್ಕೂ ಕಾರಣವಾದುದರಿಂದ ಸರ್ವಕ್ಕೂ ಸೂಕ್ಷ್ಮವಾಗಿಯೂ ವ್ಯಾಪಕವಾಗಿಯೂ ಇರುತ್ತದೆ.

ಪ್ರ ೨೭ : **ಸೂಕ್ಷ್ಮತ್ವ ವ್ಯಾಪಕತ್ವದ ವಿಚಾರವನ್ನು ಮತ್ತಷ್ಟು ವಿವರಿಸಿರಿ.**

ಉ : ೧. ಸಮುದ್ರದ ನೀರಿನಲ್ಲಿ ನೊರೆ ಉಂಟಾಗುತ್ತದೆ. ಮತ್ತು ಉಪ್ಪೂ ಸಹ ಆಗುತ್ತದೆ. ನೀರಿನ ಕಾರ್ಯಗಳಾದ ಈ ನೊರೆ ಉಪ್ಪುಗಳು ನೀರಿಗಿಂತ ಕಠಿಣವಾಗಿರುತ್ತವೆ. ಇವುಗಳಲ್ಲಿ ನೀರಿನಲ್ಲಿರುವ ದ್ರವತ್ವವು ಕಂಡು ಬರುವುದಿಲ್ಲ. ಇದನ್ನು ನೋಡಿದರೆ ಪೃಥ್ವಿಯು ಜಲದ ಕಾರ್ಯವೆಂಬುದು ನಿಶ್ಚಯವಾಗುತ್ತದೆ. ಪೃಥ್ವಿಗಿಂತ ಜಲವು ಸೂಕ್ಷ್ಮ ಮತ್ತು ವ್ಯಾಪಕ. ಒಂದು ಬಟ್ಟೆ ಚೀಲದಲ್ಲಿ ನೀರನ್ನು ಸುರಿದರೆ ಅದು ಸೋರಿಹೋಗುತ್ತದೆ. ಅದೇ ಬ್ಯಾಗಿನಲ್ಲಿ ಭೂ ಸಂಬಂಧವಾದ ಮಣ್ಣು ಕಲ್ಲನ್ನು ಹಾಕಿದರೆ ಸೋರಿ ಹೋಗಲಾರವು. ಭೂಮಿಯನ್ನು ಎಲ್ಲಿ ಅಗೆದರೂ ನೀರು ಬಂದೇ ಬರುತ್ತದೆ. ಇದಲ್ಲದೆ ಪುರಾಣಗಳಲ್ಲಿ ಭೂ ಪ್ರದೇಶಕ್ಕಿಂತಲೂ ಜಲ ಪ್ರದೇಶವು ಹತ್ತರಷ್ಟು ದೊಡ್ಡದು ಎಂದು ಹೇಳಿದೆ. ಈ ಎಲ್ಲಾ ಕಾರಣಗಳಿಂದ ಪೃಥ್ವಿಗಿಂತ ಜಲವು ಸೂಕ್ಷ್ಮವೂ ವ್ಯಾಪಕವೂ ಆಗಿದೆ.

೨. ಇನ್ನು ಬಹಳ ಉಷ್ಣವಾದರೆ ದೇಹದಲ್ಲಿ ಬೆವರು ಬರುತ್ತದೆ. ಅದರಂತೆ ವಾತಾವರಣದಲ್ಲಿ ತಾಪವು ಹೆಚ್ಚಾದರೆ ಮಳೆ ಬರುತ್ತದೆ. ಇದರಿಂದ ಜಲವು ಅಗ್ನಿಯ ಕಾರ್ಯವೆಂದು ತಿಳಿದುಬರುತ್ತದೆ. ಆದುದರಿಂದ ಜಲಕ್ಕಿಂತಲೂ ಅಗ್ನಿಯು ಸೂಕ್ಷ್ಮವೂ ವ್ಯಾಪಕವೂ ಆಗಿದೆ. ನೀರು ಬಟ್ಟೆ ಬ್ಯಾಗಿನಲ್ಲಿ ಸೋರಿಹೋದರೂ ಸುಟ್ಟ ಗಡಿಗೆಯಲ್ಲಿ ಬಂಧಿಸಲ್ಪಡುತ್ತದೆ. ಆದರೆ ಸೂರ್ಯ ಮೊದಲಾದುವುಗಳ ತೇಜಸ್ಸು ಆ ವಿಧವಾಗಿ ಬಂಧಿಸಲ್ಪಡಲಾರದು. ಪುರಾಣಗಳಲ್ಲಿಯೂ ನೀರಿಗಿಂತ ಅಗ್ನಿಯು ಹತ್ತರಷ್ಟು ಅಧಿಕ

ವಾಗಿದೆ ಎಂದು ಹೇಳಿದೆ. ಆದುದರಿಂದ ಜಲಕ್ಕಿಂತ ಅಗ್ನಿಯು ಸೂಕ್ಷ್ಮವೂ ವ್ಯಾಪಕವೂ ಆಗಿದೆ.

೩. ಅಗ್ನಿಯ ಆವಿರ್ಭಾವ, ತಿರೋಭಾವಗಳು (ಉತ್ಪತ್ತಿ ನಾಶಗಳು) ವಾಯುವಿನ ಅಧೀನದಲ್ಲಿರುವುದರಿಂದ ಅಗ್ನಿಯು ವಾಯುವಿನ ಕಾರ್ಯವೆಂದು ಹೇಳುತ್ತಾರೆ. ಸೂರ್ಯಾದಿಗಳ ತೇಜಸ್ಸು ಪಾತ್ರೆ ಮೊದಲಾದುವುಗಳಲ್ಲಿ ಬಂಧಿಸಲ್ಪಡದಿದ್ದರೂ, ಅದು ಕಣ್ಣಿಗೆ ಕಾಣುತ್ತದೆ. ವಾಯುವು ಕಣ್ಣಿಗೆ ಕಾಣಲಾರದು. ಈ ಕಾರಣದಿಂದ ಅಗ್ನಿಗಿಂತ ವಾಯುವು ಸೂಕ್ಷ್ಮವೂ, ವ್ಯಾಪಕವೂ ಎಂದು ಕಂಡುಬರುತ್ತದೆ. ಮತ್ತು ಪುರಾಣಗಳಲ್ಲಿ ಅಗ್ನಿಗಿಂತ ವಾಯುವು ಹತ್ತರಷ್ಟು ವಿಸ್ತಾರವಾಗಿದೆ ಎಂದು ಹೇಳಿದೆ. ಆದುದರಿಂದ ಅಗ್ನಿಯು ಕಾರ್ಯ, ವಾಯುವು ಕಾರಣ.

೪. ವಾಯುವಿನ ಉತ್ಪತ್ತಿ, ಸ್ಥಿತಿ, ಲಯಗಳು ಆಕಾಶದಲ್ಲಿಯೇ ಸಂಭವಿಸುತ್ತವೆ. ಆದುದರಿಂದ ವಾಯುವು ಆಕಾಶದ ಕಾರ್ಯ. ಕಾರ್ಯವಾದ ವಾಯುವಿಗಿಂತಲೂ ಕಾರಣವಾದ ಆಕಾಶವು ಸೂಕ್ಷ್ಮವೂ ವ್ಯಾಪಕವೂ ಆಗಿದೆ. ವಾಯುವು ಕಣ್ಣಿಗೆ ಕಾಣದಿದ್ದರೂ, ತ್ವಗೇಂದ್ರಿಯಕ್ಕೆ ಗೋಚರವಾಗುತ್ತದೆ. ಆಕಾಶವನ್ನು ತ್ವಗೇಂದ್ರಿಯವೂ ಸಹ ಗ್ರಹಿಸಲಾರದು. ಮತ್ತು ಪುರಾಣಗಳಲ್ಲಿ ವಾಯುವಿಗಿಂತ ಆಕಾಶವು ಹತ್ತುಪಾಲು ವಿಸ್ತಾರವಾಗಿದೆ ಎಂದು ಹೇಳಿದೆ. ಆದುದರಿಂದ ಆಕಾಶವು ವಾಯುವಿಗಿಂತ ಸೂಕ್ಷ್ಮವೂ ವ್ಯಾಪಕವೂ ಆಗಿದೆ.

ಆಕಾಶದ ಮೇಲೆ ಇರುವುದೇನು ಎಂದು ಕೇಳಿದರೆ, "ಏನೋ ತಿಳಿಯದು" ಎಂದು ಉತ್ತರ ಬರುತ್ತದೆ. ಆಕಾಶಕ್ಕಿಂತ ಮೇಲೆ ಹೋದರೆ ಬುದ್ಧಿಯು ಕುಂಠಿತವಾಗುತ್ತದೆ. ಆ ಕುಂಠಿತ ಭಾವಕ್ಕೆ ಆಶ್ರಯವಾದ ವಿಷಯವಾವುದು ಅಂದರೆ ಅಜ್ಞಾನವೇ ಆಶ್ರಯ. ಈ ವಿಚಾರದ ಮೇಲಿಂದ ಆಕಾಶವು ಅಜ್ಞಾನದ ಕಾರ್ಯವೆಂದು ಸಿದ್ಧವಾಗುತ್ತದೆ. ಏಕೆ ? ಆಕಾಶವು ತ್ವಗೇಂದ್ರಿಯಕ್ಕೆ ತಿಳಿದುಬರದೇ ಇದ್ದರೂ ಮನಸ್ಸಿಗೆ ತಿಳಿದುಬರುತ್ತದೆ. ಅಂದರೆ ಆಕಾಶವನ್ನು ಮನಸ್ಸಿನಿಂದ ಊಹಿಸಬಹುದು ಎಂದರ್ಥ. ಅನೇಕ ಶಾಸ್ತ್ರಗಳಲ್ಲಿ ಅಜ್ಞಾನವು ಆಕಾಶಕ್ಕಿಂತ ಅನಂತ ಗುಣ ವಿಸ್ತಾರವೆಂದು

ಹೇಳಿದೆ. ಆದುದರಿಂದ ಅಜ್ಞಾನವು ಆಕಾಶಕ್ಕಿಂತ ಸೂಕ್ಷ್ಮವೂ ವ್ಯಾಪಕವೂ ಆಗಿದೆ.

"ಅದು ನಮಗೆ ಗೊತ್ತಾಗುವುದಿಲ್ಲ'' ಎಂಬ ಅನುಭವಕ್ಕೆ ವಿಷಯವಾದ ಅಜ್ಞಾನವನ್ನು ಪ್ರಕಾಶ ಮಾಡುವುದು ಜ್ಞಾನಸ್ವರೂಪವಾದ ಚೇತನ. ಆ ಚೇತನ ಅಜ್ಞಾನವು ಇದೆ, ತೋರುತ್ತದೆ, ಅಜ್ಞಾನಿಗಳಿಗೆ ಪ್ರಿಯವಾಗಿದೆ ಎಂಬ ರೂಪದಿಂದ ಅಜ್ಞಾನದಲ್ಲಿಯೂ, ಅಸ್ತಿ, ಭಾತಿ, ಪ್ರಿಯ ರೂಪವಾದ ಬ್ರಹ್ಮದಲ್ಲಿಯೂ ಅನುಸ್ಯೂತವಾಗಿದೆ. ಆದುದರಿಂದ ಬ್ರಹ್ಮ ಚೇತನವನ್ನು ಆಶ್ರಯಿಸಿ ಅಜ್ಞಾನವಿದೆಯೆಂದು ಹೇಳಬೇಕು. ಆದುದರಿಂದಲೇ ಶಾಸ್ತ್ರದಲ್ಲಿ ಅಜ್ಞಾನವು ''ಸ್ವಾಶ್ರಯ ಸ್ವವಿಷಯ''ವೆಂದು ಹೇಳಿದೆ. ಅಂದರೆ ಅಜ್ಞಾನಕ್ಕೆ ಆಶ್ರಯವೂ ವಿಷಯವೂ ಬ್ರಹ್ಮವೇ ಎಂದರ್ಥ. ಮೇಘವು ಸೂರ್ಯನ ಆಶ್ರಯದಲ್ಲಿದ್ದು ಸೂರ್ಯನನ್ನೇ ಮುಚ್ಚುವಂತೆ, ಅಜ್ಞಾನವು ಯಾರ ಆಶ್ರಯದಲ್ಲಿರುತ್ತದೆಯೋ ಅವರನ್ನೇ ಮುಚ್ಚುತ್ತದೆ. ಈ ವಿವೇಚನೆಯಿಂದ ಅಜ್ಞಾನಕ್ಕಿಂತಲೂ ಬ್ರಹ್ಮವು ಸೂಕ್ಷ್ಮವೂ ವ್ಯಾಪಕವೂ ಆಗಿದೆಯೆಂದು ಗೊತ್ತಾಗುತ್ತದೆ.

ಮನಸ್ಸಿನಿಂದ ಅಜ್ಞಾನವನ್ನು ಗ್ರಹಿಸಲಾಗದಿದ್ದರೂ, ಒಬ್ಬನು ನಾನು ಅದನ್ನು ತಿಳಿಯುವುದಿಲ್ಲವೆನ್ನುತ್ತಾನೆ. ಅದೊಂದು ಅನುಭವ. ಅದೊಂದು ಲಿಂಗ. ಈ ಲಿಂಗ ದ್ವಾರ ಅಜ್ಞಾನವು ಊಹಿಸಲ್ಪಡುತ್ತದೆ. ಆದರೆ ಬ್ರಹ್ಮ ಚೇತನವು ಸ್ವಯಂಪ್ರಕಾಶವಾದುದರಿಂದ ಅದು ಯಾವ ಲಿಂಗಕ್ಕೂ, ಯಾವ ಪ್ರಮಾಣಕ್ಕೂ ಸಿಗುವುದಿಲ್ಲ.

ಪ್ರ ೨೮ : **ಅಜ್ಞಾನಕ್ಕೂ ಬ್ರಹ್ಮಕ್ಕೂ ಇರುವ ಸಂಬಂಧವೇನು ?**

ಉ : ದೇಹದಲ್ಲಿ ಒಂದು ಮಚ್ಚೆ ಇರುವಂತೆ, ಬ್ರಹ್ಮದ ಏಕದೇಶದಲ್ಲಿ ಅಜ್ಞಾನವು ತೋರುತ್ತದೆ. ಉಳಿದ ಬ್ರಹ್ಮವು ಶುದ್ಧ ವಸ್ತುವೇ. ಅದು ಸ್ವಯಂಪ್ರಕಾಶ. ಆ ಸ್ವಯಂಪ್ರಕಾಶವಾದ ಬ್ರಹ್ಮವು ಅಜ್ಞಾನಕ್ಕಿಂತಲೂ ಸೂಕ್ಷ್ಮವೂ ವ್ಯಾಪಕವೂ ಆಗಿದೆ. ಈ ವಿಧವಾಗಿ ಸಾಮಾನ್ಯ ಚೈತನ್ಯ ವೆಂದು ಹೇಳಿಸಿಕೊಳ್ಳುವ ಬ್ರಹ್ಮವು ಸರ್ವಕ್ಕೂ ಸೂಕ್ಷ್ಮವೂ ವ್ಯಾಪಕವೂ ಆಗಿ ದೆ ಎಂದರ್ಥ.

ಪ್ರ ೨೯ : **ಈ ವಿಧವಾಗಿ ಸಾಮಾನ್ಯ ಚೈತನ್ಯವನ್ನು ತಿಳಿಯುವುದರಿಂದ ಆಗುವ ನಿಶ್ಚಯವೇನು ?**

ಉ : ಅಸ್ತಿ, ಭಾತಿ, ಪ್ರಿಯ ರೂಪವಾದ ಸಾಮಾನ್ಯ ಚೈತನ್ಯವಾದ ಬ್ರಹ್ಮವೇ ನಾನು. ನಾನೇ ಅಸ್ತಿ, ಭಾತಿ, ಪ್ರಿಯರೂಪನಾದ ಸಾಮಾನ್ಯ ಚೈತನ್ಯನಾದ ಬ್ರಹ್ಮ. ಹಾಗಾದರೆ ಎದುರಿಗೆ ತೋರುವ ಜಗತ್ತಿನ ಗತಿಯೇನು ? ಎದುರಿಗೆ ತೋರುವ ನಾಮರೂಪಾತ್ಮಕವಾದ ಜಗತ್ತು ನನ್ನಲ್ಲಿ ಕಲ್ಪಿತವಾಗಿದೆ. ಇದೇ ನಿಶ್ಚಯ.

ಪ್ರ ೩೦ : **ಈ ನಿಶ್ಚಯದಿಂದಾಗುವ ಫಲವೇನು ?**

ಉ : ಸರ್ವಾನರ್ಥ ನಿವೃತ್ತಿಯೂ, ಪರಮಾನಂದ ಪ್ರಾಪ್ತಿಯೆಂದು ಹೇಳಿಸಿಕೊಳ್ಳುವ ಮೋಕ್ಷವೂ ಆಗುತ್ತದೆ.

ಓಂ ತತ್ಸತ್

ಇಲ್ಲಿಗೆ ''ಸಾಮಾನ್ಯ ವಿಶೇಷ ಚೈತನ್ಯ ವರ್ಣನೆ'' ಎಂಬ
ಹತ್ತನೆ ಕಲಾ ಮುಗಿಯಿತು.

ಓಂ

ನಮೋ ಭಗವತೇ ಶಂಕರಾನಂದಾಯ

**ಹನ್ನೊಂದನೆಯ ಕಲಾ ಪ್ರಾರಂಭ**

# ಬ್ರಹ್ಮಾತ್ಮೈಕ್ಯ ನಿರೂಪಣ

ಪ್ರ ೧ : **ಬ್ರಹ್ಮಾತ್ಮೈಕ್ಯ ನಿರೂಪಣ ಎಂಬ ಪ್ರಕರಣಕ್ಕೆ ಮತ್ತೊಂದು ಹೆಸರೇನು ?**

ಉ : ತತ್ತ್ವಮಸಿ ಮಹಾ ವಾಕ್ಯಾರ್ಥ ಪ್ರಕರಣವೆಂದು ಹೆಸರು.

ಪ್ರ ೨ : **ತತ್ತ್ವಮಸಿ ಮಹಾವಾಕ್ಯಕ್ಕೆ ಪ್ರಮಾಣ ಯಾವುದು ?**

ಉ : ಸಾಮವೇದದ ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯ ದಲ್ಲಿ ಶ್ರೋತ್ರೀಯ ಬ್ರಹ್ಮನಿಷ್ಠರಾದ ಉದ್ದಾಲಕ ಮಹರ್ಷಿಗಳು ತಮ್ಮ ಪುತ್ರನೂ, ಜಿಜ್ಞಾಸುವೂ ಆದ ಶ್ವೇತಕೇತುವಿಗೆ ''ತತ್ತ್ವಮಸಿ'' ಮಹಾ ವಾಕ್ಯವನ್ನು ಉಪದೇಶ ಮಾಡಿದ್ದಾರೆ. ಆ ಮಹಾವಾಕ್ಯದಲ್ಲಿಯ ಮೊದಲ ನೆಯ ಪದವು 'ತತ್' ಪದ. ಎರಡನೆಯ ಪದವು 'ತ್ವಂ' ಪದ. ಇವೆರಡರ ಲಕ್ಷ್ಯಾರ್ಥವನ್ನು ಕೂಡಿಸುವ ಮೂರನೆಯ ಪದವು 'ಅಸಿ' ಪದ.

ಪ್ರ ೩ : **ಮಹಾವಾಕ್ಯಗಳೆಷ್ಟು?**

ಉ : ನಾಲ್ಕು.

೧. ''ಪ್ರಜ್ಞಾನಂ ಬ್ರಹ್ಮ.'' ಇದು ಋಗ್ವೇದದ ಐತರೇಯೋಪ ನಿಷತ್ತಿನ ಮಹಾವಾಕ್ಯ. ಇದಕ್ಕೆ ಲಕ್ಷಣವಾಕ್ಯವೆಂದು ಹೆಸರು.

೨. ''ಅಹಂ ಬ್ರಹ್ಮಾಸ್ಮಿ.'' ಇದು ಯಜುರ್ವೇದದ ಬೃಹದಾರಣ್ಯ ಕೋಪನಿಷತ್ತಿನ ಮಹಾವಾಕ್ಯ. ಇದಕ್ಕೆ ಅನುಭವವಾಕ್ಯವೆಂದು ಹೆಸರು.

೩. "ತತ್ತ್ವಮಸಿ." ಇದು ಸಾಮವೇದದ ಛಾಂದೋಗ್ಯೋಪನಿಷತ್ತಿನ ಮಹಾವಾಕ್ಯ. ಇದಕ್ಕೆ ಉಪದೇಶವಾಕ್ಯವೆನ್ನುತ್ತಾರೆ.

೪. "ಅಯಮಾತ್ಮಬ್ರಹ್ಮ." ಇದು ಅಥರ್ವಣ ವೇದದ ಮಾಂಡೋಕ್ಯೋಪನಿಷತ್ತಿನ ಮಹಾವಾಕ್ಯ. ಇದಕ್ಕೆ ಸಾಕ್ಷಾತ್ಕಾರ ವಾಕ್ಯವೆನ್ನುತ್ತಾರೆ.

ಇವೇ ನಾಲ್ಕು ಮಹಾವಾಕ್ಯಗಳು.

ಪ್ರ ೪ : **ತತ್ತ್ವಮಸಿ ಮಹಾವಾಕ್ಯದಲ್ಲಿಯ ತತ್ ಪದಕ್ಕೆ ವಾಚ್ಯಾರ್ಥವೇನು ?**

ಉ : ತತ್ ಪದಕ್ಕೆ ವಾಚ್ಯಾರ್ಥವು ಈಶ್ವರ.

ಪ್ರ ೫ : **ತತ್ ಪದಕ್ಕೆ ಲಕ್ಷ್ಯಾರ್ಥವೇನು ?**

ಉ : ತತ್ ಪದಕ್ಕೆ ಶುದ್ಧ ಬ್ರಹ್ಮವೇ ಲಕ್ಷ್ಯಾರ್ಥ.

ಪ್ರ ೬ : **ತತ್ತ್ವಮಸಿ ಮಹಾವಾಕ್ಯದಲ್ಲಿಯ ತ್ವಂ ಪದಕ್ಕೆ ವಾಚ್ಯಾರ್ಥವೇನು** ?

ಉ : ತ್ವಂ ಪದಕ್ಕೆ ಜೀವನು ವಾಚ್ಯಾರ್ಥ.

ಪ್ರ ೭ : **ತ್ವಂ ಪದಕ್ಕೆ ಲಕ್ಷ್ಯಾರ್ಥವೇನು ?**

ಉ : ತ್ವಂ ಪದಕ್ಕೆ ಕೂಟಸ್ಥನು ಲಕ್ಷ್ಯಾರ್ಥ.

ಪ್ರ ೮ : **ಪೂರ್ಣ ತತ್ತ್ವಮಸಿ ಮಹಾವಾಕ್ಯಕ್ಕೆ ಅರ್ಥವೇನು ? ಅದು ಏನನ್ನು ಪ್ರತಿಪಾದಿಸುತ್ತದೆ ?**

ಉ : ತತ್ತ್ವಮಸಿ ಮಹಾವಾಕ್ಯಕ್ಕೆ ನೀನು ಬ್ರಹ್ಮವೆಂದು ಅರ್ಥ. ಅದು ಜೀವ ಬ್ರಹ್ಮರ ಏಕತ್ವವನ್ನು ಪ್ರತಿಪಾದಿಸುತ್ತದೆ.

ಪ್ರ ೯ : **ವಾಚ್ಯಾರ್ಥ ಲಕ್ಷ್ಯಾರ್ಥವೆಂದರೇನು ?**

ಉ : ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧವನ್ನು ಶಬ್ದವೃತ್ತಿಯೆನ್ನುತ್ತಾರೆ. ಆ ಶಬ್ದವೃತ್ತಿಯು ಶಕ್ತಿವೃತ್ತಿ ಮತ್ತು ಲಕ್ಷಣಾವೃತ್ತಿಯೆಂದು ಎರಡು ವಿಧ.

ಪ್ರ ೧೦ : **ಶಕ್ತಿವೃತ್ತಿ ಎಂದರೇನು ?**

ಉ : ಶಬ್ದದಲ್ಲಿ ಒಂದು ಸಾಮರ್ಥ್ಯವಿರುತ್ತದೆ. ಶಬ್ದವನ್ನು ಕೇಳುತ್ತಲೇ ಅದರ ಅರ್ಥ ವಿಷಯಕವಾದ ಪದಾರ್ಥವು ಕೇಳಿದವನ ಅಂತಃಕರಣ

ವೃತ್ತಿಗೆ ಸಂಬಂಧಪಡುತ್ತದೆ. ಆ ಶಬ್ದಕ್ಕೂ ಆ ಪದಾರ್ಥಕ್ಕೂ ಇರುವ ಸಾಕ್ಷಾತ್ ಸಂಬಂಧವನ್ನು ಶಕ್ತಿವೃತ್ತಿಯೆನ್ನುತ್ತಾರೆ.

ಉದಾ : ಅಗ್ನಿಯೆಂಬ ಶಬ್ದವನ್ನು ಕೇಳುತ್ತಲೇ ಶಕ್ತಿವೃತ್ತಿಯಿಂದ ಅಡಿಗೆ ಮನೆಯಲ್ಲಿ ಒಲೆಯಲ್ಲಿರುವ ಬೆಂಕಿಯು ಮನಸ್ಸಿಗೆ ತೋರುತ್ತದೆ.

ಪ್ರ ೧೧ : **ಲಕ್ಷಣಾವೃತ್ತಿಯೆಂದರೇನು ?**

ಉ : ಇದಕ್ಕೆ ಎರಡು ಅರ್ಥ.

೧. ಪದವನ್ನು ಉಚ್ಚರಿಸಿದವನ ತಾತ್ಪರ್ಯವನ್ನು ಅನುಸರಿಸಿ ಅರ್ಥ ಮಾಡುವುದು.

೨. ಶಕ್ತಿವೃತ್ತಿಯು ತೋರಿಸಿದ ಅರ್ಥವನ್ನು ಆಧಾರವಾಗಿ ತೆಗೆದು ಕೊಂಡು ಪರಂಪರೆಯಾಗಿ ಮತ್ತೊಂದು ಅರ್ಥವನ್ನು ಗ್ರಹಿಸುವುದು. ಶಬ್ದಕ್ಕೂ ನಾವು ಗ್ರಹಿಸಿದ ಪದಾರ್ಥಕ್ಕೂ ಪರಂಪರಾ ಸಂಬಂಧವು ಇರಲೇಬೇಕು. ಶಬ್ದಕ್ಕೂ ಪದಾರ್ಥಕ್ಕೂ ಇರುವ ಪರಂಪರಾರೂಪ ಸಂಬಂಧವನ್ನು ಲಕ್ಷಣಾ ವೃತ್ತಿಯೆನ್ನುತ್ತಾರೆ.

ಪ್ರ ೧೨ : **ಅದಕ್ಕೆ ಉದಾಹರಣೆಯೇನು ?**

ಉ : ಯಾರನ್ನಾದರೂ ಕುರಿತು ನಾವು ಪ್ರಸಂಗ ಬಂದಾಗ "ಇವನಲ್ಲಿ ಅಗ್ನಿದೇವನು ಇದ್ದಾನೆ" ಎನ್ನುತ್ತೇವೆ. ಮನುಷ್ಯನಲ್ಲಿ ಅಗ್ನಿದೇವನಿರುವುದು ಸಾಧ್ಯವಿಲ್ಲ. ಅವನಲ್ಲಿ ಅಗ್ನಿಯಂತೆ ಸುಡುವ ಕೋಪವಿರುತ್ತದೆ, ಎಂದು ಗ್ರಹಿಸಬೇಕು. ಪದಕ್ಕೂ, ಪದಾರ್ಥಕ್ಕೂ ಈ ರೀತಿಯಾಗಿರುವ ಸಂಬಂಧ ವನ್ನು ಲಕ್ಷಣಾವೃತ್ತಿಯೆನ್ನುತ್ತಾರೆ.

ಪ್ರ ೧೩ : **ವಾಚ್ಯಾರ್ಥವೆಂದರೇನು ?**

ಉ : ಶಕ್ತಿವೃತ್ತಿಯ ಮೂಲಕ ತಿಳಿದುಬರುವ ಅರ್ಥವನ್ನು ಶಬ್ದದ ವಾಚ್ಯಾರ್ಥವೆನ್ನುತ್ತಾರೆ.

ಪ್ರ ೧೪ : **ವಾಚ್ಯಾರ್ಥವೆಂಬ ಪದಕ್ಕೆ ಪರ್ಯಾಯ ಪದಗಳಾವುವು ?**

ಉ : ೧. ಶಕ್ಯ, ೨. ಶಕ್ಯಾರ್ಥ, ೩. ವಾಚ್ಯ, ೪. ವಾಚ್ಯಾರ್ಥ, ೫. ಅಭಿಧೇಯಾರ್ಥ, ೬. ಮುಖ್ಯಾರ್ಥ. ಈ ಆರು ವಾಚ್ಯಾರ್ಥ ಪದದ ಪರ್ಯಾಯ ಪದಗಳು.

ಪ್ರ ೧೫ : **ಲಕ್ಷ್ಯಾರ್ಥವೆಂದರೇನು ?**

ಉ : ಲಕ್ಷಣಾವೃತ್ತಿಯಿಂದ ತಿಳಿದುಬರುವ ಅರ್ಥವು ಲಕ್ಷ್ಯಾರ್ಥ.

ಪ್ರ ೧೬ : **ಲಕ್ಷಣಾವೃತ್ತಿಗಳು ಎಷ್ಟು ವಿಧ ?**

ಉ : ೧. ಜಹಾತ್, ೨. ಅಜಹಾತ್, ೩. ಜಹದ ಜಹಾತ್.

ಪ್ರ ೧೭ : **"ಜಹಾತ್" ಎಂದರೇನು ?**

ಉ : ಬಿಡುವಿಕೆ.

ಪ್ರ ೧೮ : **"ಅಜಹಾತ್" ಎಂದರೇನು** ?

ಉ : ಬಿಡದೇ ಇರುವಿಕೆ.

ಪ್ರ ೧೯ : **''ಜಹದ ಜಹಾತ್" ಎಂದರೇನು ?**

ಉ : ಬಿಟ್ಟೂ ಬಿಡದಿರುವಿಕೆ.

ಪ್ರ ೨೦ : **ಜಹಲ್ಲಕ್ಷಣದ ಸ್ವರೂಪವೇನು ? ಉದಾಹರಣೆ ಏನು ?**

ಉ : ವಾಚ್ಯಾರ್ಥವನ್ನು ಪೂರ್ಣವಾಗಿ ಬಿಟ್ಟು ಆ ವಾಚ್ಯಾರ್ಥಕ್ಕೆ ಸಂಬಂಧಿಸಿದ ಪದಾರ್ಥವನ್ನು ಗ್ರಹಿಸುವುದಕ್ಕೆ ಜಹಲ್ಲಕ್ಷಣವೆನ್ನುತ್ತಾರೆ.

ಉದಾ : ಪಾಠಶಾಲೆಯು ನಡೆಯುತ್ತಿದೆಯೆ ? ಎಂದು ಕೇಳಿದರೆ ನಾವು ನಡೆಯುತ್ತಿದೆ ಎಂದು ಹೇಳುತ್ತೇವೆ. ಪಾಠಶಾಲೆಯೆಂದರೆ ಪಾಠವನ್ನು ಕಲಿಯುವ, ಕಲಿಸುವ ಒಂದು ಗೃಹವೆಂದು ಶಕ್ಯಾರ್ಥ. ಆ ಗೃಹವು ಜಡವಾಗಿರುವುದರಿಂದ ನಡೆಯುವುದು ಸಂಭವಿಸುವುದಿಲ್ಲ. ಹಾಗಾದರೆ, ಪಾಠಶಾಲೆಯು ನಡೆಯುತ್ತಿದೆಯೇ ಎಂಬ ಪ್ರಶ್ನೆಗೆ ಪಾಠ ಹೇಳುವ ಗೃಹವೆಂಬುದನ್ನು ಬಿಡಬೇಕು. ಅದನ್ನು ಬಟ್ಟು ಉಪಾಧ್ಯಾಯರು ಬಾಲಕರಿಗೆ ಬೋಧಿಸುವರು ಎಂಬ ಅರ್ಥವನ್ನು ಗ್ರಹಿಸಬೇಕು. ಇದು ಲಕ್ಷ್ಯಾರ್ಥ.

ಸಾರಾಂಶವೇನೆಂದರೆ, ಪಾಠ ಹೇಳುವುದಕ್ಕಾಗಿ ನಿರ್ಮಿಸಲ್ಪಟ್ಟ ಗೃಹದಲ್ಲಿ ಪಾಠಗಳು ಜರುಗುವವೇ ಎಂಬ ಲಕ್ಷ್ಯಾರ್ಥವು ಏರ್ಪಡುತ್ತದೆ. ಪಾಠಶಾಲೆಯನ್ನು ಬಿಟ್ಟು ಪಾಠಶಾಲೆಗೆ ಸಂಬಂಧಿಸಿದ ವಿದ್ಯೆಯನ್ನು ಗ್ರಹಿಸಬೇಕು. ಇದು ಜಹಲ್ಲಕ್ಷಣಕ್ಕೆ ಉದಾಹರಣೆ.

ಪ್ರ ೨೧ : **ಜಹಲ್ಲಕ್ಷಣಕ್ಕೆ ಸರ್ವರ ಅನುಭವದಲ್ಲಿರುವ ಉದಾಹರಣೆಗಳಾವುವು ?**

ಉ : ೧. ತಾಯಿ, ಮಗನನ್ನು ಕುರಿತು "ಒಲೆಯು ಉರಿಯುತ್ತಿದೆಯೇ" ಎಂದು ಕೇಳಿದಾಗ, ಶಬ್ದದ ಸಾಕ್ಷಾತ್ ಸಂಬಂಧವಾದ, ವಾಚ್ಯಾರ್ಥವಾದ ಮಣ್ಣಿನಿಂದ ನಿರ್ಮಿಸಿದ ಒಲೆಯನ್ನು ಬಿಟ್ಟು ಲಕ್ಷ್ಯಾರ್ಥವನ್ನು ಗ್ರಹಿಸುವುದರಿಂದ ಒಲೆಯಲ್ಲಿರುವ ಕಟ್ಟಿಗೆಗಳು ಉರಿಯುತ್ತವೆ ಎಂದು ಮಗನು ಗ್ರಹಿಸಬೇಕು.

೨. "ದಾರಿಯು ಸಾಗುತ್ತದೆ" ಎಂದಾಗ ದಾರಿಯೆಂಬ ಶಬ್ದದ ವಾಚ್ಯಾರ್ಥವನ್ನು ಬಿಟ್ಟು, ದಾರಿಯೆಂಬ ಶಬ್ದದ ವಾಚ್ಯಾರ್ಥ ಸಂಬಂಧವಾದ, ಲಕ್ಷ್ಯಾರ್ಥವಾದ ಪಥಿಕರು (ದಾರಿಹೋಕರು) ನಡೆಯುತ್ತಾರೆಂದು ಗ್ರಹಿಸಬೇಕು.

೩. "ಅವನ ಏಟಿಗೆ ಗ್ರಾಮವು ನಡುಗುತ್ತದೆ" ಎಂದರೆ ಜಡವಾದ ಗ್ರಾಮವು ನಡುಗುವುದು ಅಸಂಭವ. ಆದುದರಿಂದ ಗ್ರಾಮವನ್ನು ಬಿಟ್ಟು, ಗ್ರಾಮದೊಳಗಿನ ಜನರು ಎಂದು ಲಕ್ಷಣಾವೃತ್ತಿಯಿಂದ ಅರ್ಥ ಮಾಡಬೇಕು.

ಇದೇ ರೀತಿಯಾಗಿ ಊಹಿಸಿ ತಿಳಿದುಕೊಳ್ಳಬೇಕು.

ಪ್ರ ೨೨ : **ಜಹಲ್ಲಕ್ಷಣವನ್ನು ಕುರಿತು ಶಾಸ್ತ್ರದಲ್ಲಿ ಹೇಳಿದ ಉದಾಹರಣೆ ಏನು ?**

ಉ : "ಗಂಗಾಯಾಂ ಘೋಷಃ" ಅಂದರೆ ಒಬ್ಬನು ಮತ್ತೊಬ್ಬನನ್ನು ಕುರಿತು ಗೊಲ್ಲರ ಹಳ್ಳಿಯೆಲ್ಲಿದೆ? ಎಂದು ಕೇಳಿದನು. ಅದಕ್ಕೆ ಅವನು ಗಂಗೆಯಲ್ಲಿದೆ ಎಂದು ಹೇಳಿದನು. ಗಂಗೆಯಲ್ಲಿ ಹಳ್ಳಿಯಿರುವುದು ಸಂಭವಿಸುವುದಿಲ್ಲ. ಆದುದರಿಂದ ಗೊಲ್ಲರ ಹಳ್ಳಿಯು ಗಂಗಾ ತೀರದಲ್ಲಿ ಇದೆ ಎಂದು ಗ್ರಹಿಸಬೇಕು.

ಸಾರಾಂಶವೇನೆಂದರೆ, ಗಂಗೆಯೆಂಬ ಶಬ್ದಕ್ಕೆ ವಾಚ್ಯಾರ್ಥವಾದ ನದಿ ಪ್ರವಾಹವನ್ನು ಪೂರ್ಣವಾಗಿ ಬಿಟ್ಟು ವಾಚ್ಯಾರ್ಥಕ್ಕೆ ಸಂಬಂಧವಾದ ನದಿ ತೀರವನ್ನು ಗ್ರಹಿಸಬೇಕು. ಇದರಂತೆ ವಾಚ್ಯಾರ್ಥವನ್ನು ಪೂರ್ಣವಾಗಿ ಬಿಟ್ಟು ಅದಕ್ಕೆ ಸಂಬಂಧಿಸಿದ ಪದಾರ್ಥವನ್ನು ಗ್ರಹಿಸುವುದಕ್ಕೆ ಜಹಲ್ಲಕ್ಷಣವೆನ್ನುತ್ತಾರೆ.

ಪ್ರ ೨೩ : **ಅಜಹಲ್ಲಕ್ಷಣವೆಂದರೇನು ?**

ಉ : ವಾಚ್ಯಾರ್ಥವನ್ನು ಬಿಡದೆ ಅದಕ್ಕೆ ಸಂಬಂಧಿಸಿದ ಅರ್ಥವನ್ನು ಗ್ರಹಿಸುವುದಕ್ಕೆ ಅಜಹಲ್ಲಕ್ಷಣವೆನ್ನುತ್ತಾರೆ. ಜಹಲ್ಲಕ್ಷಣದಲ್ಲಿ ವಾಚ್ಯಾರ್ಥವನ್ನು

ಬಿಡಬೇಕಾಗುತ್ತದೆ. ಅಜಹಲ್ಲಕ್ಷಣದಲ್ಲಿ ವಾಚ್ಯಾರ್ಥವನ್ನು ಬಿಡಬೇಕಾಗಿಲ್ಲ. ಜಹಲ್ಲಕ್ಷಣದಲ್ಲಿ ವಾಚ್ಯಾರ್ಥ ಸಂಬಂಧವನ್ನು ಮಾತ್ರ ತೆಗೆದುಕೊಳ್ಳಬೇಕು. ಅಜಹಲ್ಲಕ್ಷಣದಲ್ಲಿ ವಾಚ್ಯಾರ್ಥವನ್ನು ಸೇರಿಸಿ ವಾಚ್ಯಾರ್ಥ ಸಂಬಂಧವನ್ನೂ ಗ್ರಹಿಸಬೇಕು.

ಸಾರಾಂಶವೇನೆಂದರೆ, ವಾಕ್ಯದಲ್ಲಿಯ ಪದಕ್ಕೆ ವಾಚ್ಯಾರ್ಥವನ್ನು ಬಿಡದೆ ವಾಚ್ಯಾರ್ಥ ಸಂಬಂಧವಾದ ಲಕ್ಷಣವನ್ನು ಗ್ರಹಿಸಿದರೆ ಆ ಪದದಲ್ಲಿ ಅಜಹಲ್ಲಕ್ಷಣವಿರುವುದೆಂದು ತಿಳಿಯಬೇಕು.

ಪ್ರ ೨೪ : **ಅಜಹಲ್ಲಕ್ಷಣಕ್ಕೆ ವ್ಯವಹಾರಿಕ ಸಂಬಂಧವಾದ ಉದಾಹರಣೆಗಳೇನು ?**

ಉ : ೧. ''ಹುಲ್ಲು ಹೊರೆಗಳು ಬರುತ್ತವೆ'' ಎಂದರೆ, ಹುಲ್ಲಿನ ಹೊರೆಗಳು ಜಡವಾದುದರಿಂದ ಬರಲಾರವು. ಆದುದರಿಂದ ಹುಲ್ಲಿನ ಹೊರೆಗಳು ಎಂಬ ಪದಕ್ಕೆ ಹುಲ್ಲಿನ ಹೊರೆಗಳನ್ನು ಹೊತ್ತುಕೊಂಡ ಮನುಷ್ಯರು ಬರುತ್ತಾರೆ ಎಂದು ಗ್ರಹಿಸಬೇಕು.

೨. ''ಕುರುಬನು ಕುರಿಯನ್ನು ಕತ್ತರಿಸುತ್ತಾನೆ'' ಎಂದು ಹೇಳಿದರೆ ಕುರುಬನು ಕುರಿಯನ್ನು ಕತ್ತರಿಸುವುದು ಸಂಭವಿಸುವುದಿಲ್ಲ. ಕುರಿಯ ದೇಹದ ಮೇಲಿರುವ ಉಣ್ಣೆಯನ್ನು ಕತ್ತರಿಸುತ್ತಾನೆಂದು ಗ್ರಹಿಸಬೇಕು. ಇದು ಜಹಲ್ಲಕ್ಷಣ.

ಪ್ರ ೨೫ : **ಶಾಸ್ತ್ರದಲ್ಲಿ ಅಜಹಲ್ಲಕ್ಷಣಕ್ಕೆ ಹೇಳಿದ ಉದಾಹರಣೆ ಏನು ?**

ಉ : ೧. ''ಶೋಣೋಧಾವತಿ'' ಅಂದರೆ ಕೆಂಪು ಓಡುತ್ತದೆ. ಇಲ್ಲಿ ಕೆಂಪು ಬಣ್ಣವು ಓಡುವುದು ಸಂಭವಿಸುವುದಿಲ್ಲ. ಕೆಂಪು ಬಣ್ಣದ ಕುದುರೆಯು ಓಡುತ್ತದೆ ಎಂದು ಗ್ರಹಿಸಬೇಕು.

೨. ''ಮಂಚಾಕ್ರೋಶಂತಿ'' ಅಂದರೆ ಮಂಚವು ಕೂಗುತ್ತದೆ. ಜೋಳದ ಹೊಲದಲ್ಲಿ ತೆನೆಗಳು ಬಂದಾಗ ಎತ್ತರವಾದ ಸ್ಥಳದಲ್ಲಿ ಪಕ್ಷಿಗಳನ್ನು ಕಾಯುವುದಕ್ಕಾಗಿ ಮಂಚವನ್ನು ಏರ್ಪಡಿಸಿರುತ್ತಾರೆ. ಇಂಥಾ ಮಂಚವು ಕೂಗುವುದು ಸಂಭವಿಸುವುದಿಲ್ಲ. ಮಂಚವನ್ನು ಬಿಡದೆ ಮಂಚದ ಮೇಲಿನ ಮನುಷ್ಯನು ಕೂಗುತ್ತಾನೆ ಎಂದು ಅರ್ಥ ಮಾಡಬೇಕು. ಇದೇ ಅಜಹಲ್ಲಕ್ಷಣ.

ಪ್ರ ೨೬ : **ಮೂರನೆಯದಾದ ಜಹದಜಹಲ್ಲಕ್ಷಣದ ಸ್ವಭಾವ ವೇನು ?**

ಉ : ಜಹದಜಹಲ್ಲಕ್ಷಣವೆಂದರೂ ಭಾಗತ್ಯಾಗ ಲಕ್ಷಣವೆಂದರೂ ಒಂದೇ. ವಾಚ್ಯಾರ್ಥದಲ್ಲಿಯ ವಿರೋಧಾಂಶವನ್ನು ಬಿಟ್ಟು, ಸರಿಹೋಗುವ ಅವಿರೋಧಾಂಶವನ್ನು ಗ್ರಹಿಸುವುದಕ್ಕೆ ಭಾಗತ್ಯಾಗ ಲಕ್ಷಣವೆನ್ನುತ್ತಾರೆ.

ಪ್ರ ೨೭ : **ಭಾಗತ್ಯಾಗ ಲಕ್ಷಣಕ್ಕೆ ದೃಷ್ಟಾಂತವೇನು ?**

ಉ : ಒಂದಾನೊಂದು ಕಾಲದಲ್ಲಿ ಒಂದಾನೊಂದು ಪ್ರದೇಶದಲ್ಲಿ, ಒಬ್ಬ ಪುರುಷನು ಮತ್ತೊಬ್ಬನನ್ನು ನೋಡಿದ್ದನು. ಅವನೇ ಮತ್ತೊಂದು ಪ್ರದೇಶ ದಲ್ಲಿ ಕೆಲವು ಕಾಲದ ಮೇಲೆ ಕಂಡಾಗ, ನೋಡಿದವನು ''ಅವನೇ ಇವನು" ಎನ್ನುತ್ತಾನೆ. ಅಂದರೆ ಆ ದೂರ ದೇಶದಲ್ಲಿ ಆ ಭೂತಕಾಲದಲ್ಲಿ ಕಂಡವನೇ ಈ ಸಮೀಪ ದೇಶದಲ್ಲಿ ಈ ವರ್ತಮಾನ ಕಾಲದಲ್ಲಿ ಕಂಡವನು ಎಂದು ಹೇಳು ತ್ತಾನೆ. ಆ ದೇಶವು ಈ ದೇಶವಲ್ಲ. ಆ ಕಾಲವು ಈ ಕಾಲವಲ್ಲ. ಆ ದೇಶ ಕಾಲಾದಿಗಳಿಗೂ, ಈ ದೇಶ ಕಾಲಾದಿಗಳಿಗೂ ಏಕತ್ವವು ಸಂಭವಿಸುವುದಿಲ್ಲ. ಏಕತ್ವಕ್ಕೆ ವಿರೋಧಾಂಶಗಳಾದ ವಾಚ್ಯಾರ್ಥದಲ್ಲಿರುವ ದೇಶ ಕಾಲಗಳನ್ನು ಪರಿತ್ಯಜಿಸಿ, ಆ ವಾಚ್ಯಾರ್ಥದಲ್ಲಿಯೇ ವಿರೋಧವಲ್ಲದ ಕೇವಲ ಪುರುಷನನ್ನು ಗ್ರಹಿಸಿ "ಅವನೇ ಇವನು" ಎಂಬ ಅನ್ವಯವನ್ನು ಗ್ರಹಿಸಬೇಕು. ಇದು ಭಾಗತ್ಯಾಗ ಲಕ್ಷಣಕ್ಕೆ ದೃಷ್ಟಾಂತ.

ಪ್ರ ೨೮ : **ಮೇಲೆ ಹೇಳಿದ ಮೂರು ಲಕ್ಷಣಗಳಲ್ಲಿ ಮಹಾ ವಾಕ್ಯಾರ್ಥ ಜ್ಞಾನಕ್ಕೆ ಯಾವ ಲಕ್ಷಣವು ಅನ್ವಯಿಸುತ್ತದೆ ?**

ಉ : ವಾಚ್ಯಾರ್ಥವನ್ನು ಸಂಪೂರ್ಣವಾಗಿ ಬಿಡುವುದು ಜಹಲ್ಲಕ್ಷಣ. ಈ ಜಹಲ್ಲಕ್ಷಣವು ಮಹಾವಾಕ್ಯಾರ್ಥ ಜ್ಞಾನಕ್ಕೆ ಸರಿಹೊಂದುವುದಿಲ್ಲ. ಯಾಕೆಂದರೆ "ತತ್" ಪದ ವಾಚ್ಯಾರ್ಥದಲ್ಲಿ ಬ್ರಹ್ಮಚೈತನ್ಯವೂ, "ತ್ವಂ'' ಪದ ವಾಚ್ಯಾರ್ಥದಲ್ಲಿ ಕೂಟಸ್ಥ ಚೈತನ್ಯವೂ ಸೇರಿಯೇ ಇದೆ. ವಾಚ್ಯಾರ್ಥವನ್ನು ಪೂರ್ಣವಾಗಿ ಬಿಟ್ಟರೆ, ಬ್ರಹ್ಮಚೈತನ್ಯವನ್ನೂ ಕೂಟಸ್ಥ ಚೈತನ್ಯವನ್ನೂ ಬಿಡಬೇಕಾಗುತ್ತದೆ. ಅದನ್ನು ಬಿಡುವುದೆಂದರೆ ಚೈತನ್ಯಕ್ಕೆ ಭಿನ್ನವಾದ ಅಸತ್, ಜಡ, ದುಃಖಾತ್ಮಕವಾದ ಪ್ರಪಂಚವನ್ನು ಗ್ರಹಿಸಬೇಕಾಗುತ್ತದೆ. ಇಲ್ಲವೇ, ಬಿಟ್ಟ ವಾಚ್ಯಾರ್ಥಮೊಂದಿಗೆ ಚೈತನ್ಯಸಹಿತವಾದ ವ್ಯಷ್ಟಿ ಸಮಷ್ಟಿ

ರೂಪವಾದ ಪ್ರಪಂಚವನ್ನೆಲ್ಲಾ ತ್ಯಜಿಸಿದಂತಾಗುತ್ತದೆ. ಆಗ ಉಳಿಯುವುದು ಶೂನ್ಯ ಮಾತ್ರ. ಹಾಗಾದರೂ ಅನರ್ಥವೇ ಸಿದ್ಧಿಸುತ್ತದೆ. ಪುರುಷಾರ್ಥವು ಸಿದ್ಧಿಸಲಾರದು. ಆದುದರಿಂದ ಮಹಾವಾಕ್ಯದಲ್ಲಿ ಜಹಲ್ಲಕ್ಷಣವು ಸಂಭವಿಸಲಾರದು.

ಪ್ರ ೨೯ : **ಮಹಾವಾಕ್ಯಾರ್ಥ ಜ್ಞಾನದಲ್ಲಿ ಅಜಹಲ್ಲಕ್ಷಣವು ಸರಿಹೋಗುತ್ತದೆಯೆ ?**

ಉ : ಅದೂ ಸರಿಹೊಂದುವುದಿಲ್ಲ. ಯಾಕೆಂದರೆ, ವಾಚ್ಯಾರ್ಥವನ್ನು ಕಿಂಚಿನ್ಮಾತ್ರವೂ ತ್ಯಜಿಸದೆ, ಅದಕ್ಕಿಂತ ಭಿನ್ನವಾದ ಹೊಸ ವಿಶೇಷವನ್ನು ಗ್ರಹಿಸುವುದಕ್ಕೆ ಅಜಹಲ್ಲಕ್ಷಣವೆನ್ನುತ್ತಾರೆ. ಮಹಾವಾಕ್ಯದಲ್ಲಿಯು "ತತ್, ತ್ವಂ'' ಪದಗಳ ವಾಚ್ಯಾರ್ಥವನ್ನು ಸಂಪೂರ್ಣವಾಗಿ ಗ್ರಹಿಸಿದ ಮೇಲೆ ಮತ್ತೊಂದು ವಿಶೇಷವನ್ನು ಗ್ರಹಿಸಬೇಕೆಂದರೆ ಉಳಿಯುವುದು ಶೂನ್ಯವೇ. ಇಷ್ಟೇ ಅಲ್ಲ, ಈ ಅಜಹಲ್ಲಕ್ಷಣದಿಂದ ಏಕತ್ವದ ವಿರೋಧವು ಪರಿಹಾರವಾಗಲಾರದು. ಈ ಲಕ್ಷಣದಿಂದ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಮಹಾವಾಕ್ಯದಲ್ಲಿ ಅಜಹಲ್ಲಕ್ಷಣವು ಸರಿಹೋಗಲಾರದು.

ಪ್ರ ೩೦ : **ಹಾಗಾದರೆ ಮಹಾವಾಕ್ಯಾರ್ಥ ಜ್ಞಾನದಲ್ಲಿ ಮೂರನೆಯದಾದ ಭಾಗತ್ಯಾಗ ಲಕ್ಷಣವು ಸರಿಹೋಗುತ್ತದೆಯೆ ?**

ಉ : ಸರಿಹೋಗುತ್ತದೆ. ಹೇಗೆಂದರೆ, ತತ್ ಪದ, ತ್ವಂ ಪದಗಳಲ್ಲಿಯು ವಿರೋಧಾಂಶವನ್ನು ಬಿಟ್ಟು ಅವಿರೋಧಾಂಶವನ್ನು ಗ್ರಹಿಸಬೇಕು. ತತ್, ತ್ವಂ ಪದಗಳ ವಾಚ್ಯಾರ್ಥದಲ್ಲಿ ವಿರೋಧಾಂಶವು ಯಾವುವೆಂದರೆ, ತತ್‌ಪದದಲ್ಲಿ ಮಾಯೆ, ತ್ವಂ ಪದದಲ್ಲಿ ಅವಿದ್ಯೆ. ಇವೇ ವಿರೋಧಾಂಶಗಳು. ಅವಿರೋಧಾಂಶವಾವುದೆಂದರೆ, ಎರಡೂ ಪದಗಳಲ್ಲಿರುವ ಲಕ್ಷ್ಯಾರ್ಥ ಭೂತವಾದ, ಅಸಂಗವಾದ ಶುದ್ಧ ಚೇತನವನ್ನು ಗ್ರಹಿಸಬೇಕು. ಆಗ ಏಕತ್ವವು ಸಹಜವಾಗುತ್ತದೆ. ಏಕತ್ವವು ಪ್ರಯತ್ನಸಾಧ್ಯವಲ್ಲ; ಸಹಜಸಿದ್ಧವಾದದ್ದು. ಒಂದು ವೇಳೆ ಅದನ್ನು ಪ್ರಯತ್ನಸಾಧ್ಯವೆಂದು ಹೇಳಿದರೆ, ಪ್ರಯತ್ನಸಾಧ್ಯವಾದದ್ದು ಪ್ರಯತ್ನವಿರುವವರೆಗೆ ಇದ್ದು, ಪ್ರಯತ್ನವನ್ನು ಬಿಟ್ಟ ಕೂಡಲೇ ಮೊದಲಿನಂತಾಗುತ್ತದೆ.

ಈ ರೀತಿ ಏಕತ್ವದಿಂದ ಪರಮ ಪುರುಷಾರ್ಥವೆಂಬ ಮೋಕ್ಷದ

ಪ್ರಾಪ್ತಿಯು ಉಂಟಾಗುತ್ತದೆ. ಆದುದರಿಂದ ಮಹಾವಾಕ್ಯದಲ್ಲಿ ಭಾಗತ್ಯಾಗ ಲಕ್ಷಣವು ಮಾತ್ರ ಸರಿಹೊಗುತ್ತದೆ.

ಪ್ರ ೩೧ : **ತತ್ಪದಕ್ಕೆ ವಾಚ್ಯಾರ್ಥವಾವುದು ?**

ಉ : ಅವ್ಯಾಕೃತ ಮಾಯೆಯು ಈಶ್ವರನ ದೇಶ; ಉತ್ಪತ್ತಿ, ಸ್ಥಿತಿ, ಲಯಗಳು ಈಶ್ವರನ ಕಾಲ; ಸತ್ವ, ರಜ, ತಮೋಗುಣಗಳು ಈಶ್ವರನ ಸೃಷ್ಟಿ ಸಾಮಗ್ರಿಗಳು. ಮಾಯೆಯೆಂದರೂ ತ್ರಿಗುಣಗಳೆಂದರೂ ಒಂದೇ. ಹೀಗೆ ಹೇಳುವುದರಿಂದ ಈಶ್ವರನ ದೇಶ, ಕಾಲ, ಶರೀರಗಳಿಗೆ ಭಿನ್ನತ್ವವು ತೋರದೆ ಹೋಗಬಹುದು. ಕುಂಬಾರನ ಶರೀರವು ಪೃಥ್ವಿಯ ವಿಕಾರ. ಅವನು ಗಡಿಗೆಯನ್ನು ಮಾಡಲು ನಿಂತಿರುವ ದೇಶವೂ ಪೃಥ್ವಿಯೇ. ಅವನು ಗಡಿಗೆಯನ್ನು ಮಾಡಲು ಉಪಯೋಗಿಸುವ ಮಣ್ಣೂ ಸಹ ಪೃಥ್ವಿಯ ಭಾಗವೇ. ಈ ಕುಂಬಾರನ ದೃಷ್ಟಾಂತದಂತೆ ಸೃಷ್ಟಿಕರ್ತ ಈಶ್ವರನ ವಿಷಯ ವನ್ನು ತಿಳಿದುಕೊಳ್ಳಬೇಕು

ವಿರಾಟ್, ಹಿರಣ್ಯಗರ್ಭ, ಅವ್ಯಾಕೃತ ಇವು ಈಶ್ವರನ ಶರೀರಗಳು. ವೈಶ್ವಾನರ, ಸೂತ್ರಾತ್ಮ, ಅಂತರ್ಯಾಮಿ ಇವು ಈಶ್ವರ ಪದಕ್ಕೆ ಅಭಿಮಾನಿ ಗಳು. ''ಏಕೋಽಹಂ ಬಹುಸ್ಯಾಂ'' ಅಂದರೆ ನಾನೊಬ್ಬನೇ ಇದ್ದೇನೆ, ಬಹುರೂಪನಾಗಬೇಕು, ಎಂಬ ಈ ಕ್ಷಣದಿಂದ ಹಿಡಿದು "ತದೇವಾನು ಪ್ರಾವಿ ಶತ್" ಅಂದರೆ ಜೀವರೂಪದಿಂದ ಪ್ರವೇಶಿಸುವವರೆಗೂ ಇರುವ ಸೃಷ್ಟಿಯು ಈಶ್ವರನ ಕಾರ್ಯ.

೧. ಸರ್ವಜ್ಞತ್ವ, ೨, ಸರ್ವ ಶಕ್ತಿತ್ವ, ೩. ಸರ್ವ ವ್ಯಾಪಕತ್ವ, ೪. ಏಕತ್ವ, ೫. ಸ್ವತಂತ್ರತ್ವ, ೬. ಸಮರ್ಥತ್ವ, ೭. ಪರೋಕ್ಷತ್ವ ಮತ್ತು ೮. ಮಾಯೋಪಾಧಿತ್ವ – ಈ ಎಂಟು ಈಶ್ವರನ ಧರ್ಮಗಳು. ಈ ಎಲ್ಲವು ಗಳಿಂದ ಕೂಡಿದ ಮಾಯೆಯೂ, ಅದರಲ್ಲಿ ಪ್ರತಿಬಿಂಬಿಸಿದ ಚಿದಾಭಾಸನೂ, ಅದಕ್ಕೆ ಅಧಿಷ್ಠಾನವಾದ ಬ್ರಹ್ಮವೂ ಇವೆಲ್ಲವೂ ಸೇರಿ ತತ್ಪದ ವಾಚ್ಯಾರ್ಥ.

ಪ್ರ ೩೨ : **ತತ್ಪದದ ಲಕ್ಷ್ಯಾರ್ಥವೇನು ?**

ಉ : ತತ್ಪದದಲ್ಲಿಯ ಮಾಯಾಂಶವೆಲ್ಲವನ್ನೂ ಚಿದಾಭಾಸಾಂಶ ವನ್ನೂ ಮಿಥ್ಯೆಯೆಂದು ತೆಗೆದುಹಾಕಿದ ಮೇಲೆ, ತೆಗೆದುಹಾಕಲಿಕ್ಕೆ ಬಾರದ

ಶುದ್ಧ ಬ್ರಹ್ಮವು ಉಳಿಯುತ್ತದೆ. ಅದು ವಿರಾಟ್, ಹಿರಣ್ಯಗರ್ಭ, ಅವ್ಯಾಕೃತಗಳಿಗೆ ಅಧಿಷ್ಠಾನವಾದ ಈಶ್ವರ ಸಾಕ್ಷಿ. ಈ ಈಶ್ವರ ಸಾಕ್ಷಿಯೇ ತತ್ಪದಕ್ಕೆ ಲಕ್ಷ್ಯಾರ್ಥ.

ಪ್ರ ೩೩ : **ಶುದ್ಧ ಬ್ರಹ್ಮಕ್ಕೂ, ಮಾಯೆಯಲ್ಲಿ ಪ್ರತಿಬಿಂಬಿಸಿದ ಈಶ್ವರನಿಗೂ ಅನ್ಯೋನ್ಯಾಧ್ಯಾಸವು ಹೇಗೆ ಉಂಟಾಯಿತು ?**

ಉ : ಈ ಅನ್ಯೋನ್ಯಾಧ್ಯಾಸವು ಅವಿಚಾರದಿಂದ ಉಂಟಾಯಿತು. ಅಂದರೆ ವಿಚಾರವಿಲ್ಲದ್ದರಿಂದ ಉಂಟಾಯಿತು. ಹೇಗೆಂದರೆ, ಬ್ರಹ್ಮವು ಸತ್ಪದಾರ್ಥ ; ಅದರ ಸತ್ಯತ್ವ ಸಂಸರ್ಗವು, ಅಂದರೆ ತಾದಾತ್ಮ್ಯ ಸಂಬಂಧವು ಈಶ್ವರನಲ್ಲಿ ಆರೋಪಿಸಲ್ಪಟ್ಟಿದೆ. ಈ ಆರೋಪದಿಂದ ಈಶ್ವರನು ವಾಸ್ತವವಾಗಿ ಸತ್ಯವಲ್ಲವಾದರೂ ಸತ್ಯದಂತೆ ತೋರುತ್ತಾನೆ. ಮತ್ತು ಈಶ್ವರನ ಸ್ವರೂಪವೂ ಆತನ ಕಾರಣತ್ವ ಸ್ವರೂಪವೂ ಬ್ರಹ್ಮದಲ್ಲಿ ಆರೋಪಿಸಲ್ಪಟ್ಟಿದೆ. ಇದರಿಂದ ಬ್ರಹ್ಮವು ಜಗತ್ತಿಗೆ ಕಾರಣವೆಂದು ತೋರುತ್ತದೆ. ಮತ್ತು ಶ್ರುತಿಗಳೂ, ಪುರಾಣಗಳೂ, ಆಚಾರ್ಯಪುರುಷರೂ ಬ್ರಹ್ಮದ ತಟಸ್ಥ ಲಕ್ಷಣವನ್ನು ಬೋಧಿಸುವ ಉದ್ದೇಶದಿಂದ ಬ್ರಹ್ಮವು ಜಗತ್ತಿಗೆ ಕಾರಣವೆಂದು ಹೇಳುತ್ತಾರೆ. ಈ ರೀತಿಯಾಗಿ ಬ್ರಹ್ಮಕ್ಕೂ ಈಶ್ವರನಿಗೂ ಪರಸ್ಪರ ಅಧ್ಯಾಸವುಂಟಾಗಿದೆ.

ಪ್ರ ೩೪ : **ಈ ಪರಸ್ಪರ ಅಧ್ಯಾಸವು ನಿವೃತ್ತಿಯಾಗಿ ಶುದ್ಧ ಬ್ರಹ್ಮದ ಅನುಭವವಾಗುವುದು ಹೇಗೆ ?**

ಉ : ಅದು ವಿವೇಕ ಜ್ಞಾನದಿಂದ ಉಂಟಾಗುತ್ತದೆ.

ಪ್ರ ೩೫ : **ತ್ವಂ ಪದಕ್ಕೆ ವಾಚ್ಯಾರ್ಥ ಯಾವುದು ? ಲಕ್ಷ್ಯಾರ್ಥ ಯಾವುದು ?**

ಉ : ಚಕ್ಷು, ಕಂಠ, ಹೃದಯಗಳು ಜೀವನ ಪ್ರದೇಶಗಳು ; ಜಾಗ್ರತ್, ಸ್ವಪ್ನ, ಸುಷುಪ್ತಿಗಳು ಜೀವನ ಕಾಲಗಳು ; ಸ್ಥೂಲ, ಸೂಕ್ಷ್ಮ, ಕಾರಣಗಳು ಜೀವನ ಶರೀರಗಳು.

ಸ್ಥೂಲ, ಸೂಕ್ಷ್ಮ, ಕಾರಣಗಳು ಜೀವನ ಭೋಗ ಸಾಮಗ್ರಿಗಳು. ವಿಶ್ವ, ತೈಜಸ, ಪ್ರಾಜ್ಞರುಗಳು ಜೀವತ್ವಕ್ಕೆ ಅಭಿಮಾನಿಗಳು. ಜಾಗ್ರದಾವಸ್ಥೆಯಿಂದ ಹಿಡಿದು ಮೋಕ್ಷದವರೆಗೆ ಇರುವ ಭೋಗರೂಪ ಸಂಸಾರವು ಜೀವನ ಕಾರ್ಯ.

೧. ಅಲ್ಪಶಕ್ತಿತ್ವ, ೨. ಅಲ್ಪಜ್ಞತ್ವ, ೩. ಪರಿಚ್ಛಿನ್ನತ್ವ, ೪. ನಾನತ್ವ, ೫. ಪರತಂತ್ರತ್ವ, ೬. ಅಸಮರ್ಥತ್ವ, ೭. ಅಪರೋಕ್ಷತ್ವ, ೮. ಅವಿದ್ಯೋಪಾಧಿಕತ್ವ – ಈ ಎಂಟು ಜೀವನ ಧರ್ಮಗಳು.

ಇವೆಲ್ಲವೂ ಸೇರಿದ ಅವಿದ್ಯೆಯೂ, ಅವಿದ್ಯೆಯಲ್ಲಿ ಪ್ರತಿಬಿಂಬಿತವಾದ ಚಿದಾಭಾಸನೂ, ಚಿದಾಭಾಸನಿಗೆ ಅಧಿಷ್ಠಾನವಾದ ಕೂಟಸ್ಥನೂ ಇವೆಲ್ಲವೂ ಸೇರಿ ಜೀವ ಪದಕ್ಕೆ ಅರ್ಥ. ಈ ಜೀವನೇ ತ್ವಂ ಪದಕ್ಕೆ ವಾಚ್ಯಾರ್ಥ. ಈ ಗುಂಪಿನಲ್ಲಿ ಅವಿದ್ಯಾ, ಚಿದಾಭಾಸರನ್ನು ಮಿಥ್ಯಾ ಭೂತಗಳೆಂದು ಕಳೆದರೆ ಉಳಿಯುವುದು ಕೂಟಸ್ಥಮಾತ್ರ. ಕೂಟಸ್ಥನು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೆ ಅಧಿಷ್ಠಾನವಾದ ಜೀವ ಸಾಕ್ಷಿ. ಅದೇ ತ್ವಂ ಪದಕ್ಕೆ ಲಕ್ಷ್ಯಾರ್ಥ.

ಪ್ರ ೩೬ : **ಬುದ್ಧಿಯಲ್ಲಿ ಪ್ರತಿಬಿಂಬರೂಪನಾಗಿರುವ ಜೀವನಿಗೂ ಕೂಟಸ್ಥನಿಗೂ ಪರಸ್ಪರ ಅಧ್ಯಾಸವು ಹೇಗೆ ಉಂಟಾಯಿತು ?**

ಉ : ಇದೂ ಸಹ ವಿಚಾರದೃಷ್ಟಿ ಇಲ್ಲದ್ದರಿಂದ ಉಂಟಾಯಿತು. ಹೇಗೆಂದರೆ, ಕೂಟಸ್ಥನು ಸತ್ಪದಾರ್ಥ. ಸದ್ರೂಪವೇ ಅವನ ಸ್ವರೂಪ. ಅವನ ಸತ್ಯತ್ವದ ಸಂಸರ್ಗವು ಅಂದರೆ ತಾದಾತ್ಮ್ಯ ಸಂಬಂಧವು ಜೀವನಲ್ಲಿ ಅಧ್ಯಾಸವಾಗಿದೆ. ಆದುದರಿಂದ ಜೀವನು ಸತ್ಯಸ್ವರೂಪನಲ್ಲದಿದ್ದರೂ ಸತ್ಯವಾಗಿರುವಂತೆ ತೋರುತ್ತಾನೆ; ಮಿಥ್ಯೆಯಾಗಿ ತೋರುವುದಿಲ್ಲ. ಮತ್ತು ಜೀವನ ಸ್ವರೂಪವೂ, ಅವನ ಕರ್ತೃತ್ವಾದಿ ಧರ್ಮಗಳ ಸ್ವರೂಪಗಳೂ ಕೂಟಸ್ಥನಲ್ಲಿ ಆರೋಪಿಸಲ್ಪಟ್ಟಿವೆ. ಆದುದರಿಂದ ಕೂಟಸ್ಥನ ಯಥಾರ್ಥ ಸ್ವರೂಪವು ಕಾಣದಂತೆ ಮರೆಯಾಗಿದೆ. ಹಾಗೆ ಮರೆಯಾದುದರಿಂದ ಕೂಟಸ್ಥನು ಕರ್ತನಾಗಿಯೂ, ಭೋಕ್ತನಾಗಿಯೂ, ಸಂಸಾರಿಯಾಗಿಯೂ, ಬದ್ಧನಾಗಿಯೂ, ಸಂಗವುಳ್ಳವನಾಗಿಯೂ, ಜೀವರೂಪನಾಗಿಯೂ ತೋರುತ್ತಾನೆ. ನಿಜವಾಗಿ ನೋಡಿದರೆ, ಕೂಟಸ್ಥನು ಅಕರ್ತ, ಅಭೋಕ್ತ, ಅಸಂಸಾರಿ, ನಿತ್ಯ, ಮುಕ್ತ, ಅಸಂಗ ಬ್ರಹ್ಮರೂಪನಾಗಿದ್ದಾನೆ. ಹೀಗಿದ್ದರೂ ಅಧ್ಯಾಸದ ಪ್ರಭಾವದಿಂದ ವಿಪರೀತವಾಗಿ ತೋರುತ್ತಾನೆ. ಇದೇ ಕೂಟಸ್ಥ ಮತ್ತು ಜೀವನಿಗಿರುವ ಪರಸ್ಪರಾಧ್ಯಾಸ.

ಪ್ರ ೩೭ : **ಈ ಅಧ್ಯಾಸವು ತೊಲಗುವುದು ಹೇಗೆ ?**

ಉ : ವಿವೇಕ ಜ್ಞಾನದಿಂದ ತೊಲಗುತ್ತದೆ.

ಪ್ರ ೩೭ : **ಮಹಾವಾಕ್ಯದಲ್ಲಿರುವ ತತ್, ತ್ವಂ ಪದಾರ್ಥಗಳಿಗೆ ಏಕತ್ವವು ಹೇಗೆ ಸಂಭವಿಸುತ್ತದೆ ?**

ಉ : ತತ್, ತ್ವಂ ಪದಗಳ ವಾಚ್ಯಾರ್ಥವನ್ನು ಅಂಗೀಕರಿಸಿದರೆ, ಉಪಾಧಿ ಸಹಿತವಾದ ಚೈತನ್ಯವು ಅಂದರೆ ಈಶ್ವರನೂ ಜೀವನೂ ಒಂದೇ ಎಂದು ತೋರುತ್ತದೆ. ಆ ಈಶ್ವರ ಜೀವರಿಗೆ ಏಕತ್ವವು ಸಂಭವಿಸಲಾರದು. ಇನ್ನು ತತ್, ತ್ವಂ ಪದಗಳ ವಾಚ್ಯಾರ್ಥಗಳನ್ನು ಬಿಟ್ಟು ಲಕ್ಷ್ಯಾರ್ಥವನ್ನು ಗ್ರಹಿಸಿದರೆ ಶುದ್ಧ ಬ್ರಹ್ಮವೂ ಕೂಟಸ್ಥನೂ ಒಂದೇ ಎಂದಾಗುತ್ತದೆ. ಆ ಶುದ್ಧ ಬ್ರಹ್ಮ ಮತ್ತು ಕೂಟಸ್ಥರಿಗೆ ಏಕತ್ವವು ಸಹಜಸಿದ್ಧವಾಗಿದೆ.

ಪ್ರ ೩೮ : **ಮಹಾವಾಕ್ಯದ ಶ್ರವಣವಾದ ಮೇಲೆ "ಅಹಂ ಬ್ರಹ್ಮಾಸ್ಮಿ" ಅಂದರೆ ನಾನು ಬ್ರಹ್ಮವೆಂಬ ಬ್ರಹ್ಮಾತ್ಮೈಕ್ಯದ ಅನುಭವವನ್ನು ಅನುಭವಿಸುವವರು ಯಾರು ? ಏಕೆಂದರೆ, ಈ ಬ್ರಹ್ಮಾತ್ಮೈಕ್ಯದ ಜ್ಞಾನವು ಕೂಟಸ್ಥನಿಗೆ ಎಂದು ಹೇಳುವುದಾದರೆ ಅವನು ವಿಕಾರಿಯಾಗುತ್ತಾನೆ. ಇನ್ನು ಚಿದಾಭಾಸನಿಗೆ ಎಂದು ಹೇಳಿದರೆ ಚಿದಾಭಾಸನು ಬ್ರಹ್ಮಕ್ಕಿಂತ ಭಿನ್ನನು. ಬ್ರಹ್ಮಕ್ಕಿಂತ ಭಿನ್ನನಾದ ಚಿದಾಭಾಸನಿಗೆ ನಾನು ಬ್ರಹ್ಮವೆಂಬುದು ಭ್ರಾಂತಿಯಾಗುತ್ತದೆ. ಇದಕ್ಕೆ ಸಮಾಧಾನವೇನು ?**

ಉ : ನಾನು ಬ್ರಹ್ಮವೆಂಬ ಜ್ಞಾನವು ಚಿದಾಭಾಸನಿಗೆ ಆಗುತ್ತದೆ, ಕೂಟಸ್ಥನಿಗಲ್ಲ. ಹೇಗೆಂದರೆ, ಜೀವ ಭಾವಕ್ಕೆ ಅಧಿಷ್ಠಾನವಾಗಿರುವ ಕೂಟಸ್ಥನಿಗೂ ಬ್ರಹ್ಮಕ್ಕೂ ಮುಖ್ಯವಾದ ಅಭೇದವಿದೆ. ಇನ್ನು ಬುದ್ಧಿಸಹಿತ ಚಿದಾಭಾಸನಿಗೆ ತನ್ನ ಸ್ವರೂಪವನ್ನು ಬಾಧೆ ಮಾಡುವುದರ ಮೂಲಕ ಬ್ರಹ್ಮದೊಂದಿಗೆ ಅಭೇದವು ಸಂಭವಿಸುತ್ತದೆ. ಚಿದಾಭಾಸನು ತನ್ನ ಸ್ವರೂಪವನ್ನು ಬಾಧಿಸಿ ತನ್ನನ್ನೂ ಅಹಂ ಪದದ ಲಕ್ಷ್ಯಾರ್ಥವಾದ ಕೂಟಸ್ಥನೆಂದು ಭಾವಿಸುತ್ತಾನೆ. ಮೊದಲು ನಾನು ಕೂಟಸ್ಥನು ಎಂಬುದು ತನ್ನ ಸ್ವರೂಪಭೂತವಾದ ಕೂಟಸ್ಥನಲ್ಲಿ ಅಭಿಮಾನವನ್ನು ವಹಿಸಿ ಅಥವಾ ತಾನು ಕೂಟಸ್ಥನಾದ ಮೇಲೆ ನಾನು ಬ್ರಹ್ಮವೆಂದು ನಿಶ್ಚಯಿಸಿಕೊಳ್ಳುತ್ತಾನೆ. ಈ ವಿಧವಾಗಿ ಚಿದಾಭಾಸನು ತನ್ನನ್ನು ತಾನು ಬ್ರಹ್ಮವೆಂದು ತಿಳಿದುಕೊಳ್ಳುತ್ತಾನೆ.

ಪ್ರ ೩೯ : **ತತ್ ಮತ್ತು ತ್ವಂ ಪದಗಳ ಲಕ್ಷ್ಯಾರ್ಥಗಳಿಗೆ ಏಕತ್ವವು ಸಿದ್ಧಿಸುವ ವಿಷಯದಲ್ಲಿ ದೃಷ್ಟಾಂತವೇನು ?**

ಉ : ೧. ಘಟಾಕಾಶ, ಮಠಾಕಾಶ. ಘಟದ ಉಪಾಧಿಯುಳ್ಳ ಆಕಾಶಕ್ಕೆ ಘಟಾಕಾಶವೆನ್ನುತ್ತಾರೆ. ಮಠದ ಉಪಾಧಿಯುಳ್ಳ ಆಕಾಶಕ್ಕೆ ಮಠಾಕಾಶವೆನ್ನುತ್ತಾರೆ. ಈ ಎರಡೂ ಉಪಾಧಿಗಳಿಗೆ ಏಕತ್ವವು ಸಂಭವಿಸುವುದಿಲ್ಲ. ಆದರೂ ಘಟಮಠ ಉಪಾಧಿಗಳನ್ನು ತೊಲಗಿಸಿದರೆ ನಿರುಪಾಧಿಕವಾದ ಆಕಾಶಕ್ಕೆ ಏಕತ್ವವುಂಟಾಗಲು ಯಾವ ವಿರೋಧವೂ ಇಲ್ಲ.

೨. ಉದಾ : ಒಂದು ಕಂಚಿನಿಂದ ಮಾಡಿದ ದೀಪವಿದೆ. ಮತ್ತೊಂದು ಮಣ್ಣಿನಿಂದ ಮಾಡಿದ ದೀಪವಿದೆ. ಅವೆರಡರಲ್ಲಿಯೂ ಬೆಳಗುವ ದೀಪಗಳಿಗೆ ಏಕತ್ವವುಂಟಾಗಲು ಯಾವ ಅಭ್ಯಂತರವೂ ಇಲ್ಲ.

೩. ರಾಜನೂ ಭಟನೂ ನಿಂತಿದ್ದರೆ ಅವರವರ ಬಾಹ್ಯ ಪರಿವಾರ ವೇಷಭೂಷಣಗಳನ್ನು ನೋಡುತ್ತಿರುವಾಗ ಅವರಿಗೆ ಏಕತ್ವವುಂಟಾಗಲಾರದು. ಹಾಗಿದ್ದರೂ ಮನುಷ್ಯತ್ವ ಧರ್ಮದ ಕಡೆಗೆ ದೃಷ್ಟಿಯಿಟ್ಟರೆ, ಏಕತ್ವದಲ್ಲಿ ಯಾವ ವಿರೋಧವೂ ಇಲ್ಲ.

೪. ಒಂದು ದೊಡ್ಡ ಭವನದ ಹಾಲಿನಲ್ಲಿ ಸಾವಿರ ಕ್ಯಾಂಡಲ್ ಪವರ್ ಉಳ್ಳ ಬಲ್ಬು ಉರಿಯುತ್ತಿದೆ. ಅದೇ ಮನೆಯ ಸಣ್ಣ ಕೋಣೆಯಲ್ಲಿ ಐದು ಕ್ಯಾಂಡಲ್ ಪವರ್ ಬಲ್ಬು ಉರಿಯುತ್ತಿದೆ. ಆ ಎರಡೂ ಬಲ್ಬುಗಳಲ್ಲಿ ಏಕತ್ವವು ಸಂಭವಿಸುವುದಿಲ್ಲ. ಆದರೆ ಆ ಕರೆಂಟಿನಲ್ಲಿ ಯಾವ ವ್ಯತ್ಯಾಸವೂ ಇಲ್ಲ.

ಈ ರೀತಿಯಾಗಿ ಅನೇಕ ಉದಾಹರಣೆಗಳಿಂದ ತತ್, ತ್ವಂ ಪದಗಳ ಲಕ್ಷ್ಯಾರ್ಥಕ್ಕೆ ಏಕತ್ವವನ್ನು ಹೇಳಬಹುದು.

ಪ್ರ ೪೦ : **ವೇದಾಂತ ಶಾಸ್ತ್ರದಲ್ಲಿ ತತ್, ತ್ವಂ ಪದಗಳ ಏಕತ್ವವನ್ನು ಕುರಿತು ಹೇಳಿರುವ ಉದಾಹರಣೆ ಏನು ?**

ಉ : ಒಬ್ಬ ಯಾತ್ರಿಕನು ಕಾಶಿಗೆ ಯಾತ್ರೆಗಾಗಿ ಹೋಗಿದ್ದಾನೆ. ಕಾಶಿಯಲ್ಲಿ ರಾಜನ ವೇಷವನ್ನು ಧರಿಸಿ ಸಿಂಹಾಸನದ ಮೇಲೆ ಕುಳಿತಿರುವ ಕಾಶೀರಾಜನನ್ನು ನೋಡಿದನು. ಯಾತ್ರಿಕನು ತನ್ನ ಊರಿಗೆ ಬಂದ ಕೆಲವು ದಿವಸಗಳ ಮೇಲೆ ಕಾಶೀರಾಜನಿಗೆ ತೀವ್ರ ವೈರಾಗ್ಯವುಂಟಾಗಿ, ರಾಜ್ಯವನ್ನು ತ್ಯಜಿಸಿ, ಕೌಪೀನ, ದಂಡ, ಕಮಂಡಲಗಳನ್ನು ಧರಿಸಿ ಕ್ಷೇತ್ರ ಯಾತ್ರೆಗೆ ಹೊರಟನು. ಕ್ಷೇತ್ರ ಯಾತ್ರೆ ಮಾಡುತ್ತಾ ಅಕಸ್ಮಾತ್ತಾಗಿ ಯಾತ್ರಿಕನ ಊರಿಗೆ

ಬಂದನು. ಆ ಸನ್ಯಾಸಿಯನ್ನು ನೋಡಿ ಯಾತ್ರಿಕನು ತನ್ನ ಸ್ನೇಹಿತನಿಗೆ "ನೋಡಯ್ಯಾ! ಇವನು ಕಾಶೀರಾಜನು. ನಾನು ಹಿಂದೆ ಕಾಶಿಗೆ ಹೋಗಿದ್ದಾಗ ನೋಡಿದ್ದೆ. ಅವನೇ ಇವನು'' ಎಂದು ಹೇಳಲು, ಸ್ನೇಹಿತನು ಅದನ್ನು ಕೇಳಿ, "ಏನಯ್ಯಾ! ಹೀಗೆ ಹೇಳುತೆ. ಅವನ ದೇಶವೇ ಬೇರೆ, ಇವನ ದೇಶವೇ ಬೇರೆ; ಅವನ ಅವಸ್ಥೆಯೇ ಬೇರೆ, ಇವನ ಅವಸ್ಥೆಯೇ ಬೇರೆ; ಅವನ ಅಭಿಮಾನವೇ ಬೇರೆ, ಇವನ ಅಭಿಮಾನವೇ ಬೇರೆ; ಅವನು ಮಾಡುವ ಕೆಲಸವೇ ಬೇರೆ, ಇವನು ಮಾಡುವ ಕೆಲಸವೇ ಬೇರೆ; ಅವನ ಧರ್ಮವೇ ಬೇರೆ, ಇವನ ಧರ್ಮವೇ ಬೇರೆ. ರಾಜನು ಹೇಗೆ ಭಿಕ್ಷಗಾರನಾಗುತ್ತಾನೆ?'' ಎಂದು ಹೇಳಿದನು. ಈ ರೀತಿ ದೇಶ, ಕಾಲಗಳ ದೃಷ್ಟಿಯಿಂದ ನೋಡಿದರೆ ಏಕತ್ವವು ಸಂಭವಿಸಲಾರದು. ಆದರೆ ಅವನಿಗೂ ಇವನಿಗೂ ಸಂಬಂಧಿಸಿದ ೧. ದೇಶ, ೨. ಕಾಲ, ೩. ಅವಸ್ಥೆ, ೪. ವಸ್ತುಗಳು, ೫. ಅಭಿಮಾನ, ೬. ಕಾರ್ಯ, ೭. ಧರ್ಮ ಇವೆಲ್ಲವುಗಳನ್ನು ತ್ಯಜಿಸಿದ ಮೇಲೆ ಎರಡರಲ್ಲಿಯೂ ಅನುಸ್ಯೂತವಾಗಿರುವ ಮನುಷ್ಯನು ಮಾತ್ರ ಒಬ್ಬನೇ. ಇವನೇ ಅವನು. ಅವನು ಇವನು ಎಂದು ಇಬ್ಬರಲ್ಲ.

ಈ ವಿಧವಾಗಿ ಜೀವನಿಗೂ, ಈಶ್ವರನಿಗೂ ಸಂಬಂಧಿಸಿದ ದೇಶ, ಕಾಲಗಳನ್ನು ಮಿಥ್ಯೆಯೆಂದು ತ್ಯಜಿಸಿದ ಮೇಲೆ ಎರಡರಲ್ಲಿಯೂ ಅನುಸ್ಯೂತವಾಗಿರುವ ಚೇತನ ಮಾತ್ರನಾದ ಆತ್ಮನು ಒಬ್ಬನೇ.

ಆತ್ಮನೇ ಬ್ರಹ್ಮ ಸ್ವರೂಪನು. ನಾನೇ ಬ್ರಹ್ಮ, ಬ್ರಹ್ಮವೇ ನಾನು ಎಂದು ದೃಢವಾಗಿ ಅಪರೋಕ್ಷವಾಗಿ ನಿಶ್ಚಯಿಸಿಕೊಳ್ಳಬೇಕು. ಇದಕ್ಕೆ ತತ್ವಜ್ಞಾನವೆಂದು ಹೆಸರು. ಈ ತತ್ವಜ್ಞಾನದಿಂದ ಸರ್ವ ದುಃಖಗಳ ಅತ್ಯಂತ ನಿವೃತ್ತಿಯೂ, ಪರಮಾನಂದ ಪ್ರಾಪ್ತಿಯೆಂಬ ಮೋಕ್ಷವೂ ಲಭಿಸುತ್ತದೆ.

ಓಂ ತತ್ಸತ್

ಇಲ್ಲಿಗೆ ''ಬ್ರಹ್ಮಾತ್ಮೈಕ್ಯ ನಿರೂಪಣ'' ಎಂಬ ೧೧ನೇ ಕಲಾ ಸಂಪೂರ್ಣ.

ಓಂ

ನಮೋ ಭಗವತೇ ಶಂಕರಾನಂದಾಯ

## ಹನ್ನೆರಡನೆಯ ಕಲಾ ಪ್ರಾರಂಭ

# ಜ್ಞಾನಿಯ ಕರ್ಮ ನಿವೃತ್ತಿ

ಪ್ರ ೧ : **ಕರ್ಮವೆಂದರೇನು ?**

ಉ : ಭಗವದ್ಗೀತೆಯ ನಾಲ್ಕನೇ ಅಧ್ಯಾಯದಲ್ಲಿ "ಗಹನಾ ಕರ್ಮ ಣೋಗತಿಃ" ಅಂದರೆ ಕರ್ಮದ ಗತಿಯು ಬಹಳ ಆಳವಾದದ್ದೆಂದು ಹೇಳಿದೆ. ಆದುದರಿಂದ ಪ್ರತಿಯೊಬ್ಬರೂ ಕರ್ಮದ ಮೀಮಾಂಸೆಯನ್ನು ಮಾಡುವುದು ಅತ್ಯಗತ್ಯ. ಕರ್ಮದ ಮೀಮಾಂಸೆಯನ್ನು ಮಾಡದೆ ಕರ್ಮಾತೀತ ಸ್ಥಿತಿಯು ದೊರಕಲಾರದು. "ಕರ್ಮ"ವೆಂಬ ಪದವು ''ಕೃ'' ಧಾತುವಿನಿಂದ ಉಂಟಾ ದುದರಿಂದ ಅದಕ್ಕೆ ''ಆಗು,'' ''ಮಾಡು'' ಎಂದರ್ಥ. ಶರೀರ, ವಾಣಿ ಮತ್ತು ಮನಸ್ಸಿನಿಂದ ಯಾವ ಕರ್ಮಗಳು ಆಗುವುವೋ ಮತ್ತು ಮಾಡ ಲ್ಪಡುವುವೋ ಅವೆಲ್ಲ ಕರ್ಮಗಳೇ. ನೈಯ್ಯಾಯಿಕರು ಕರ್ಮವನ್ನು ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ, ನಿಷಿದ್ಧವೆಂದು ಐದು ಭಾಗ ವಾಗಿ ವಿಭಾಗಿಸಿರುತ್ತಾರೆ. ಆದರೆ ವೇದಾಂತಿಗಳು ಕರ್ಮದಲ್ಲಿ ಶುಭ, ಅಶುಭವೆಂದು ಎರಡೇ ವಿಭಾಗ ಮಾಡಿರುತ್ತಾರೆ.

ಪ್ರ ೨ : **ಕರ್ಮಗಳು ಎಷ್ಟು ವಿಧ ?**

ಉ : ೧. ಸಂಚಿತ, ೨. ಪ್ರಾರಾಬ್ಧ, ೩. ಆಗಾಮಿಯೆಂದು ಮೂರು ವಿಧ.

ಪ್ರ ೩ : **ಸಂಚಿತ ಕರ್ಮವೆಂದರೇನು ?**

ಉ : ಸಂಚಿತವೆಂದರೆ ಕೂಡಿಟ್ಟದ್ದು. ಹಿಂದೆ ಕಳೆದ ಅನೇಕ ಜನ್ಮ ಗಳಲ್ಲಿ ಸಂಚಯ ಮಾಡಿದ ಕರ್ಮಗಳು ಸಂಚಿತವೆನಿಸುತ್ತವೆ.

ಪ್ರ ೪ : **ಈ ಸಂಚಿತ ಕರ್ಮಗಳ ರಾಶಿ ಇರುವುದೆಲ್ಲಿ ?**

ಉ : ಅವಿದ್ಯೆಗೆ ಆವರಣ, ವಿಕ್ಷೇಪವೆಂದು ಎರಡಂಶಗಳು. ಆವರಣವೆಂಬ ಅಂಶದಲ್ಲಿರುವುದು ಸಂಚಿತ ಕರ್ಮ.

ಪ್ರ ೫ : **ಪ್ರಾರಾಬ್ಧ ಕರ್ಮವೆಂದರೇನು ?**

ಉ : ಹಿಂದೆ ಕೂಡಿಟ್ಟ ಸಂಚಿತ ಕರ್ಮದ ರಾಶಿಯಲ್ಲಿ ಭೋಗಿಸಲು ಪರಿಪಕ್ವವಾದ ಮತ್ತು ಈಶ್ವರನ ಇಚ್ಛೆಯಿಂದ ವರ್ತಮಾನ ದೇಹವನ್ನು ಕೊಟ್ಟಿರುವ ಕರ್ಮ ಪ್ರಾರಾಬ್ಧ ಕರ್ಮ.

ಪ್ರ ೬ : **ಆಗಾಮಿ ಅಥವಾ ಕ್ರಿಯಮಾಣ ಕರ್ಮವೆಂದರೇನು ?**

ಉ : ಜ್ಞಾನಕ್ಕಿಂತ ಪೂರ್ವದಲ್ಲಿಯೇ ಆಗಲಿ ಅಥವಾ ಜ್ಞಾನಾನಂತರವೇ ಆಗಲಿ, ಪ್ರಾರಾಬ್ಧ ಕರ್ಮಾನುಸಾರವಾಗಿ ಬಂದ, ವರ್ತಮಾನ ದೇಹದಲ್ಲಿ ಮರಣ ಪರಿಯಂತರ ಮಾಡುವ ಕರ್ಮಗಳು ಆಗಾಮಿ ಅಥವಾ ಕ್ರಿಯಮಾಣ ಕರ್ಮಗಳು.

ಉದಾ : ಒಬ್ಬ ವ್ಯವಸಾಯಗಾರನು ತನ್ನ ಹೊಲದಲ್ಲಿ ವ್ಯವಸಾಯ ಮಾಡಿದಾಗ ೨೫ ಚೀಲ ಧಾನ್ಯ ದೊರಕುತ್ತದೆ. ಅವುಗಳಲ್ಲಿ ೫ ಚೀಲವನ್ನು ಮುಂದಿನ ವರ್ಷ ಧಾನ್ಯವು ಬರುವವರೆಗೆ ತಿನ್ನಲಿಕ್ಕಾಗಿ ಮನೆಯಲ್ಲಿಟ್ಟು ಕೊಂಡು ಉಳಿದ ಇಪ್ಪತ್ತು ಚೀಲಗಳನ್ನು ಒಂದು ಸ್ಥಾನದಲ್ಲಿ ಹುದುಗಿಸಿಡುತ್ತಾನೆ. ಮತ್ತೆ ಹೊಲದಲ್ಲಿ ವ್ಯವಸಾಯ ಮಾಡಿ ಬೀಜ ಬಿತ್ತುತ್ತಾನೆ. ಪ್ರತಿ ವರ್ಷ ಬರುವ ಧಾನ್ಯದಲ್ಲಿಯೂ ಹೀಗೆಯೇ ಮಾಡುತ್ತಾನೆ. ಪ್ರತಿ ವರ್ಷ ಶಿಲ್ಕು ಬೆಳೆಯುತ್ತಾ ಹೋಗುತ್ತದೆ.

ದ್ರಾಷ್ಟಾಂತ : ಹುದುಗಿಸಿಟ್ಟ ಧಾನ್ಯವು ಸಂಚಿತ ಕರ್ಮಕ್ಕೆ ಸಮಾನವಾದುದು. ಅದು ಪ್ರತಿ ಜನ್ಮದಲ್ಲಿಯೂ ಬೆಳೆಯುತ್ತಲೇ ಇರುತ್ತದೆ. ತಿನ್ನಲಿಕ್ಕೆ ತೆಗೆದುಕೊಂಡದ್ದು ಪ್ರಾರಾಬ್ಧ ಕರ್ಮಕ್ಕೆ ಸಮಾನವಾದುದು. ಹೊಲದಲ್ಲಿ ಬಿತ್ತುವುದು ಆಗಾಮಿ ಕರ್ಮ. ಇದೇ ಕರ್ಮದ ವಿಚಾರ.

ಪ್ರ ೭ : **ಕರ್ಮದ ವಿಚಾರವು ತಿಳಿದಂತಾಯಿತು. ಜ್ಞಾನಿಗೆ ಕರ್ಮ ನಿವೃತ್ತಿ ಹೇಗೆ ?**

ಉ : ಮೊದಲು ಸಂಚಿತ ಕರ್ಮದ ನಾಶದ ರೀತಿಯನ್ನು ಕೇಳು. ಕರ್ಮ ಶಾಸ್ತ್ರಗಳು —

**''ನಭುಕ್ತಂಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ,**
**ಅವಶ್ಯ ಮನುಭೋಕ್ತವ್ಯಂ ಕೃತಂಕರ್ಮ ಶುಭಾಶುಭಂ"**

ಎಂದು ಹೇಳಿವೆ. ಅಂದರೆ, ಮಾಡಿದ ಕರ್ಮಗಳು ಶತಕೋಟಿ ಕಲ್ಪಗಳಾದರೂ ಭೋಗಿಸದೆ ಮುಗಿಯುವುದಿಲ್ಲ. ಮಾಡಿದ ಶುಭಾಶುಭ ಕರ್ಮಗಳು ಅವಶ್ಯವಾಗಿ ಭೋಕ್ತವ್ಯಗಳು ಎಂಬುದು ಕರ್ಮಶಾಸ್ತ್ರದ ನಿಯಮ. ಆದರೆ ಜ್ಞಾನಶಾಸ್ತ್ರದ ನಿಯಮವು ಬೇರೆ. ಜ್ಞಾನಶಾಸ್ತ್ರದ ದೃಷ್ಟಿಯಲ್ಲಿ "ಜ್ಞಾನದಿಂದ ಅಜ್ಞಾನದ ಆವರಣಾಂಶವು ನಿವೃತ್ತಿಯಾಗುತ್ತವೆ.'' ಆವರಣವು ನಿವೃತ್ತಿಯಾಗುತ್ತಲೇ ಅದರ ಆಶ್ರಯದಲ್ಲಿರುವ ಸಂಚಿತ ಕರ್ಮವು ನಿವೃತ್ತಿಯಾಗಿಹೋಗುತ್ತವೆ. ಆಶ್ರಯವಾದ ಗೋಡೆಯು ನಾಶವಾಗುತ್ತಲೇ ಆಶ್ರಿತವಾದ ಚಿತ್ರಗಳು ನಾಶವಾಗಲೇಬೇಕು. ಇದಕ್ಕೆ ಶೃತಿಯು ''ಅಹಂ ಬ್ರಹ್ಮೇತಿ ವಿಜ್ಞಾನಾತ್ ಕಲ್ಪಕೋಟಿಶತಾರ್ಜಿತಂ ಸಂಚಿತಂ ವಿಲಯಂಯಾಂತಿ ಪ್ರಭೋಧಾತ್ ಸ್ವಪ್ನ ಕರ್ಮವತ್'' ಎಂದು ಹೇಳಿದೆ. ಇದಕ್ಕೆ ಅಹಂ ಬ್ರಹ್ಮಾಸ್ಮಿಯೆಂಬ, ದೃಢವಾದ ಅಪರೋಕ್ಷವಾದ ಜ್ಞಾನವುಂಟಾಗುತ್ತಲೇ ಶತಕೋಟಿ ಜನ್ಮಗಳಲ್ಲಿ ಆರ್ಜಿಸಿದ ಸಂಚಿತ ಕರ್ಮದ ರಾಶಿಯು ಎಚ್ಚರವಾಗುತ್ತಲೇ ಸ್ವಪ್ನದ ಕರ್ಮಗಳು ನಾಶವಾದಂತೆ ನಾಶವಾಗುತ್ತವೆ, ಎಂದರ್ಥ. ಆದುದರಿಂದ ಬ್ರಹ್ಮಜ್ಞಾನಿಯು ಮೇರುಪರ್ವತದಷ್ಟು ಕರ್ಮದ ರಾಶಿಯಿದ್ದರೂ ಭಯಪಡಬೇಕಾದುದಿಲ್ಲ. ಪರಮ ಪೂಜ್ಯರಾದ ಅಲ್ಲಮ ಪ್ರಭುಗಳು "ಮಯ್ಯಲ್ಲಿ ವಿಭೂತಿ ಧರಿಸಿದರೆ ಭಸ್ಮಧಾರಣೆಯೆ, ಅಲ್ಲಲ್ಲ. ಮಾಡಿದ ಕರ್ಮವು ಜ್ಞಾನದಿಂದ ಭಸ್ಮವಾದರೆ ಅದು ನಿಜವಾದ ಭಸ್ಮಧಾರಣೆ'' ಎಂದು ಬೋಧಿಸುತ್ತಾರೆ.

ಪ್ರ : **ಆಗಾಮಿ ಕರ್ಮವು ನಾಶವಾಗುವುದು ಹೇಗೆ ?**

ಉ : ಜ್ಞಾನದ ಹಿಂದೆ ಮತ್ತು ಜ್ಞಾನಾನಂತರ ಈ ಜನ್ಮದಲ್ಲಿ ಮಾಡಲ್ಪಟ್ಟ ಕ್ರಿಯಮಾಣ ಕರ್ಮಗಳು "ನಾನು ಅಕರ್ತ ಅಭೋಕ್ತ ಅಸಂಗ ಬ್ರಹ್ಮ ಸ್ವರೂಪನು" – ಈ ರೀತಿ ಸ್ವರೂಪದ ನಿಶ್ಚಯದ ಬಲದಿಂದ "ಭ್ರಮಜ" ತಾದಾತ್ಮ್ಯವು ನಾಶವಾಗಲು ರಾಗದ್ವೇಷಗಳು ಅಭಾವವಾಗಿ ನೀರಿನಲ್ಲಿದ್ದ

ಕಮಲ ಪತ್ರವು ನೀರಿಗೆ ಅಂಟವಂತೆ ಜ್ಞಾನಿಗೆ ಕ್ರಿಯಮಾಣ ಕರ್ಮವು ಅಂಟಲಾರದು.

ಪ್ರ ೯ : **ಜ್ಞಾನಿಯು ಮಾಡಿದ ಶುಭಾಶುಭ ಕರ್ಮಗಳು ಜ್ಞಾನಿಗೆ ಅಂಟದೆ ಹೋದರೆ ಅವುಗಳ ಗತಿ ಏನು ?**

ಉ : ಶೃತಿ ಪ್ರಮಾಣ : ''ಪ್ರಾರಬ್ಧಂ ಭೋಗತೋನಶ್ಯೇತ್ ಶೇಷಂ ಜ್ಞಾನೇನ ದಹ್ಯತೇ ಶಾರೀರಂ ತ್ವಿತರತ್ಕರ್ಮ ತದ್ವೇಷ ಪ್ರಿಯವಾದಿನಃ.'' ಪ್ರಾರಾಬ್ಧ ಕರ್ಮವು ಭೋಗದಿಂದ ನಾಶವಾಗುತ್ತದೆ. ಈ ಜನ್ಮದಲ್ಲಿ ಮಾಡಿದ ಶುಭಾಶುಭ ಕರ್ಮಗಳ ಫಲಗಳಲ್ಲಿ ಜ್ಞಾನಿಯ ಸಕಾಮ ಭಕ್ತನು ಶುಭ ಕರ್ಮಗಳ ಫಲಗಳನ್ನು ಅನುಭವಿಸುತ್ತಾನೆ ತದ್ವೇಷ ಅಂದರೆ ನಿಂದಕರು, ಜ್ಞಾನಿಯಿಂದಾದ ಅಶುಭ ಕರ್ಮಫಲಗಳನ್ನು ಅನುಭವಿಸುತ್ತಾರೆ. ಆದುದರಿಂದ ಜ್ಞಾನಿಗೆ ಯಾವ ಕರ್ಮದ ಸಂಬಂಧವೂ ಇಲ್ಲ. ಶ್ರೀಕೃಷ್ಣನು ಶುಭ ಕರ್ಮಗಳನ್ನು ಮಾಡಿದ್ದರೆ ಅದಕ್ಕೆ ಪಾಂಡವರು ಭಾಗಿಗಳು. ಅವನಿಂದ ಅನಿವಾರ್ಯವಾಗಿ ಅಶುಭ ಕರ್ಮಗಳಾಗಿದ್ದರೆ ಅದಕ್ಕೆ ಕೌರವರು ಭಾಗಿಗಳು.

ಪ್ರ ೧೦ : **ಪ್ರಾರಾಬ್ಧ ಕರ್ಮವಿರುವುದೆಲ್ಲಿ ? ಅದರ ನಿವೃತ್ತಿ ಹೇಗೆ ?**

ಉ : ಪ್ರಾರಾಬ್ಧ ಕರ್ಮವು ಅಜ್ಞಾನದ ಎರಡನೆ ಅಂಶವಾದ ವಿಕ್ಷೇಪದ ಆಶ್ರಯದಲ್ಲಿರುತ್ತದೆ. ಭೋಗಿಸಿದ ನಂತರ ವಿಕ್ಷೇಪವು ನಾಶವಾಗಲು ಅದೂ ನಾಶವಾಗುತ್ತದೆ.

ಪ್ರ ೧೧ : **ತಾವು ಹೇಳಿದ ಮಾತಿನಿಂದ ಜ್ಞಾನವು ಎರಡು ಕರ್ಮಗಳನ್ನು ಮಾತ್ರ ನಾಶ ಮಾಡಿ, ವಿಕ್ಷೇಪವನ್ನು ನಾಶ ಮಾಡಲಾರದೆ ಹೋಯಿತು ಎಂದರ್ಥವಾಗುತ್ತದೆ. ಇದು ಸರಿಯೆ ? ಜ್ಞಾನದಲ್ಲಿ ಎಲ್ಲಾ ಕರ್ಮಗಳನ್ನೂ ನಾಶ ಮಾಡುವ ಶಕ್ತಿ ಇಲ್ಲವೇ ?**

ಉ : ಮುಂಡಕೋಪನಿಷತ್ತಿನಲ್ಲಿ "ಕ್ಷಿಯಂತೇಚಾಸ್ಯ ಕರ್ಮಾಣಿ'' ಅಂದರೆ ಜ್ಞಾನಿಯ ಕರ್ಮಗಳೆಲ್ಲವೂ ಕ್ಷಯವಾಗುತ್ತವೆ ಎಂದು ಹೇಳಿರುವುದರಿಂದಲೂ, ಭಗವದ್ಗೀತೆಯಲ್ಲಿ ''ಜ್ಞಾನಾಗ್ನಿದಗ್ಧ ಕರ್ಮಾಣಂ" ಎಂದು ಹೇಳಿರುವುದರಿಂದಲೂ ಜ್ಞಾನವು ಕರ್ಮರಾಶಿಯನ್ನು ಸುಟ್ಟು ಬೂದಿ ಮಾಡುತ್ತದೆ ಎಂಬ ಪ್ರಮಾಣಕ್ಕನುಸಾರವಾಗಿ ಜ್ಞಾನವು ಸರ್ವ ಕರ್ಮಗಳನ್ನೂ

ಸುಟ್ಟು ಹಾಕುತ್ತದೆ. ವಿಚಾರ ಮಾಡಿ ನೋಡಿದರೆ, ಆತ್ಮಜ್ಞಾನಿಗೆ ಯಾವ ಕರ್ಮಗಳೂ ಇಲ್ಲ. ಕರ್ಮಗಳೆಲ್ಲಾ ಬುದ್ಧಿಗೆ. ಕರ್ಮ ಮಾಡಿದವನಿಗೆ ಪ್ರಾರಾಬ್ಧವು ಬಂದು ಗಂಟು ಬೀಳಬಹುದು. ಎಂದೆಂದೂ ಯಾವ ಕರ್ಮಕ್ಕೂ ಸಂಬಂಧವಿಲ್ಲದ ಆತ್ಮನಿಗೆ ಪ್ರಾರಾಬ್ಧವೆಲ್ಲಿ ? ಆದುದರಿಂದ ಜ್ಞಾನಿಗೆ ಕರ್ಮ ನಿವೃತ್ತಿಯು ಸಹಜವಾಗಿ ಆಗುತ್ತದೆ.

ಓಂ ತತ್ಸತ್

ಇಲ್ಲಿಗೆ ''ಜ್ಞಾನಿಯ ಕರ್ಮ ನಿವೃತ್ತಿ'' ಎಂಬ
ಹನ್ನೆರಡನೆಯ ಕಲೆಯು ಮುಗಿಯಿತು.

ಓಂ

ನಮೋ ಭಗವತೇ ಶಂಕರಾನಂದಾಯ

## ಹದಿಮೂರನೆ ಕಲಾ ಪ್ರಾರಂಭ

# ಸಪ್ತಜ್ಞಾನ ಭೂಮಿಕೆ

ಪ್ರ ೧ : **ಸರ್ವ ಜ್ಞಾನಿಗಳ ನಿಷ್ಠೆಯೂ ಒಂದೇ ಆಗಿರುತ್ತದೆ. ಅದು 'ಅಹಂಬ್ರಹ್ಮಾಸ್ಮಿ' ಎಂಬ ನಿಶ್ಚಯ. ಹೀಗಿದ್ದರೂ ಜ್ಞಾನಿಗಳ ಸ್ಥಿತಿಯಲ್ಲಿ ಭೇದವೇಕೆ ?**

ಉ : ನಿಶ್ಚಯದಲ್ಲಿ ಭೇದವಿಲ್ಲದಿದ್ದರೂ ಜ್ಞಾನ ಭೂಮಿಕೆಗಳಲ್ಲಿ ಭೇದ ವಿರುವುದರಿಂದ ಸ್ಥಿತಿಯಲ್ಲಿ ಭೇದ ಕಂಡುಬರುತ್ತದೆ.

ಪ್ರ ೨ : **ಜ್ಞಾನಭೂಮಿಕೆಗಳೆಷ್ಟು?**

ಉ : ವಾಸಿಷ್ಟ ರಾಮಾಯಣದ ಅನುಸಾರವಾಗಿ ವಿಚಾರ ಚಂದ್ರೋದಯದಲ್ಲಿ ಹೇಳಿದ ಜ್ಞಾನಭೂಮಿಕೆಗಳು ಏಳು : ೧. ಶುಭೇಚ್ಛೆ, ೨. ಸುವಿಚಾರಣ, ೩. ತನುಮಾನಸ, ೪. ಸತ್ವಾಪತ್ತಿ, ೫. ಅಸಂಸಕ್ತಿ, ೬. ಪದಾರ್ಥ ಭಾವಿನಿ, ಮತ್ತು ೭. ತುರಿಯಾ.

ಪ್ರ ೩ : **ಶುಭೇಚ್ಛಾ ಭೂಮಿಕೆ ಎಂದರೇನು ?**

ಉ : ಪೂರ್ವ ಜನ್ಮದಲ್ಲಿಯೇ ಆಗಲಿ, ಈ ಜನ್ಮದಲ್ಲಿಯೇ ಆಗಲಿ ಮಾಡಿದ ನಿಷ್ಕಾಮ ಕರ್ಮ ಮತ್ತು ಉಪಾಸನೆಯಿಂದ ಅಂತಃಕರಣವು ಶುದ್ಧವೂ ಏಕಾಗ್ರವೂ ಆಗಿರುವ ಪುರುಷನಿಗೆ ಸಾಧನ ಚತುಷ್ಟಯ ಸಂಪತ್ತಿಯುಂಟಾಗುತ್ತದೆ. ಆಗ ಅವನಿಗೆ ಆತ್ಮನನ್ನು ತಿಳಿಯಬೇಕೆಂಬ ತೀವ್ರೇಚ್ಛೆ ಉಂಟಾಗುತ್ತದೆ. ಇದಕ್ಕೆ ಶುಭೇಚ್ಛೆಯೆಂಬ ಜ್ಞಾನದ ಪ್ರಥಮ ಭೂಮಿಕೆ ಎನ್ನುತ್ತಾರೆ.

ಮಹಡಿಯನ್ನು ಹತ್ತಿ ಹೋಗಬೇಕಾದರೆ ಏಳು ಮೆಟ್ಟಿಲುಗಳಲ್ಲಿ ಇದು ಮೊದಲನೆ ಮೆಟ್ಟಿಲು.

ಪ್ರ ೪ : **ಸುವಿಚಾರಣ ಭೂಮಿಕೆಯೆಂದರೇನು ?**

ಉ : ಆತ್ಮವನ್ನು ತಿಳಿಯಬೇಕೆಂಬ ತೀವ್ರೇಚ್ಛೆಯಿಂದ ಶ್ರೋತ್ರೀಯ ಬ್ರಹ್ಮನಿಷ್ಠ ಸದ್ಗುರುವನ್ನು ವಿಧಿಪೂರ್ವಕವಾಗಿ ಶರಣು ಹೊಂದಿ, ಗುರುಗಳ ಮುಖದಿಂದ ಜೀವ-ಬ್ರಹ್ಮದ ಏಕತೆಯನ್ನು ಸಾಧಿಸುವ ವೇದಾಂತ ಮಹಾ ವಾಕ್ಯಗಳನ್ನು ಶ್ರವಣ ಮಾಡಿದ ಮೇಲೆ, ಅದರರ್ಥವನ್ನು ಅನುಭವ ಮಾಡಿ ಕೊಳ್ಳುವುದಕ್ಕಾಗಿ ಅನೇಕ ಯುಕ್ತಿಗಳಿಂದ ಮನನ ಅಂದರೆ ವಿಚಾರಣ ಮಾಡುವುದು ಸುವಿಚಾರಣವೆಂಬ ಎರಡನೆಯ ಭೂಮಿಕೆ.

ಪ್ರ ೫ : **ತನುಮಾನಸ ಭೂಮಿಕೆ ಎಂದರೇನು ?**

ಉ : ಸ್ವರೂಪ ಸಾಕ್ಷಾತ್ಕಾರ ಅಂದರೆ ಪರೋಕ್ಷ ಅನುಭವಕ್ಕಾಗಿ, ಶ್ರವಣ ಮನನ ದ್ವಾರ ನಿರ್ಣಯ ಮಾಡಿದ ಬ್ರಹ್ಮಾತ್ಮರ ಏಕತ್ವದ ಅರ್ಥ ವನ್ನು ನಿತ್ಯ ನಿರಂತರವೂ ಚಿಂತನಾರೂಪವಾದ ನಿಧಿಧ್ಯಾಸನದಿಂದ ಸ್ಥೂಲ ಮನಸ್ಸಿನ ಬಹಿರ್ಮುಖತ್ವವು ಇಲ್ಲದಂತಾಗಿ ಸೂಕ್ಷ್ಮ ಮನಸ್ಸು ಅಂದರೆ ಮನಸ್ಸು ಅಂತರ್ಮುಖವಾಗುತ್ತದೆ. ಈ ಮನಸ್ಸಿನ ಅಂತರ್ಮುಖ ಸ್ಥಿತಿಯೇ ತನುಮಾನಸವೆಂಬ ಮೂರನೆ ಭೂಮಿಕೆ. ತನುಮಾನಸನೆಂದರೆ ಮನಸ್ಸಿನ ಸೂಕ್ಷ್ಮಾವಸ್ಥೆಯೆಂದರ್ಥ.

ಪ್ರ ೬ : **ಸತ್ವಾಪತ್ತಿ ಭೂಮಿಕೆ ಎಂದರೇನು ?**

ಉ : ಶ್ರವಣ ಮನನ ನಿಧಿಧ್ಯಾಸನಗಳಿಂದ ಅಂತಃಕರಣದ ಸಂಶಯ, ವಿಪರ್ಯಯ ದೋಷಗಳು ನಾಶವಾಗಲು, ಸ್ವರೂಪ ಸಾಕ್ಷಾತ್ಕಾರವೆಂಬ ನಿರ್ವಿಕಲ್ಪ ಸಮಾಧಿಯು ಉಂಟಾಗುತ್ತದೆ. ಈ ಸ್ಥಿತಿಯಲ್ಲಿ ಚಿತ್ತಕ್ಕೆ ಉಂಟಾಗುವ ಶುದ್ಧ ಸತ್ವಗುಣವು ಅಂದರೆ ಬ್ರಹ್ಮಾಕಾರ ವೃತ್ತಿಯು ಸತ್ವಾ ಪತ್ತಿಯೆಂಬ ನಾಲ್ಕನೆ ಭೂಮಿಕೆ.

ಪ್ರ ೭ : **ಅಸಂಸಕ್ತಿ ಭೂಮಿಕೆ ಎಂದರೇನು ?**

ಉ : ನಿರ್ವಿಕಲ್ಪ ಸಮಾಧಿಯ ಅಭ್ಯಾಸದ ಪರಿಪಾಕದಿಂದ ಅದಕ್ಕಿಂತ ಪೂರ್ವದಲ್ಲಿದ್ದ ದೇಹದ ಮೇಲಿನ ನಾನು, ನನ್ನದೆಂಬ ದೋಷಗಳು ಕರಗಿ ಹೋಗಿ, ದೇಹದ ವಿಷಯವಾಗಿ ಸರ್ವಥಾ ಆಸಕ್ತಿ ಅಂದರೆ ಪ್ರೀತಿಯ

ಅಭಾವವುಂಟಾಗುತ್ತದೆ. ಈ ಅವಸ್ಥೆಯೇ ಅಸಂಸಕ್ತಿಯೆಂಬ ಐದನೆ ಭೂಮಿಕೆ. ಅಸಂಸಕ್ತಿಯೆಂದರೆ ಸಂಸಕ್ತಿ ಇಲ್ಲದ್ದು.

ಪ್ರ ೮ : **ಪದಾರ್ಥಾಭಾವಿನಿ ಭೂಮಿಕೆ ಅಂದರೇನು ?**

ಉ : ನಿರ್ವಿಕಲ್ಪ ಸಮಾಧಿಯ ಅಭ್ಯಾಸದ ಪರಿಪಕ್ವದಿಂದ ದೇಹಾದಿ ಸರ್ವ ದೃಶ್ಯ ಪದಾರ್ಥಗಳಲ್ಲಿ ವಿರಕ್ತಿಯೂ, ಅಧಿಷ್ಠಾನ ಬ್ರಹ್ಮದಲ್ಲಿ ರಕ್ತಿಯೂ ಉಂಟಾದಾಗ ಪದಾರ್ಥಾಭಾವಿನಿ ಅಂದರೆ ಪದಾರ್ಥವು ತೋರದಿರುವುದು ಎಂಬ ಆರನೆ ಭೂಮಿಕೆ ಉಂಟಾಗುತ್ತದೆ.

ಪ್ರ ೯ : **ತುರೀಯಾ ಭೂಮಿಕೆ ಎಂದರೇನು ?**

ಉ : ಜ್ಞಾತಾ, ಜ್ಞಾನ, ಜ್ಞೇಯ ರೂಪ ತ್ರಿಪುಟಿಯು ಚತುರ್ಥ ಪಂಚಮ ಭೂಮಿಕೆಯಲ್ಲಿ ಪ್ರತೀತಿಯಾಗುತ್ತದೆ. ಆ ಪ್ರತೀತಿಯು ಆರನೆ ಭೂಮಿಕೆಯಲ್ಲಿ ಅಭಾವವಾಗುತ್ತದೆ. ಈ ತ್ರಿಪುಟಿಯ ಭಾವಾಭಾವಗಳು ಅಂದರೆ ಪ್ರತೀತಿ, ಅಪ್ರತೀತಿಗಳು ಇಲ್ಲದೇ ಹೋಗಿ, ತನ್ನ ಇಷ್ಟದಿಂದಲೂ, ಮತ್ತೊಬ್ಬರ ಪ್ರಯತ್ನದಿಂದಲೂ ಉತ್ಥಾನವಾಗದೆ ಅಂದರೆ ಬಹಿರ್ಮುಖವಾಗದೆ ಮನಸ್ಸು ತುರೀಯ (ಸ್ಥಾನ)ದಲ್ಲಿಯೇ ನಿಂತರೆ ಅದು ತುರೀಯವೆಂಬ ಏಳನೆ ಭೂಮಿಕೆ.

ಇಲ್ಲಿಯವರೆಗೆ ಹೇಳಿದ್ದು ವಿಚಾರ ಚಂದ್ರೋದಯವನ್ನನುಸರಿಸಿ ಸಪ್ತಜ್ಞಾನ ಭೂಮಿಕೆಗಳ ವಿಚಾರ. ಇನ್ನು ವಿಚಾರ ಮೂಲವೆಂಬ ಗ್ರಂಥದಲ್ಲಿ ಸಪ್ತಜ್ಞಾನ ಭೂಮಿಕೆಗಳ ವಿಚಾರವಾಗಿ ಹೇಳಲ್ಪಡುತ್ತದೆ.

## ಸಪ್ತಜ್ಞಾನ ಭೂಮಿಕೆಗಳ ಎರಡನೆ ರೀತಿ

ಪ್ರ ೧೦ : **ಶುಭೇಚ್ಛೆ ಎಂದರೇನು ?**

ಉ : "ವಿಷಯಗಳು ಸ್ವಭಾವತಃ ಅನಿತ್ಯಗಳು, ಸಾತಿಶಯ ದೋಷಗಳಿಂದ ಕೂಡಿರುವಂಥವುಗಳು, ಮುಟ್ಟಿದ ಮಾತ್ರದಿಂದಲೇ ದುಃಖವನ್ನುಂಟು ಮಾಡತಕ್ಕವುಗಳು'' ಎಂದು ಮಹಾತ್ಮರ ಮುಖದಿಂದ ತಿಳಿದು ಅವುಗಳಲ್ಲಿ ತ್ಯಾಗಬುದ್ಧಿ ಉಂಟಾಗಿ, ಸದ್ಗುರುಗಳಲ್ಲಿ ಅತಿ ಪ್ರೀತಿಯುಂಟಾಗಿ, ತೀರ್ಥಾಟನ ಮೊದಲಾದ ಶುಭ ಕರ್ಮಗಳಲ್ಲಿ ಅನುರಾಗ ಉಂಟಾಗಿ, ವೇದಾಂತ ಶ್ರವಣವನ್ನು ಕೇಳಬೇಕೆಂಬ ಆಸಕ್ತಿ ಉಂಟಾದರೆ ಅದಕ್ಕೆ ಶುಭೇಚ್ಛೆ ಎನು

ತ್ತಾರೆ. ಇದೊಂದು ಅಂತಃಕರಣದ ವೃತ್ತಿ. ಇದು ಜ್ಞಾನ ಭೂಮಿಕೆಯಲ್ಲಿ ಮೊದಲನೆಯದು. ಇದು ಪ್ರಥಮ ಉಂಟಾದ ಮೇಲೆಯೇ ಉಳಿದ ಭೂಮಿಕೆ ಗಳು ಉಂಟಾಗುತ್ತವೆ.

ಪ್ರ ೧೧ : **ಈ ಪ್ರಥಮ ಭೂಮಿಕೆ ಉಂಟಾದದ್ದಕ್ಕೆ ಚಿಹ್ನೆ ಏನು ?**

ಉ : ಭಗವಂತನಲ್ಲಿ ಪ್ರೀತಿ. ಆತ್ಮಜ್ಞಾನದಿಂದ ಮೋಕ್ಷವುಂಟಾಗುವು ದೆಂಬ ವಿಶ್ವಾಸ. ಚಿತ್ತವು ವಿಷಯಗಳ ಕಡೆಗೆ ಹರಿಯದೆ ಇರುವುದು. ಶ್ರವಣ ಕಾಲದಲ್ಲಿ ಅಂತಃಕರಣದಲ್ಲಿ ಪುಳಕಿತ ಉಂಟಾಗುವುದು. ದೈವೀ ಗುಣಗಳು ದಿನೇ ದಿನೇ ಅಭಿವೃದ್ಧಿಯಾಗುತ್ತಿರುವುದು. ಇವೆಲ್ಲವೂ ಪ್ರಥಮ ಭೂಮಿ ಕೆಯ ಚಿಹ್ನೆಗಳು.

ಪ್ರ ೧೨ : **ಎರಡನೆ ಸುವಿಚಾರಣವೆಂಬ ಭೂಮಿಕೆಯ ಲಕ್ಷಣ ವೇನು ?**

ಉ : ಪ್ರಪಂಚದಲ್ಲಿ ಸತ್ಯವಾವುದು ? ಅಸತ್ಯವಾವುದು ? ನಿತ್ಯ ವಾವುದು ? ಅನಿತ್ಯವಾವುದು ? ಆತ್ಮವಾವುದು ? ಅನಾತ್ಮವಾವುದು ? ಎಂಬ ಜಿಜ್ಞಾಸದಿಂದ ಕೂಡಿಕೊಂಡು, ನಾನಾರು ? ಜಗತ್ತೆಂದರೇನು ? ಜಗದೀ ಶ್ವರನ ಸ್ವರೂಪವಾವುದು ? ಎಂಬ ವಿಚಾರದಲ್ಲಿಯೇ ಕಾಲವನ್ನು ಕಳೆಯು ವುದು ಎರಡನೆಯ ಭೂಮಿಕೆ.

ಪ್ರ ೧೩ : **ತನುಮಾನಸವೆಂಬ ಮೂರನೆ ಭೂಮಿಕೆಯ ಲಕ್ಷಣ ವೇನು ?**

ಉ : ಒಳಗಿನ ಹೊರಗಿನ ವಿಷಯಗಳಿಂದ ಚಿತ್ತವನ್ನು ನಿರೋಧಿಸಿ, ತನ್ನ ಸ್ವರೂಪ ಭೂತವಾದ ಪರಬ್ರಹ್ಮವನ್ನು ನಿರಂತರ ಸ್ಮರಿಸುತ್ತಿರುವುದು ಮೂರನೆ ಭೂಮಿಕೆ. ತನುಮಾನಸವೆಂಬ ಪದಕ್ಕೆ ಸೂಕ್ಷ್ಮ ಸ್ಥಿತಿಯನ್ನು ಪಡೆದ ಮನಸ್ಸು ಎಂದರ್ಥ.

ಪ್ರ ೧೪ : **ನಾಲ್ಕನೆ ಭೂಮಿಕೆಯ ಸತ್ವಾಪತ್ತಿ ಲಕ್ಷಣವೇನು ?**

ಉ : ನಿತ್ಯ ನಿರಂತರ ಬ್ರಹ್ಮ ಚಿಂತನ ಮಾಡುವುದರಿಂದ ಅಂತಃಕರಣದ ಸಂಶಯ ವಿಪರ್ಯಯಗಳೆಂಬ ದೋಷಗಳು ನಿಶ್ಶೇಷವಾಗಿ ತೊಲಗಿ, ಸ್ವರೂಪ ಸಾಕ್ಷಾತ್ಕಾರವೆಂಬ ಅನುಭವವು ಸಿದ್ಧಿಯಾದ ಮೇಲೆ ಸಮುದ್ರ ಮಧ್ಯದಲ್ಲಿರುವ ತರಂಗವು ಸಮುದ್ರ ಸ್ವರೂಪವೇ ಆಗಿರುವಂತೆ, ಈ ದೃಶ್ಯ ಮಾನವಾದ

ಜಗತ್ತು ಆತ್ಮನೆಂಬ ಸಮುದ್ರದ ತರಂಗವಾದುದರಿಂದ ಇದೂ ಸಹ ಆತ್ಮವೇ, ಆತ್ಮಕ್ಕಿಂತ ಭಿನ್ನವಲ್ಲ ಎಂಬ ಆರೂಢಜ್ಞಾನವು ಉಂಟಾಗುತ್ತದೆ. ಈ ಸ್ಥಿತಿಯೇ ನಾಲ್ಕನೆಯ ಭೂಮಿಕೆ.

ಪ್ರ ೧೫ : **ಅಸಂಸಕ್ತಿಯೆಂಬ ಐದನೆ ಭೂಮಿಕೆಯ ಲಕ್ಷಣವೇನು ?**

ಉ : ಮೇಲೆ ಹೇಳಿದಂತೆ ಸ್ವರೂಪಜ್ಞಾನ ಉಂಟಾಗಲು, ದೇಹಾಭಿಮಾನವು ಅಥವ ದೇಹವೇ ತಾನೆಂಬ ಬುದ್ಧಿಯು ಗಳಿತವಾಗಿ (ಕರಗಿ), ತನ್ನನ್ನು ಶರೀರಕ್ಕಿಂತ ಭಿನ್ನವಾದವನೆಂತಲೂ, ಕಂಡುಬರುವ ಶರೀರವು ಮಿಥ್ಯೆಯೆಂತಲೂ, ತಿಳಿದ ನಿರುಪಮಾನ ಸ್ಥಿತಿಯೇ ಐದನೆಯ ಭೂಮಿಕೆ.

ಪ್ರ ೧೬ : **ಪದಾರ್ಥಾಭಾವಿನಿಯೆಂಬ ಆರನೇ ಭೂಮಿಕೆಯ ಲಕ್ಷಣವೇನು ?**

ಉ : ಉಂಗುರ, ಚೈನು, ಕಡಗ, ಕಂಕಣಾದಿಗಳು ಎಷ್ಟು ಇದ್ದರೂ ಅಧಿಷ್ಠಾನ ವಸ್ತುವನ್ನು ತಿಳಿದವನಿಗೆ ಎಲ್ಲೆಲ್ಲಿಯೂ ಬಂಗಾರವೇ ಪ್ರತೀತಿಯಾಗುವಂತೆ, ದೇಹದಿಂದ ಹಿಡಿದು ಬುದ್ಧಿಯವರೆಗೆ ತೋರುವ ಪದಾರ್ಥಗಳೆಲ್ಲಾ ಕೇವಲ ಪ್ರತೀತಿ ಮಾತ್ರಗಳು. ಅವು ಅತ್ಯಂತಾಭಾವಗಳು. ಅವು ಅಧಿಷ್ಠಾನ ಬ್ರಹ್ಮಕ್ಕಿಂತ ಭಿನ್ನವಲ್ಲ. ಅಧ್ಯಸ್ಥ ಪದಾರ್ಥಗಳಿಗೆ ಅಧಿಷ್ಠಾನವೇ ಸ್ವರೂಪ. ಈ ರೀತಿ ಅಧಿಷ್ಠಾನವು ತೋರುವ ಸ್ಥಿತಿಗೆ ಆರನೇ ಭೂಮಿಕೆ ಎನ್ನುತ್ತಾರೆ.

ಪ್ರ ೧೭ : **ತುರೀಯೂವೆಂಬ ಏಳನೆ ಭೂಮಿಕೆಯ ಸ್ವರೂಪವೇನು?**

ಉ : ನಾನು ಎಂದರೆ ಪ್ರಮಾತೃ, ನೀನು ಎಂದರೆ ಪ್ರಮೇಯ; ಇದನ್ನು ತಿಳಿದುಕೊಳ್ಳುವ ಅಂತಃಕರಣ ವೃತ್ತಿಯೇ ಪ್ರಮಾಣ. ಈ ತ್ರಿಪುಟಿಯು ನಾಲ್ಕು ಐದನೆಯ ಭೂಮಿಕೆಗಳಲ್ಲಿ ಇರುತ್ತದೆ. ಈ ತ್ರಿಪುಟಿಯನ್ನು ದಾಟಿದ ಸ್ಥಿತಿಯೇ ಆರನೆ ಭೂಮಿಕೆ. ತ್ರಿಪುಟಿಯ ಇರುವಿಕೆ, ಇಲ್ಲದಿರುವಿಕೆ, ಅಥವಾ ತ್ರಿಪುಟಿಯ ಭಾವಾಭಾವಗಳನ್ನು ದಾಟಿದ ಸ್ಥಿತಿಯೇ ತುರೀಯಾವೆಂಬ ಏಳನೆ ಭೂಮಿಕೆ.

ಭಾವಾಭಾವ ಪದಾರ್ಥಕ್ಕೆ ಭಿನ್ನವಾದ ವಸ್ತುವೊಂದಿದೆಯೆ ? ಇಲ್ಲವೆ ? ಎಂಬ ಶಂಕೆ "ಯತೋವಾಚೋ ನಿವರ್ತಂತೇ ಅಪ್ರಾಪ್ಯಮನಸಾಸಹ" ಎಂಬ

ಶಾಸ್ತ್ರ ಪ್ರಮಾಣದಂತೆ, ಮನಸ್ಸು-ಸರ್ವೇಂದ್ರಿಯಗಳು ಯಾವುದನ್ನು ಮುಟ್ಟದೆ ಹಿಂದಕ್ಕೆ ತಿರುಗಿ ಬರುವುವೋ ಆ ಅವಾಚ್ಯ ವಸ್ತುವೇ ಭಾವಾಭಾವ ಪದಾರ್ಥಕ್ಕೆ ಭಿನ್ನವಾದುದು.

## ಸಪ್ತಜ್ಞಾನ ಭೂಮಿಕೆಯ ಮೂರನೇ ರೀತಿ

ಪ್ರ ೧೮ : **ಶುಭೇಚ್ಛೆ ಎಂಬ ಪ್ರಥಮ ಭೂಮಿಕೆಯ ಲಕ್ಷಣವೇನು?**

ಉ : ''ಅಯ್ಯೋ ! ನಾನಿಷ್ಟು ಕಾಲದವರೆಗೆ ಮೂಢತ್ವದಲ್ಲಿದ್ದು ನನ್ನ ಜೀವಿತವನ್ನು ವ್ಯರ್ಥ ಮಾಡಿಕೊಂಡೆನು ! ಆಗಿದ್ದಾಗಿ ಹೋಯಿತು. ಎದ್ದಾಗಲೇ ಬೆಳಕು ಹರಿದಂತಾಯಿತು. ಮರೆತ ಸ್ಥಳದಿಂದಲೇ ಲೆಕ್ಕವನ್ನು ಹಿಡಿಯಬೇಕು. ಈಗಿನಿಂದಲಾದರೂ ಆತ್ಮಕಲ್ಯಾಣಕ್ಕೆ ಪ್ರಯತ್ನ ಮಾಡುತ್ತೇನೆ. ಶ್ರೋತ್ರೀಯ ಬ್ರಹ್ಮನಿಷ್ಠರಾದ ಸದ್ಗುರುವನ್ನು ಆಶ್ರಯಿಸಿ ಅವರಿಂದ ಮೋಕ್ಷ ಶಾಸ್ತ್ರವನ್ನು ಅಭ್ಯಾಸ ಮಾಡಿ, ಅವರು ಬೋಧಿಸಿದ ಪ್ರಕಾರ ಆತ್ಮ ವಿಚಾರವನ್ನು ಮಾಡಿ ನನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳುತ್ತೇನೆ'' ಎಂದು ಈ ವಿಧವಾಗಿ ಆವೇದನವುಂಟಾದವರು ಸಾಧನ ಚತುಷ್ಟಯವನ್ನು ಸಂಪಾದನೆ ಮಾಡಿದ ಉತ್ತಮನಾದ ಅಧಿಕಾರಿಗೆ ಉಂಟಾದ ಇಚ್ಛೆಯೇ ಶುಭೇಚ್ಛೆಯೆನಿಸುತ್ತದೆ.

ತಾತ್ಪರ್ಯವೇನೆಂದರೆ, ನಿಷಿದ್ಧ ಕರ್ಮಗಳನ್ನು ಪೂರ್ಣವಾಗಿ ಪರಿತ್ಯಾಗ ಮಾಡಿ, ಫಲಾಪೇಕ್ಷೆಯಿಲ್ಲದೆ ವಿಹಿತ ಕರ್ಮಗಳನ್ನು ಆಚರಿಸುತ್ತಾ, ಚಿತ್ತ ಶುದ್ಧಿಯನ್ನು ಸಂಪಾದಿಸಿ, ವಿವೇಕ, ವೈರಾಗ್ಯ, ಷಟ್ ಸಂಪತ್ತಿ, ಮುಮುಕ್ಷುತ್ವ ಎಂಬ ನಾಲ್ಕು ಸಾಧನಗಳನ್ನು ಸಾಧಿಸಿ, ವೇದಾಂತ ಶಾಸ್ತ್ರಗಳನ್ನು ಶ್ರವಣ ಮಾಡಿ ಆತ್ಮ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಉತ್ಕಟೇಚ್ಛೆಯೇ ಶುಭೇಚ್ಛೆಯೆನಿಸುತ್ತದೆ.

ಪ್ರ ೧೯ : **ಸುವಿಚಾರಣ ಎಂಬ ಎರಡನೆಯ ಭೂಮಿಕೆಯ ಲಕ್ಷಣವೇನು ?**

ಉ : ವಿಚಾರಣವೆಂದರೂ ಒಂದೇ, ಸುವಿಚಾರಣವೆಂದರೂ ಒಂದೇ. ತೀವ್ರ ವೈರಾಗ್ಯದಿಂದ ಕೂಡಿಕೊಂಡು ನೇಮ, ನಿಷ್ಠೆಯಿಂದ ವೇದಾಂತ ಶಾಸ್ತ್ರಗಳನ್ನು ಶ್ರವಣ ಮನನ ಮಾಡುತ್ತಾ, ಶ್ರದ್ಧಾಯುಕ್ತನಾಗಿ ಗುರು

ಸೇವೆಯನ್ನು ಆಚರಿಸುತ್ತಾ, ಏಕಾಂತವಾಸದಲ್ಲಿದ್ದು ಹಿತವಾದ, ಮಿತವಾದ ಆಹಾರವನ್ನು ಸೇವಿಸುತ್ತಾ, ಗುರು ಬೋಧಿಸಿದ ವಾಕ್ಯಗಳನ್ನು ಅಂದರೆ ತತ್ತ್ವಮಸ್ಯಾದಿ ವಾಕ್ಯಗಳ ಅರ್ಥವನ್ನು ಪುನಃ ಪುನಃ ವಿಚಾರಿಸುತ್ತಾ ಇರುವುದು ಸುವಿಚಾರಣವೆಂಬ ಎರಡನೆ ಭೂಮಿಕೆ.

ಪ್ರ ೨೦ : **ತನುಮಾನಸವೆಂಬ ಮೂರನೆ ಭೂಮಿಕೆಯ ಲಕ್ಷಣ ವೇನು ?**

ಉ : ಮೇಲಿನ ಎರಡು ಭೂಮಿಕೆಗಳನ್ನು ದಾಟಿದ ಮೇಲೆ ಶಬ್ದಾದಿ ವಿಷಯಗಳಲ್ಲಿ ಆಸಕ್ತಿ ಇಲ್ಲದಂತಾಗುತ್ತದೆ. ವಿಷಯಾಸಕ್ತಿಯು ಕಳೆಯುತ್ತಲೇ ಶ್ರವಣ, ಮನನ, ನಿಧಿಧ್ಯಾಸಗಳ ಕಡೆಗೆ ಮನಸ್ಸು ತಿರುಗುತ್ತದೆ. ಆಗ ಉಂಟಾಗುವ ಸವಿಕಲ್ಪ ಸಮಾಧಿಯ ಬಲದಿಂದ ಬುದ್ಧಿಯು ವಿಷಯಾಕಾರವನ್ನು ಕಳೆದುಕೊಂಡು ಆತ್ಮಸಾಕ್ಷಾತ್ಕಾರವೆಂಬ ಸೂಕ್ಷ್ಮಸ್ಥಿತಿಗೆ ಬರುತ್ತದೆ. ಈ ಸೂಕ್ಷ್ಮಸ್ಥಿತಿಯೇ ತನುಮಾನಸವೆಂಬ ಮೂರನೆ ಭೂಮಿಕೆ.

ಪ್ರ ೨೧ : **ಸತ್ವಾಪತ್ತಿಯೆಂಬ ನಾಲ್ಕನೆ ಭೂಮಿಕೆಯ ಲಕ್ಷಣ ವೇನು ?**

ಉ : ಪೂರ್ವೋಕ್ತವಾದ ಮೂರು ಭೂಮಿಕೆಗಳನ್ನು ಅಭ್ಯಸಿಸುತ್ತಾ ಬಾಹ್ಯ ಪದಾರ್ಥಗಳ ಯೋಗ್ಯತೆಯನ್ನು ಕಂಡು ಅವುಗಳಲ್ಲಿಯ ರಾಗ ಸಂಸ್ಕಾರವು ನಿರ್ಮೂಲವಾಗುತ್ತದೆ. ಅದೇ ಮನಸ್ಸಿನ ವಿರಕ್ತ ಸ್ಥಿತಿ. ಆಗ ಈ ಭೂಮಿಕೆಯಲ್ಲಿರುವವನಿಗೆ ಮಾಯೆಗೂ ಮತ್ತು ಮಾಯಾ ಕಾರ್ಯಗಳಿಗೂ ಅತೀತವಾದ, ಶುದ್ಧವಾದ, ಸನ್ಮಾತ್ರವಾದ, ಚಿನ್ಮಾತ್ರವಾದ, ಆನಂದಘನವಾದ ಆತ್ಮನಲ್ಲಿ ತ್ರಿಪುಟಿಯೆಲ್ಲಾ ಲಯಿಸಿ, ಅಂದರೆ ನಿರ್ವಿಕಲ್ಪ ಸಮಾಧಿ ಸ್ಥಿತಿ ಉಂಟಾಗಿ, ಸಾಕ್ಷಾತ್ಕಾರ ಸ್ಥಿತಿಯುಂಟಾದರೆ ಅದಕ್ಕೆ ಸತ್ವಾಪತ್ತಿಯೆಂಬ ನಾಲ್ಕನೆ ಭೂಮಿಕೆಯೆನ್ನುತ್ತಾರೆ. ಈ ಭೂಮಿಕೆಯಲ್ಲಿದ್ದ ಮಹಾಪುರುಷನನ್ನು ಕುರಿತು ಶಾಸ್ತ್ರವು "ಬ್ರಹ್ಮವಿದ"ನೆಂಬ ಗೌರವ ಸ್ಥಾನವನ್ನು ಕೊಡುತ್ತದೆ.

ಪ್ರ ೨೨ : **ಅಸಂಸಕ್ತಿಯೆಂಬ ಐದನೆಯ ಭೂಮಿಕೆಯ ಲಕ್ಷಣ ವೇನು ?**

ಉ : ಮೇಲಿನ ನಾಲ್ಕು ಭೂಮಿಕೆಗಳನ್ನು ಅಭ್ಯಾಸ ಮಾಡಿದ ಬಲ

ದಿಂದ ಒಳಗಿನ ಹೊರಗಿನ ವಸ್ತುಗಳ ಸಂಸ್ಕಾರಗಳೇ ಆಗಲಿ, ರೂಪಗಳೇ ಆಗಲಿ, ಚಿತ್ತಕ್ಕೆ ಅಂಟಿಕೊಳ್ಳದೆ ಸಮಾಧಿಯ ಪರಿಪಾಕ ಫಲದಿಂದ ಚಿತ್ತವು ಬ್ರಹ್ಮಾತ್ಮಭಾವನಾ ಸ್ಥಿತಿಯಲ್ಲಿರುವುದಕ್ಕೆ ಅಸಂಸಕ್ತಿ ಭೂಮಿಕೆಯೆನ್ನುತ್ತಾರೆ. ಈ ಭೂಮಿಕೆಯಲ್ಲಿ ಅವಿದ್ಯಾ ಮತ್ತು ಅವಿದ್ಯಾ ಕಾರ್ಯಗಳ ಸಂಬಂಧವು ಇರಲಾರದು. ಈ ಕಾರಣದಿಂದಲೇ ಇದಕ್ಕೆ ಅಸಂಸಕ್ತಿಯೆಂಬ ಹೆಸರು ಬಂದಿದೆ. ಈ ಭೂಮಿಕೆಯನ್ನೇರಿದ ಮಹಾಪುರುಷನನ್ನು ಕುರಿತು ಶಾಸ್ತ್ರವು "ಬ್ರಹ್ಮವಿದ್ವರ"ನೆಂಬ ಹೆಸರು (ಬಿರುದು) ಕೊಟ್ಟಿದೆ.

ಪ್ರ ೨೩ : **ಆರನೆಯ ಪದಾರ್ಥಾಭಾವಿನಿಯೆಂಬ ಭೂಮಿಕೆಯ ಲಕ್ಷಣವೇನು ?**

ಉ : ಪದಾರ್ಥಾಭಾವಿನಿಯೆಂದರೆ ಪದಾರ್ಥಗಳ ಭಾವದ ಅಭಾವ. ಮೇಲೆ ಹೇಳಿದ ಐದು ಭೂಮಿಕೆಗಳನ್ನು ಅಭ್ಯಾಸ ಮಾಡಿ ತೇರ್ಗಡೆ ಹೊಂದಿದ ಜ್ಞಾನಿಯು ಸ್ವಾತ್ಮಾರಾಮ ಪರಾಯಣನಾಗುತ್ತಾನೆ. ಇಂಥವನಿಗೆ ಬಾಹ್ಯಾಭ್ಯಂತರ ಪ್ರತೀತಿಯು ಉಂಟಾಗುವುದಿಲ್ಲ. ಆದುದರಿಂದಲೇ ಈ ಭೂಮಿಕೆಗೆ ಪದಾರ್ಥಾಭಾವಿನಿಯೆಂದು ಹೆಸರು. ಇಂಥವನಿಗೆ ಸ್ವಯಂ ಪದಾರ್ಥಗಳ ಪ್ರತೀತಿಯು ಇರದಿದ್ದರೂ, ಇತರರ ಪ್ರೇರಣೆಯಿಂದ ಪ್ರತೀತಿಯುಂಟಾಗುತ್ತದೆ. ಅದರಿಂದಲೇ ಅವನ ಶರೀರ ಪೋಷಣೆಯಾಗುತ್ತದೆ. ಇಂಥ ಉನ್ನತ ಸ್ಥಿತಿಯನ್ನು ಏರಿ ವಿರಾಜಿಸುವ ಮಹಾಪುರುಷನನ್ನು ಕುರಿತು ಶಾಸ್ತ್ರವು "ಬ್ರಹ್ಮವಿದ್ವರೀಯ"ನೆಂದು ಹೊಗಳುತ್ತದೆ.

ಪ್ರ ೨೪ : **ಏಳನೆಯ ತುರೀಯಗಾ ಎಂಬ ಭೂಮಿಕೆಯ ಲಕ್ಷಣವೇನು ?**

ಉ : ಹಿಂದೆ ಹೇಳಿದ ಭೂಮಿಕೆಗಳನ್ನು ಕೆಲ ಕಾಲದವರೆಗೆ ಅಭ್ಯಸಿಸಿದವರಿಗೆ ಪೂರ್ಣಭಾವನೆ ಬಂದು ಭೇದ ಪ್ರತೀತಿಯು ನಾಶವಾಗಿ, ಅವಸ್ಥಾತ್ರಯ ತೀತನಾದ ಆತ್ಮನು ಬ್ರಹ್ಮರೂಪನೇ ಎಂಬ ಜ್ಞಾನವು ಖಂಡಿತವಾಗಿರುತ್ತದೆ. ಈ ಭೂಮಿಕೆಯಲ್ಲಿರುವ ವಿದೇಹಿಯು "ಬ್ರಹ್ಮವಿದ್ವರಿಷ್ಟ"ನೆಂದು ಶೃತಿಯು ಸ್ತುತಿಸುತ್ತದೆ.

ಈ ಏಳು ಭೂಮಿಕೆಗಳಲ್ಲಿ ಮೊದಲನೆ ಮೂರು ಭೂಮಿಕೆಗಳು ಸಾಧನೆಯೊಳಗೆ ಸೇರಿದವುಗಳು. ನಾಲ್ಕನೆಯ ಭೂಮಿಕೆಯು ತತ್ವಜ್ಞಾನರೂಪ

ವಾದುದು. ಆದುದರಿಂದ ಜೀವನ್ಮುಕ್ತಿಗೂ ವಿದೇಹ ಮುಕ್ತಿಗೂ ಸಾಧನ ವಾಗಿದೆ. ಐದನೆ, ಆರನೆ, ಏಳನೆ ಭೂಮಿಕೆಗಳು ಜೀವನ್ಮುಕ್ತನ ವಿಲಕ್ಷಣಾ ನಂದವನ್ನು ಸೂಚಿಸುತ್ತವೆ. ಈ ಭೂಮಿಕೆಯನ್ನು ಏರುತ್ತಾ ಹೋದಂತೆ ಜೀವನ್ಮುಕ್ತನ ದೇಹಭಾವನೆಯು ತಗ್ಗುತ್ತಾ ಬಂದು, ಕೆಲವರಿಗೆ ಕೊನೆಗೆ ಉನ್ಮತ್ತ ದೆಸೆಯೂ ಸಹ ಸಂಭವಿಸುತ್ತದೆ.

ನಾಲ್ಕನೆಯ ಭೂಮಿಕೆಯವರೆಗೂ ಉಪದೇಶಗಳೂ, ಬೋಧಗಳೂ, ಸಾಧ್ಯವಾದಷ್ಟು ಮಟ್ಟಿಗೆ ವ್ಯವಹಾರವೂ ಸಹ ನಡೆಯುತ್ತದೆ. ಐದನೆಯ ಭೂಮಿಕೆಯಲ್ಲಿ ಉನ್ಮತ್ತ ದೆಸೆಗೆ ಬಂದು ಶುಕ, ಜಡಭರತರಂತೆ ಪ್ರದರ್ಶಿಸುತ್ತಾ ಜಿಜ್ಞಾಸುಗಳಿಗೆ ಬೋಧೆಯನ್ನೂ ಸಹ ಮಾಡುತ್ತಿರುತ್ತಾನೆ. ಆರನೆಯ ಭೂಮಿಕೆಯಲ್ಲಿ ಅದೂ ಸಹ ಇರುವುದಿಲ್ಲ. ಏಳನೆಯ ಭೂಮಿಕೆಯನ್ನು ಸೇರಿದ ಕೆಲವರು ೨೧ ದಿವಸಕ್ಕಿಂತ ಹೆಚ್ಚು ಬದುಕಲಾರರು ಎಂದು ಶ್ರೀ ರಾಮಕೃಷ್ಣ ಪರಮಹಂಸರು ಹೇಳಿರುತ್ತಾರೆ.

ನಾಲ್ಕನೆಯ ಭೂಮಿಕೆಯಲ್ಲಿ ಇರುವ ಅಧಿಕಾರಿಗಳು ಕೃತೋಪಾಸ್ತಿ, ಅಕೃತೋಪಾಸ್ತಿ ಎಂದು ಎರಡು ವಿಧ.

ಪ್ರ ೨೫ : **ಕೃತೋಪಾಸ್ತಿ ಎಂದರೇನು ?**

ಉ : ಬ್ರಹ್ಮಜ್ಞಾನ, ಎಂದರೆ ಆತ್ಮನಾದ ನಾನು ಬ್ರಹ್ಮವೇ ಎಂಬ ಜ್ಞಾನ ಉಂಟಾಗುವುದಕ್ಕಿಂತ ಮೊದಲು ಸರಿಯಾಗಿ ಉಪಾಸನೆಗಳನ್ನು ಮಾಡಿ ಮುಗಿಸಿದ ನಂತರ ಶ್ರವಣಕ್ಕೆ ಬಂದವನು ''ಕೃತೋಪಾಸ್ತಿ'' ಎನಿಸಿ ಕೊಳ್ಳುತ್ತಾನೆ.

ಪ್ರ ೨೬ : **ಅಕೃತೋಪಾಸ್ತಿ ಎಂದರೇನು ?**

ಉ : ಶ್ರವಣಕ್ಕಿಂತ ಮೊದಲು ಉಪಾಸನ ಭಾಗವನ್ನು ಮುಗಿಸದೆ, ಶ್ರವಣಕ್ಕೆ ಬಂದವನು "ಅಕೃತೋಪಾಸ್ತಿ" ಎನಿಸುತ್ತಾನೆ. ಈ ಇಬ್ಬರಲ್ಲಿ ಕೃತೋಪಾಸ್ತಿಯಾದವನು ಸಾಧನ ಚತುಷ್ಟಯ ಸಂಪನ್ನನಾಗಿ ಸುಲಭವಾಗಿ ಜ್ಞಾನವನ್ನು ಪಡೆದುಕೊಂಡು ಮೇಲಿನ ಭೂಮಿಕೆಗಳನ್ನು ''ಅಧಿರೋಹಿ''ಸುತ್ತಾನೆ. ಅಕೃತೋಪಾಸ್ತಿಯಾದವನು ಸಾಧನಗಳನ್ನು ಪೂರ್ಣ ಮಾಡದೆ ಇರುವುದರಿಂದ ಅವನಿಗೆ ಒಂದೆರಡು ಸಾಧನಗಳು ಮಾತ್ರ ಸ್ಪಷ್ಟವಾಗಿದ್ದು ಉಳಿದವುಗಳು ಅಸ್ಪಷ್ಟವಾಗಿರುತ್ತವೆ. ಇಂಥವನಿಗೆ ಉಳಿದ ಭೂಮಿಕೆಗಳನ್ನು

ಏರುವುದು ಮಹಾ ಕಷ್ಟವಾಗುತ್ತದೆ. ಅವನಿಗೆ ತತ್ವಜ್ಞಾನ ಸಿದ್ಧಿಯೂ ಸಹ ಆಗಲಾರದು.

ಈ ಸಪ್ತಜ್ಞಾನ ಭೂಮಿಕೆಗಳ ವಿಚಾರವು ಜ್ಞಾನವಾಸಿಷ್ಠದಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ.

ಇಲ್ಲಿಯವರೆಗೆ ಸಪ್ತಜ್ಞಾನ ಭೂಮಿಕೆಗಳನ್ನು ವರ್ಣಿಸಲಾಯಿತು. ಇನ್ನು ಮುಂದೆ ಅಜ್ಞಾನ ಸಪ್ತಭೂಮಿಕೆಗಳ ವರ್ಣನ.

ಪ್ರ ೨೭ : **ಸಪ್ತಜ್ಞಾನ ಭೂಮಿಕೆಗಳ ವರ್ಣನವಾದ ಮೇಲೆ ಅಜ್ಞಾನ ಭೂಮಿಕೆಗಳನ್ನು ತಿಳಿಯುವ ಅಗತ್ಯವೇನು ?**

ಉ : ಸಾಧಕನಿಗೆ ಅಜ್ಞಾನವು ಪೂರ್ಣವಾಗಿ ನಿವೃತ್ತಿಯಾಗಬೇಕು. ಹಾಗಾದರೆ ಅದು ಮತ್ತೆ ತಲೆ ಎತ್ತುವುದಿಲ್ಲ. ಆದುದರಿಂದ ಅಜ್ಞಾನದ ಆತ್ಯಂತಿಕ ನಿವೃತ್ತಿಯನ್ನು ಮಾಡಿಕೊಳ್ಳುವುದಕ್ಕಾಗಿ ಅಜ್ಞಾನ ಸಪ್ತಭೂಮಿಕೆಗಳನ್ನು ವಿಚಾರ ಮಾಡಬೇಕು.

ಪ್ರ ೨೮ : **ಅಜ್ಞಾನ ಸಪ್ತಭೂಮಿಕೆಗಳ ಹೆಸರೇನು ?**

ಉ : ೧. ಬೀಜ ಜಾಗೃತ, ೨. ಜಾಗೃತ, ೩. ಮಹಾ ಜಾಗೃತ, ೪. ಜಾಗ್ರತ್ ಸ್ವಪ್ನ, ೫. ಸ್ವಪ್ನ, ೬. ಸ್ವಪ್ನ ಜಾಗ್ರತ, ೭. ಸುಷುಪ್ತಿ. ಇವು ಒಂದರೊಳಗೊಂದು ಸೇರಿ ಅನೇಕ ಭೇದಗಳಾಗಿವೆ.

ಪ್ರ ೨೯ : **ಬೀಜ ಜಾಗೃತವೆಂದರೇನು ?**

ಉ : ಸೃಷ್ಟಿಯ ಆದಿಯಲ್ಲಿ ಮಾಯಾ ಪ್ರಭಾವದಿಂದ ನಾಮ ರಹಿತವೂ, ನಿರ್ಮಲವೂ, ಚಿದಾಭಾಸವಂತವೂ ಆದ ಒಂದು ರೂಪವು ಏರ್ಪಡುತ್ತವೆ. ಅದು ಅನಂತರ ಪ್ರಾಣಧಾರಣಾದಿ ಕ್ರಿಯೆಗಳಿಗೆ ಆಧಾರವಾಗಿ ಚಿತ್ತವೆಂತಲೂ, ಜೀವವೆಂತಲೂ ಹೇಳಿಸಿಕೊಳ್ಳುತ್ತದೆ. ಅದು ಮುಂದೆ ಉಂಟಾಗುವ ಜಾಗ್ರತ್ತಿಗೆ ಬೀಜವಾದುದರಿಂದ ಅದು ಬೀಜ ಜಾಗ್ರತ್ ಎಂದು ಹೇಳಿಸಿಕೊಂಡಿತು. ಅದು "ಸಂವಿತ್" ತಿಳಿವಳಿಕೆಯ ನೂತನಾವಸ್ಥೆ. ಬೀಜದಿಂದಲೇ ವೃಕ್ಷವಾದಂತೆ ಇದರಿಂದಲೇ ಸರ್ವ ಜಗತ್ತು ಹೊರಬಿದ್ದದ್ದರಿಂದ ಅದಕ್ಕೆ ಬೀಜ ಜಾಗ್ರತ್ ಎಂಬ ಹೆಸರು.

ಪ್ರ ೩೦ : **ಜಾಗ್ರತ್ ಎಂದರೇನು ?**

ಉ : ಜಾಗ್ರತ್ ಎಂಬುದು ನಂತರ ಆದ ಬೀಜ. ಜಾಗ್ರತ್ತಿನ

ಪರಿಣಾಮವೇ ಈ ಸ್ಥೂಲ ಶರೀರವಾದ ನಾನು. ಈ ಸ್ಥೂಲ ಶರೀರಕ್ಕೆ ಸಂಬಂಧಪಟ್ಟ ಭೋಗ್ಯ ಪದಾರ್ಥಗಳು ನನ್ನವು. ಈ ವಿಧವಾದ ಅಹಂಕಾರ ಮಮಕಾರಗಳುಂಟಾಗುವ ಅಚಲ ಪ್ರತ್ಯಯವೇ ಜಾಗ್ರತ್ ಎಂದು ಹೇಳಿಸಿ ಕೊಳ್ಳುತ್ತದೆ.

ಪ್ರ ೩೧ : **ಮಹಾ ಜಾಗ್ರತ್ ಎಂದರೇನು ?**

ಉ : ಮೇಲೆ ಹೇಳಿದ ಅಚಲ ಪ್ರತ್ಯಯವು ಅಂದರೆ ದೃಢಾಭ್ಯಾಸವು ಮತ್ತಷ್ಟು ದೃಢವಾದರೆ, ಅಂದರೆ ಜ್ಞಾನವಿಲ್ಲದೆ ಬಿಡಿಸಿಕೊಳ್ಳಲು ಬಾರ ದಂತಾದರೆ, ಅದಕ್ಕೆ ಮಹಾ ಜಾಗ್ರತ್ ಎನ್ನುತ್ತಾರೆ.

ಪ್ರ ೩೨ : **ಜಾಗ್ರತ್ ಸ್ವಪ್ನವೆಂದರೇನು ?**

ಉ : ಅಭ್ಯಾಸದ ಅಗತ್ಯವಿಲ್ಲದೆ ರೂಢಿಯಾಗಿ ಸಂಕಲ್ಪ ಮಾತ್ರಗಳ ಸ್ವರೂಪವನ್ನು ಪಡೆದ ಅಂದರೆ ಜಾಗ್ರತ್ತಿನಲ್ಲಿಯ ಮನೋರಾಜ್ಯವೇ ಜಾಗ್ರತ್ ಸ್ವಪ್ನ. ಜಾಗ್ರತ್ ಸ್ವಪ್ನಕ್ಕೆ ಇಬ್ಬರು ಚಂದ್ರರ ಪ್ರತೀತಿ ; ಶುಕ್ತಿರಜತ ಭ್ರಾಂತಿ, ಮರುಮರೀಚಿಕೆಯ ಭ್ರಾಂತಿ, ಇವುಗಳೆಲ್ಲ ಜಾಗ್ರತ್ ಸ್ವಪ್ನಗಳ ಭೇದಗಳು. ಮತ್ತೊಂದು ದೃಷ್ಟಿಯಿಂದ ನೋಡಿದರೆ ಜಾಗ್ರದಾವಸ್ಥೆ ಯಲ್ಲಿರುವಾಗಲೇ ಸ್ವಪ್ನದಂಥ ವ್ಯವಹಾರವು ನಡೆದರೆ ಅದು ಜಾಗ್ರತ್ ಸ್ವಪ್ನ ವೆಂದು ಹೇಳಿಸಿಕೊಳ್ಳುತ್ತದೆ.

ಪ್ರ ೩೩ : **ಸ್ವಪ್ನವೆಂದರೇನು ?**

ಉ : ನಿದ್ರೆಯ ಮಧ್ಯಾವಸ್ಥೆಯಲ್ಲಾಗಲಿ, ನಿದ್ರೆಯ ಅಂತ್ಯಾವಸ್ಥೆ ಯಲ್ಲಾಗಲಿ, ಮಿಥ್ಯಾ ಪದಾರ್ಥಗಳು ಸ್ವಲ್ಪ ಕಾಲವಿದ್ದಂತೆ ತೋರಿ ನಂತರ ತೋರದಂತಾಗುತ್ತವೆ. ಎಚ್ಚೆತ್ತ ಮೇಲೆ ಅವು ಸತ್ಯವಲ್ಲವೆಂದು ತಿಳಿದುಬರು ತ್ತದೆ. ಸತ್ಯವಾಗಿದ್ದರೆ ಜಾಗ್ರತ್ ಉಂಟಾದ ಮೇಲೂ ಸಹ ತೋರಬೇಕಿತ್ತು. ಆ ಅವಸ್ಥೆಯಲ್ಲಿ ಯಾರಾದರೂ ಮೃತಪಟ್ಟರೆ, ಎದ್ದಮೇಲೆ ಯಾರೂ ದುಃಖಿಸುವುದು ಕಂಡುಬರುವುದಿಲ್ಲ. ಆದುದರಿಂದ ಅವು ಪ್ರತೀತಿ ಮಾತ್ರ. ಇದೇ ಅಜ್ಞಾನದ ಐದನೆಯ ಭೂಮಿಕೆಯೆಂಬ ಸ್ವಪ್ನ.

ಪ್ರ ೩೪ : **ಈ ಸ್ವಪ್ನವು ಉಂಟಾಗುವ ಸ್ಥಾನ ಯಾವುದು ?**

ಉ : ಇದು ಮಹಾ ಜಾಗ್ರತದಲ್ಲಿಯ ಸ್ಥೂಲ ಶರೀರದ ಕಂಠದಿಂದ

ಹೃದಯುದವರೆಗಿರುವ ನಾಡೀ ಭಾಗದಲ್ಲಿ ಉಂಟಾಗುತ್ತದೆ. ಶಾಸ್ತ್ರದಲ್ಲಿ ಆ ನಾಡಿಗೆ ''ಹಿತಾ'' ನಾಡಿಯೆಂದು ಹೆಸರು.

ಪ್ರ ೩೫ : **ಸ್ವಪ್ನ ಜಾಗ್ರತವೆಂದರೇನು ?**

ಉ : ಸ್ವಪ್ನವೇ ಜಾಗ್ರತ್ತಿನಂತೆ ದೃಢವಾಗಿ ಬಹುಕಾಲ ತೋರಿಬಂದರೆ, ಅಥವಾ ಜಾಗ್ರತ್ ಉಂಟಾದ ಮೇಲೂ ಸ್ವಪ್ನ ಪದಾರ್ಥಗಳು ಜಾಗ್ರತ್ತಿನಂತೆ ಸ್ಫುಟವಾಗಿ ಕಂಡರೆ ಅದು ಸ್ವಪ್ನ ಜಾಗ್ರತ್ ಎನಿಸುತ್ತದೆ.

ಪ್ರ ೩೬ : **ಸುಷುಪ್ತಿ ಎಂದರೇನು ?**

ಉ : ಮೇಲೆ ಹೇಳಿದ ಆರು ಭೂಮಿಕೆಗಳಿಗೂ ಕಾರಣವಾಗಿ ವಾಸನಾ ಸಹಿತವಾದ ಅಜ್ಞಾನಾವಸ್ಥೆಯೇ ಸುಷುಪ್ತಿಯೆಂದು ಹೇಳಿಸಿಕೊಳ್ಳುತ್ತದೆ.

ಇವೇ ಅಜ್ಞಾನದ ಸಪ್ತಭೂಮಿಕೆಗಳು. ಸಮುದ್ರದ ಸುಳಿಗಳಲ್ಲಿ ನಾವೆಯು ಸಿಕ್ಕು ಭ್ರಮಿಸುವಂತೆ, ಜೀವನು ಈ ಅಜ್ಞಾನ ಭೂಮಿಕೆಯಲ್ಲಿ ಸಿಕ್ಕು, ಮೋಹಕಗಳೆಂಬ ಸಂಸಾರ ಸಮುದ್ರದ ತೆರೆಯಲ್ಲಿ ಭ್ರಮಿಸುತ್ತಾನೆ. ಜೀವನು ಜನನ ಮರಣ ರೂಪ ಸಂಸಾರದಲ್ಲಿ ಬಿದ್ದು, ಅನರ್ಥಗಳನ್ನು ಪಡೆದುಕೊಳ್ಳುವುದಕ್ಕೆ ಈ ಅಜ್ಞಾನ ಭೂಮಿಕೆಗಳೇ ಕಾರಣ. ಆದುದರಿಂದ ಮುಮುಕ್ಷುವು ಇವುಗಳನ್ನು ಅಗತ್ಯವಾಗಿ ತ್ಯಜಿಸಬೇಕು.

ಓಂ ತತ್ಸತ್

ಇಲ್ಲಿಗೆ "ಸಪ್ತಜ್ಞಾನ ಭೂಮಿಕೆ" ಎಂಬ ಹದಿಮೂರನೆಯ ಕಲಾ ಮುಗಿಯಿತು.

ಓಂ

ನಮೋ ಭಗವತೇ ಶಂಕರಾನಂದಾಯ

## ಹದಿನಾಲ್ಕನೆ ಕಲಾ ಪ್ರಾರಂಭ

# ಜೀವನ್ಮುಕ್ತಿ ವಿದೇಹ ಮುಕ್ತಿ ವರ್ಣನೆ

ಪ್ರ ೧ : **ಮುಕ್ತಿಯಲ್ಲಿ ಎಷ್ಟು ವಿಧ ?**

ಉ : ಜೀವನ್ಮುಕ್ತಿ, ವಿದೇಹ ಮುಕ್ತಿಯೆಂದು ಎರಡು ವಿಧ.

ಪ್ರ ೨ : **ಜೀವನ್ಮುಕ್ತಿ ಎಂದರೇನು ?**

ಉ : ಇದಕ್ಕೆ ಎರಡು ಅರ್ಥಗಳು : ೧. ಜೀವವಿದ್ದು ಜೀವಭಾವ ವಿಲ್ಲದಿರುವುದು. ೨. ದೇಹಾದಿ ಮೊದಲಾದ ಪ್ರಪಂಚವು ಬಾಧಿತಾನುವೃತ್ತಿ ಯಿಂದ ಪ್ರತೀತಿಯಾದರೂ ಬ್ರಹ್ಮ ಸ್ವರೂಪದಲ್ಲಿ ಸ್ಥಿರವಾಗಿರುವುದು. ಅಂದರೆ ತನ್ನನ್ನು ತಾನು ತಿಳಿದು ತಾನೇ ಆಗಿರುವುದೇ ಜೀವನ್ಮುಕ್ತಿ.

ಪ್ರ ೩ : **ಜೀವನ್ಮುಕ್ತಿ ದೆಸೆಯಲ್ಲಿ ಪ್ರಪಂಚವು ಏಕೆ ಪ್ರತೀತಿ ಯಾಗುತ್ತದೆ ?**

ಉ : ಅವಿದ್ಯೆಯಲ್ಲಿ ಆವರಣ, ವಿಕ್ಷೇಪವೆಂಬ ಎರಡು ಶಕ್ತಿಗಳಿರು ತ್ತವೆ. ಅವುಗಳಲ್ಲಿ ಆವರಣ ಶಕ್ತಿಯು ಅಪರೋಕ್ಷ ಜ್ಞಾನದಿಂದ ನಾಶವಾಗಿ ಹೋಗುತ್ತದೆ. ಆದುದರಿಂದಲೇ ಅಪರೋಕ್ಷ ಜ್ಞಾನಿಗೆ ಪುನರ್ಜನ್ಮವಿಲ್ಲ. ಪುನರ್ಜನ್ಮಕ್ಕೆ ಕಾರಣವಾದ ಅಜ್ಞಾನವೆಂಬ ಬೀಜವು ಸುಟ್ಟುಹೋಗಿರು ತ್ತದೆ. ಎರಡನೆಯದಾದ ವಿಕ್ಷೇಪ ಶಕ್ತಿಯು ಪ್ರಾರಾಬ್ಧದ ಬಲದಿಂದ "ದಗ್ಧಬೀಜ'' ನ್ಯಾಯದಂತೆ ನಿಂತುಕೊಂಡಿರುತ್ತದೆ. ಈ ಕಾರಣಗಳಿಂದಲೇ ಜೀವನ್ಮುಕ್ತಾವಸ್ಥೆಯಲ್ಲಿಯೂ ಸಹ ಪ್ರಪಂಚದ ಪ್ರತೀತಿಯು ಇರುತ್ತದೆ.

ಪ್ರ ೪ : **ವಿಕ್ಷೇಪದ ಸ್ವರೂಪವೇನು ?**

ಉ : ಸ್ಥೂಲ, ಸೂಕ್ಷ್ಮ, ಪ್ರಪಂಚಸಹಿತವಾದ ಚಿದಾಭಾಸನೇ ವಿಕ್ಷೇಪದ ಸ್ವರೂಪ.

ಪ್ರ ೫ : **ಆವರಣವೆಂಬ ಶಕ್ತಿಯು ನಾಶವಾಗಿ ವಿಕ್ಷೇಪವೆಂಬ ಶಕ್ತಿಯು ಉಳಿದಿರುತ್ತದೆ ಎಂಬುದಕ್ಕೆ ದೃಷ್ಟಾಂತವೇನು ?**

ಉ : ಆಹಾರ ಧಾನ್ಯದಲ್ಲಿ ಅಂಕುರವನ್ನು ಉತ್ಪತ್ತಿ ಮಾಡುವ ಶಕ್ತಿ ಮತ್ತು ತಿಂದವರನ್ನು ಪೋಷಿಸುವ ಶಕ್ತಿ ಎಂಬೆರಡು ಶಕ್ತಿಗಳು ಸ್ಪಷ್ಟವಾಗಿರುತ್ತವೆ. ಧಾನ್ಯವನ್ನು ಸುಟ್ಟರೆ ಅಥವಾ ಹುರಿದರೆ ಅಂಕುರವನ್ನು ಉತ್ಪತ್ತಿ ಮಾಡುವ ಶಕ್ತಿಯು ನಾಶವಾಗಿ ಪೋಷಣೆ ಮಾಡುವ ಶಕ್ತಿಯು ಉಳಿದಿರುತ್ತದೆ. ಈ ಪ್ರಕಾರವಾಗಿ ಅವಿದ್ಯೆಯಲ್ಲಿಯ ಅಂಶವಾದ ವಿಕ್ಷೇಪವು ಜೀವನ್ಮುಕ್ತಿ ದೆಸೆಯಲ್ಲಿ ಉಳಿದುಕೊಂಡು ಪ್ರಪಂಚದ ಪ್ರತೀತಿಯನ್ನುಂಟುಮಾಡುತ್ತದೆ.

ಪ್ರ ೬ : **ಜೀವನ್ಮುಕ್ತಾವಸ್ಥೆಯಲ್ಲಿ ಪ್ರಪಂಚದ ಪ್ರತೀತಿಯು ಯಾವ ಪ್ರಕಾರದಲ್ಲಿರುತ್ತದೆ ಎಂಬುದಕ್ಕೆ ಸ್ಪಷ್ಟವಾದ ಉದಾಹರಣೆಯೇನು ?**

ಉ : ಸ್ಪಷ್ಟವಾದ ಉದಾಹರಣೆಗಳು ಮೂರು : ೧. ಮಂದಾಂಧಕಾರದಲ್ಲಿ ಬಿದ್ದ ಹಗ್ಗವನ್ನು ನೋಡಿ ಒಬ್ಬನು ಹಾವೆಂದು ಭ್ರಮಿಸುತ್ತಾನೆ, ಭಯಪಡುತ್ತಾನೆ, ಓಡುತ್ತಾನೆ. ಮತ್ತೊಬ್ಬ ಆಪ್ತನ ವಚನವನ್ನು ಕೇಳಿ ಅದರ ಮೇಲೆ ಬೆಳಕನ್ನು ಬೀರಿ "ಇದು ಹಗ್ಗ, ಹಾವಲ್ಲ'' ಎಂದು ತಿಳಿದುಕೊಳ್ಳುತ್ತಾನೆ. ಸರ್ಪ ಭ್ರಾಂತಿ ನಿವೃತ್ತಿಯಾದ ಮೇಲೂ ಮೊದಲು ತೋರಿದ ಭ್ರಾಂತಿಯ ಪರಿಣಾಮದಿಂದ ಉಂಟಾದ ಭಯ, ಕಂಪ, ಮೊದಲಾದುವುಗಳು ಸ್ವಲ್ಪ ಸಮಯ ಇದ್ದೇ ಇರುತ್ತವೆ.

೨. ಕನ್ನಡಿಯಲ್ಲಿ ಕಂಡ ಮುಖದ ಪ್ರತಿಬಿಂಬವು ನಿಜವಲ್ಲವೆಂದು ತಿಳಿದ ಮೇಲೂ ಕನ್ನಡಿಯಲ್ಲಿ ಪ್ರತಿಬಿಂಬವು ಪ್ರತೀತಿಯಾಗುತ್ತಲೇ ಇರುತ್ತದೆ.

೩. ಬಿಸಿಲ್ಗುದುರೆಯನ್ನು ವಿಚಾರಿಸಿ ಅದು ನೀರಲ್ಲವೆಂಬ ನಿಶ್ಚಯವಾದ ಮೇಲೂ ಬಿಸಿಲ್ಗುದುರೆಯು ನೀರಿನಂತೆ ತೋರುತ್ತಲೇ ಇರುತ್ತದೆ. ಈ ರೀತಿ ಅಜ್ಞಾನದ ಆವರಣ ಶಕ್ತಿ ನಾಶವಾದ ಮೇಲೂ ಸಹ ಜೀವನ್ಮುಕ್ತಿ

ಜನೆಯಲ್ಲಿ ಪ್ರಪಂಚವು ಪ್ರತೀತಿಯಾಗುತ್ತಲೇ ಇರುತ್ತದೆ. ಹಾಗೆ ಪ್ರತೀತಿಯಾಗುವುದರಿಂದ ಜೀವನ್ಮುಕ್ತಿ ಸ್ಥಿತಿಗೆ ಹಾನಿಯೇನೂ ಇಲ್ಲ.

ಪ್ರ ೭ : **ಈ ವಿಷಯುವಾಗಿ ಶಾಸ್ತ್ರದಲ್ಲಿ ಕಂಡ ಉದಾಹರಣೆಯೇನು ?**

ಉ : ಮಹಾಭಾರತ ಶಾಸ್ತ್ರವೇ ಇದಕ್ಕೆ ಉದಾಹರಣೆ. ಮಹಾಭಾರತ ಯುದ್ಧದಲ್ಲಿ ಶ್ರೀಕೃಷ್ಣನು ಅರ್ಜುನನ ರಥಕ್ಕೆ ಸಾರಥಿಯಾಗಿದ್ದನು. ಶ್ರೀ ಕೃಷ್ಣನು ಸತ್ಯಸಂಕಲ್ಪನು ; ಅವನ ಸಂಕಲ್ಪಕ್ಕೆ ಎಂದೂ ಚ್ಯುತಿ ಇಲ್ಲ. ಅವನು ಅರ್ಜುನನಿಗೆ ಯುದ್ಧದಲ್ಲಿ ವಿಜಯುವನ್ನುಂಟುಮಾಡುವುದಕ್ಕಾಗಿ ಯುದ್ಧಕ್ಕಿಂತ ಮೊದಲೇ "ಈ ಯುದ್ಧವು ಮುಗಿಯುವವರೆಗೆ ಈ ರಥವೂ ರಥಾಶ್ವಗಳೂ ಏನೂ ಆಗದಂತೆ ಹೀಗೆಯೇ ಇರಲಿ" ಎಂದು ಸಂಕಲ್ಪಿಸಿದನು. ಅವನ ಸತ್ಯ ಸಂಕಲ್ಪದ ಪ್ರಭಾವದಿಂದ ಅಶ್ವತ್ಥಾಮ ಮೊದಲಾದ ವೀರರ ಅಸ್ತ್ರ, ಶಸ್ತ್ರಗಳಿಂದಲೂ ಸಹ ಸುಟ್ಟುಹೋಗದಂತೆ ಆ ರಥವು ಹಾಗೇ ಉಳಿದಿತ್ತು. ಯುದ್ಧವೆಲ್ಲಾ ಮುಗಿದ ಮೇಲೆ ಶ್ರೀಕೃಷ್ಣಾರ್ಜುನರು ಶಿಬಿರವನ್ನು ಸೇರಿಕೊಂಡರು. ಸೇರಿಕೊಂಡ ನಂತರ ಶ್ರೀಕೃಷ್ಣನು ಅಸ್ತ್ರ ಶಸ್ತ್ರ ಸಹಿತವಾಗಿ ಅರ್ಜುನನನ್ನು ಮೊದಲೇ ಕೆಳಗಿಳಿ ಎಂದು ಹೇಳಿದನು. ಅರ್ಜುನನು "ಸ್ವಾಮಿ ! ತಾವು ದೊಡ್ಡವರು. ತಾವು ಇಳಿದ ಮೇಲೆ ತಮ್ಮ ಸೇವಕನಾದ ನಾನು ಇಳಿಯಬೇಕಲ್ಲವೆ? ಆದುದರಿಂದ ನೀವೇ ಮೊದಲು ಇಳಿಯಿರಿ" ಎಂದನು. ಆಗ ಶ್ರೀಕೃಷ್ಣನು ಹೇಳಿದಷ್ಟು ಕೇಳಬೇಕಲ್ಲದೆ ಇಲ್ಲದ ಚೇಷ್ಟೆಯನ್ನು ಮಾಡಕೂಡದು ಎಂದನು. ಆಗ ಅರ್ಜುನನು ಕೆಳಗಿಳಿದನು. ಆ ಮೇಲೆ ಶ್ರೀಕೃಷ್ಣನೂ ಇಳಿದನು. ಕೂಡಲೆ ರಥವೂ ಕುದುರೆಗಳೂ ಸುಟ್ಟು ಭಸ್ಮವಾದವು. ಅದನ್ನು ನೋಡಿ ಅರ್ಜುನನು ಆಶ್ಚರ್ಯಚಕಿತನಾದನು. ಇದು ದೃಷ್ಟಾಂತ.

ಪ್ರ ೮ : **ಇದಕ್ಕೆ ದ್ರಾಷ್ಟಾಂತವೇನು ?**

ಉ : ಸ್ಥೂಲ ದೇಹವೇ ರಥ. ಪಾಪ ಪುಣ್ಯಗಳೇ ಎರಡು ಚಕ್ರಗಳು. ಗುಣತ್ರಯಗಳೇ ಧ್ವಜ. ಪಂಚ ಪ್ರಾಣಗಳೇ ಕಟ್ಟುವ ಹಗ್ಗಗಳು. ದಶೇಂದ್ರಿಯಗಳೇ ಕುದುರೆಗಳು. ಪಂಚ ವಿಷಯಗಳೇ ರಥವು ಹೋಗುವ

ಮಾರ್ಗ. ಮನಸ್ಸೇ ಲಗಾಮು. ಬುದ್ಧಿಯೇ ಸಾರಥಿ ; ಅವನೇ ಶ್ರೀ ಕೃಷ್ಣನು. ಪ್ರಾರಾಬ್ಧ ಕರ್ಮವೇ ಅವನ ಸತ್ಯ ಸಂಕಲ್ಪ. ಅಹಂಕಾರವೇ ರಥಿಕನು ಕೂಡುವ ಪೀಠ. ಆತ್ಮನೇ ರಥಿಕನು ; ಅವನೇ ಅರ್ಜುನನು. ವೈರಾಗ್ಯಾದಿ ಸಾಧನಗಳೇ ಅಸ್ತ್ರ ಶಸ್ತ್ರಗಳು. ಜೀವನೆಂಬ ರಥಿಕನು ಇಂಥ ರಥವನ್ನು ಅಧಿರೋಹಿಸಿ ಸತ್ಸಂಗವೆಂಬ ರಣಭೂಮಿಗೆ ಬಂದಿದ್ದಾನೆ. ಗುರು ರೂಪರಾದ ಅಶ್ವತ್ಥಾಮಾದಿಗಳು ಮಹಾವಾಕ್ಯೋಪದೇಶವೆಂಬ ಬ್ರಹ್ಮಾಸ್ತ್ರ ವನ್ನು ಬಿಟ್ಟರು. ಆ ಅಸ್ತ್ರದಿಂದ ಅಹಂ ಬ್ರಹ್ಮಾಸ್ಮಿಯೆಂಬ ಅಗ್ನಿ ಉಂಟಾ ಯಿತು. ಜ್ಞಾನವುಂಟಾದ ತಕ್ಷಣವೇ ದೇಹ ಮೊದಲಾದವುಗಳು ಬಾಧಿಸ ಲ್ಪಟ್ಟವು. ಆದರೂ ಬುದ್ಧಿಯೆಂಬ ಸಾರಥಿಯು ಪ್ರಾರಾಬ್ಧ ಕರ್ಮವೆಂಬ ಸತ್ಯ ಸಂಕಲ್ಪದ ಪ್ರಭಾವದಿಂದ ದೇಹಾದಿಗಳು ನಾಶವಾಗದೆ ಪ್ರತೀತಿಯಾಗುತ್ತಲೇ ಇದ್ದವು. ಇದಕ್ಕೆ ಬಾಧಿತಾನುವೃತ್ತಿಯೆಂದು ಶಾಸ್ತ್ರವು ಹೇಳುತ್ತದೆ.

ಪ್ರ ೯ : **ವಿದೇಹ ಮುಕ್ತಿಯ ಸ್ವರೂಪವೇನು ?**

ಉ : ಪ್ರಪಂಚದ ಪ್ರತೀತಿ ಇಲ್ಲದೆ ಬ್ರಹ್ಮಸ್ವರೂಪದಲ್ಲಿ ಸ್ಥಿತಿಯುಂಟಾ ಗುವುದು. ಆಗ ಪ್ರಾರಾಬ್ಧ ಕರ್ಮದ ಅನುಭವವು ಮುಗಿಯುತ್ತಲೇ ಸ್ಥೂಲ ಸೂಕ್ಷ್ಮ ಶರೀರದ ರೂಪದಲ್ಲಿ ಪರಿಣಮಿಸಿದ ಅಜ್ಞಾನವು ಚೇತನದಲ್ಲಿ ಲಯಿಸು ತ್ತದೆ. ಇಲ್ಲಿ ಅಜ್ಞಾನ ಶಕ್ತಿಗಳಾದ ಆವರಣವೂ ಇಲ್ಲ, ವಿಕ್ಷೇಪವೂ ಇಲ್ಲ. ಈ ಸ್ಥಿತಿಯನ್ನೇ ವಿದೇಹ ಮುಕ್ತಿಯೆನ್ನುತ್ತಾರೆ.

ಪ್ರ ೧೦ : **ಪ್ರಾರಾಬ್ಧ ಕರ್ಮವು ತೀರುತ್ತಲೇ ಕಾರ್ಯಸಹಿತವಾದ ಅಜ್ಞಾನದ ವಿಲಯವು ಯಾವ ಸಾಧನದಿಂದ ಉಂಟಾಗುತ್ತದೆ ?**

ಉ : ಜ್ಞಾನಿಗೆ ಯಾವ ವಿಧಿಯೂ ಇಲ್ಲ. ಪ್ರಾರಾಬ್ಧವು ಮುಗಿಯು ತ್ತಲೇ ಪ್ರಾರಾಬ್ಧ ಕಾಲದಲ್ಲಿದ್ದ ಬ್ರಹ್ಮಾಕಾರ ವೃತ್ತಿಯು ಇರುವುದು ಸಂಭವಿಸುವುದಿಲ್ಲ. ವೃತ್ತಿ ಇರುವವರೆಗೆ ಜೀವನ್ಮುಕ್ತಿ. ವೃತ್ತಿಯು ಹೋಗಿ ಸ್ಥಿತಿ ಉಂಟಾದರೆ ವಿದೇಹ ಮುಕ್ತಿ. ಇದನ್ನೇ ಭಗವಂತನು ಸ್ಥಿತ ಪ್ರಜ್ಞನ ಲಕ್ಷಣದಲ್ಲಿ ''ಏಷಾ ಬ್ರಾಹ್ಮಿಸ್ಥಿತಿ'' ಎಂದು ಹೇಳಿದ್ದಾನೆ. ಆದುದ ರಿಂದ ವಿದೇಹ ಮುಕ್ತಿಯಲ್ಲಿ ದೇಹವಿರಬೇಕೆಂತಲೂ, ಇಲ್ಲದಿರಬೇಕೆಂತಲೂ ನಿಯಮವಿಲ್ಲ. ನೋಡುವವರ ದೃಷ್ಟಿಯಲ್ಲಿ ಶರೀರವಿರಬಹುದು, ಸ್ವದೃಷ್ಟಿ

ಯಲ್ಲಿಲ್ಲ. ಅಗ್ನಿಯು ಕಟ್ಟಿಗೆಗಳಲ್ಲಿದ್ದು, ತೃಣಾದಿಗಳನ್ನು ಸುಟ್ಟು ಕೊನೆಗೆ ತಾನು ಇರುವ ಕಟ್ಟಿಗೆಯನ್ನೂ ಸಹ ಸುಟ್ಟುಕೊಂಡಂತೆ, ಸಂಸ್ಕಾರ ರೂಪವಾದ ಆ ದೃಢ ಚೇತನವೂ ಸಹ ಪ್ರಪಂಚವನ್ನು ವಿಲಯ ಮಾಡಿ ತಾನಿರುವ ಸ್ಥಾನವಾದ ಸಂಸ್ಕಾರವನ್ನೂ ಸಹ ನಾಶಮಾಡುತ್ತದೆ. ಅನಂತರ ಉಳಿದಿರುವುದು ಅಸಂಗ ಶುದ್ಧ ಸಚ್ಚಿದಾನಂದ ಸ್ವಪ್ರಕಾಶ ಚೇತನ ಬ್ರಹ್ಮ ಮಾತ್ರ. ಇದೇ ವಿದೇಹ ಮುಕ್ತಿ.

ಓಂ ತತ್ಸತ್

ಇಲ್ಲಿಗೆ "ಜೀವನ್ಮುಕ್ತಿ ವಿದೇಹ ಮುಕ್ತಿ''ಯೆಂಬ
ಹದಿನಾಲ್ಕನೆಯ ಕಲಾ ಮುಗಿಯಿತು.

ಓಂ

ನಮೋ ಭಗವತೇ ಶಂಕರಾನಂದಾಯ

## ಹದಿನೈದನೆಯ ಕಲಾ ಪ್ರಾರಂಭ

# ವೇದಾಂತ ಪ್ರಮೇಯ ವರ್ಣನ

ಪ್ರ ೧ : **ವೇದಾಂತ ಪ್ರಮೇಯವೆಂಬ ಪದಕ್ಕೆ ಅರ್ಥವೇನು ?**

ಉ : ಇದೊಂದು ಸಂಯೋಜಿತ ಪದ. ವೇದಾಂತ+ಪ್ರಮೇಯ ಎಂಬೆರಡು ಪದಗಳು ಸೇರಿ ಆಗಿದೆ. ವೇದಾಂತವೆಂಬ ಪದಕ್ಕೆ ವೇದದ ಕೊನೆಯ ಭಾಗವೆಂದರ್ಥ. ವೇದವೆಂದರೆ ತಿಳಿವು, ಅರಿವು, ಜ್ಞಾನ; ಅಂತವೆಂದರೆ ಕೊನೆ. ಅಂದರೆ, ಯಾವುದನ್ನು ಅರಿತ ಮೇಲೆ ಮತ್ತೆ ಅರಿಯಬೇಕಾದದ್ದಿಲ್ಲವೋ ಅದು ವೇದಾಂತ.

ಪ್ರಮೇಯ = ಪ್ರಕರ್ಷೇಣಮೇಯ ಪ್ರಮೇಯ. ಮೇಯವೆಂದರೆ ತಿಳಿಯಲ್ಪಡುವ ವಸ್ತು. ಪ್ರಮೇಯವೆಂದರೆ ಸರಿಯಾಗಿ ತಿಳಿಯಲ್ಪಡುವ ವಸ್ತು. ಸಿದ್ಧಾಂತವೇನೆಂದರೆ, ವೇದಾಂತ ಶಾಸ್ತ್ರರೂಪ ಪ್ರಮಾಣದಿಂದ ಉಂಟಾದ ಜ್ಞಾನವು ಪ್ರಮೇಯವೆನಿಸುತ್ತದೆ. ಆ ಪ್ರಮೆಯಿಂದ ತಿಳಿದು ಕೊಳ್ಳಲು ಯೋಗ್ಯವಾದ ಪದಾರ್ಥವು ಪ್ರಮೇಯ.

ಪ್ರ ೨ : **ಪ್ರಮೇಯ ವಿಚಾರದಿಂದಾಗುವ ಪ್ರಯೋಜನವೇನು ?**

ಉ : ಇದರಿಂದ ಪ್ರಮೇಯಗತ ಸಂಶಯವು ದೂರವಾಗುತ್ತದೆ.

ಪ್ರ ೩ : **ಮೋಕ್ಷದ ಸ್ವರೂಪವೇನು ?**

ಉ : ಶಾಸ್ತ್ರವು ಪ್ರಮಾಣ. ಮೋಕ್ಷವು ಪ್ರಮೇಯ. ಮೋಕ್ಷಕ್ಕೆ ಎರಡು ಸ್ವರೂಪಗಳು.

೧. ಕಾರ್ಯ ಸಹಿತ ಅಜ್ಞಾನ ರೂಪವಾದ ಅನರ್ಥ, ಅಂದರೆ ಬಂಧದ ನಿವೃತ್ತಿ.

೨. ಪರಮಾನಂದ ರೂಪ ಬ್ರಹ್ಮಪ್ರಾಪ್ತಿ. ಇವೆರಡೂ ಸೇರಿ ಮೋಕ್ಷ ವೆನಿಸುತ್ತದೆ.

ಪ್ರ ೪ : **ಅಂಥ ಪ್ರಮೇಯರೂಪ ಮೋಕ್ಷದ ಸಾಕ್ಷಾತ್ ಸಾಧನ ವಾವುದು ?**

ಉ : ಬ್ರಹ್ಮ ಮತ್ತು ಆತ್ಮರ ಏಕತ್ವ ಜ್ಞಾನವನ್ನು ತೋರಿಸುವ ಅಪರೋಕ್ಷ ಜ್ಞಾನವೇ ಮೋಕ್ಷಕ್ಕೆ ಸಾಕ್ಷಾತ್ ಸಾಧನ. ಅಂದರೆ ಉಪಾಧಿ ದೃಷ್ಟಿಯಿಂದ ಬ್ರಹ್ಮಾತ್ಮರು ಬೇರೆಯೆಂದು ತೋರುತ್ತದೆ. ಉಪಾಧಿ ನಿರಸನ ವಾದ ಕೂಡಲೆ ಬ್ರಹ್ಮವೇ ಆತ್ಮ, ಆತ್ಮವೇ ಬ್ರಹ್ಮ.

ಪ್ರ ೫ : **ಬ್ರಹ್ಮದ ದಿಗ್ದರ್ಶನವೇನು ?**

ಉ : ಬ್ರಹ್ಮಾಂಡ ಉಪಾಧಿಯುಳ್ಳ ಚೇತನವು ಬ್ರಹ್ಮ.

ಪ್ರ ೬ : **ಆತ್ಮನ ದಿಗ್ದರ್ಶನವೇನು ?**

ಉ : ಪಿಂಡವೇ ಉಪಾಧಿಯುಳ್ಳ ಚೇತನ. ಆತ್ಮ ಲಕ್ಷಣ ದೃಷ್ಟಿಯಿಂದ ಇವೆರಡು ಬೇರೆ ಬೇರೆ ಅಲ್ಲ.

ಪ್ರ ೭ : **ಮೋಕ್ಷದ ಅವಾಂತರ ಸಾಧನವಾವುದು ?**

ಉ : ೧. ನಿಷ್ಕಾಮ ಕರ್ಮ, ೨. ಉಪಾಸನೆ. ಇವು ಮೋಕ್ಷಕ್ಕೆ ಅವಾಂತರ ಸಾಧನಗಳು.

ಪ್ರ ೮ : **ಜ್ಞಾನಕ್ಕೆ ವಿಷಯ ಯಾವುದು ?**

ಉ : ಆತ್ಮ ಮತ್ತು ಬ್ರಹ್ಮದ ಏಕತೆಯೇ ಜ್ಞಾನಕ್ಕೆ ವಿಷಯ.

ಪ್ರ ೯ : **ಆತನ ಸ್ವರೂಪವೇನು ?**

ಉ : ಈ ಸಂಘಾತದಲ್ಲಿ ಏಳು ಪದಾರ್ಥಗಳಿವೆ: ೧. ದೇಹ, ೨. ಇಂದ್ರಿಯಗಳು, ೩. ಪ್ರಾಣ ಸಮೂಹ, ೪. ಮನಸ್ಸು, ೫. ಬುದ್ಧಿ, ೬. ಇವುಗಳಿಗೆ ಕಾರಣವಾದ ಅಜ್ಞಾನ, ೭. ಶೂನ್ಯ. ಇವೆಲ್ಲವುಗಳಿಗಿಂತಲೂ ಭಿನ್ನವಾಗಿರುವುದು ಅಕರ್ತ, ಅಭೋಕ್ತ, ಅಸಂಗ, ವ್ಯಾಪಕ, ಮತ್ತು ಚೇತನ. ಈ ಆರು ಆತ್ಮನ ಸಾಮಾನ್ಯ ಲಕ್ಷಣಗಳು.

ಪ್ರ ೧೦ : **ಬ್ರಹ್ಮದ ಲಕ್ಷಣವೇನು ?**

ಉ : ಬ್ರಹ್ಮಕ್ಕೆ ನಾಲ್ಕು ಲಕ್ಷಣಗಳು: ೧. ನಿಷ್ಪ್ರಪಂಚ, ಅಸಂಗ, ೩. ಪರಿಪೂರ್ಣ, ೪. ಚೇತನ.

ಪ್ರ ೧೧ : **ಶಾಸ್ತ್ರಗಳಲ್ಲಿ ಹಿಂದೆ ಆತ್ಮಲಕ್ಷಣ ಬೇರೆ, ಬ್ರಹ್ಮದ ಲಕ್ಷಣ ಬೇರೆ ಹೇಳಿತ್ತು. ಈಗ ಬ್ರಹ್ಮಾತ್ಮರ ಏಕತೆಯು ಲಕ್ಷಣವು ಹೇಗೆ ಆಗುತ್ತದೆ?**

ಉ : ೧. ಸಚ್ಚಿದಾನಂದ, ೨. ಪರಮೈಶ್ವರ್ಯ ಸ್ವರೂಪ, ೩. ಸದಾ ವಿದ್ಯಮಾನ – ಈ ಮೂರು ಏಕತೆಯ ಲಕ್ಷಣ.

ಪ್ರ ೧೨ : **ಜ್ಞಾನದ ಸ್ವರೂಪವೇನು ?**

ಉ : ಜ್ಞಾನವೆಂದರೆ ವಿಷಯ ಜ್ಞಾನ; ಭೇದ ಜ್ಞಾನವಲ್ಲ. ಜ್ಞಾನವೆಂದರೆ ಅಭೇದ ಜ್ಞಾನ. ಅರ್ಥಾತ್ ಜೀವನೇ ಶಿವನು ಎಂಬ ಅಭೇದ ನಿಶ್ಚಯವೇ ಜ್ಞಾನ.

ಪ್ರ ೧೩: **ಈ ಜ್ಞಾನಕ್ಕೆ ಸಾಕ್ಷಾತ್ ಅಂತರಂಗ ಸಾಧನ ಯಾವುದು?**

ಉ : ಶ್ರೋತ್ರೀಯ ಬ್ರಹ್ಮನಿಷ್ಠ ಸದ್ಗುರುವಿನ ಮುಖಾಂತರ ಮಹಾವಾಕ್ಯದ ಅರ್ಥವನ್ನು ಶ್ರವಣ ಮಾಡುವುದು ಅಭೇದ ಜ್ಞಾನಕ್ಕೆ ಸಾಕ್ಷಾತ್ ಅಂತರಂಗ ಸಾಧನ.

ಪ್ರ ೧೪ : **ಜ್ಞಾನದ ಪರಂಪರೆಯಾದ ಅಂತರಂಗ ಸಾಧನ ಯಾವುದು ?**

ಉ : ಅವು ಎಂಟು. ೧. ವಿವೇಕ ವೈರಾಗ್ಯ, ೨. ಶಮಾದಿ ಷಟ್ ಸಂಪತ್ತು, ೪. ಮುಮುಕ್ಷುತ್ವ, ೫. ಶ್ರವಣ, ೬. ಮನನ, ೭. ನಿಧಿಧ್ಯಾಸನ, ೮. ತತ್‌ಪದ, ತ್ವಂಪದದ ಅರ್ಥಶೋಧನ – ಈ ಎಂಟು ಪರಂಪರೆಯಿಂದ ಅಂತರಂಗ ಸಾಧನಗಳು.

ಪ್ರ ೧೫ : **ಜ್ಞಾನಕ್ಕೆ ಬಹಿರಂಗ ಸಾಧನಗಳೇನು ?**

ಉ : ನಿಷ್ಕಾಮ ಕರ್ಮ, ನಿಷ್ಕಾಮ ಉಪಾಸನ, ಧ್ಯಾನ – ಈ ಮೂರು ಬಹಿರಂಗ ಸಾಧನಗಳು.

ಪ್ರ ೧೬ : **ಜ್ಞಾನಕ್ಕೆ ಎಲ್ಲವೂ ಸೇರಿ ಸಾಧನಗಳೆಷ್ಟು ?**

ಉ : ಎಲ್ಲವೂ ಸೇರಿ ಹನ್ನೊಂದು ಸಾಧನಗಳು.

ಓಂ ತತ್ಸತ್

ಇಲ್ಲಿಗೆ "ವೇದಾಂತ ಪ್ರಮೇಯ ವರ್ಣನ" ಎಂಬ ಹದಿನೈದನೆಯ ಕಲಾ ಮುಗಿಯಿತು.

ಓಂ

ನಮೋ ಭಗವತೇ ಶಂಕರಾನಂದಾಯ

## ಹದಿನಾರನೆಯ ಕಲಾ ಪ್ರಾರಂಭ

# ಲಘು ವೇದಾಂತ ಕೋಶ

ಪ್ರ ೧ : **ಈ ಕಲೆಯು ಆರಂಭವಾಗಲು ಕಾರಣವೇನು ?**

ಉ : ದೃಢವಾದ ಅಪರೋಕ್ಷ ಜ್ಞಾನಕ್ಕೆ ವಾಕ್ಯಾರ್ಥ ನಿಶ್ಚಯವು ಅತ್ಯಗತ್ಯ. ವಾಕ್ಯಾರ್ಥ ನಿಶ್ಚಯಕ್ಕೆ ಪದಾರ್ಥ ನಿಶ್ಚಯವು ಅತ್ಯಗತ್ಯ. ಪದಾರ್ಥ ಜ್ಞಾನವಿಲ್ಲದೆ ವಾಕ್ಯಾರ್ಥ ಜ್ಞಾನವಾಗಲಾರದು. ಪ್ರತಿಯೊಬ್ಬರಿಗೂ ಪದಾರ್ಥ ಜ್ಞಾನ ಮಾಡಿಕೊಳ್ಳುವುದಕ್ಕಾಗಿ ಈ ಕಲೆಯು ಆರಂಭವಾಗುತ್ತದೆ. ಈ ಕಲೆಯಲ್ಲಿರುವ ಪದಗಳೆಲ್ಲಾ ವೇದಾಂತ ಶಾಸ್ತ್ರದಲ್ಲಿಯ ಪಾರಿಭಾಷಿಕ ಪದಗಳು.

ಪ್ರ ೨ : **ಅಧ್ಯಾತ್ಮವೆಂದರೇನು ?**

ಉ : ಆತ್ಮನನ್ನು ಆಶ್ರಯ ಮಾಡಿಕೊಂಡಿರುವ ಸ್ಥೂಲ, ಸೂಕ್ಷ್ಮ ಶರೀರಗಳು ಅಧ್ಯಾತ್ಮವೆನಿಸುತ್ತವೆ. ಈ ಶರೀರಗಳಲ್ಲಿ ತೋರುವ ತಾಪಗಳು ಅಧ್ಯಾತ್ಮ ತಾಪವೆನಿಸುತ್ತವೆ.

ಪ್ರ ೩ : **ಈ ತಾಪಗಳು ಎಷ್ಟು ವಿಧ ?**

ಉ : ಆಧಿತಾಪ ಮತ್ತು ವ್ಯಾಧಿತಾಪ ಎಂದು ಎರಡು ವಿಧ.

ಪ್ರ ೪ : **ಆಧಿತಾಪವೆಂದರೇನು ?**

ಉ : ಮಾನಸಿಕ ತಾಪಗಳು.

ಪ್ರ ೫ : **ವ್ಯಾಧಿತಾಪವೆಂದರೇನು ?**

ಉ : ಶರೀರಗಳ ತಾಪಗಳು.

ಪ್ರ ೬ : **ಅಧ್ಯಾಸವೆಂದರೇನು ? ಅದು ಎಷ್ಟು ವಿಧ ?**

ಉ: ಭ್ರಾಂತಿ ಜ್ಞಾನದ ವಿಷಯವೂ ಭ್ರಾಂತಿ ಜ್ಞಾನವೂ ಸೇರಿ ಅಧ್ಯಾಸ. ಉದಾ : ರಜ್ಜುವಿನಲ್ಲಿ ಕಲ್ಪಿತವಾದ ಸರ್ಪವೂ ಮತ್ತು ಸರ್ಪದ ಜ್ಞಾನವೂ ಸೇರಿ ಅಧ್ಯಾಸ. ಈ ಅಧ್ಯಾಸವು ಅರ್ಥಾಧ್ಯಾಸನೆಂತಲೂ, ಜ್ಞಾನಾಧ್ಯಾಸ ವೆಂತಲೂ ಎರಡು ವಿಧ.

ಪ್ರ ೭ : **ಅರ್ಥಾಧ್ಯಾಸವೆಂದರೇನು ?**

ಉ : ಭ್ರಾಂತಿ ಜ್ಞಾನದ ವಿಷಯ ಅರ್ಥಾಧ್ಯಾಸ. ರಜ್ಜುವಿನಲ್ಲಿ ಕಲ್ಪಿತವಾದ ಸರ್ಪ ಮತ್ತು ದೇಹಾದಿ ಪ್ರಪಂಚ.

ಪ್ರ ೮ : **ಜ್ಞಾನಾಧ್ಯಾಸವೆಂದರೇನು ?**

ಉ : ಜ್ಞಾನಾಧ್ಯಾಸವೆಂದರೆ ಭ್ರಾಂತಿ ಜ್ಞಾನ.

ಉದಾ : ರಜ್ಜುವಿನಲ್ಲಿ ಕಲ್ಪಿತವಾದ ಸರ್ಪಾದಿಗಳ ಜ್ಞಾನ. ಮತ್ತು ಆತ್ಮನಲ್ಲಿ ಕಲ್ಪಿತವಾದ ದೇಹಾದಿಗಳ ಜ್ಞಾನ.

ಪ್ರ ೯ : **ಅಸಂಭಾವನೆ ಎಂದರೇನು ? ಅದು ಎಷ್ಟು ವಿಧ ?**

ಉ : ಅಸಂಭಾವನೆಯೆಂದರೆ ಅಸಂಭವದ ಜ್ಞಾನ. ಅದು ಪ್ರಮಾಣ ಗತ ಅಸಂಬಾವನೆ, ಪ್ರಮೇಯಗತ ಅಸಂಭಾವನೆ ಎಂದು ಎರಡು ವಿಧ.

ಪ್ರ ೧೦ : **ಪ್ರಮಾಣಗತ ಅಸಂಭಾವನೆ ಎಂದರೇನು ?**

ಉ : ಪ್ರಮಾಣವೆಂದರೆ "ವೇದ". ವೇದ ಸಂಬಂಧವಾದ ಅಸಂಭ ವದ ಜ್ಞಾನ.

ಪ್ರ ೧೧ : **ಪ್ರಮೇಯಗತ ಅಸಂಭಾವನೆ ಎಂದರೇನು ?**

ಉ : ಪ್ರಮೇಯವೆಂದರೆ ಪ್ರಮಾಣಕ್ಕೆ ವಿಷಯವಾದ ಮೋಕ್ಷ. ಮೋಕ್ಷ ಸಂಬಂಧವಾದ ಅಸಂಭವದ ಜ್ಞಾನ.

ಪ್ರ ೧೨ : **ಅಹಂಕಾರವೆಂದರೇನು ? ಅದು ಎಷ್ಟು ವಿಧ ?**

ಉ : ಅಹಂಕಾರವೆಂದರೆ 'ಅಹಂ' ಬುದ್ಧಿ ಅಥವಾ ನಾನೆಂಬ ಬುದ್ಧಿ. ಇದು ಶುದ್ಧ ಅಹಂಕಾರ, ಅಶುದ್ಧ ಅಹಂಕಾರವೆಂದು ಎರಡು ವಿಧ.

ಪ್ರ ೧೩ : **ಶುದ್ಧ ಅಹಂಕಾರವೆಂದರೇನು ?**

ಉ : ಸ್ವಸ್ವರೂಪದ ಅಹಂಕಾರ. ಇದು ಅಹಂಬ್ರಹ್ಮಾಸ್ಮಿ ಎಂಬ ರೂಪದಲ್ಲಿ ಜ್ಞಾನಿಗಳಲ್ಲೂ ತೋರುವುದು.

ಪ್ರ ೧೪ : **ಅಶುದ್ಧ ಅಹಂಕಾರವೆಂದರೇನು ?**

ಉ : ತಾನಲ್ಲದ ದೇಹಾದಿ ಅನಾತ್ಮದ ಅಹಂಕಾರ. ಇದು "ದೇಹೋऽಹಮ್" ಎಂಬ ರೂಪದಲ್ಲಿ ಅಜ್ಞಾನಿಗಳಲ್ಲೂ ತೋರುವುದು.

ಮತ್ತೊಂದು ಶಾಸ್ತ್ರದಲ್ಲಿ ಈ ಅಹಂಕಾರವನ್ನು ಸಾಮಾನ್ಯ ಅಹಂಕಾರ, ವಿಶೇಷ ಅಹಂಕಾರವೆಂದು ಎರಡು ವಿಧವಾಗಿದೆಯೆಂದು ಹೇಳಿದೆ.

ಪ್ರ ೧೫ : **ಸಾಮಾನ್ಯ ಅಹಂಕಾರವೆಂದರೇನು ?**

ಉ : ದೇಹಾದಿ ಧರ್ಮದ ಉದ್ದೇಶರಹಿತವಾದ ಕೇವಲ 'ಅಹಂ' ಎಂಬುವ ಸ್ಮರಣ.

ಪ್ರ ೧೬ : **ವಿಶೇಷ ಅಹಂಕಾರವೆಂದರೇನು ?**

ಉ : ದೇಹಾದಿ ಧರ್ಮವನ್ನು ಉದ್ದೇಶ ಮಾಡಿಕೊಂಡು ತೋರುವ 'ಅಹಂ' ಬುದ್ಧಿ. ಮತ್ತೆ ಕೆಲವು ವೇದಾಂತಿಗಳು ಅಹಂಕಾರವನ್ನು ಕುರಿತು ಮುಖ್ಯ ಅಹಂಕಾರವೆಂತಲೂ, ಅಮುಖ್ಯ ಅಹಂಕಾರವೆಂತಲೂ ಎರಡು ವಿಧ ವಾಗಿ ಹೇಳಿದ್ದಾರೆ.

ಪ್ರ ೧೭ : **ಮುಖ್ಯ ಅಹಂಕಾರವೆಂದರೇನು ?**

ಉ : ದೇಹಾದಿ ಯುಕ್ತವಾದ ಚಿದಾಭಾಸನನ್ನೂ, ಸಾಕ್ಷಿಯಾದ ಕೂಟಸ್ಥನನ್ನೂ ಸೇರಿಸಿ, ಮೂಢತನದಿಂದ ಸಂಘಾತವನ್ನು ಕುರಿತು "ಅಹಂ" ಅಥವಾ "ನಾನು" ಎಂದು ಸ್ಫುರಣವಾಗುವುದು. ಅಥವಾ ಶಕ್ತಿ ವೃತ್ತಿಯಿಂದ ತಿಳಿಯಲು ಯೋಗ್ಯವಾದ 'ಅಹಂ' ಶಬ್ದದ ಅರ್ಥವನ್ನು ವಿಷಯೀಕರಿಸುವ ಅಹಂಕಾರ ಮುಖ್ಯ ಅಹಂಕಾರವೆನಿಸುವುದು.

ಪ್ರ ೧೮ : **ಅಮುಖ್ಯ ಅಹಂಕಾರವೆಂದರೇನು ?**

ಉ : ವಿವೇಕವುಂಟಾದ ಮೇಲೆ ವ್ಯವಹಾರ ಕಾಲದಲ್ಲಿ ದೇಹಾದಿ ಗಳಿಂದ ಕೂಡಿದ ಚಿದಾಭಾಸನಲ್ಲಿ ಉಂಟಾಗುವ ಅಹಂ ಬುದ್ಧಿ. ಮತ್ತು ಪರಮಾರ್ಥ ದೆಸೆಯಲ್ಲಿ ಕೇವಲ ಕೂಟಸ್ಥನನ್ನು ಕುರಿತು ತೋರುವ ಅಹಂ ಬುದ್ಧಿ.

ಪ್ರ ೧೯ : **ಅಜ್ಞಾನವೆಂದರೇನು ? ಅದು ಎಷ್ಟು ವಿಧ ?**

ಉ : ಅಜ್ಞಾನವೆಂದರೆ ಜ್ಞಾನದ ಅಭಾವವಲ್ಲ, ಮಿಥ್ಯಾಜ್ಞಾನ

ಅಥವಾ ಭ್ರಾಂತಿಜ್ಞಾನ. ಇದು ಸಮಷ್ಟಿ ಅಜ್ಞಾನವೆಂತಲೂ, ವ್ಯಷ್ಟಿ ಅಜ್ಞಾನವೆಂತಲೂ ಎರಡು ವಿಧ.

ಪ್ರ ೨೦ : **ಸಮಷ್ಟಿ ಅಜ್ಞಾನವೆಂದರೇನು ?**

ಉ : ವನದಂತೆ, ಜಾತಿಯಂತೆ, ಜಲಾಶಯದಂತೆ ಅನೇಕ ವಸ್ತುಗಳನ್ನು ಕುರಿತ ಜ್ಞಾನ.

ಪ್ರ ೨೧ : **ವ್ಯಷ್ಟಿ ಅಜ್ಞಾನವೆಂದರೇನು ?**

ಉ : ವೃಕ್ಷದಂತೆ, ವ್ಯಕ್ತಿಯಂತೆ, ಜಲಬಿಂದುವಿನಂತೆ ಒಂದೊಂದು ವಸ್ತುವಿನ ಪ್ರತ್ಯೇಕ ಜ್ಞಾನ. ಮತ್ತೊಂದು ಶಾಸ್ತ್ರದಲ್ಲಿ ಮೂಲಾಜ್ಞಾನ, ತೂಲಾಜ್ಞಾನವೆಂದು ಅಜ್ಞಾನವನ್ನು ಎರಡು ವಿಧವಾಗಿ ಹೇಳಿದೆ.

ಪ್ರ ೨೨ : **ಮೂಲಾಜ್ಞಾನವೆಂದರೇನು ?**

ಉ : ಶುದ್ಧ ಚೇತನವನ್ನು ಆವರಿಸಿದ ಅಜ್ಞಾನ.

ಪ್ರ ೨೩ : **ತೂಲಾಜ್ಞಾನವೆಂದರೇನು ?**

ಉ : ಘಟಾದಿ ಅವಚ್ಛಿನ್ನ ಚೇತನವನ್ನು ಆವರಿಸಿದ ಅಜ್ಞಾನ.

ಪ್ರ ೨೪ : **ಅಜ್ಞಾನಕ್ಕೆ ಶಕ್ತಿಗಳೆಷ್ಟು ?**

ಉ : ಆವರಣ, ವಿಕ್ಷೇಪ ಶಕ್ತಿಗಳೆಂದು ಎರಡು ವಿಧ.

ಪ್ರ ೨೫ : **ಆವರಣ ಶಕ್ತಿಯ ಸ್ವರೂಪವೇನು ?**

ಉ : ಅಧಿಷ್ಠಾನವನ್ನು ಮುಚ್ಚುವ ಅಜ್ಞಾನದಲ್ಲಿರುವ ಸಾಮರ್ಥ್ಯ.

ಉದಾ : ನಿದ್ರೆಯು ಸಾಕ್ಷಿಯನ್ನು ಮುಚ್ಚಿದಂತೆ.

ಪ್ರ ೨೬ : **ವಿಕ್ಷೇಪ ಶಕ್ತಿಯೆಂದರೇನು ?**

ಉ : ಪ್ರಪಂಚದ ಮತ್ತು ಪ್ರಪಂಚ ಜ್ಞಾನದ ವಿಕ್ಷೇಪವನ್ನುಂಟು ಮಾಡುವ ಅಜ್ಞಾನದಲ್ಲಿರುವ ಶಕ್ತಿ.

ಉದಾ : ನಿದ್ರಾಶಕ್ತಿಯು ಸ್ವಪ್ನ ಪ್ರಪಂಚವನ್ನುಂಟುಮಾಡಿದಂತೆ.

ಪ್ರ ೨೭ : **ಉಪಾಸನೆಯು ಎಷ್ಟು ವಿಧ ?**

ಉ : ಸಗುಣೋಪಾಸನೆ, ನಿರ್ಗುಣೋಪಾಸನೆ ಎಂದು ಎರಡು ವಿಧ.

ಪ್ರ ೨೮ : **ಸಗುಣೋಪಾಸನೆ ಎಂದರೇನು ?**

ಉ : ಕಾರಣಬ್ರಹ್ಮ ಅಂದರೆ ಈಶ್ವರ, ಕಾರ್ಯಬ್ರಹ್ಮ ಅಂದರೆ ಹಿರಣ್ಯಗರ್ಭ – ಇರುಗಳ ಉಪಾಸನೆ.

ಪ್ರ ೨೯ : **ನಿರ್ಗುಣೋಪಾಸನೆ ಅಂದರೇನು ?**

ಉ : ಶುದ್ಧ ಬ್ರಹ್ಮದ ಉಪಾಸನೆ.

ಪ್ರ ೩೦ : **ಜಾತಿ ಅಂದರೇನು ? ಅದು ಎಷ್ಟು ವಿಧ ?**

ಉ : ಅನೇಕ ಧರ್ಮಿಗಳಲ್ಲಿ ಅನುಗತವಾದ ಏಕಧರ್ಮವು ಜಾತಿ. ಇದು ಪರಜಾತಿ, ಅಪರಜಾತಿಯೆಂದು ಎರಡು ವಿಧ.

ಪ್ರ ೩೧ : **ಪರಜಾತಿ ಅಂದರೇನು ?**

ಉ : "ಘಟವು ಇದೆ" ಎಂಬ ಸರ್ವತ್ರ ಅನುಗತವಾದ ಇರುವಿಕೆಯು ಪರಜಾತಿ. ಪರಜಾತಿಯೆಂದರೆ ಶ್ರೇಷ್ಠ ಜಾತಿ.

ಪ್ರ ೩೨ : **ಅಪರಜಾತಿ ಅಂದರೇನು ?**

ಉ : ಸತ್ತೆಗಿಂತಲೂ ಭಿನ್ನವಾದ ಘಟತ್ವ ಮೊದಲಾದ ಜಾತಿಯು ಅಪರಜಾತಿ. ಮತ್ತೊಂದು ಶಾಸ್ತ್ರದಲ್ಲಿ ವ್ಯಾಪ್ಯಜಾತಿ, ವ್ಯಾಪಕ ಜಾತಿಯೆಂದು ಎರಡು ವಿಧವಾಗಿ ಹೇಳಿದೆ.

ಪ್ರ ೩೩ : **ವ್ಯಾಪ್ಯಜಾತಿ ಅಂದರೇನು ?**

ಉ : ವ್ಯಾಪಕ ಜಾತಿಯ ಅಂತರ್ಗತವಾಗಿರುವ ಜಾತಿ ವ್ಯಾಪ್ಯಜಾತಿ ಎನಿಸುತ್ತದೆ.

ಉದಾ : ಮನುಷ್ಯ ಜಾತಿಯ ಅಂತರ್ಗತವಾಗಿರುವ ಬ್ರಾಹ್ಮಣತ್ವ, ಕ್ಷತ್ರಿಯತ್ವ ಮೊದಲಾದ ಜಾತಿಗಳು.

ಪ್ರ ೩೪ : **ವ್ಯಾಪ್ಯಜಾತಿ ಅಂದರೇನು ?**

ಉ : ವ್ಯಾಪ್ಯಜಾತಿಗಿಂತ ಅಧಿಕ ದೇಶದಲ್ಲಿರುವ ಜಾತಿಯು ವ್ಯಾಪಕ ಜಾತಿಯೆನಿಸುತ್ತದೆ.

ಉದಾ : ಬ್ರಾಹ್ಮಣತ್ವವೆಂಬ ವ್ಯಾಪ್ಯಜಾತಿಗಿಂತ ಅಧಿಕ ದೇಶದಲ್ಲಿರುವ ಮನುಷ್ಯ ಜಾತಿಯು ವ್ಯಾಪಕ ಜಾತಿಯೆನಿಸುತ್ತದೆ.

ಪ್ರ ೩೫ : **ನಿಗ್ರಹವು ಎಷ್ಟು ವಿಧ ?**

ಉ : ಕ್ರಮನಿಗ್ರಹ, ಹಠ ನಿಗ್ರಹವೆಂದು ಎರಡು ವಿಧ.

ಪ್ರ ೩೬ : **ಕ್ರಮನಿಗ್ರಹವೆಂದರೇನು ?**

ಉ : ಯಮ, ನಿಯಮ ಮೊದಲಾದ ಅಷ್ಟಾಂಗ ಯೋಗದ ಅಭ್ಯಾಸದಿಂದ ಚಿತ್ತದ ನಿರೋಧವಾದರೆ ಅದು ಕ್ರಮನಿಗ್ರಹವೆನಿಸುತ್ತದೆ.

ಪ್ರ ೩೭ : **ಹಠ ನಿಗ್ರಹವೆಂದರೇನು ?**

ಉ : ಪ್ರಾಣ ನಿರೋಧ ರೂಪ ಹಠಯೋಗದಿಂದಾಗಲಿ, ಶಾಂಭವಿ ಮೊದಲಾದ ಮುದ್ರೆಗಳ ಅಭ್ಯಾಸದಿಂದಾಗಲಿ, ಚಿತ್ತದ ನಿರೋಧವಾದರೆ ಅದು ಹಠ ನಿಗ್ರಹ.

ಪ್ರ ೩೮ : **ನಿಃಶ್ರೇಯಸವೆಂದರೇನು ? ಅದು ಎಷ್ಟು ವಿಧ ?**

ಉ : ನಿಃಶ್ರೇಯಸವೆಂದರೆ ಮೋಕ್ಷ. ಅದು ಅನರ್ಥ ನಿವೃತ್ತಿ, ಪರಮಾನಂದ ಪ್ರಾಪ್ತಿಯೆಂದು ಎರಡು ವಿಧ.

ಪ್ರ ೩೯ : **ಪರಮಹಂಸ ಸಂನ್ಯಾಸವು ಎಷ್ಟು ವಿಧ ?**

ಉ : ವಿವಿದಿಷಾ ಸಂನ್ಯಾಸ, ವಿದ್ವತ್ ಸಂನ್ಯಾಸವೆಂದು ಎರಡು ವಿಧ.

ಪ್ರ ೪೦ : **ವಿವಿದಿಷಾ ಸಂನ್ಯಾಸವೆಂದರೇನು ?**

ಉ : ಜಿಜ್ಞಾಸಾ ಬುದ್ಧಿಯಿಂದ ಜ್ಞಾನಪ್ರಾಪ್ತಿಗಾಗಿ ತೆಗೆದುಕೊಳ್ಳುವ ಸಂನ್ಯಾಸವು ವಿವಿದಿಷಾ ಸಂನ್ಯಾಸ.

ಪ್ರ ೪೧ : **ವಿದ್ವತ್ ಸಂನ್ಯಾಸವೆಂದರೇನು ?**

ಉ : ಜ್ಞಾನವಾದ ಮೇಲೆ ವಾಸನಾಕ್ಷಯ, ಮನೋನಾಶ, ಜ್ಞಾನಾಭ್ಯಾಸ ದ್ವಾರ ಜೀವನ್ಮುಕ್ತಿಯ ವಿಲಕ್ಷಣವಾದ ಆನಂದವನ್ನು ಭೋಗಿಸುವುದಕ್ಕಾಗಿ ತೆಗೆದುಕೊಳ್ಳುವ ಸಂನ್ಯಾಸ.

ಪ್ರ ೪೨ : **ಪ್ರಪಂಚವೆಂದರೇನು ? ಅದು ಎಷ್ಟು ವಿಧ ?**

ಉ : ಪ್ರಪಂಚವೆಂದರೆ ದೃಶ್ಯ ಸಮೂಹ. ಅದು ಬಾಹ್ಯ ಪ್ರಪಂಚ, ಆಂತರ ಪ್ರಪಂಚವೆಂದು ಎರಡು ವಿಧ.

ಪ್ರ ೪೩ : **ಬಾಹ್ಯ ಪ್ರಪಂಚವೆಂದರೇನು ?**

ಉ : ಪ್ರತ್ಯಕ್ಷಾದಿ ಪ್ರಮಾಣಕ್ಕೆ ಗೋಚರವಾಗುವ ಪ್ರಪಂಚ.

ಪ್ರ ೪೪ : **ಆಂತರ ಪ್ರಪಂಚವೆಂದರೇನು ?**

ಉ : ಮನಸ್ಸಿಗೆ ಗೋಚರವಾದ ಪ್ರಪಂಚ ಮತ್ತು ಮನಸ್ಸು. ಈ ಎರಡೂ ಸೇರಿ ಆಂತರ ಪ್ರಪಂಚ.

ಪ್ರ ೪೫ : **ಪ್ರಜ್ಞೆ ಎಷ್ಟು ವಿಧ ?**

ಉ : ಸ್ಥಿತಪ್ರಜ್ಞ, ಅಸ್ಥಿತಪ್ರಜ್ಞವೆಂದು ಎರಡು ವಿಧ.

ಪ್ರ ೪೬ : **ಸ್ಥಿತಪ್ರಜ್ಞವೆಂದರೇನು ?**

ಉ : ಪ್ರಜ್ಞೆಯೆಂದರೆ ಅರಿವು. ಅರಿವು ಸ್ಥಿರವಾದರೆ ಅದು ಸ್ಥಿತಪ್ರಜ್ಞ.

ಪ್ರ ೪೭ : **ಅಸ್ಥಿತಪ್ರಜ್ಞ ಎಂದರೇನು ?**

ಉ : ಅರಿವು ಚಂಚಲವಾದರೆ ಅದು ಅಸ್ಥಿತಪ್ರಜ್ಞ.

ಪ್ರ ೪೮ : **ಲಕ್ಷಣವೆಷ್ಟು ವಿಧ ?**

ಉ : ಸ್ವರೂಪ ಲಕ್ಷಣ, ತಟಸ್ಥ ಲಕ್ಷಣವೆಂದು ಎರಡು ವಿಧ.

ಪ್ರ ೪೯ : **ಸ್ವರೂಪ ಲಕ್ಷಣವೆಂದರೇನು ?**

ಉ : "ಸ್ವರೂಪಂ ಸ್ಯಾತ್ ವ್ಯಾವರ್ತಕಂ ಸ್ವರೂಪ ಲಕ್ಷಣಮ್" ಅಂದರೆ ಸ್ವರೂಪದಲ್ಲಿ ಯಾವಾಗಲೂ ಇದ್ದು ಬೇರ್ಪಡಿಸಿ ತೋರಿಸುವುದು ಸ್ವರೂಪ ಲಕ್ಷಣ.

ಪ್ರ ೫೦ : **ತಟಸ್ಥ ಲಕ್ಷಣವೆಂದರೇನು ?**

ಉ : "ಕಾದಾಚಿತ್ಕೇ ಸತಿ ವ್ಯಾವರ್ತಕಂ ತಟಸ್ಥ ಲಕ್ಷಣಮ್" ಅಂದರೆ ಯಾವಾಗಲಾದರೊಮ್ಮೆ ಇದ್ದು ಬೇರ್ಪಡಿಸಿ ತೋರಿಸುವುದು ತಟಸ್ಥ ಲಕ್ಷಣ.

ಪ್ರ ೫೧ : **ವಾಕ್ಯಗಳು ಎಷ್ಟು ವಿಧ ?**

ಉ : ಅವಾಂತರವಾಕ್ಯ, ಮಹಾವಾಕ್ಯಗಳೆಂದು ಎರಡು ವಿಧ.

ಪ್ರ ೫೨ : **ಅವಾಂತರವಾಕ್ಯವೆಂದರೇನು** ?

ಉ : ಜೀವ ಬ್ರಹ್ಮರ ಲಕ್ಷಣಗಳನ್ನು ಪ್ರತ್ಯೇಕ ತೋರಿಸುವ ವಾಕ್ಯ.

ಪ್ರ ೫೩ : **ಮಹಾವಾಕ್ಯವೆಂದರೇನು** ?

ಉ : ಜೀವ ಬ್ರಹ್ಮರ ಏಕತೆಯನ್ನು ತೋರಿಸುವ ವಾಕ್ಯ.

ಪ್ರ ೫೪ : **ವಾದವು ಎಷ್ಟು** ವಿಧ ?

ಉ : ಪ್ರತಿಬಿಂಬವಾದ, ಅವಚ್ಛೇದವಾದವೆಂದು ಎರಡು ವಿಧ.

ಪ್ರ ೫೫ : **ಪ್ರತಿಬಿಂಬವಾದವೆಂದರೇನು** ?

ಉ : ಜೀವನು ಬ್ರಹ್ಮದ ಪ್ರತಿಬಿಂಬವೆನ್ನುವುದೇ ಪ್ರತಿಬಿಂಬವಾದ.

ಪ್ರ ೫೬ : **ಅವಚ್ಛೇದವಾದವೆಂದರೇನು** ?

ಉ : ಜೀವನು ಬ್ರಹ್ಮದ ಅಂಶವೆಂಬುವ ವಾದ.

ಪ್ರ ೫೭ : **ವಿಪರೀತ ಭಾವನೆಯು ಎಷ್ಟು** ವಿಧ ?

ಉ : ಪ್ರಮಾಣಗತ ವಿಪರೀತ ಭಾವನೆ, ಪ್ರಮೇಯಗತ ವಿಪರೀತ ಭಾವನೆ ಎಂದು ಎರಡು ವಿಧ.

ಪ್ರ ೫೮ : **ಪ್ರಮಾಣಗತ ವಿಪರೀತ ಭಾವನೆ ಅಂದರೇನು** ?

ಉ : ಪ್ರಮಾಣವೆಂದರೆ ಶಾಸ್ತ್ರ. ಶಾಸ್ತ್ರವನ್ನು ಇದ್ದದ್ದು ಇದ್ದಂತೆ ತಿಳಿಯದೆ ವಿಪರೀತವಾಗಿ ತಿಳಿಯುವುದು.

ಪ್ರ ೫೯ : **ಪ್ರಮೇಯಗತ ವಿಪರೀತ ಭಾವನೆ ಎಂದರೇನು** ?

ಉ : ಪ್ರಮೇಯವೆಂದರೆ ಮೋಕ್ಷ. ಮೋಕ್ಷವನ್ನು ಇದ್ದದ್ದು ಇದ್ದಂತೆ ತಿಳಿಯದೆ ವಿಪರೀತವಾಗಿ ತಿಳಿಯುವುದು.

ಪ್ರ ೬೦ : **ಶಬ್ದವು ಎಷ್ಟು** ವಿಧ ?

ಉ : ವರ್ಣರೂಪ ಶಬ್ದ, ಧ್ವನಿರೂಪ ಶಬ್ದವೆಂದು ಎರಡು ವಿಧ.

ಪ್ರ ೬೧ : **ಶಬ್ದ ಸಂಗತಿಯೆಷ್ಟು**?

ಉ : ಶಕ್ತಿವೃತ್ತಿ, ಲಕ್ಷಣಾವೃತ್ತಿಯೆಂದು ಎರಡು ವಿಧ.

ಪ್ರ ೬೨ : **ಸಂಶಯಗಳೆಷ್ಟು**?

ಪ್ರಮಾಣಗತ ಸಂಶಯ, ಪ್ರಮೇಯಗತ ಸಂಶಯವೆಂದು ಎರಡು ವಿಧ.

ಪ್ರ ೬೩ : **ಸಮಾಧಿಗಳೆಷ್ಟು** ?

ಉ : ಸವಿಕಲ್ಪ ಸಮಾಧಿ, ನಿರ್ವಿಕಲ್ಪ ಸಮಾಧಿ ಎಂದು ಎರಡು ವಿಧ.

ಪ್ರ ೬೪ : **ಸೂಕ್ಷ್ಮ ಶರೀರಗಳೆಷ್ಟು** ?

ಉ : ಸಮಷ್ಟಿ, ವ್ಯಷ್ಟಿಯೆಂದು ಎರಡು ವಿಧ.

ಪ್ರ ೬೫ : **ಸ್ಥೂಲ ಶರೀರಗಳೆಷ್ಟು** ?

ಉ : ಸಮಷ್ಟಿ ವ್ಯಷ್ಟಿಯೆಂದು ಎರಡು ವಿಧ.

## ಮೂರು ವಿಧದ ಪದಾರ್ಥಗಳ ಪರಿಚಯ

ಪ್ರ ೬೬ : **ತ್ರಿಪುಟಿಗಳೆಷ್ಟು**?

ಉ : ಇಂದ್ರಿಯಗಳು ಅಧ್ಯಾತ್ಮ, ದೇವತೆಗಳು ಅಧಿದೈವ, ವಿಷಯಗಳು ಅಧಿಭೂತವೆಂದು ಮೂರು ವಿಧ.

ಪ್ರ ೬೭ : **ಅಂತಃಕರಣ ದೋಷಗಳೆಷ್ಟು?**

ಉ : ಮಲ, ವಿಕ್ಷೇಪ, ಆವರಣವೆಂದು ಮೂರು ವಿಧ.

ಪ್ರ ೬೮ : **ಮಲವೆಂದರೇನು ?**

ಉ : ಜನ್ಮ ಜನ್ಮಾಂತರಗಳಲ್ಲಿ ಮಾಡಿದ ಪಾಪಶೇಷ.

ಪ್ರ ೬೯ : **ವಿಕ್ಷೇಶ ದೋಷವೆಂದರೇನು ?**

ಉ : ಚಿತ್ತದ ಚಂಚಲತೆ.

ಪ್ರ ೭೦ : **ಆವರಣ ದೋಷವೆಂದರೇನು ?**

ಉ : ಸ್ವರೂಪದ ಅಜ್ಞಾನ.

ಪ್ರ ೭೧ : **ಅರ್ಥವಾದವು ಎಷ್ಟು ವಿಧ ?**

ಉ : ನಿಂದೆ ಅಥವಾ ಸ್ತುತಿಯು ಬೋಧಕ ವಾಕ್ಯಗಳು ಅರ್ಥವಾದವೆನಿಸುತ್ತವೆ. ಇದು ಅನುವಾದ ಅರ್ಥವಾದ, ಗುಣವಾದ ಅರ್ಥವಾದ, ಭೂತಾರ್ಥವಾದವೆಂದು ಮೂರು ವಿಧ.

ಪ್ರ ೭೨ : **ಅನುವಾದ ಅರ್ಥವಾದವೆಂದರೇನು ?**

ಉ : ಇತರೇ ಪ್ರಮಾಣದಿಂದ ಸಿದ್ಧವಾದ ಅರ್ಥವನ್ನು ಬೋಧಿಸುವ ವಾಕ್ಯ.

ಉದಾ : "ಅಗ್ನಿಯು ಹಿಮಕ್ಕೆ ಔಷಧ." ಇದು ಅರ್ಥವಾದ ವಾಕ್ಯ.

ಪ್ರ ೭೩ : **ಗುಣವಾದ ಅರ್ಥವಾದವೆಂದರೇನು ?**

ಉ : ಅನ್ಯ ಪ್ರಮಾಣಕ್ಕೆ ವಿರುದ್ಧವಾದ ವಿಧೇಯಾರ್ಥದ ಗುಣಗಳಿಂದ ನಿರೂಪಿಸುವ ವಾಕ್ಯ.

ಉದಾ : ಪ್ರಕಾಶರೂಪವಾದ ಗುಣಕ್ಕೆ ಸಮಾನವಾದ "ಯ್ಯೂಪ" ಅಂದರೆ ಯಜ್ಞಸ್ತಂಭವು ಆದಿತ್ಯ. ಇದು ಗುಣವಾದ ವಾಕ್ಯ.

ಪ್ರ ೭೪ : **ಭೂತಾರ್ಥವಾದವೆಂದರೇನು ?**

ಉ : ಸ್ವಾರ್ಥದಲ್ಲಿ ಪ್ರಮಾಣವಾದ ಲಕ್ಷಣೆಯಿಂದ ವಿಧೇಯಾರ್ಥವನ್ನು ಶ್ಲಾಘನೆ ಮಾಡುವ ವಾಕ್ಯ.

ಉದಾ : "ವಜ್ರಹಸ್ತ ಪುರಂಧರ್."

ಪ್ರ ೭೫ : **ಅವಧಿ ಎಷ್ಟು ವಿಧ ?**

ಉ : ಬೋಧದ ಅವಧಿ, ವೈರಾಗ್ಯದ ಅವಧಿ, ಉಪರಾಮದ ಅವಧಿ ಎಂದು ಮೂರು ವಿಧ.

ಪ್ರ ೭೬ : **ಬೋಧದ ಅವಧಿ ಅಂದರೇನು ?**

ಉ : ಅಂತಃಕರಣದಲ್ಲಿ ಅಹಂಬ್ರಹ್ಮಾಸ್ಮಿ ಎಂಬ ವೃತ್ತಿ ಉಂಟಾಗಿ ಅನಾತ್ಮ ವಸ್ತುವಿನಲ್ಲಿ ಸೇರದೆ ಇರುವುದು.

ಪ್ರ ೭೭ : **ವೈರಾಗ್ಯದ ಅವಧಿ ಅಂದರೇನು ?**

ಉ : ದೋಷ ದೃಷ್ಟಿಯಿಂದ ತ್ಯಜಿಸಿದ ವಸ್ತುವನ್ನು ಮತ್ತೆ ಬಯಸದಿರುವುದು.

ಪ್ರ ೭೮ : **ಉಪರಾಮದ ಅವಧಿ ಅಂದರೇನು ?**

ಉ : ಚಿತ್ತದಲ್ಲಿರುವ ದೋಷಗಳೆಲ್ಲಾ ಕಳೆದುಹೋಗಿ ಚಿತ್ತವು ಉಪಶಮವಾಗುವುದು.

ಪ್ರ ೭೯ : **ಅವಸ್ಥೆ ಅಂದರೇನು ? ಅವುಗಳೆಷ್ಟು?**

ಉ : ಅವಸ್ಥೆಗಳೆಂದರೆ ಮೂರೂ ದೇಹಗಳು ವ್ಯವಹರಿಸುವ ಕಾಲ. ಅವು ಜಾಗ್ರತ್, ಸ್ವಪ್ನ, ಸುಷುಪ್ತಿಯೆಂದು ಮೂರು ವಿಧ.

ಪ್ರ ೮೦ : **ಆತ್ಮಗಳು ಎಷ್ಟು ವಿಧ ?**

ಉ : ಜ್ಞಾನಾತ್ಮ, ಮಹಾನಾತ್ಮ, ಶಾಂತಾತ್ಮವೆಂದು ಮೂರು ವಿಧ. ಜ್ಞಾನಾತ್ಮವೆಂದರೆ ಬುದ್ಧಿ; ಮಹಾನಾತ್ಮವೆಂದರೆ ಮಹತ್ತತ್ವ; ಶಾಂತಾತ್ಮವೆಂದರೆ ಶುದ್ಧ ಬ್ರಹ್ಮ.

ಪ್ರ ೮೧ : **ಆತ್ಮನ ಭೇದಗಳೆಷ್ಟು?**

ಉ : ಮಿಥ್ಯಾತ್ಮ, ಗೌಣಾತ್ಮ, ಮುಖ್ಯಾತ್ಮವೆಂದು ಮೂರು ವಿಧ. ಮಿಥ್ಯಾತ್ಮವೆಂದರೆ ಸ್ಥೂಲ ಸೂಕ್ಷ್ಮ ಸಂಘಾತ. ಗೌಣಾತ್ಮನೆಂದರೆ ಪುತ್ರ. ಮುಖ್ಯಾತ್ಮನೆಂದರೆ ಸಾಕ್ಷಿ.

ಪ್ರ ೮೨ : **ಆನಂದಗಳೆಷ್ಟು ವಿಧ ?**

ಉ : ೧. ಬ್ರಹ್ಮಾನಂದ, ೨. ವಿಷಯಾನಂದ, ೩. ವಾಸನಾನಂದವೆಂದು ಮೂರು ವಿಧ.

ಪ್ರ ೮೩ : **ಬ್ರಹ್ಮಾನಂದವೆಂದರೇನು ?**

ಉ : ಸಮಾಧಿ ಕಾಲದಲ್ಲಿ ಅಂದರೆ ಬುದ್ಧಿಯು ಬ್ರಹ್ಮಾಕಾರವಾದಾಗ

ಪ್ರಕಟವಾಗುವ ಆನಂದ ಮತ್ತು ಸುಷುಪ್ತಿಯಲ್ಲಿರುವ ಬಿಂಬಭೂತವಾದ ಆನಂದ – ಇವೆರಡೂ ಸೇರಿ ಬ್ರಹ್ಮಾನಂದವೆನಿಸುತ್ತದೆ.

ಪ್ರ ೮೪ : **ವಿಷಯಾನಂದವೆಂದರೇನು** ?

ಉ : ಜಾಗ್ರತ್, ಸ್ವಪ್ನ ಕಾಲಗಳಲ್ಲಿ ತೋರಿದ ವಿಷಯವು ಪ್ರಾಪ್ತಿಯಾದಾಗ ಚಿತ್ತವು ಏಕಾಗ್ರವಾಗುತ್ತದೆ. ಈ ಚಿತ್ತದಲ್ಲಿ ಆತ್ಮನ ಸ್ವರೂಪ ಭೂತವಾದ ಆನಂದದ ಪ್ರತಿಬಿಂಬ ಉಂಟಾಗುತ್ತದೆ, ಈ ಆನಂದದ ಪ್ರತಿಬಿಂಬವೇ ವಿಷಯಾನಂದವೆನಿಸುತ್ತದೆ. ಈ ವಿಷಯಾನಂದಕ್ಕೆ ಲೇಶಾನಂದ, ಮಾತ್ರಾನಂದವೆಂದು ಹೆಸರು.

ಪ್ರ ೮೫ : **ವಾಸನಾನಂದವೆಂದರೇನು ?**

ಉ : ಸುಷುಪ್ತಿಯಿಂದ ಎದ್ದ ಕೂಡಲೇ ಉದಾಸೀನ ಅವಸ್ಥೆಯಲ್ಲಿ ಅನುಭವಿಸುವ ಆನಂದವು ವಾಸನಾನಂದ.

ಪ್ರ ೮೬ : **ಇಂದ್ರಿಯ ಧರ್ಮಗಳೆಷ್ಟು?**

ಉ : ಅಂಧತ್ವ, ಮಂದತ್ವ, ಪಟುತ್ವಗಳೆಂದು ಇಂದ್ರಿಯ ಧರ್ಮಗಳು ಮೂರು.

ಪ್ರ ೮೭ : **ಅಂಧತ್ವವೆಂದರೇನು ?**

ಉ : ಏನೂ ತೋರದೆ ಇರುವುದು.

ಪ್ರ ೮೮ : **ಮಂದತ್ವವೆಂದರೇನು ?**

ಉ : ಸ್ಫುಟವಾಗಿ ತೋರದೆ ಅಲ್ಪಸ್ವಲ್ಪವಾಗಿ ತೋರುವುದು.

ಪ್ರ ೮೯ : **ಪಟುತ್ವವೆಂದರೇನು** ?

ಉ : ಸ್ಫುಟವಾಗಿ ತೋರುವುದು.

ಪ್ರ ೯೦ : **ಉದ್ದೇಶಗಳೆಷ್ಟು ?**

ಉ : ಮೂರು. ೧. ಉದ್ದೇಶ, ೨. ಲಕ್ಷಣ, ೩. ಪರೀಕ್ಷಾ.

೧) ಉದ್ದೇಶವೆಂದರೆ ನಾಮದ ಕೀರ್ತನೆ.

೨) ಲಕ್ಷಣವೆಂದರೆ ಅಸಾಧಾರಣ ಧರ್ಮ. ಅರ್ಥಾತ್ ಒಂದು ವಸ್ತುವಿನಲ್ಲಿ ವರ್ತಿಸುವ ಧರ್ಮ.

೩) ಪರೀಕ್ಷಾ ಅಂದರೆ ಪದಕೃತಿ. ಅಂದರೆ ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವ ಮೊದಲಾದ ದೋಷಗಳ ವಿಚಾರ.

ಪ್ರ ೯೧ : **ಏಷಣಗಳೆಷ್ಟು?**

ಉ : ಏಷಣವೆಂದರೆ ಇಚ್ಛೆ ಅಥವ ವಾಸನೆ. ಇವು ಪುತ್ರೈಷಣ, ವಿತ್ತೈಷಣ, ಲೋಕೈಷಣವೆಂದು ಮೂರು ವಿಧ.

ಪ್ರ ೯೨ : **ಪುತ್ರೈಷಣವೆಂದರೇನು ?**

ಉ : ಮಕ್ಕಳು ಮರಿಗಳಲ್ಲಿರುವ ವಿಶೇಷಾಭಿಮಾನ. ಇದರಿಂದ ಧೃತರಾಷ್ಟ್ರನೂ ದ್ರೋಣಾಚಾರ್ಯನೂ ನಾಶವಾಗಿಹೋದರು.

ಪ್ರ ೯೩ : **ವಿತ್ತೈಷಣವೆಂದರೇನು ?**

ಉ : ಆತ್ಮನಿಗಿಂತಲೂ ಧನವು ಹೆಚ್ಚಿನದೆಂದು ತಿಳಿಯುವುದು.

ಪ್ರ ೯೪ : **ಲೋಕೈಷಣವೆಂದರೇನು ?**

ಉ : ಇದು ಎರಡು ವಿಧ : ೧. ಸರ್ವರೂ ನನ್ನನ್ನು ಸ್ತುತಿ ಮಾಡಬೇಕು; ನನ್ನನ್ನು ಯಾರೂ ನಿಂದಿಸಕೂಡದು. ೨. ಪರಲೋಕದ ಇಚ್ಛೆ.

ಪ್ರ ೯೫ : **ಕರ್ಮಕ್ಕೆ ಕರಣಗಳೆಷ್ಟು ?**

ಉ : ಮನಸ್ಸು, ವಾಣಿ, ಶರೀರ ಇವು ಕರ್ಮಕ್ಕೆ ಕರಣಗಳು.

ಪ್ರ ೯೬ : **ಕರ್ತವ್ಯಾದಿಗಳೆಷ್ಟು ?**

ಉ : ಮೂರು. ೧. ಕರ್ತವ್ಯ, ೨. ಜ್ಞಾತವ್ಯ, ಪ್ರಾಪ್ತವ್ಯ.

೧. ಕರ್ತವ್ಯವೆಂದರೆ ಮಾಡಬೇಕಾದ ಕೆಲಸ.

೨. ಜ್ಞಾತವ್ಯವೆಂದರೆ ತಿಳಿಯಲು ಯೋಗ್ಯವಾದ ಜ್ಞಾನದ ವಿಷಯ.

೩. ಪ್ರಾಪ್ತವ್ಯವೆಂದರೆ ಪ್ರಾಪ್ತಿ ಮಾಡಿಕೊಳ್ಳಲು ಯೋಗ್ಯವಾದ ಜ್ಞಾನದ ಫಲವಾದ ಮೋಕ್ಷ.

ಪ್ರ ೯೭ : **ಕರ್ಮಗಳೆಷ್ಟು ವಿಧ ?**

ಉ : (೧) ಪುಣ್ಯ ಕರ್ಮ, ಪಾಪ ಕರ್ಮ, ಮಿಶ್ರ ಕರ್ಮ.

(೨) ಸಂಚಿತ ಕರ್ಮ, ಆಗಾಮಿ ಕರ್ಮ, ಪ್ರಾರಾಬ್ಧ ಕರ್ಮ. ಸಂಚಿತ ಕರ್ಮವೆಂದರೆ ಜನ್ಮಾಂತರದಲ್ಲಿ ಶೇಖರಿಸಿದ ಕರ್ಮ. ಆಗಾಮಿ ಕರ್ಮವೆಂದರೆ ವರ್ತಮಾನ ಜನ್ಮದಲ್ಲಿ ಮಾಡಲ್ಪಟ್ಟ ಕರ್ಮ. ಪ್ರಾರಾಬ್ಧ ಕರ್ಮವೆಂದರೆ ವರ್ತಮಾನ ಜನ್ಮವನ್ನು ಆರಂಭಿಸಿದ ಕರ್ಮ.

(೩) ಕರ್ಮ, ವಿಕರ್ಮ, ಅಕರ್ಮ. ಕರ್ಮವೆಂದರೆ ವೇದವಿಹಿತವಾದ

ಕರ್ಮ. ವಿಕರ್ಮವೆಂದರೆ ನಿಷಿದ್ಧ ಕರ್ಮ. ಅಕರ್ಮವೆಂದರೆ ವೇದವಿಹಿತ ಕರ್ಮ ಮತ್ತು ವೇದ ವಿರುದ್ಧ ಕರ್ಮ – ಈ ಎರಡನ್ನು ಮಾಡದೆ ಇರುವುದು.

ಪ್ರ ೯೮ : **ಸೃಷ್ಟಿಯನ್ನು ಕುರಿತು ಹೇಳುವ ವಾದಗಳೆಷ್ಟು ?**

ಉ : ೧. ಆರಂಭವಾದ, ೨. ಪರಿಣಾಮವಾದ, ೩. ವಿವರ್ತವಾದ.

ಪ್ರ ೯೯ : **ಆರಂಭವಾದವೆಂದರೇನು ?**

ಉ : ಪೂರ್ವಿಕರು ಕಟ್ಟಿದ ಹಳೇ ಮನೆಯು ಬಿದ್ದು ಹೋಗಲು ಅದರಲ್ಲಿರುವ ಇಟ್ಟಿಗೆ ಮೊದಲಾದ ಸಾಧನಗಳನ್ನು ತೆಗೆದುಕೊಂಡು ಮತ್ತೊಂದು ಹೊಸ ಮನೆಯನ್ನು ನಿರ್ಮಿಸುವುದು. ಇದರಂತೆ ಪೃಥ್ವಿ ಮೊದ ಲಾದ ಪಂಚಭೂತಗಳು ನಾಶವಾಗಲು ಅವುಗಳಿಗೆ ಕಾರಣವಾದ ಪರಮಾಣು ಗಳು ಹಾಗೆಯೇ ಇರುತ್ತವೆ. ಅವುಗಳಿಂದ ಮತ್ತೆ ಪೃಥ್ವಿ ಮೊದಲಾದ ಪಂಚ ಭೂತಗಳನ್ನು ಆರಂಭ ಮಾಡುವುದಕ್ಕೆ ಆರಂಭವಾದವೆನ್ನುತ್ತಾರೆ. ಇದು ನೈಯ್ಯಾಯಿಕರ ಮತ. ಈ ಮತದಲ್ಲಿ ಕಾರ್ಯಕಾರಣಗಳು ಬೇರೆ ಬೇರೆಯಾ ಗಿರುತ್ತವೆ.

ಪ್ರ ೧೦೦ : **ಪರಿಣಾಮವಾದವೆಂದರೇನು ?**

ಉ : ಇದು ಸಾಂಖ್ಯರ ಮತ. ಹಾಲಿನ ಪರಿಣಾಮವೇ ಮೊಸರು. ಅದರಂತೆ ಪ್ರಕೃತಿಯ ಪರಿಣಾಮವೇ ಜಗತ್ತು. ಉಪಾಸಕರ ಮತದಲ್ಲಿ ಬ್ರಹ್ಮದ ಪರಿಣಾಮವೇ ಜಗತ್ತು ಮತ್ತು ಜೀವ. ಇದೂ ಸಹ ಪರಿಣಾಮ ವಾದವೇ. ಈ ಮತಗಳಲ್ಲಿ ಕಾರ್ಯಕ್ಕೂ ಕಾರಣಕ್ಕೂ ಅಭೇದವನ್ನು ಹೇಳಿದೆ.

ಪ್ರ ೧೦೧ : **ವಿವರ್ತವಾದವೆಂದರೇನು ?**

ಉ : ಇದು ವೇದಾಂತ ಮತ. ನಿರ್ವಿಕಾರವಾದ ರಜ್ಜುವಿನಲ್ಲಿ ರಜ್ಜು ರೂಪ ಅಧಿಷ್ಠಾನಕ್ಕಿಂತ ವಿಷಮಸತ್ತೆಯುಳ್ಳ ಅನ್ಯಥಾ ಸ್ವರೂಪವಾದ ಸರ್ಪವಿದೆ. ಈ ಸರ್ಪವು ರಜ್ಜುವಿನ ವಿವರ್ತ, ಅಂದರೆ ಕಲ್ಪಿತ ಕಾರ್ಯ. ಇದರಂತೆ ನಿರ್ವಿಕಾರ ಬ್ರಹ್ಮದಲ್ಲಿ ಅಧಿಷ್ಠಾನ ಬ್ರಹ್ಮಕ್ಕಿಂತ ವಿಷಮಸತ್ತೆಯುಳ್ಳ ಅನ್ಯಥಾ ಸ್ವರೂಪವಾದ ಜಗತ್ತು ಇರುತ್ತದೆ. ಈ ಜಗತ್ತು ಬ್ರಹ್ಮದ ವಿವರ್ತ.

ಪ್ರ ೧೦೨ : **ಸಾರಾಂಶವೇನು ?**

ಉ : ಸಾರಾಂಶವೇನೆಂದರೆ, ರಜ್ಜು ರಜ್ಜುವಾಗಿಯೇ ಇದ್ದು ಹಾವಾಗಿ ಕಂಡಂತೆ, ಬ್ರಹ್ಮವು ಬ್ರಹ್ಮವೇ ಆಗಿದ್ದು ಅಜ್ಞಾನಿಗಳ ದೃಷ್ಟಿಗೆ ಜಗತ್ತಾಗಿ

ತೋರುತ್ತದೆ. ಈ ಮತದಲ್ಲಿ ಕಾರ್ಯಕಾರಣಗಳಿಗೆ ಬಾಧಕೃತವಾದ ಅಭೇದ ವನ್ನು ಹೇಳಿದೆ.

ಪ್ರ ೧೦೩: **ಕಾಲಗಳೆಷ್ಟು?**

ಉ : ಭೂತ, ಭವಿಷ್ಯತ್, ವರ್ತಮಾನವೆಂದು ಮೂರು ವಿಧ.

ಪ್ರ ೧೦೪ : **ಜಾಗ್ರತಗಳೆಷ್ಟು ?**

ಉ : ೧. ಜಾಗ್ರತ್ ಜಾಗ್ರತ, ೨. ಜಾಗ್ರತ್ ಸ್ವಪ್ನ, ೩. ಜಾಗ್ರತ್ ಸುಷುಪ್ತಿ ಎಂದು ಮೂರು ವಿಧ.

ಪ್ರ ೧೦೫ : **ಜಾಗ್ರತ್ ಜಾಗ್ರತವೆಂದರೇನು ?**

ಉ : ಈಗಿರುವ ಜಗತ್ತಿನಲ್ಲಿ ಸ್ವಸ್ವರೂಪ ಸಾಕ್ಷಾತ್ಕಾರವಾಗುವುದು.

ಪ್ರ ೧೦೬ : **ಜಾಗ್ರತ್ ಸ್ವಪ್ನವೆಂದರೇನು ?**

ಉ : ಈಗಿರುವ ಜಾಗ್ರತದಲ್ಲಿ ಹಿಂದೆ ನಡೆದದ್ದನ್ನೂ, ಮುಂದೆ ನಡೆಯುವುದನ್ನೂ ಚಿಂತಿಸುವ ಮನೋರಾಜ್ಯ.

ಪ್ರ ೧೦೭ : **ಜಾಗ್ರತ್ ಸುಷುಪ್ತಿ ಅಂದರೇನು ?**

ಉ : ಈಗಿರುವ ಜಾಗ್ರತ್ತಿನಲ್ಲಿ ಭ್ರಮೆಯಿಂದ ವೃತ್ತಿಯು ಜಡವಾಗುವುದು.

ಪ್ರ ೧೦೮ : **ಜೀವರುಗಳೆಷ್ಟು?**

ಉ : ೧. ಪಾರಮಾರ್ಥಿಕ ಜೀವ, ೨. ವ್ಯಾವಹಾರಿಕ ಜೀವ, ೩. ಪ್ರಾತಿಭಾಸಿಕ ಜೀವ ಎಂದು ಮೂರು ವಿಧ.

ಪ್ರ ೧೦೯ : **ಪಾರಮಾರ್ಥಿಕ ಜೀವನೆಂದರೇನು ?**

ಉ : ಅಂತಃಕರಣದ ವೃತ್ತಿಗಳನ್ನು ಬೆಳಗುವ ಸಾಕ್ಷಿ ಚೇತನ.

ಪ್ರ ೧೧೦ : **ವ್ಯಾವಹಾರಿಕ ಜೀವನೆಂದರೇನು ?**

ಉ : ಸಾಭಾಸ ಅಂತಃಕರಣ ರೂಪವಾದ ಜೀವ, ಅಂದರೆ ಸಾಕ್ಷಿ. ಬುದ್ಧಿ, ಬುದ್ಧಿಯಲ್ಲಿ ಪ್ರತಿಬಿಂಬಿಸಿದ ಸಾಕ್ಷಿ, ಪ್ರತಿಬಿಂಬ ಈ ಮೂರೂ ಸೇರಿ ವ್ಯಾವಹಾರಿಕ ಜೀವ.

ಪ್ರ ೧೧೧ : **ಪ್ರಾತಿಭಾಸಿಕ ಜೀವನೆಂದರೇನು ?**

ಉ : ಸಾಭಾಸ ಅಂತಃಕರಣ ರೂಪನಾದ, ವ್ಯಾವಹಾರಿಕ ಜೀವನಲ್ಲಿ ಸ್ವಪ್ನದಲ್ಲಿ ಕಲ್ಪಿತವಾದ ಜೀವ.

೨ ನೆ ವಿಧ : ವಿಶ್ವ, ತೈಜಸ, ಪ್ರಾಜ್ಞ.

ಪ್ರ ೧೧೨ : **ವಿಶ್ವನೆಂದರೇನು ?**

ಉ : ಜಾಗ್ರತ್ತಿನಲ್ಲಿರುವ ಮೂರೂ ದೇಹಗಳ ಅಭಿಮಾನಿಯಾದ ಜೀವ.

ಪ್ರ ೧೧೩ : **ತೈಜಸನೆಂದರೇನು ?**

ಉ : ಸ್ವಪ್ನದಲ್ಲಿ ಸ್ಥೂಲ ದೇಹದ ಅಭಿಮಾನವನ್ನು ಬಿಟ್ಟು, ಸೂಕ್ಷ್ಮ ದೇಹ ಮತ್ತು ಕಾರಣದೇಹ ಈ ಎರಡೂ ದೇಹಗಳ ಅಭಿಮಾನವಿರುವ ಜೀವ.

ಪ್ರ ೧೧೪ : **ಪ್ರಾಜ್ಞನೆಂದರೇನು ?**

ಉ: ಸುಷುಪ್ತಿಯಲ್ಲಿ ಸ್ಥೂಲ, ಸೂಕ್ಷ್ಮ ದೇಹಗಳ ಅಭಿಮಾನವನ್ನು ಬಿಟ್ಟು, ಕೇವಲ ಕಾರಣದೇಹದ ಅಭಿಮಾನಿಯಾದ ಜೀವ.

ಪ್ರ ೧೧೫ : **ತಾಪಗಳೆಷ್ಟು ?**

ಉ : ತಾಪಗಳೆಂದರೆ ದುಃಖ. ಇವು ಅಧ್ಯಾತ್ಮ ತಾಪ, ಅಧಿದೈವ ತಾಪ, ಅಧಿಭೂತ ತಾಪವೆಂದು ಮೂರು ವಿಧ.

ಪ್ರ ೧೧೬ : **ಅಧ್ಯಾತ್ಮ ತಾಪವೆಂದರೇನು ?**

ಉ : ಸ್ಥೂಲ, ಸೂಕ್ಷ್ಮ ಶರೀರಗಳಲ್ಲಿ ಉಂಟಾಗುವ ಆಧಿ, ವ್ಯಾಧಿ ಎಂದು ಹೇಳಿಸಿಕೊಳ್ಳುವ ದುಃಖ.

ಪ್ರ ೧೧೭ : **ಅಧಿದೈವ ತಾಪವೆಂದರೇನು ?**

ಉ : ಸ್ವಸಂಘಾತಕ್ಕಿಂತ ಭಿನ್ನವಾಗಿದ್ದು, ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗದ ದೇವತೆಗಳಿಂದಾಗುವ ದುಃಖ. ಶೀತ, ಉಷ್ಣ, ಅತಿವೃಷ್ಟಿ, ಅನಾವೃಷ್ಟಿ, ವಿದ್ಯುತ್ ತಾಪ, ಭೂಕಂಪ ಇವುಗಳಿಂದಾಗುವ ದುಃಖ.

ಪ್ರ ೧೧೮ : **ಅಧಿಭೂತ ತಾಪವೆಂದರೇನು ?**

ಉ : ಸ್ವಸಂಘಾತಕ್ಕಿಂತ ಭಿನ್ನವಾಗಿದ್ದು, ನೇತ್ರಾದಿ ಇಂದ್ರಿಯಗಳಿಗೆ ಗೋಚರವಾಗುವ ಭೂತ ಪ್ರಾಣಿಗಳಿಂದಾಗುವ ದುಃಖ. ವ್ಯಾಘ್ರ ಮೊದಲಾದುವುಗಳು; ಶತ್ರು ಮೊದಲಾದವರು.

ಪ್ರ ೧೧೯ : **ನಾದಾದಿಗಳೆಷ್ಟು ?**

ಉ : ೧. ನಾದ, ೨, ಬಿಂದು, ೩. ಕಲೆ ಎಂದು ಮೂರು ವಿಧ.

ಪ್ರ ೧೨೦ : **ನಾದವೆಂದರೇನು ?**

ಉ : ಓಂಕಾರ ಶಬ್ದ ಅಥವಾ ಪರಾ, ಪಶ್ಯಂತಿ, ಮಧ್ಯಮಾ, ವೈಖರಿ ಎಂಬ ನಾಲ್ಕು ವಾಣಿಗಳು.

ಪ್ರ ೧೨೧ : **ಬಿಂದುವೆಂದರೇನು ?**

ಉ : ಓಂಕಾರದಲ್ಲಿ ಅಕಾರ, ಉಕಾರ, ಮಕಾರ ಅರ್ಧಮಾತ್ರೆಗಳಿರುತ್ತವೆ. ಇವುಗಳಲ್ಲಿ ಅಕಾರ, ಉಕಾರ, ಮಕಾರಗಳನ್ನು ಬಿಟ್ಟು ತುರೀಯಾಪದವೇ ಬಿಂದುವೆಂದು ಹೇಳಿಸಿಕೊಳ್ಳುತ್ತದೆ.

ಪ್ರ ೧೨೨ : **ಕಲಾ ಎಂದರೇನು ?**

ಉ: ಧ್ಯಾನಮಾಡುವಾಗ ಗೋಚರವಾಗುವ ಓಂಕಾರ ಶಬ್ದದ ಅವಯವ.

ಪ್ರ ೧೨೩ : **ನಿವೃತ್ತಿಗಳು ಎಷ್ಟು ವಿಧ ?**

ಉ : ೧. ಭ್ರಮಜ ನಿವೃತ್ತಿ, ೨. ಸಹಜ ನಿವೃತ್ತಿ, ೩. ಕರ್ಮಜ ನಿವೃತ್ತಿ ಎಂದು ಮೂರು ವಿಧ.

ಪ್ರ ೧೨೪ : **ಭ್ರಮಜ ನಿವೃತ್ತಿ ಅಂದರೇನು ?**

ಉ : ಜ್ಞಾನದಿಂದ ಭ್ರಾಂತಿಯು ನಾಶವಾದ ಮೇಲೆ ಆಗುವ ಭ್ರಮಜ ತಾದಾತ್ಮ್ಯದ ನಿವೃತ್ತಿ.

ಪ್ರ ೧೨೫ : **ಸಹಜ ನಿವೃತ್ತಿ ಅಂದರೇನು ?**

ಉ : ಸಹಜ ತಾದಾತ್ಮ್ಯವು ಜ್ಞಾನದಿಂದ ಬಾಧೆಯಾದ ಮೇಲೆ ಜ್ಞಾನಿಯ ದೇಹ ಪಾತಾನಂತರ ತೋರುವ ನಿವೃತ್ತಿ.

ಪ್ರ ೧೨೬ : **ಕರ್ಮಜ ನಿವೃತ್ತಿ ಅಂದರೇನು ?**

ಉ : ಕರ್ಮಜ ತಾದಾತ್ಮ್ಯವು ಪ್ರಾರಾಬ್ಧದ ಭೋಗಾನಂತರ ಅಂತವಾಗುವ ಜ್ಞಾನಿಯ ನಿವೃತ್ತಿ.

ಪ್ರ ೧೨೭ : **ಪಾಪ ಕರ್ಮಗಳೆಷ್ಟು?**

ಉ : ೧. ಉತ್ಕೃಷ್ಟ ಪಾಪಕರ್ಮ, ೨. ಮಧ್ಯಮ ಪಾಪಕರ್ಮ, ೩. ಸಾಮಾನ್ಯ ಪಾಪಕರ್ಮ ಎಂದು ಮೂರು ವಿಧ.

ಪ್ರ ೧೨೮ : **ಉತ್ಕೃಷ್ಟ ಪಾಪಕರ್ಮವೆಂದರೇನು ?**

ಉ : ಪುಣ್ಯದ ಕಡೆಗೆ ಲಕ್ಷ್ಯವಿಲ್ಲದೆ ಬರೀ ಪಾಪದ ಕರ್ಮವನ್ನು ಮಾಡುವುದು.

ಪ್ರ ೧೨೯ : **ಮಧ್ಯಮ ಪಾಪಕರ್ಮವೆಂದರೇನು ?**

ಉ : ಪುಣ್ಯವನ್ನೂ ಪಾಪವನ್ನೂ ಸೇರಿ ಮಾಡುವುದು.

ಪ್ರ ೧೩೦ : **ಸಾಮಾನ್ಯ ಪಾಪಕರ್ಮವೆಂದರೇನು ?**

ಉ : ಪುಣ್ಯವನ್ನೇ ಹೆಚ್ಚಾಗಿ ಮಾಡುತ್ತಿದ್ದು ಅಕಸ್ಮಾತ್ತಾಗಿ ಪಾಪ ಮಾಡುವುದು.

ಪ್ರ ೧೩೧ : **ಪುಣ್ಯ ಕರ್ಮಗಳೆಷ್ಟು?**

ಉ : ಉತ್ಕೃಷ್ಟ ಪುಣ್ಯಕರ್ಮ, ೨. ಮಧ್ಯಮ ಪುಣ್ಯಕರ್ಮ, ೩. ಸಾಮಾನ್ಯ ಪುಣ್ಯಕರ್ಮ.

ಪ್ರ ೧೩೨ : **ಉತ್ಕೃಷ್ಟ ಪುಣ್ಯಕರ್ಮವೆಂದರೇನು ?**

ಉ : ಸದಾ ಪುಣ್ಯ ಕರ್ಮವನ್ನೇ ಮಾಡುವುದು.

ಪ್ರ ೧೩೩ : **ಮಧ್ಯಮ ಪುಣ್ಯಕರ್ಮವೆಂದರೇನು ?**

ಉ : ಪುಣ್ಯದ ಜೊತೆಗೆ ಪಾಪವನ್ನು ಮಾಡುವುದು.

ಪ್ರ ೧೩೪ : **ಸಾಮಾನ್ಯ ಪುಣ್ಯಕರ್ಮವೆಂದರೇನು ?**

ಉ : ಅಪ್ಪಿ ತಪ್ಪಿ ಪುಣ್ಯ ಮಾಡುವುದು.

ಪ್ರ ೧೩೫ : **ಪ್ರಾಣಾಯಾಮ ಎಷ್ಟು ವಿಧ ?**

ಉ : ೧. ಪೂರಕ, ೨. ಕುಂಭಕ, ೩. ರೇಚಕ ಎಂದು ಮೂರು ವಿಧ.

ಪ್ರ ೧೩೬ : **ಪೂರಕವೆಂದರೇನು ?**

ಉ : ಪೂರಕವೆಂದರೆ ತುಂಬುವುದು. ಹೊರಗಿನ ಗಾಳಿಯನ್ನು ನಾಸಾ ರಂಧ್ರದಿಂದ ಒಳಗೆಳೆಯುವುದು.

ಪ್ರ ೧೩೭ : **ಕುಂಭಕವೆಂದರೇನು ?**

ಉ : ನಿಲ್ಲಿಸುವುದು. ಒಳಗೆಳದ ಗಾಳಿಯನ್ನು ಅಲ್ಲಿಯೇ ನಿಲ್ಲಿಸುವುದು.

ಪ್ರ ೧೩೮ : **ರೇಚಕವೆಂದರೇನು ?**

ಉ : ರೇಚಕವೆಂದರೆ ಬಿಡುವುದು. ನಿಲ್ಲಿಸಿದ್ದನ್ನು ಹೊರಗೆ ಬಿಡುವುದು. ಒಂದು ಮಾತ್ರೆಕಾಲ ತುಂಬುವುದು, ನಾಲ್ಕು ಮಾತ್ರೆಕಾಲ ನಿಲ್ಲಿಸುವುದು, ಎರಡು ಮಾತ್ರೆಕಾಲ ಬಿಡುವುದು.

ಪ್ರ ೧೩೯ : **ಅಧ್ಯಾತ್ಮಿಕ ಪ್ರಾಣಾಯಾಮ ಎಷ್ಟು ವಿಧ ?**

ಉ : ೧. ಪೂರಕ, ೨. ಕುಂಭಕ, ೩. ರೇಚಕವೆಂದು ಮೂರು ವಿಧ.

ಪ್ರ ೧೪೦ : **ಪೂರಕ ಪ್ರಾಣಾಯಾಮವೆಂದರೇನು ?**

ಉ : ನಾನು ಬ್ರಹ್ಮವೆಂಬ ಭಾವವನ್ನು ತುಂಬುವುದು.

ಪ್ರ ೧೪೧ : **ಕುಂಭಕ ಪ್ರಾಣಾಯಾಮವೆಂದರೇನು ?**

ಉ : ತುಂಬಿದ್ದನ್ನು ಅಲ್ಲಿಯೇ ನಿಲ್ಲಿಸುವುದು.

ಪ್ರ ೧೪೨ : **ರೇಚಕ ಪ್ರಾಣಾಯಾಮವೆಂದರೇನು ?**

ಉ : ನಾನು ದೇಹವೆಂಬ ಭಾವನೆಯನ್ನು ಹೊರಗೆ ಹಾಕುವುದು.

ಪ್ರ : ೧೪೩ : **ಪ್ರಪಂಚವು ಎಷ್ಟು ವಿಧ ?**

ಉ : ೧. ಸ್ಥೂಲ ಪ್ರಪಂಚ, ೨. ಸೂಕ್ಷ್ಮ ಪ್ರಪಂಚ, ೩. ಕಾರಣ ಪ್ರಪಂಚನೆಂದು ಮೂರು ವಿಧ.

ಪ್ರ ೧೪೪ : **ಪ್ರಾರಾಬ್ಧಗಳು ಎಷ್ಟು ವಿಧ ?**

ಉ : ೧. ಪರೇಚ್ಛಾ ಪ್ರಾರಾಬ್ಧ, ೨. ಅನಿಚ್ಛಾ ಪ್ರಾರಾಬ್ಧ, ೩. ಸ್ವೇಚ್ಛಾ ಪ್ರಾರಾಬ್ಧ ಎಂದು ಮೂರು ವಿಧ.

ಪ್ರ ೧೪೫ : **ಬ್ರಹ್ಮರುಗಳೆಷ್ಟು ?**

ಉ : ಮೂರು. ೧. ವಿರಾಟ್, ೨. ಹಿರಣ್ಯಗರ್ಭ, ೩. ಈಶ್ವರ.

ಪ್ರ ೧೪೬ : **ಲಕ್ಷಣದೋಷಗಳೆಷ್ಟು?**

ಉ : ೧. ಅವ್ಯಾಪ್ತಿ ದೋಷ, ೨. ಅತಿವ್ಯಾಪ್ತಿ ದೋಷ, ೩. ಅಸಂಭವ ದೋಷ ಎಂದು ಮೂರು ವಿಧ.

ಪ್ರ ೧೪೭ : **ಅವ್ಯಾಪ್ತಿ ದೋಷವೆಂದರೇನು ?**

ಉ : ಲಕ್ಷ್ಯದ ಏಕದೇಶದಲ್ಲಿ ವರ್ತಿಸುವ ಲಕ್ಷಣ. ಉದಾ : ಬಿಳಿಯ ಹಸು.

ಪ್ರ ೧೪೮ : **ಅತಿವ್ಯಾಪ್ತಿ ದೋಷವೆಂದರೇನು ?**

ಉ : ಲಕ್ಷ್ಯದಲ್ಲಿ ವ್ಯಾಪಕವಾಗಿದ್ದು ಅಲಕ್ಷ್ಯದಲ್ಲಿ ವರ್ತಿಸುವುದು. ಉದಾ : ಕೊಂಬುಳ್ಳದ್ದು ಹಸು.

ಪ್ರ ೧೪೯ : **ಅಸಂಭವ ದೋಷವೆಂದರೇನು ?**

ಉ : ಲಕ್ಷ್ಯದಲ್ಲಿ ಇಲ್ಲದೇ ಇರುವ ಲಕ್ಷಣ. ಉದಾ : ಒಂದು ಗೊರಸು ಉಳ್ಳದ್ದು ಹಸು.

ಪ್ರ ೧೫೦ : **ಲೋಕಗಳೆಷ್ಟು?**

ಉ : ೧. ಸ್ವರ್ಗ, ೨. ಮರ್ತ್ಯ, ೩. ಪಾತಾಳಗಳೆಂದು ಮೂರು ಲೋಕಗಳು.

ಪ್ರ ೧೫೧ : **ವಾದಗಳೆಷ್ಟು** ?

ಉ : ೧. ವಾದ, ೨. ಜಲ್ಪ, ೩. ವಿತಂಡವೆಂದು ಮೂರು ವಿಧ.

ಪ್ರ ೧೫೨ : **ವಾದವೆಂದರೇನು** ?

ಉ : ತತ್ವವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ಗುರು–ಶಿಷ್ಯರು ಮಾಡುವ ಸಂವಾದ.

ಪ್ರ ೧೫೩ : **ಜಲ್ಪವೆಂದರೇನು** ?

ಉ : ತನ್ನ ಪಕ್ಷಕ್ಕೆ ಜಯವಾಗಬೇಕೆಂಬ ದೃಷ್ಟಿಯಿಂದ ಯುಕ್ತಿ ಪ್ರಮಾಣ ಕುಶಲರಾದ ಪಂಡಿತರು ಮಾಡುವ ವಾದ.

ಪ್ರ ೧೫೪ : **ವಿತಂಡವಾದವೆಂದರೇನು** ?

ಉ : ಪ್ರಮಾಣ ಯುಕ್ತಿಗಳ ಬೆಂಬಲವಿಲ್ಲದೆ ಮೂರ್ಖರು ಮಾಡುವ ವಾದ.

ಪ್ರ ೧೫೫ : **ವಿಧಿ ವಾಕ್ಯಗಳು ಎಷ್ಟು ವಿಧ** ?

ಉ : ೧. ಅಪೂರ್ವವಿಧಿ ವಾಕ್ಯ, ೨. ನಿಯಮವಿಧಿ ವಾಕ್ಯ, ೩. ಪರಿಸಂಖ್ಯಾವಿಧಿ ವಾಕ್ಯ ಎಂದು ಮೂರು ವಿಧ.

ಪ್ರ ೧೫೬ : **ಅಪೂರ್ವವಿಧಿ ವಾಕ್ಯವೆಂದರೇನು** ?

ಉ : ಅಲೌಕಿಕ ಕ್ರಿಯೆಗೆ ಸಂಬಂಧಪಟ್ಟ ವಿಧಿವಾಕ್ಯ.

ಪ್ರ ೧೫೭ : **ನಿಯಮವಿಧಿ ವಾಕ್ಯವೆಂದರೇನು** ?

ಉ : ಎರಡು ಪಕ್ಷಗಳಲ್ಲಿ ಒಂದು ಪಕ್ಷಕ್ಕೆ ಸೇರಿದ ವಿಧಾಯಕ ವಾಕ್ಯ.

ಪ್ರ ೧೫೮ : **ಪರಿಸಂಖ್ಯಾವಿಧಿ ವಾಕ್ಯವೆಂದರೇನು** ?

ಉ : ಎರಡು ಪಕ್ಷಗಳಲ್ಲಿ ಒಂದು ಪಕ್ಷವನ್ನು ನಿಷೇಧಿಸುವ ವಿಧಾಯಕ ವಾಕ್ಯ.

ಪ್ರ ೧೫೯ : **ವೇದದ ಕಾಂಡಗಳೆಷ್ಟು** ?

ಉ : ೧. ಕರ್ಮಕಾಂಡ, ೨. ಉಪಾಸನಾ ಕಾಂಡ, ೩. ಜ್ಞಾನಕಾಂಡವೆಂದು ಮೂರು ವಿಧ.

ಪ್ರ ೧೬೦ : **ಶರೀರಗಳೆಷ್ಟು** ?

ಉ : ಸ್ಥೂಲ ಶರೀರ, ೨. ಸೂಕ್ಷ್ಮ ಶರೀರ, ೩. ಕಾರಣ ಶರೀರವೆಂದು ಮೂರು ವಿಧ.

ಪ್ರ ೧೬೧ : **ಶ್ರವಣಾದಿಗಳೆಷ್ಟು ?**

ಉ : ೧. ಶ್ರವಣ, ೨. ಮನನ, ೩. ನಿಧಿಧ್ಯಾಸನವೆಂದು ಮೂರು ವಿಧ.

ಪ್ರ ೧೬೨ : **ಇವುಗಳಿಗೆ ಫಲವೇನು ?**

ಉ : ೧. ಶ್ರವಣಕ್ಕೆ ಪ್ರಮಾಣಗತ ಸಂಶಯದ ನಾಶವೇ ಫಲ. ೨. ಮನನಕ್ಕೆ ಪ್ರಮೇಯಗತ ಸಂಶಯದ ನಾಶವೇ ಫಲ. ೩. ನಿಧಿಧ್ಯಾಸನಕ್ಕೆ ವಿಪರೀತ ಬುದ್ಧಿಯ ನಾಶವೇ ಫಲ.

ಪ್ರ ೧೬೩ : **ಸಂಬಂಧಗಳೆಷ್ಟು ?**

ಉ : ೧. ಸಂಯೋಗ ಸಂಬಂಧ, ೨. ಸಮವಾಯು ಸಂಬಂಧ, ೩. ತಾದಾತ್ಮ್ಯ ಸಂಬಂಧವೆಂದು ಮೂರು ವಿಧ.

ಪ್ರ ೧೬೪ : **ಸುಷುಪ್ತಿಗಳೆಷ್ಟು ?**

ಉ : ೧. ಸುಷುಪ್ತಿ ಜಾಗ್ರತ, ೨. ಸುಷುಪ್ತಿ ಸ್ವಪ್ನ, ೩. ಸುಷುಪ್ತಿ ಸುಷುಪ್ತಿ.

ಪ್ರ ೧೬೫ : **ಸುಷುಪ್ತಿ ಜಾಗ್ರತವೆಂದರೇನು ?**

ಉ : ಅಹಂಬ್ರಹ್ಮಾಸ್ಮಿ ಎಂಬ ಸಾತ್ವಿಕ ವೃತ್ತಿಯ ಪೂರ್ವಕ ಉಂಟಾಗುವ ಸುಖ ಸುಷುಪ್ತಿ.

ಪ್ರ ೧೬೬ : **ಸುಷುಪ್ತಿ ಸ್ವಪ್ನವೆಂದರೇನು ?**

ಉ : ರಾಜಸ ವೃತ್ತಿಯ ಪೂರ್ವಕ ಉಂಟಾಗುವ ದುಃಖ ಸುಷುಪ್ತಿ.

ಪ್ರ ೧೬೭ : **ಸುಷುಪ್ತಿ ಸುಷುಪ್ತಿ ಅಂದರೇನು ?**

ಉ : ತಾಮಸ ವೃತ್ತಿಯ ಪೂರ್ವಕ ಉಂಟಾಗುವ ಜಡ ಸುಷುಪ್ತಿ.

ಪ್ರ ೧೬೮ : **ಸ್ವಪ್ನಗಳೆಷ್ಟು?**

ಉ : ೧. ಸ್ವಪ್ನ ಜಾಗ್ರತ, ೨. ಸ್ವಪ್ನ ಸ್ವಪ್ನ, ೩. ಸ್ವಪ್ನ ಸುಷುಪ್ತಿ.

ಪ್ರ ೧೬೯ : **ಸ್ವಪ್ನ ಜಾಗ್ರತವೆಂದರೇನು ?**

ಉ : ಸ್ವಪ್ನದಲ್ಲಿ ಸಾತ್ವಿಕ ವಿಷಯಗಳು ತೋರುವುದು.

ಪ್ರ ೧೭೦ : **ಸ್ವಪ್ನ ಸ್ವಪ್ನವೆಂದರೇನು ?**

ಉ : ಸ್ವಪ್ನದಲ್ಲಿ ರಜ್ಜು ಸರ್ಪ ಮೊದಲಾದ ಭ್ರಾಂತಿಗಳು ತೋರುವುದು.

ಪ್ರ ೧೭೧ : **ಸ್ವಪ್ನ ಸುಷುಪ್ತಿ ಅಂದರೇನು** ?

ಉ : ಕಂಡ ಸ್ವಪ್ನವು ನೆನಪಾಗದೆ ಇರುವುದು.

## ಚತುರ್ವಿಧ ಪದಾರ್ಥಗಳು

ಪ್ರ ೧೭೨ : **ಅನುಬಂಧಗಳೆಷ್ಟು? ಹಾಗೆಂದರೇನು** ?

ಉ : ತನ್ನ ಜ್ಞಾನವಾದ ಮೇಲೆ ಜ್ಞಾನಿಯಾದವನನ್ನು ಗ್ರಂಥದ ವಿಷಯದಲ್ಲಿ ಸಂಬಂಧಿಸುವುದು. ಈ ಅನುಬಂಧಗಳು ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧವೆಂದು ನಾಲ್ಕು ವಿಧ.

ಪ್ರ ೧೭೩ : **ಅಧಿಕಾರಿಯೆಂದರೇನು** ?

ಉ : ಅಂತಃಕರಣದಲ್ಲಿರುವ ಮಲ, ವಿಕ್ಷೇಪ, ಆವರಣಗಳೆಂಬ ಮೂರು ದೋಷಗಳ ಪೈಕಿ ಕರ್ಮೋಪಾಸನೆಗಳಿಂದ ಮಲ, ವಿಕ್ಷೇಪ ದೋಷಗಳನ್ನು ಕಳೆದುಕೊಂಡು, ಆವರಣವೆಂಬ ಒಂದೇ ದೋಷವಿರುವಾಗ ವಿವೇಕ, ವೈರಾಗ್ಯ, ಶಮಾದಿ ಷಟ್ ಸಂಪತ್ತಿ, ಮುಮುಕ್ಷುತ್ವಗಳೆಂಬ ಸಾಧನ ಚತುಷ್ಟಯ ಸಂಪನ್ನನಾದ ಪುರುಷನು ವೇದಾಂತಕ್ಕೆ ಅಧಿಕಾರಿ.

ಪ್ರ ೧೭೪ : **ವಿಷಯವೆಂದರೇನು** ?

ಉ : ಬ್ರಹ್ಮ ಹಾಗೂ ಆತ್ಮನ ಏಕತೆಯೇ ವೇದಾಂತ ಶಾಸ್ತ್ರಕ್ಕೆ ವಿಷಯ.

ಪ್ರ ೧೭೫ : **ಪ್ರಯೋಜನವೆಂದರೇನು** ?

ಉ : ಸರ್ವ ದುಃಖಗಳ ಅತ್ಯಂತ ನಿವೃತ್ತಿ ಮತ್ತು ಪರಮಾನಂದ ಪ್ರಾಪ್ತಿರೂಪವಾದ ಮೋಕ್ಷವು ವೇದಾಂತಕ್ಕೆ ಪ್ರಯೋಜನ.

ಪ್ರ ೧೭೬ : **ಸಂಬಂಧವೆಂದರೇನು** ?

ಉ : ಸಂಬಂಧಗಳು ನಾಲ್ಕು ವಿಧ.

೧. ಗ್ರಂಥಕ್ಕೂ ವಿಷಯಕ್ಕೂ ಇರುವ ಪ್ರತಿಪಾದ್ಯ ಪ್ರತಿಪಾದಕ ಸಂಬಂಧ.

೨. ಅಧಿಕಾರಿಗೂ ಫಲಕ್ಕೂ ಇರುವ ಪ್ರಾಪ್ಯ ಪ್ರಾಪಕ ಭಾವ ಸಂಬಂಧ.

೩. ಅಧಿಕಾರಿಗೂ ವಿಷಯಕ್ಕೂ ಇರುವ ಕರ್ತೃತ್ವ ಕರ್ತವ್ಯ ಸಂಬಂಧ.

೪. ಜ್ಞಾನಕ್ಕೂ ಗ್ರಂಥಕ್ಕೂ ಇರುವ ಜನ್ಯ ಜನಕ ಭಾವ ಸಂಬಂಧ.

ಪ್ರ ೧೭೭ : **ಅಂತಃಕರಣಗಳೆಂದರೇನು ?**

ಉ : ಅಂತಃಕರಣ ಒಂದೇ ಆದರೂ ಅದರ ವೃತ್ತಿಗಳು ನಾಲ್ಕು.

೧. ಮನಸ್ಸು, ೨. ಬುದ್ಧಿ, ೩. ಚಿತ್ತ, ೪. ಅಹಂಕಾರ.

೧. ಸಂಕಲ್ಪ ವಿಕಲ್ಪ ರೂಪ ವೃತ್ತಿಯೇ ಮನಸ್ಸು.

೨. ನಿಶ್ಚಯರೂಪ ವೃತ್ತಿಯೇ ಬುದ್ಧಿ.

೩. ಚಿಂತನರೂಪ ವೃತ್ತಿಯೇ ಚಿತ್ತ.

೪. ಅಹಂತ್ವಾರೂಪ ವೃತ್ತಿಯೇ ಅಹಂಕಾರ.

ಪ್ರ ೧೭೮ : **ಭಕ್ತರ ವರ್ಗಗಳೆಷ್ಟು?**

ಉ : ಭಕ್ತರ ವರ್ಗಗಳು ನಾಲ್ಕು.

೧. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ತಾಪತ್ರಯ ದಿಂದ ವ್ಯಾಕುಲನಾದವನು ಆರ್ಥ ಭಕ್ತ.

೨. ಭಗವತ್ತತ್ವವನ್ನು ಇದ್ದಕ್ಕಿದ್ದಂತೆ ತಿಳಿದುಕೊಳ್ಳಬೇಕೆಂದು ಬಯಸುವವನು ಜಿಜ್ಞಾಸು ಭಕ್ತ.

೩. ಇಹಲೋಕ ಪರಲೋಕ ಭೋಗದ ಇಚ್ಛೆ ಉಳ್ಳವನು ಅರ್ಥಾರ್ಥಿ ಭಕ್ತ.

೪. ಜೀವನ್ಮುಕ್ತ ವಿದ್ಯಾವಂತನು ಜ್ಞಾನಿ ಭಕ್ತ.

ಪ್ರ ೧೭೯ : **ಆಶ್ರಮಗಳೆಷ್ಟು?**

ಉ : ೧. ಬ್ರಹ್ಮಚರ್ಯ, ೨. ಗೃಹಸ್ಥ, ೩. ವಾನಪ್ರಸ್ಥ, ೪. ಸಂನ್ಯಾಸ ವೆಂದು ನಾಲ್ಕು ವಿಧ.

ಪ್ರ ೧೮೦ : **ಕ್ರಿಯೆಗಳೆಷ್ಟು?**

ಉ : ಕ್ರಿಯೆಯೆಂದರೆ ಕರ್ಮದ ಫಲ. ಅವು ನಾಲ್ಕು ವಿಧ: ೧. ಉತ್ಪತ್ತಿ, ೨. ಪ್ರಾಪ್ತಿ, ೩. ವಿಕಾರ, ೪. ಸಂಸ್ಕಾರ.

ಪ್ರ ೧೮೧ : **ಉತ್ಪತ್ತಿ ಅಂದರೇನು ?**

ಉ : ಉತ್ಪತ್ತಿ ಅಂದರೆ ಜನ್ಮ ಅಥವಾ ಹುಟ್ಟುವುದು. ಹಾಗೆಂದರೆ, ಕುಲಾಲನ ಕ್ರಿಯೆಯ ಫಲ ಘಟದ ಉತ್ಪತ್ತಿ.

ಪ್ರ ೧೮೨ : **ಪ್ರಾಪ್ತಿ ಅಂದರೇನು ?**

ಉ : ಗಮನವೆಂಬ ಕ್ರಿಯೆಗೆ ಬೇಕಾದ ಊರು. ಗ್ರಾಮ ಪ್ರಾಪ್ತಿ ರೂಪ ಫಲ.

ಪ್ರ ೧೮೩ : **ವಿಕಾರವೆಂದರೇನು** ?

ಉ : ಮೊದಲಿನ ರೂಪವು ಹೋಗಿ ಮತ್ತೊಂದು ರೂಪವು ಪ್ರಾಪ್ತಿಯಾಗುವುದು. ಪಾಕವೆಂಬ ಕ್ರಿಯೆಗೆ ಅನ್ನದ ವಿಕಾರ; ಅರ್ಥಾತ್ ಪಾಕವನ್ನು ಮಾಡುವುದರಿಂದ ಅಕ್ಕಿಯಲ್ಲಿ ಅನ್ನವೆಂಬ ವಿಕಾರವುಂಟಾಗುತ್ತದೆ.

ಪ್ರ ೧೮೪ : **ಸಂಸ್ಕಾರವೆಂದರೇನು ?**

ಉ : ಈ ಸಂಸ್ಕಾರವು ಮಲ ನಿವೃತ್ತಿ, ಗುಣ ಪ್ರಾಪ್ತಿಯೆಂದು ಎರಡು ವಿಧ. ವಸ್ತ್ರವನ್ನು ತೊಳೆಯುವುದೆಂಬ ಕ್ರಿಯೆಯಿಂದ ಫಲರೂಪವಾದ ಮಲ ನಿವೃತ್ತಿಯು ಒಂದನೇ ಸಂಸ್ಕಾರ.

ಬಣ್ಣದಲ್ಲಿ ವಸ್ತ್ರವನ್ನು ಅದ್ದುವುದೆಂಬ ಕ್ರಿಯೆಗೆ ವಸ್ತ್ರದಲ್ಲಿ ರಕ್ತ ಗುಣ ಉತ್ಪತ್ತಿಯಾಗುವುದೇ ಕ್ರಿಯೆ.

ಪ್ರ ೧೮೫ : **ಚಿತ್ತನಿರೋಧ ರೂಪ ಯುಕ್ತಿಗಳೆಷ್ಟು?**

ಉ : ಜ್ಞಾನವಾಸಿಷ್ಠದಲ್ಲಿ ನಾಲ್ಕು ಯುಕ್ತಿಗಳನ್ನು ಹೇಳಿದೆ : ೧. ಅಧ್ಯಾತ್ಮ ವಿದ್ಯೆ, ೨. ಸಾಧು ಸಂಗ, ೩. ವಾಸನಾ ತ್ಯಾಗ, ೪. ಪ್ರಾಣಾಯಾಮ.

ಪ್ರ ೧೮೬ : **ಪುರುಷಾರ್ಥಗಳೆಷ್ಟು**?

ಉ : ನಾಲ್ಕು. ೧. ಧರ್ಮ, ೨ ಅರ್ಥ, ೩. ಕಾಮ, ೪. ಮೋಕ್ಷ.

ಪ್ರ ೧೮೭ : **ಧರ್ಮವೆಂದರೇನು** ?

ಉ : ಸಕಾಮ ಕರ್ಮವನ್ನು ಆಚರಿಸಿದಾಗ ಅಥವಾ ನಿಷ್ಕಾಮ ಕರ್ಮವನ್ನು ಆಚರಿಸಿದಾಗ ಉತ್ಪತ್ತಿಯಾಗುವ ಪುಣ್ಯವು ಧರ್ಮವೆನಿಸುತ್ತದೆ.

ಪ್ರ ೧೮೮ : **ಅರ್ಥವೆಂದರೇನು** ?

ಉ : ಇಹಲೋಕ ಮತ್ತು ಪರಲೋಕ ಭೋಗದ ಸಾಧನವಾದ ಧನಾದಿಗಳು ಅರ್ಥ.

ಪ್ರ ೧೮೯ : **ಕಾಮವೆಂದರೇನು ?**

ಉ : ಇಹಲೋಕ ಪರಲೋಕದ ಭೋಗ.

ಪ್ರ ೧೯೦ : **ಮೋಕ್ಷವೆಂದರೇನು ?**

ಉ : ದುಃಖ ನಿವೃತ್ತಿ, ಸುಖ ಪ್ರಾಪ್ತಿ ರೂಪವಾದುದೇ ಮೋಕ್ಷ.

ಪ್ರ ೧೯೧ : **ಪೂಜೆಗೆ ಪಾತ್ರರಾರು ?**

ಉ : ಪೂಜೆ ಮಾಡಿಸಿಕೊಳ್ಳಲು ಯೋಗ್ಯರು ನಾಲ್ಕು ಜನ: ೧. ಬ್ರಹ್ಮ ನಿಷ್ಠರು, ೨. ಮುಮುಕ್ಷುಗಳು, ೩. ಭಾಗವತರು, ೪. ಸ್ವಧರ್ಮನಿಷ್ಠರು.

ಪ್ರ ೧೯೨ : **ಪ್ರಮಾಣಗಳೆಷ್ಟು?**

ಉ : ನ್ಯಾಯದರ್ಶನದಲ್ಲಿ ನಾಲ್ಕು ಪ್ರಮಾಣಗಳನ್ನು ಹೇಳಿದೆ. ೧. ಪ್ರತ್ಯಕ್ಷ ಪ್ರಮಾಣ, ೨. ಅನುಮಾನ ಪ್ರಮಾಣ, ೩. ಉಪಮಾನ ಪ್ರಮಾಣ, ೪. ಶಬ್ದ ಪ್ರಮಾಣ

ಪ್ರ ೧೯೩ : **ಬ್ರಹ್ಮಜ್ಞಾನಿಗಳಲ್ಲಿ ಎಷ್ಟು ಭೇದ ?**

ಉ : ನಾಲ್ಕು ಭೇದ. ೧. ಬ್ರಹ್ಮವಿದ್, ೨. ಬ್ರಹ್ಮವಿದ್ವರ, ೩. ಬ್ರಹ್ಮ ವಿದ್ವರೀಯ, ೪. ಬ್ರಹ್ಮವಿದ್ವರಿಷ್ಟ.

ಪ್ರ ೧೯೪ : **ಬ್ರಹ್ಮವಿದ್ ಅಂದರೆ ಯಾರು ?**

ಉ : ಸಪ್ತಜ್ಞಾನ ಭೂಮಿಕೆಗಳ ಪೈಕಿ, ನಾಲ್ಕನೆಯ ಭೂಮಿಕೆಯಲ್ಲಿ ಆರೂಢನಾದ ಜ್ಞಾನಿ.

ಪ್ರ ೧೯೫ : **ಬ್ರಹ್ಮವಿದ್ವರನೆಂದರೆ ಯಾರು ?**

ಉ : ಐದನೆಯ ಭೂಮಿಕೆಯಲ್ಲಿ ಆರೂಢನಾದ ಜ್ಞಾನಿ.

ಪ್ರ ೧೯೬ : **ಬ್ರಹ್ಮವಿದ್ವರೀಯನೆಂದರೆ ಯಾರು ?**

ಉ : ಆರನೆಯ ಭೂಮಿಕೆಯಲ್ಲಿ ಆರೂಢನಾದ ಜ್ಞಾನಿ.

ಪ್ರ ೧೯೭ : **ಬ್ರಹ್ಮವಿದ್ವರಿಷ್ಠನೆಂದರೆ ಯಾರು ?**

ಉ : ಏಳನೆಯ ಭೂಮಿಕೆಯಲ್ಲಿ ಆರೂಢನಾದ ಜ್ಞಾನಿ.

ಪ್ರ ೧೯೮ : **ಭೂತಗ್ರಾಮಗಳೆಷ್ಟು?**

ಉ : ಭೂತಗ್ರಾಮಗಳು ನಾಲ್ಕು. ೧. ಜರಾಯುಜ, ೨. ಅಂಡಜ, ೩. ಉದ್ಭಿಜ, ೪. ಸ್ವೇದಜ.

ಪ್ರ ೧೯೯ : **ಜರಾಯುಜವೆಂದರೇನು ?**

ಉ : ಜರಾಯು ಎಂಬ ಚೀಲದಿಂದ ಉತ್ಪನ್ನವಾದ ಮನುಷ್ಯ, ಪಶು, ಮೊದಲಾದುವುಗಳು.

ಪ್ರ ೨೦೦ : **ಅಂಡಜವೆಂದರೇನು** ?

ಉ : ತತ್ತಿಯನ್ನು ಒಡೆದು ಹುಟ್ಟಿದ ಪಕ್ಷಿ, ಸರ್ಪ, ಮೊದಲಾದುವುಗಳು.

ಪ್ರ ೨೦೧ : **ಉದ್ಭಿಜವೆಂದರೇನು** ?

ಉ : ಪೃಥ್ವಿಯನ್ನು ಒಡೆದು ಹುಟ್ಟುವ ವೃಕ್ಷ ಮೊದಲಾದುವುಗಳು.

ಪ್ರ ೨೦೨ : **ಸ್ವೇದಜವೆಂದರೇನು** ?

ಉ : ಸ್ವೇದವೆಂದರೆ ಬೆವರು. ಬೆವರಿನಿಂದ ಹುಟ್ಟುವ ಹೇನು, ಕೂರೆ, ಮೊದಲಾದುವುಗಳು.

ಪ್ರ ೨೦೩ : **ಸದ್ಗುಣಗಳೆಷ್ಟು**?

ಉ : ನಾಲ್ಕು. ೧. ಮೈತ್ರಿ, ೨. ಕರುಣ, ೩. ಮುದಿತ, ೪. ಉಪೇಕ್ಷಾ.

ಪ್ರ ೨೦೪ : **ಮೈತ್ರಿಯೆಂದರೇನು** ?

ಉ : ಈಶ್ವರ ಭಕ್ತರಲ್ಲಿ, ಜ್ಞಾನಿಗಳಲ್ಲಿ, ಸಾಧುಗಳಲ್ಲಿ, ತನಗಿಂತ ಶ್ರೇಷ್ಠರಾದವರಲ್ಲಿ ಮಿತ್ರತ್ವವನ್ನಿಡುವುದು.

ಪ್ರ ೨೦೫ : **ಕರುಣಾ ಎಂದರೇನು** ?

ಉ : ದುಃಖಿಗಳಲ್ಲಿ, ದೀನರಲ್ಲಿ, ರೋಗಿಗಳಲ್ಲಿ, ಅಜ್ಞಾನಿಗಳಲ್ಲಿ ಅಂದರೆ ತನಗಿಂತ ನಿಕೃಷ್ಟರಾದವರಲ್ಲಿ ದಯೆ ಇರುವುದು.

ಪ್ರ ೨೦೬ : **ಮುದಿತಾ ಎಂದರೇನು** ?

ಉ : ಮುದಿತಾ ಎಂದರೆ ಪ್ರೀತಿ. ಪುಣ್ಯವಂತರಲ್ಲಿ, ಶ್ರೇಷ್ಠ ಗುಣವುಳ್ಳವರಲ್ಲಿ, ಈಶ್ವರ ಭಕ್ತರಲ್ಲಿ, ತನಗೆ ಸಜಾತೀಯರಾದವರಲ್ಲಿ ಇರುವ ಪ್ರೀತಿ.

ಪ್ರ ೨೦೭ : **ಉಪೇಕ್ಷಾ ಅಂದರೇನು** ?

ಉ : ಉಪೇಕ್ಷಾ ಅಂದರೆ ಉದಾಸೀನ ಭಾವ. ಪಾಪಿಷ್ಟರಲ್ಲಿ, ದುರ್ಗುಣಿಗಳಲ್ಲಿ, ದ್ವೇಷಿಗಳಾದ ಪಾಮರರಲ್ಲಿ, ಜ್ಞಾನವನ್ನೂ ಜ್ಞಾನಿಗಳನ್ನೂ ದೂಷಿಸುವವರಲ್ಲಿ ರಾಗದ್ವೇಷವಿಲ್ಲದೆ ಉದಾಸೀನನಾಗಿರುವುದು.

ಪ್ರ ೨೦೮ : **ಮೋಕ್ಷಭವನದ ದ್ವಾರಪಾಲಕರು ಎಷ್ಟು ಜನ** ?

ಉ : ನಾಲ್ಕು ಜನ. ೧. ಶಮ, ೨. ಸಂತೋಷ, ೩. ವಿಚಾರ, ೪. ಸತ್ಸಂಗ.

ಪ್ರ ೨೦೯ : **ಯೋಗ ಭೂಮಿಕೆಗಳೆಷ್ಟು?**

ಉ : ನಾಲ್ಕು. ೧. ಪ್ರಾಣಲಯ, ೨. ಮನೋಲಯ, ೩. ಬುದ್ಧಿ ಲಯ, ೪. ಅಹಂಕಾರಲಯ.

ಪ್ರ ೨೧೦ : **ವರ್ಣಗಳೆಷ್ಟು?**

ಉ : ೧. ಬ್ರಾಹ್ಮಣ, ೨. ಕ್ಷತ್ರಿಯ, ೩. ವೈಶ್ಯ, ೪. ಶೂದ್ರರೆಂದು ನಾಲ್ಕು ವಿಧ. ೧. ಬ್ರಾಹ್ಮಣರೆಂದರೆ ಶಿಕ್ಷಕ ವರ್ಗ; ೨. ಕ್ಷತ್ರಿಯರೆಂದರೆ ರಕ್ಷಕ ವರ್ಗ ; ೩. ವೈಶ್ಯರೆಂದರೆ ವಣಿಕ ವರ್ಗ ; ೪. ಶೂದ್ರರೆಂದರೆ ಶ್ರಮಿಕ ವರ್ಗ. ಒಬ್ಬನೇ ಮನುಷ್ಯನು ಶಾಸ್ತ್ರ ಜ್ಞಾನಿಯಾದರೆ ಬ್ರಾಹ್ಮಣನಾಗುತ್ತಾನೆ ; ತನ್ನನ್ನು ತಾನು ರಕ್ಷಿಸಿಕೊಂಡಾಗ ಕ್ಷತ್ರಿಯನಾಗುತ್ತಾನೆ; ಕೊಡುವ ತೆಗೆದುಕೊಳ್ಳುವ ಪ್ರಸಂಗದಲ್ಲಿ ವೈಶ್ಯನಾಗುತ್ತಾನೆ; ಮತ್ತು ತನ್ನ ಬಟ್ಟೆಯನ್ನು ತಾನು ತೊಳೆಯುವಾಗ ಶೂದ್ರನಾಗುತ್ತಾನೆ.

ಪ್ರ ೨೧೧ : **ಜ್ಞಾನ ಪ್ರತಿಬಂಧಕಗಳೆಷ್ಟು?**

ಉ : ೧. ವಿಷಯಾಸಕ್ತಿ, ೨. ಬುದ್ಧಿಮಾಂದ್ಯ, ೩. ಕುತರ್ಕ, ೪. ವಿಪರ್ಯ ದುರಾಗ್ರಹ – ಇವು ನಾಲ್ಕು ವರ್ತಮಾನ ಪ್ರತಿಬಂಧಕಗಳು.

ಪ್ರ ೨೧೨ : **ಇವುಗಳ ನಿವೃತ್ತಿಗೆ ಉಪಾಯಗಳೇನು ?**

ಉ : ಶಮಾದಿಗಳು ವಿಷಯಾಸಕ್ತಿಯೆಂಬ ಪ್ರತಿಬಂಧಕ ನಿವೃತ್ತಿಯ ಉಪಾಯ. ಶ್ರವಣ ಬುದ್ಧಿಮಾಂದ್ಯವೆಂಬ ಪ್ರತಿಬಂಧಕ ನಿವೃತ್ತಿಯ ಉಪಾಯ. ಮನನವು ಕುತರ್ಕವೆಂಬ ಪ್ರತಿಬಂಧಕ ನಿವೃತ್ತಿಯ ಉಪಾಯ. ನಿಧಿಧ್ಯಾಸನವು ವಿಪರ್ಯ ದುರಾಗ್ರಹವೆಂಬ ಪ್ರತಿಬಂಧಕ ನಿವೃತ್ತಿಯ ಉಪಾಯ.

ಪ್ರ ೨೧೩ : **ವಿವೇಕಾದಿಗಳೆಷ್ಟು?**

ಉ : ೧. ವಿವೇಕ, ೨. ವೈರಾಗ್ಯ, ೩. ಶಮಾದಿ ಷಟ್ ಸಂಪತ್ತಿ, ೪. ಮುಮುಕ್ಷುತ್ವಗಳೆಂದು ನಾಲ್ಕು.

ಪ್ರ ೨೧೪ : **ವೇದಗಳೆಷ್ಟು?**

ಉ : ೧. ಋಗ್ವೇದ, ೨. ಯಜುರ್ವೇದ, ೩. ಸಾಮವೇದ, ೪. ಅಥರ್ವಣ ವೇದವೆಂದು ನಾಲ್ಕು.

ಪ್ರ ೨೧೫ : **ಶಬ್ದ ಪ್ರವೃತ್ತಿಗೆ ನಿಮಿತ್ತಗಳೆಷ್ಟು?**

ಉ : ನಾಲ್ಕು. ೧. ಜಾತಿ, ೨. ಗುಣ, ೩. ಕ್ರಿಯಾ, ೪. ಸಂಬಂಧ.

ಪ್ರ ೨೧೬ : **ಸಂನ್ಯಾಸಗಳೆಷ್ಟು?**

ಉ : ೧. ಕುಟೀಚಕ, ೨. ಬಹೂದಕ, ೩. ಹಂಸ, ೪. ಪರಮಹಂಸ.

ಪ್ರ ೨೧೭ : **ಕುಟೀಚಕನೆಂದರೇನು ?**

ಉ : ತೀರ್ಥಯಾತ್ರೆಗಳನ್ನು ಮಾಡಲು ಅಸಮರ್ಥನಾದವನು. ಒಂದು ಕಡೆ ಕುಳಿತುಕೊಂಡಿರುವವನು.

ಪ್ರ ೨೧೮ : **ಬಹೂದಕನೆಂದರೇನು ?**

ಉ : ಒಂದು ಕಡೆ ಇರದೆ ಊರು ಊರು ತಿರುಗುವವನು.

ಪ್ರ ೨೧೯ : **ಹಂಸನೆಂದರೇನು** ?

ಉ : ಜ್ಞಾನಿಗಳ ಸಮೂಹದಲ್ಲಿ ಸೇರಿ ಆತ್ಮಾನಾತ್ಮ ವಿವೇಕವನ್ನು ಮಾಡುವವನು.

ಪ್ರ ೨೨೦ : **ಪರಮಹಂಸನೆಂದರೇನು ?**

ಉ : ಶ್ರೋತ್ರೀಯ ಬ್ರಹ್ಮನಿಷ್ಠನು.

ಪ್ರ ೨೨೧ : **ಯೋಗಶಾಸ್ತ್ರದಲ್ಲಿ ಹೇಳಿದ ಸಮಾಧಿ ವಿಘ್ನಗಳೆಷ್ಟು?**

ಉ : ನಾಲ್ಕು. ೧. ಲಯ, ೨. ವಿಕ್ಷೇಪ, ೩. ಕಷಾಯ, ೪. ರಸಾಸ್ವಾದ.

ಪ್ರ ೨೨೨ : **ಸ್ಪರ್ಶಗಳೆಷ್ಟು?**

ಉ : ನಾಲ್ಕು. ೧. ಶೀತ, ೨. ಉಷ್ಣ, ೩. ಕೋಮಲ, ೪. ಕಠಿಣ.

## ಪಂಚವಿಧ ಪದಾರ್ಥಗಳು

ಪ್ರ ೨೨೩ : **ಅಭಾವಗಳೆಷ್ಟು?**

ಉ : ಅಭಾವಗಳೆಂದರೆ ನಾಸ್ತಿ ಪ್ರತೀತಿಗೆ ವಿಷಯ. ಅವು ಐದು. ೧. ಪ್ರಾಗಭಾವ ಅಂದರೆ ಪೂರ್ವದಲ್ಲಿದ್ದ ಅಭಾವ, ೨. ಪ್ರಧ್ವಾಂಸಾಭಾವ, ೩. ಅನ್ಯೋನ್ಯಾಭಾವ, ೪. ಅತ್ಯಂತಾಭಾವ, ೫. ಸಾಮಾಯಿಕಾ ಅಭಾವ.

ಪ್ರ ೨೨೪ : **ಪ್ರಾಗಭಾವನೆಂದರೇನು** ?

ಉ : ಕಾರ್ಯೋತ್ಪತ್ತಿಗಿಂತ ಮೊದಲಿರುವ ಕಾರ್ಯದ ಅಭಾವ.

ಪ್ರ ೨೨೫ : **ಪ್ರಧ್ವಂಸಾಭಾವವೆಂದರೇನು ?**

ಉ : ನಾಶವಾದ ಮೇಲೆ ಇರುವ ಅಭಾವ.

ಪ್ರ ೨೨೬ : **ಅನ್ಯೋನ್ಯಾಭಾವವೆಂದರೇನು ?**

ಉ : ಪರಸ್ಪರದಲ್ಲಿ ಇರುವ ಪರಸ್ಪರಾಭಾವ. ಅಂದರೆ ಘಟ ಪಟದ ಭೇದ.

ಪ್ರ ೨೨೭ : **ಅತ್ಯಂತಾಭಾವವೆಂದರೇನು ?**

ಉ : ಮೂರೂ ಕಾಲದಲ್ಲಿ ಇರುವ ಅಭಾವ. ಅಂದರೆ ವಾಯುವಿನಲ್ಲಿ ರೂಪದ ಅಭಾವ ; ಅದರಂತೆ ಬ್ರಹ್ಮದಲ್ಲಿ ಪ್ರಪಂಚದ ಅಭಾವ.

ಪ್ರ ೨೨೮ : **ಸಾಮಾಯಿಕಾ ಅಭಾವವೆಂದರೇನು ?**

ಉ : ಒಂದು ಸಮಯದಲ್ಲಿದ್ದು ಮತ್ತೊಂದು ಸಮಯದಲ್ಲಿ ಇಲ್ಲದಿರುವ ಅಭಾವ. "ಭೂತಲೇ ಘಟನಾಸ್ತಿ."

ಪ್ರ ೨೨೯ : **ಅಜ್ಞಾನದ ಭೇದಗಳೆಷ್ಟು?**

ಉ : ಐದು. ೧. ಮಾಯಾ ಅವಿದ್ಯಾರೂಪ ಅಜ್ಞಾನ, ೨. ಜ್ಞಾನ ಕ್ರಿಯಾಶಕ್ತಿರೂಪ ಅಜ್ಞಾನ, ೩. ವಿಕ್ಷೇಪ ಆವರಣರೂಪ ಅಜ್ಞಾನ, ೪. ಸಮಷ್ಟಿ ವ್ಯಷ್ಟಿರೂಪ ಅಜ್ಞಾನ, ಮತ್ತು ೫. ಕಾರಣರೂಪ ಅಜ್ಞಾನ.

ಪ್ರ ೨೩೦ : **ಮಾಯಾ ಅವಿದ್ಯಾರೂಪ ಅಜ್ಞಾನವೆಂದರೇನು ?**

ಉ : ವೇದಾಂತವನ್ನು ತಿಳಿದ ಕೆಲವು ಮಹನೀಯರು ಅಂದರೆ ವಿದ್ಯಾರಣ್ಯಸ್ವಾಮಿ ಮೊದಲಾದವರು ಮಾಯಾ ಅಂದರೆ ಈಶ್ವರನ ಉಪಾಧಿಯಾದ ಸಮಷ್ಟಿ ಅಜ್ಞಾನವನ್ನು ಅಜ್ಞಾನವೆಂದು ಹೇಳುತ್ತಾರೆ. ಮತ್ತೆ ಕೆಲವು ಮಹನೀಯರು ಅವಿದ್ಯೆ ಅಂದರೆ ಜೀವನ ಉಪಾಧಿಯಾದ ವ್ಯಷ್ಟಿ ಅಜ್ಞಾನವನ್ನು ಅಜ್ಞಾನವೆನ್ನುತ್ತಾರೆ. ಸಾರಾಂಶವೇನೆಂದರೆ, ಈಶ್ವರನ ಉಪಾಧಿಯಾದ ಸಮಷ್ಟಿ ಅಜ್ಞಾನವು ಮಾಯೆ ಎಂತಲೂ, ಜೀವನ ಉಪಾಧಿಯಾದ ವ್ಯಷ್ಟಿ ಅಜ್ಞಾನವು ಅವಿದ್ಯೆ ಎಂತಲೂ ತಿಳಿಯಬೇಕು.

ಪ್ರ ೨೩೧ : **ಜ್ಞಾನ ಕ್ರಿಯಾಶಕ್ತಿರೂಪವಾದ ಅಜ್ಞಾನವೆಂದರೇನು?**

ಉ : ಕೆಲವು ವೇದಾಂತಿಗಳು ಅಜ್ಞಾನವು ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಉಳ್ಳದ್ದೆಂದು ಒಪ್ಪಿಕೊಂಡಿದ್ದಾರೆ. ಹಾಗೆಂದರೆ ಪ್ರಪಂಚವನ್ನು

ಉತ್ಪತ್ತಿ ಮಾಡುವುದು ಜ್ಞಾನಶಕ್ತಿ. ಉತ್ಪತ್ತಿಯಾದ ಪ್ರಪಂಚವನ್ನು ಪೋಷಿಸುವುದು ಕ್ರಿಯಾಶಕ್ತಿ.

ಪ್ರ ೨೩೨ : **ಅಜ್ಞಾನವು ಆವರಣ ವಿಕ್ಷೇಪ ರೂಪವಾದದ್ದು ಅಂದರೇನು ?**

ಉ : ಅಜ್ಞಾನಕ್ಕೆ ಎರಡು ಶಕ್ತಿಗಳು : ಆವರಣ, ವಿಕ್ಷೇಪ. ಆವರಣವೆಂದರೆ ಮುಚ್ಚುವುದು. ವಿಕ್ಷೇಪವೆಂದರೆ ಇಲ್ಲದ್ದನ್ನು ತೋರಿಸುವುದು. ಉದಾ : ನಿದ್ರೆ. ನಿದ್ರೆಯು ಸಾಕ್ಷಿಯನ್ನು ಮುಚ್ಚಿ ಇಲ್ಲದ ಸ್ವಪ್ನವನ್ನು ತೋರಿಸುತ್ತದೆ.

ಪ್ರ ೨೩೩ : **ಸಮಷ್ಟಿ-ವ್ಯಷ್ಟಿರೂಪ ಅಜ್ಞಾನವೆಂದರೇನು ?**

ಉ : ಕೆಲವರು ಅಜ್ಞಾನವನ್ನು ಸಮಷ್ಟಿ ಈಶ್ವರನ ಉಪಾಧಿ ಎನ್ನುತ್ತಾರೆ. ಮತ್ತೆ ಕೆಲವರು ವ್ಯಷ್ಟಿಜೀವನ ಉಪಾಧಿಯನ್ನು ಅಜ್ಞಾನವೆನ್ನುತ್ತಾರೆ.

ಪ್ರ ೨೩೪ : **ಕಾರಣರೂಪ ಅಜ್ಞಾನವೆಂದರೇನು ?**

ಉ : ಇಲ್ಲಿ ಕಾರಣವೆಂದರೆ ಉಪಾದಾನ ಕಾರಣ. ಪ್ರಪಂಚಕ್ಕೆ ಅಜ್ಞಾನವೇ ಉಪಾದಾನ ಕಾರಣ. ಈ ಪಕ್ಷದವರು ಮೂಲ ಪ್ರಕೃತಿಯನ್ನು ಈಶ್ವರನ ಉಪಾಧಿಯೆನ್ನುತ್ತಾರೆ. ಅಂತಃಕರಣವನ್ನು ಜೀವನ ಉಪಾಧಿಯೆನ್ನುತ್ತಾರೆ.

ಪ್ರ ೨೩೫ : **ಉಪವಾಯುಗಳೆಷ್ಟು? ಅವುಗಳ ಹೆಸರೇನು ? ಅವುಗಳ ಕ್ರಿಯೆಯೇನು ?**

ಉ : ಐದು ವಿಧ. ಅವುಗಳಿಗೆ ೧. ನಾಗ, ೨. ಕೂರ್ಮ, ೩. ಕೃಕರ, ೪. ದೇವದತ್ತ, ೫. ಧನಂಜಯವೆಂದು ಹೆಸರು.

೧. ತೇಗುವುದಕ್ಕೆ ಹೇತುವಾದದ್ದು ನಾಗವಾಯು.

೨. ಕಣ್ಣನ್ನು ಮುಚ್ಚಲು ತೆಗೆಯಲು ಹೇತುವಾದದ್ದು ಕೂರ್ಮವಾಯು.

೩. ಸೀನುವುದಕ್ಕೆ ಹೇತುವಾದದ್ದು ಕೃಕರವಾಯು.

೪. ಆಕಳಿಕೆಗೆ ಹೇತುವಾದದ್ದು ದೇವದತ್ತವಾಯು.

೫. ದೇಹಪುಷ್ಟಿಗೆ ಹೇತುವಾದದ್ದು ಧನಂಜಯವಾಯು.

ಪ್ರ ೨೩೬ : **ಕರ್ಮಗಳು ಎಷ್ಟು ವಿಧ ?**

ಉ : ೧. ನಿತ್ಯ, ೨. ನೈಮಿತ್ತಿಕ, ೩. ಕಾಮ್ಯ, ೪. ಪ್ರಾಯಶ್ಚಿತ್ತ, ೫. ನಿಷಿದ್ಧವೆಂದು ಐದು ವಿಧ.

ಪ್ರ ೨೩೭ : **ನಿತ್ಯಕರ್ಮವೆಂದರೇನು ?**

ಉ : ಪ್ರತಿನಿತ್ಯವೂ ತಪ್ಪದೆ ಮಾಡಬೇಕಾದ ವಿದ್ಯುಕ್ತವಾದ ಸ್ನಾನ, ಸಂಧ್ಯಾದಿ ಕರ್ಮಗಳು.

ಪ್ರ ೨೩೮ : **ನೈಮಿತ್ತಿಕ ಕರ್ಮವೆಂದರೇನು ?**

ಉ : ಯಾವುದಾದರೊಂದು ನಿಮಿತ್ಯದಿಂದ ವಿಧಿಸಲ್ಪಟ್ಟಿರುವ ಕರ್ಮಗಳು, ಅಂದರೆ ಗ್ರಹಣ ಶ್ರಾದ್ಧಾದಿ ಕರ್ಮಗಳು.

ಪ್ರ ೨೩೯ : **ಕಾಮ್ಯಕರ್ಮವೆಂದರೇನು ?**

ಉ : ಯಾವುದಾದರೊಂದು ಕೋರಿಕೆಯಿಂದ ವಿಧಿಸಲ್ಪಟ್ಟಿರುವ ಕರ್ಮಗಳು ಕಾಮ್ಯ ಕರ್ಮಗಳು.

ಪ್ರ ೨೪೦ : **ಪ್ರಾಯಶ್ಚಿತ್ತ ಕರ್ಮವೆಂದರೇನು ?**

ಉ : ಪಾಪದ ನಿವೃತ್ತಿಗೋಸ್ಕರ ವಿಧಿಸಲ್ಪಟ್ಟ ಕರ್ಮಗಳು.

ಪ್ರ ೨೪೧ : **ನಿಷಿದ್ಧ ಕರ್ಮವೆಂದರೇನು ?**

ಉ : ಶಾಸ್ತ್ರದಲ್ಲಿ ಮಾಡಬಾರದೆಂದು ನಿರ್ದೇಶಿಸಲ್ಪಟ್ಟ ಕರ್ಮಗಳು ಅಂದರೆ ಬ್ರಹ್ಮಹತ್ಯಾದಿಗಳು.

ಪ್ರ ೨೪೨ : **ಕರ್ಮೇಂದ್ರಿಯಗಳೆಷ್ಟು**

ಉ : ೧. ವಾಕ್, ೨. ಪಾಣಿ, ೩. ಪಾದ, ೪. ಉಪಸ್ಥ, ೫. ಗುದವೆಂದು ಐದು ವಿಧ.

ಪ್ರ ೨೪೩ : **ಕೋಶಗಳೆಷ್ಟು?**

ಉ : ೧. ಅನ್ನಮಯ ಕೋಶ, ೨. ಪ್ರಾಣಮಯ ಕೋಶ, ೩. ಮನೋಮಯ ಕೋಶ, ೪. ವಿಜ್ಞಾನಮಯ ಕೋಶ, ೫. ಆನಂದಮಯ ಕೋಶವೆಂದು ಐದು ವಿಧ.

ಪ್ರ ೨೪೪ : **ಕ್ಲೇಶಗಳೆಷ್ಟು?**

ಉ : ೧. ಅವಿದ್ಯೆ, ೨. ಅಸ್ಮಿತೆ, ೩. ರಾಗ, ೪. ದ್ವೇಷ, ೫. ಅಭಿನಿವೇಶ ಎಂದು ಕ್ಲೇಶಗಳು ಐದು.

ಪ್ರ ೨೪೫ : **ಅವಿದ್ಯೆ ಎಷ್ಟು ವಿಧ?**

ಉ : ಇದು ಎರಡು ವಿಧ. ೧. ಕಾರಣ ಅವಿದ್ಯೆ, ೨. ಕಾರ್ಯ ಅವಿದ್ಯೆ.

ಪ್ರ ೨೪೬ : **ಕಾರಣ ಅವಿದ್ಯೆ ಎಂದರೇನು ?**

ಉ : ಅವಿಚಾರ ಕಾಲದಲ್ಲಿದ್ದು ವಿಚಾರವು ಆರಂಭವಾಗುತ್ತಲೇ ಇಲ್ಲದಂತಾಗುವುದು.

ಪ್ರ ೨೪೭ : **ಕಾರಣ ಅವಿದ್ಯೆ ಎಂದರೇನು ?**

ಉ : ಇದು ನಾಲ್ಕು ವಿಧ. ೧. ಅನಿತ್ಯ ಪದಾರ್ಥದಲ್ಲಿ ನಿತ್ಯಬುದ್ಧಿ, ೨. ಅನಾತ್ಮ ಪದಾರ್ಥದಲ್ಲಿ ಆತ್ಮಬುದ್ಧಿ, ೩. ದುಃಖಕರ ವಸ್ತುವಿನಲ್ಲಿ ಸುಖ ಬುದ್ಧಿ, ೪. ಅಶುಚಿ ವಸ್ತುವಿನಲ್ಲಿ ಶುಚಿಬುದ್ಧಿ. ಇವು ಕಾರ್ಯ ಅವಿದ್ಯೆಗಳು.

ಪ್ರ ೨೪೮: **ಅಸ್ಮಿತೆ ಎಂದರೇನು ?**

ಉ : ಸಾಕ್ಷಿಯಾದ ಆತ್ಮನ ಮತ್ತು ದೃಶ್ಯವಾದ ಬುದ್ಧಿಯ ಏಕತ್ವದ ಅಂದರೆ ಸಾಮಾನ್ಯ ಅಹಂಕಾರ.

ಪ್ರ ೨೪೯ : **ರಾಗವೆಂದರೇನು ?**

ಉ : ವಿಷಯಗಳಲ್ಲಿ ದೃಢವಾದ ಆಸಕ್ತಿ.

ಪ್ರ ೨೫೦ : **ದ್ವೇಷವೆಂದರೇನು ?**

ಉ : ಪ್ರತಿಕೂಲ ವಸ್ತುವಿನಲ್ಲಿರುವ ಕ್ರೋಧ ವೃತ್ತಿ.

ಪ್ರ ೨೫೧ : **ಅಭಿನಿವೇಶನವೆಂದರೇನು ?**

ಉ : ಮರಣ ಭಯ.

ಪ್ರ ೨೫೨ : **ಖ್ಯಾತಿಗಳೆಷ್ಟು?**

ಉ : ೧. ಅಸತ್ ಖ್ಯಾತಿ, ೨. ಆತ್ಮಖ್ಯಾತಿ, ೩. ಅನ್ಯಥಾ ಖ್ಯಾತಿ, ೪. ಅಖ್ಯಾತಿ, ೫. ಅನಿರ್ವಚನೀಯ ಖ್ಯಾತಿ ಎಂದು ಐದು ವಿಧ.

ಪ್ರ ೨೫೩ : **ಅಸತ್ ಖ್ಯಾತಿ ಎಂದರೇನು ?**

ಉ : ಇದು ಶೂನ್ಯವಾದಿಗಳ ಮತ. ಖ್ಯಾತಿ ಎಂದರೆ ಪ್ರತೀತಿ. ಶೂನ್ಯವಾದಿಗಳು ಅಸತ್ತಾಗಿರುವ ಸರ್ಪವು ರಜ್ಜುವಿನಲ್ಲಿ ಪ್ರತೀತಿಯಾಗುತ್ತದೆ ಎಂದು ಹೇಳುತ್ತಾರೆ.

ಪ್ರ ೨೫೪ : **ಆತ್ಮಖ್ಯಾತಿ ಎಂದರೇನು ?**

ಉ : ಇದು ಕ್ಷಣಿಕ ವಿಜ್ಞಾನಿ ಬೌದ್ಧರ ಮತ. ಅವರು ರಜ್ಜು ಸರ್ಪದ

ವಿಷಯದಲ್ಲಿ ಕ್ಷಣಿಕ ಬುದ್ಧಿರೂಪವಾದ ಆತ್ಮನು ಸರ್ಪರೂಪದಿಂದ ಪ್ರತೀತಿ ಯಾಗುತ್ತಾನೆ, ಹೊರಗೆ ರಜ್ಜುವಿನಲ್ಲಿ ಸರ್ಪವು ಇಲ್ಲವೇ ಇಲ್ಲ ಎಂದು ಹೇಳು ತ್ತಾರೆ.

ಪ್ರ ೨೫೫ : **ಅನ್ಯಥಾ ಖ್ಯಾತಿ ಎಂದರೇನು** ?

ಉ: ಇದು ನೈಯ್ಯಾಯಿಕರ ಮತ. ಅನ್ಯಥಾ ಖ್ಯಾತಿ ಎಂದರೆ ಒಂದೆಡೆ ಯಲ್ಲಿ ಇದ್ದದ್ದು ಮತ್ತೊಂದೆಡೆಯಲ್ಲಿ ತೋರುವುದು. ದೂರ ದೇಶದಲ್ಲಿ ಹುತ್ತ ಮೊದಲಾದ ಸ್ಥಳದಲ್ಲಿ ಇದ್ದ ಸರ್ಪವು ದೋಷದ ಬಲದಿಂದ ರಜ್ಜುವಿನಲ್ಲಿ ತೋರುತ್ತದೆ ಎಂದು ಹೇಳುತ್ತಾರೆ. ಅಂದರೆ ರಜ್ಜುರೂಪ ಜ್ಞೇಯವೇ ಸರ್ಪರೂಪದಿಂದ ಪ್ರತೀತಿಯಾಗುತ್ತದೆ ಎನ್ನುವುದೇ ಅವರ ಅಭಿಪ್ರಾಯ.

ಪ್ರ ೨೫೬ : **ಅಖ್ಯಾತಿ ಎಂದರೇನು** ?

ಉ : ಇದು ಸಾಂಖ್ಯ ಮತ್ತು ಪ್ರಭಾಕರರ ಮತ. ಇವರು ಹೇಳುವು ದೇನೆಂದರೆ, "ಇದು ಸರ್ಪ" ಎಂಬಲ್ಲಿ ಎರಡು ಪದಗಳಿರುತ್ತವೆ. 'ಇದು' ಎಂಬ ಅಂಶವು ರಜ್ಜುವಿನ ಸಾಮಾನ್ಯಾಂಶ. ಇದು ಪ್ರತ್ಯಕ್ಷ ಜ್ಞಾನ. 'ಇದು ಸರ್ಪ' ಎಂಬುದು ಹಿಂದೆ ನೋಡಿದ ಸರ್ಪದ ಸ್ಮೃತಿ. ಈಗಿರುವ ಎರಡು ಜ್ಞಾನಗಳನ್ನು ಎರಡೆಂದು ತಿಳಿಯದ ಅಜ್ಞಾನದಿಂದ ಸರ್ಪವಾಗಿ ತೋರುತ್ತದೆ.

ಪ್ರ ೨೫೭ : **ಅನಿರ್ವಚನೀಯ ಖ್ಯಾತಿ ಎಂದರೇನು** ?

ಉ : ಇದು ವೇದಾಂತದ ಮತ. ರಜ್ಜುವನ್ನು ರಜ್ಜುವೆಂದು ತಿಳಿ ಯದ ಅಜ್ಞಾನದಿಂದ ಸರ್ಪವು ಅನಿರ್ವಚನೀಯವಾಗಿ ಹುಟ್ಟುತ್ತದೆ. ಈ ಸರ್ಪವು ಸತ್ತಿಗಿಂತಲೂ, ಅಸತ್ತಿಗಿಂತಲೂ ವಿಲಕ್ಷಣವಾದುದರಿಂದ ಅನಿರ್ವಚ ನೀಯವೆಂದು ಹೇಳಿಸಿಕೊಳ್ಳುತ್ತದೆ. ಅನಿರ್ವಚನೀಯವೆಂದರೆ ಹೀಗೆಂದು ಹೇಳಲಿಕ್ಕೆ ಬಾರದ್ದು

ಪ್ರ ೨೫೮ : **ಜೀವನ್ಮುಕ್ತಿ ಅಂದರೇನು** ?

ಉ : ತನ್ನನ್ನು ಬ್ರಹ್ಮವೆಂದು ದೃಢವಾಗಿ ಅಪರೋಕ್ಷವಾಗಿ ತಿಳಿಯು ವುದು ಜೀವನ್ಮುಕ್ತಿ. ಇದು ಜ್ಞಾನಿಗೆ ಜ್ಞಾನದ ಸಮಕಾಲದಲ್ಲಿಯೇ ಸಿದ್ಧ ವಾಗಿರುತ್ತದೆ. ಹೀಗಿದ್ದ ಮೇಲೆ ಜೀವನ್ಮುಕ್ತಿಗೆ ಪ್ರಯೋಜನಗಳ ಅಗತ್ಯವೇ ಇಲ್ಲ. ಆದರೂ ಇಲ್ಲಿ ಜೀವನ್ಮುಕ್ತಿಯೆಂಬ ಪದಕ್ಕೆ ಜೀವನ್ಮುಕ್ತಿ ವಿಲಕ್ಷಣ

ಆನಂದದ ಅವಸ್ಥೆಯೆಂದು ಗ್ರಹಿಸಬೇಕು. ಈ ಜೀವನ್ಮುಕ್ತಿ ವಿಲಕ್ಷಣ ಆನಂದದ ಪ್ರಯೋಜನವು ಸಂಭವಿಸುತ್ತದೆ. ಈ ಪ್ರಯೋಜನಗಳು ಐದು ವಿಧ : ೧. ಜ್ಞಾನರಕ್ಷಾ, ೨. ತಪಸ್ಸು, ೩. ವಿಸಂವಾದಭಾವ, ೪ ದುಃಖ ನಿವೃತ್ತಿ, ಮತ್ತು ೫ ಸುಖ ಪ್ರಾಪ್ತಿ.

ಪ್ರ ೨೫೯ : **ಜ್ಞಾನರಕ್ಷಾ ಎಂದರೇನು** ?

ಉ : ವಾಸ್ತವವಾಗಿ ನೋಡಿದರೆ ಒಂದು ಸಾರಿ ಉತ್ಪನ್ನವಾದ ದೃಢ ಬೋಧವು ನಾಶವಾಗುವುದು ಸಂಭವಿಸುವುದಿಲ್ಲ ದೃಢಬೋಧವಾಗ ಬೇಕಿದ್ದರೆ ಅವಿದ್ಯೆಯು ನಾಶವಾಗಿರಬೇಕು. ಅವಿದ್ಯೆಯು ಅನಾದಿ ಅಂದರೆ ಉತ್ಪತ್ತಿ ರಹಿತವಾದುದು. ಉತ್ಪತ್ತಿರಹಿತವಾದ ಅವಿದ್ಯೆಯು ಒಂದು ಸಾರಿ ನಾಶವಾದ ಮೇಲೆ ಹುಟ್ಟಲಾರದು. ಇಂಥ ದೃಢಬೋಧಕ್ಕೆ ರಕ್ಷಣೆಯ ಅವಶ್ಯಕತೆಯೇ ಇಲ್ಲ. ಆದರೂ ನಿರಂತರವಾಗಿ ಬ್ರಹ್ಮಾಕಾರ ವೃತ್ತಿಯ ಸ್ಥಿತಿಯು ಜ್ಞಾನರಕ್ಷಾ ಎಂದು ಹೇಳಿಸಿಕೊಳ್ಳುತ್ತದೆ.

ಪ್ರ ೨೬೦ : **ತಪಸ್ಸು ಎಂದರೇನು ?**

ಉ : ಗೀತೆಯ ಎರಡನೆ ಅಧ್ಯಾಯದಲ್ಲಿ ಹೇಳಿದಂತೆ ಸ್ಥಿತಪ್ರಜ್ಞನ ಇಂದ್ರಿಯಗಳು ಸ್ವಾಧೀನವಾಗಿರಬೇಕು. ಇಲ್ಲದೆ ಹೋದರೆ ಜೀವನ್ಮುಕ್ತಿಯ ವಿಲಕ್ಷಣಾನಂದವನ್ನು ಭೋಗಿಸಲು ಸಾಧ್ಯವೇ ಇಲ್ಲ. ಸಾಧಾರಣ ಮನುಷ್ಯ ನಿಗೆ ಇಂದ್ರಿಯ ಸಂಯಮವು ಪ್ರಯತ್ನಸಾಧ್ಯವಾಗಿದೆ ; ಜೀವನ್ಮುಕ್ತನಿಗೆ ಸಹಜವಾಗಿದೆ. ಈ ದೃಷ್ಟಿಯಿಂದ ಮನೋವಾಕ್ಕಾಯಗಳ ಸಂಯಮವೇ ಜೀವನ್ಮುಕ್ತನ ತಪಸ್ಸೆಂದು ಹೇಳಿಸಿಕೊಳ್ಳುತ್ತದೆ

ಪ್ರ ೨೬೧ : **ವಿಸಂವಾದಭಾವ ಎಂದರೇನು** ?

ಉ : ಜಲ್ಪ ಮತ್ತು ವಿತಂಡವಾದಗಳ ಅಭಾವಕ್ಕೆ ವಿಸಂವಾದಭಾವ ವೆನ್ನುತ್ತಾರೆ.

ಪ್ರ ೨೬೨ : **ಹಾಗೆಂದರೇನು** ?

ಉ : ವಿಚಾರ ಪ್ರಸಂಗದಲ್ಲಿ ಪ್ರಶ್ನೋತ್ತರಗಳು ಮೂರು ವಿಧವಾಗಿರು ತ್ತವೆ. ಅವುಗಳಿಗೆ ೧. ವಾದ, ೨. ಜಲ್ಪ, ೩. ವಿತಂಡವೆನ್ನುತ್ತಾರೆ.

೧. ಇವುಗಳಲ್ಲಿ ರಾಗ ದ್ವೇಷವಿಲ್ಲದೆ ತತ್ವವನ್ನು ನಿಶ್ಚಯ ಮಾಡುವ

ಉದ್ದೇಶದಿಂದ ಮಾಡಲ್ಪಡುವ ಗುರು–ಶಿಷ್ಯರ ಪ್ರಶ್ನೋತ್ತರ ರೂಪವಾದು ದಕ್ಕೆ ವಾದವೆನ್ನುತ್ತಾರೆ.

೨. ಮತ್ತು ಶಾಸ್ತ್ರದಿಂದಲೂ, ಯುಕ್ತಿಗಳಿಂದಲೂ ಎದುರಿಗಿದ್ದವ ನನ್ನು ಗೆಲ್ಲಬೇಕೆಂಬ ಅಹಂಕಾರದಿಂದ ಮಾಡುವ ಪ್ರಶ್ನೋತ್ತರ ರೂಪವಾದು ದಕ್ಕೆ ಜಲ್ಪವೆನ್ನುತ್ತಾರೆ.

೩. ಮತ್ತು ಶಾಸ್ತ್ರವನ್ನಾಗಲಿ, ಯುಕ್ತಿಯನ್ನಾಗಲಿ ಅನುಸರಿಸದೆ, ಎದುರಿಗಿದ್ದವನಿಗೆ ಮಾತನಾಡಲೂ ಸಹ ಅವಕಾಶ ಕೊಡದೆ, ಅವನು ಮಾತ ನಾಡಿದರೂ ಕಿವಿಗೊಡದೆ, ತನ್ನ ಮನಸ್ಸಿಗೆ ಬಂದಂತೆ ಮಾತನಾಡಿ ತಾನು ಜಯಿಸಿದೆನೆಂದು ಅಹಂಕರಿಸುವುದಕ್ಕೆ ವಿತಂಡವಾದವೆನ್ನುತ್ತಾರೆ.

ಈ ಮೂರರಲ್ಲಿ ಜಲ್ಪ ಮತ್ತು ವಿತಂಡ ಇವುಗಳಿಲ್ಲದಿದ್ದರೆ ಅದು ವಿಸಂವಾದಭಾವವೆಂದು ಹೇಳಿಸಿಕೊಳ್ಳುತ್ತದೆ. ಇದೇ ಜೀವನ್ಮುಕ್ತನ ಪ್ರಶ್ನೋತ್ತರದ ಸ್ಥಿತಿಯು ವಿಸಂವಾದಭಾವ.

ಪ್ರ ೨೬೩ : **ದುಃಖ ನಿವೃತ್ತಿ ಅಂದರೇನು ?**

ಉ : ಜೀವನ್ಮುಕ್ತನು ಅಂತಃಕರಣ ಧರ್ಮವಾದ ದುಃಖಕ್ಕೆ ಸಾಕ್ಷಿ ಯಾಗಿರುತ್ತಾನೆ. ಸಾಕ್ಷಿಭಾವದಿಂದಿರುವುದೇ ನಿವೃತ್ತಿ.

ಪ್ರ ೨೬೪ : **ಸುಖ ಪ್ರಾಪ್ತಿ ಅಂದರೇನು** ?

ಉ : ನಿರಾವರಣವಾದ, ಪರಿಪೂರ್ಣವಾದ, ವೃತ್ತಿರೂಪವಾದ ಜೀವ ನ್ಮುಕ್ತಿಯ ವಿಲಕ್ಷಣವಾದ ಆನಂದದ ಪ್ರಾಪ್ತಿ.

ಪ್ರ ೨೬೫ : **ಪ್ರಪಂಚವು ಮಿಥ್ಯೆಯೆಂಬ ವಿಷಯದಲ್ಲಿ ದೃಷ್ಟಾಂತ ಗಳು ಎಷ್ಟು** ?

ಉ : ಐದು ೧. ಶುಕ್ತಿಯಲ್ಲಿ ರಜತ, ೨. ರಜ್ಜುವಿನಲ್ಲಿ ಸರ್ಪ, ೩. ಸ್ಥಾಣುವಿನಲ್ಲಿ ಪುರುಷ, ೪. ಗಗನದಲ್ಲಿ ನೀಲತ್ವ, ೫. ಮರುಮರೀಚಿಕೆಯಲ್ಲಿ ಜಲ.

೧. ಇವುಗಳಲ್ಲಿ ಶುಕ್ತಿಯಲ್ಲಿ ಶುಕ್ತಿಯ ಅಜ್ಞಾನದಿಂದ ರಜತವು ತೋರಿದಂತೆ ಕಂಡುಬಂದರೂ ರಜತವು ಇರುವುದಿಲ್ಲ.

೨. ರಜ್ಜುವಿನಲ್ಲಿ ರಜ್ಜುವಿನ ಅಜ್ಞಾನದಿಂದ ಸರ್ಪವು ತೋರಿ ದರೂ ಸರ್ಪವಿರುವುದಿಲ್ಲ.

೩. ಸ್ಥಾಣುವಿನಲ್ಲಿ ಸ್ಥಾಣುವಿನ ಅಜ್ಞಾನದಿಂದ ಪುರುಷ ನಿದ್ದಂತೆ ತೋರಿದರೂ ಪುರುಷನಿರುವುದಿಲ್ಲ.
೪. ಮರುಮರೀಚಿಕೆಯಲ್ಲಿ ಮರುಮರೀಚಿಕೆಯ ಅಜ್ಞಾನದಿಂದ ಜಲವಿದ್ದಂತೆ ತೋರಿದರೂ ಜಲವಿರುವುದಿಲ್ಲ.
೫. ಗಗನದಲ್ಲಿ ಗಗನದ ಅಜ್ಞಾನದಿಂದ ನೀಲತ್ವವು ತೋರಿದರೂ ನೀಲತ್ವವಿರುವುದಿಲ್ಲ.

ಈ ದೃಷ್ಟಾಂತಗಳಂತೆ ಬ್ರಹ್ಮದಲ್ಲಿ ಬ್ರಹ್ಮದ ಅಜ್ಞಾನದಿಂದ ಜಗತ್ತು ತೋರಿದರೂ, ಜಗತ್ತು ಅತ್ಯಂತಾಭಾವವಾಗಿದೆ. ಇದೇ ಜಗತ್ತಿನ ಮಿಥ್ಯಾತ್ವದ ದೃಷ್ಟಾಂತ.

ಪ್ರ ೨೬೬ : **ವಿಚಾರವಂತನಾದ ಸಾಧಕನು ವಿಚಾರಸಿದ್ಧಿಗಾಗಿ ಆಚರಿಸತಕ್ಕ ನಿಯಮಗಳು ಎಷ್ಟು ಮತ್ತು ಯಾವುವು ?**

ಉ : ೧. ಶೌಚ – ಅಂದರೆ ಒಳಗೂ ಹೊರಗೂ ಶುಚಿಯಾಗಿರುವುದು.

೨. ಸಂತೋಷ – ಅಂದರೆ ಆಗುವುದೆಲ್ಲಾ ಒಳ್ಳೆಯದಕ್ಕೇ ಎಂದು ತೃಪ್ತಿಯಿಂದಿರುವುದು.

೩. ತಪಸ್ಸು – ಅಂದರೆ ವಿಚಾರ ಕಾಲದಲ್ಲಿ ಬರತಕ್ಕ ದುಃಖಗಳನ್ನು ಶಾಂತವಾಗಿ ಸಹಿಸುವುದು.

೪. ಸ್ವಾಧ್ಯಾಯ – ಅಂದರೆ ಸ್ವಾ + ಅಧ್ಯಾಯ = ಸ್ವಾಧ್ಯಾಯ – ಆತ್ಮನ ಸ್ವರೂಪಗಳನ್ನು ಕುರಿತು ಹೇಳುವ ಶಾಸ್ತ್ರಗಳನ್ನು ಕುರಿತು ಅಧ್ಯಯನ ಮಾಡುವುದು. ಇಲ್ಲವೇ ಪ್ರತಿನಿತ್ಯವೂ ತಪ್ಪದೇ ಭಗವದ್ಗೀತಾದಿ ಶಾಸ್ತ್ರಗಳನ್ನು ಪಾರಾಯಣ ಮಾಡುವುದು.

೫. ಈಶ್ವರಪ್ರಣಿಧಾನ – ಅಂದರೆ ಈಶ್ವರ ಶರಣಾಗತ. ಓಂಕಾರಾದಿ ಉಪಾಸನಾದಿಗಳೂ ಸಹ ಈಶ್ವರಪ್ರಣಿಧಾನವೆಂದು ಹೇಳಿಸಿಕೊಳ್ಳುತ್ತವೆ.

"ಈಶ್ವರಾನುಗ್ರಹ ಮೇವಾಪುಂಸಾಮದ್ವೈತ ವಾಸನ" – ಅಂದರೆ

ಈಶ್ವರಾನುಗ್ರಹವಿಲ್ಲದಿದ್ದರೆ ಅದ್ವೈತ ವಾಸನೆ ಯಾರಿಗೂ ಉಂಟಾಗಲಾರದು. ಆದುದರಿಂದ ಈಶ್ವರೋಪಾಸನೆಯಿಂದ ಸಾಧಕನು ಈಶ್ವರಾನುಗ್ರಹವನ್ನು ಪಡೆದುಕೊಳ್ಳಬೇಕು

ಪ್ರ ೨೬೭ : **ಪ್ರಳಯಗಳು ಎಷ್ಟು ವಿಧ ?**

ಉ : ಐದು. ೧ ನಿತ್ಯ ಪ್ರಳಯ, ೨ ನೈಮಿತ್ತಿಕ ಪ್ರಳಯ, ೩. ದಿನ ಪ್ರಳಯ, ೪. ಮಹಾ ಪ್ರಳಯ, ಮತ್ತು ೫. ಆತ್ಯಂತಿಕ ಪ್ರಳಯ.

ಪ್ರ ೨೬೮ : **ನಿತ್ಯ ಪ್ರಳಯವೆಂದರೇನು ?**

ಉ : ಈ ಪ್ರಪಂಚದಲ್ಲಿಯ ಪ್ರತಿ ಪದಾರ್ಥಗಳೂ ಪ್ರತಿ ಕ್ಷಣದಲ್ಲಿಯೂ ನಾಶವಾಗುತ್ತಿರುತ್ತವೆ. ಇದಕ್ಕೆ ನಿತ್ಯ ಪ್ರಳಯವೆನ್ನುತ್ತಾರೆ

ಉದಾ : ದೀಪ ಶಿಖೆಯು ಪ್ರತಿ ಕ್ಷಣವೂ ನಾಶವಾಗುತ್ತಿರುತ್ತದೆ. ನದಿಯ ಪ್ರವಾಹದ ನೀರು ಒಂದು ಕ್ಷಣವೂ ಒಂದೆಡೆ ನಿಲ್ಲದೆ, ಪ್ರತಿ ಕ್ಷಣವೂ ಮುಂದೆ ಮುಂದೆ ಹೋಗುತ್ತಿರುತ್ತದೆ. ಇದರಂತೆ ಜಾಗ್ರತ್ ಸ್ವಪ್ನದಲ್ಲಿ ಪ್ರತಿ ಪದಾರ್ಥಗಳೂ ಪರಿವರ್ತನೆಯಾಗುತ್ತಲೇ ಇರುತ್ತವೆ. ಮತ್ತು ಜಾಗ್ರತ್ ಸ್ವಪ್ನದಲ್ಲಿಯ ಪದಾರ್ಥಗಳು ಸುಷುಪ್ತಿಯಲ್ಲಿ ಏನೊಂದೂ ತೋರುವುದಿಲ್ಲ. ಈ ಕಾರಣದಿಂದ ಸುಷುಪ್ತಿಯನ್ನು ನಿತ್ಯ ಪ್ರಳಯವೆಂದು ಹೇಳಬಹುದು.

ಪ್ರ ೨೬೯ : **ನೈಮಿತ್ತಿಕ ಪ್ರಳಯವೆಂದರೇನು ?**

ಉ : ಏನಾದರೊಂದು ನಿಮಿತ್ತದಿಂದಾಗುವ ಪ್ರಳಯ, ಅಂದರೆ ಸೃಷ್ಟಿ ಕರ್ತ ಬ್ರಹ್ಮನ ರಾತ್ರಿಯಲ್ಲಿ ಉಂಟಾಗುವ ಭೂಲೋಕ, ಭುವರ್ಲೋಕ, ಸುವರ್‌ಲೋಕ – ಈ ಮೂರು ಲೋಕಗಳ ನಾಶಕ್ಕೆ ನೈಮಿತ್ತಿಕ ಪ್ರಳಯ ವೆನ್ನುತ್ತಾರೆ.

ಪ್ರ ೨೭೦ : **ದಿನ ಪ್ರಳಯವೆಂದರೇನು ?**

ಉ : ಚತುರ್ಮುಖ ಸೃಷ್ಟಿಕರ್ತನ ಒಂದು ಹಗಲಿನಲ್ಲಿ ೧೪ ಮನ್ವಂತರ ಗಳಾಗುತ್ತವೆ. ಈ ಪ್ರತ್ಯೇಕ ಮನ್ವಂತರದ ನಾಶಕ್ಕೆ ದಿನ ಪ್ರಳಯವೆನ್ನು ತ್ತಾರೆ. ಇದನ್ನು ಅವಾಂತರ ಪ್ರಳಯವೆಂತಲೂ ಹೇಳುತ್ತಾರೆ. ಕೆಲವರು ಇದನ್ನು ನೈಮಿತ್ತಿಕ ಪ್ರಳಯವೆಂತಲೂ ಹೇಳುತ್ತಾರೆ.

ಪ್ರ ೨೭೧ : **ಮಹಾ ಪ್ರಳಯವೆಂದರೇನು ?**

ಉ : ಸೃಷ್ಟಿಕರ್ತ ಬ್ರಹ್ಮನ ನೂರು ವರ್ಷ ಆಯುಸ್ಸು ಮುಗಿದ ಮೇಲೆ

ಬ್ರಹ್ಮಸಹಿತವಾಗಿ ಆಕಾಶಾದಿಗಳ, ಸರ್ವಭೂತಗಳ ನಾಶಕ್ಕೆ ಮಹಾ ಪ್ರಳಯ ವೆನ್ನುತ್ತಾರೆ.

ಪ್ರ ೨೭೨ : **ಆತ್ಯಂತಿಕ ಪ್ರಳಯವೆಂದರೇನು ?**

ಉ : ಹಿಂದೆ ಹೇಳಿದ ನಾಲ್ಕು ಪ್ರಳಯಗಳಿಗೆ ಪುನಃ ಉತ್ಪತ್ತಿಯುಂಟು. ಆದುದರಿಂದ ಅವು ಆತ್ಯಂತಿಕ ಪ್ರಳಯಗಳಲ್ಲ. ಆತ್ಯಂತಿಕ ಪ್ರಳಯವೆಂದರೆ ಪುನಃ ಉತ್ಪತ್ತಿ ಇರಕೂಡದು. ಅದು ಯಾವುದು ? ದೃಢವಾದ ಅಪರೋಕ್ಷ ಬ್ರಹ್ಮಜ್ಞಾನದಿಂದ ಅಜ್ಞಾನರೂಪ ಕಾರಣಸಹಿತ ಸರ್ವಪ್ರಪಂಚದ ಬಾಧೆಗೆ ಆತ್ಯಂತಿಕ ಪ್ರಳಯವೆನ್ನುತ್ತಾರೆ.

ಪ್ರ ೨೭೩ : **ಪ್ರಾಣಗಳೆಷ್ಟು ?**

ಉ : ಐದು. ೧. ಪ್ರಾಣ, ೨. ಅಪಾನ, ೩. ಸಮಾನ, ೪. ಉದಾನ, ೫. ವ್ಯಾನ.

ಪ್ರ ೨೭೪ : **ಉಪಪ್ರಾಣಗಳೆಷ್ಟು?**

ಉ : ಐದು. ೧. ನಾಗ, ೨. ಕೂರ್ಮ, ೩. ಕೃಕರ. ೪. ದೇವ ದತ್ತ, ೫. ಧನಂಜಯ.

ಪ್ರ ೨೭೫ : **ಭೇದಗಳೆಷ್ಟು?**

ಉ : ಐದು. ೧. ಜೀವೇಶ್ವರ ಭೇದ, ೨. ಜೀವರುಗಳ ಪರಸ್ಪರ ಭೇದ, ೩. ಜೀವ ಜಡಭೇದ, ೪. ಈಶ್ವರ ಜಡಭೇದ, ಮತ್ತು ೫. ಜಡ ಜಡ ಭೇದ.

ಪ್ರ ೨೭೬ : **ಭ್ರಮೆಗಳೆಷ್ಟು?**

ಉ : ಐದು. ೧. ಭೇದ ಭ್ರಮೆ, ೨. ಕರ್ತೃತ್ವ ಭೋಕ್ತೃತ್ವ ಭ್ರಮೆ, ೩. ಸಂಗ ಭ್ರಮೆ, ೪. ವಿಕಾರ ಭ್ರಮೆ, ೫. ಜಗತ್ಸತ್ಯತ್ವ ಭ್ರಮೆ.

ಪ್ರ ೨೭೭ : **ಭ್ರಮೆಯ ನಿವೃತ್ತಿಯ ದೃಷ್ಟಾಂತಗಳೆಷ್ಟು?**

ಉ : ಐದು. ೧. ಬಿಂಬ ಪ್ರತಿಬಿಂಬ ದೃಷ್ಟಾಂತ, ೨. ಲೋಹಿಕ ಸ್ಫಟಿಕ ದೃಷ್ಟಾಂತ, ೩. ಘಟಾಕಾಶ ದೃಷ್ಟಾಂತ, ೪. ರಜ್ಜುಸರ್ಪ ದೃಷ್ಟಾಂತ, ಮತ್ತು ೫. ಕನಕ ಕುಂಡಲ ದೃಷ್ಟಾಂತ.

ಪ್ರ ೨೭೮ : **ಮಹಾ ಯಜ್ಞಗಳೆಷ್ಟು?**

ಉ : ಐದು. ೧. ದೇವ ಯಜ್ಞ, ೨. ಋಷಿ ಯಜ್ಞ, ೩. ಪಿತೃ

ಯಜ್ಞ, ೪. ಮನುಷ್ಯ ಯಜ್ಞ, ಮತ್ತು ೫. ಭೂತ ಯಜ್ಞ.

ಪ್ರ ೨೭೯ : **ಯೋಗ ಶಾಸ್ತ್ರದಲ್ಲಿ ಹೇಳಿದ ಯಮಗಳೆಷ್ಟು?**

ಉ : ೧. ಐದು. ಅಹಿಂಸೆ, ೨. ಸತ್ಯ, ೩. ಬ್ರಹ್ಮಚರ್ಯ, ೪. ಅಪರಿಗ್ರಹ, ೫. ಅಸ್ತೇಯ.

ಪ್ರ ೨೮೦ : **ಯೋಗಶಾಸ್ತ್ರದಲ್ಲಿ ಹೇಳಿದ ಚಿತ್ತದ ಭೂಮಿಕೆಗಳೆಷ್ಟು?**

ಉ : ೧. ಕ್ಷೇಪ ಅಂದರೆ ರಾಗದ್ವೇಷಗಳಿಂದ ಆಗುವ ಚಿತ್ತದ ಚಾಂಚಲ್ಯ.

೨. ವಿಕ್ಷೇಪ ಅಂದರೆ ಚಿತ್ತದ ಬಹಿರ್ಮುಖತೆ. ವಿಕ್ಷೇಪಯುಕ್ತ ಚಿತ್ತವು ಒಮ್ಮೊಮ್ಮೆ ಧ್ಯಾನದಿಂದಲೂ ಕೂಡಿಕೊಂಡಿರಬಹುದು.

೩. ಮೂಢ ಅಂದರೆ ನಿದ್ರಾಲಸ್ಯಗಳಿಂದ ಕೂಡಿದ ಚಿತ್ತ.

೪. ಏಕಾಗ್ರತೆ ಅಂದರೆ ಚಿತ್ತವು ಒಂದು ವಸ್ತುವಿನಲ್ಲಿ ಸ್ಥಿರವಾಗುವುದು.

೫. ನಿರೋಧ ಅಂದರೆ ಅಭ್ಯಾಸಾಧಿಗಳಿಂದ ತಡೆದ ಚಿತ್ತ.

ಈ ಐದು ಚಿತ್ತದ ಭೂಮಿಕೆಗಳಲ್ಲಿ ಕ್ಷೇಪ, ಮೂಢ ಈ ಎರಡು ಚಿತ್ತಗಳು ಯೋಗಾಭ್ಯಾಸಕ್ಕೆ ಅನುಕೂಲವಲ್ಲ. ಮೂರನೇ ವಿಕ್ಷೇಪ ಚಿತ್ತವು ಪ್ರಯತ್ನಪಟ್ಟರೆ ಅಭ್ಯಾಸಕ್ಕೆ ಅನುಕೂಲವಾಗಬಹುದು. ನಾಲ್ಕನೆ ಐದನೆಯ ಚಿತ್ತಗಳು ಸಾಧನಾಭ್ಯಾಸಕ್ಕೆ ಸಹಾಯ ಮಾಡುತ್ತವೆ.

ಪ್ರ ೨೮೧ : **ಕರ್ಮೇಂದ್ರಿಯಗಳ ಕ್ರಿಯೆಗಳೆಷ್ಟು?**

ಉ : ೧. ವಚನ, ೨. ಆಧಾನ ಅಂದರೆ ಕೊಡುವುದು ತೆಗೆದುಕೊಳ್ಳುವುದು, ೩. ಗಮನ, ೪. ರತಿ, ೫. ಮಲತ್ಯಾಗ.

ಪ್ರ ೨೮೨ : **ವಿಷಯಗಳೆಷ್ಟು ?**

ಉ : ೧. ಶಬ್ದ, ೨. ಸ್ಪರ್ಶ, ೩. ರೂಪ, ೪. ರಸ, ೫. ಗಂಧ.

ಪ್ರ ೨೮೩ : **ಮಹಾಭೂತಗಳೆಷ್ಟು?**

ಉ : ೧. ಆಕಾಶ, ೨. ವಾಯು, ೩. ಅಗ್ನಿ, ೪. ಜಲ, ೫. ಪೃಥ್ವಿ.

ಪ್ರ ೨೮೪ : **ಹೇತ್ವಾಭ್ಯಾಸಗಳೆಷ್ಟು?**

ಉ : ಹೇತುಗಳಲ್ಲದಿದ್ದರೂ ಹೇತುಗಳಂತೆ ತೋರುವುದು ಹೇತ್ವಾಭ್ಯಾಸಗಳು. ಇವು ಐದು.

೧. ಸವ್ಯಭಿಚಾರ ಅಂದರೆ ಅನೇಕಾಂತಿಕ ಹೇತು.

೨. ವಿರುದ್ಧಾಭಾಸ ಅಂದರೆ ಶಬ್ದವೂ, ಕೃತಕವೂ, ನಿತ್ಯವೂ ಆದದ್ದು. ಆದ್ದರಿಂದ ಇಲ್ಲಿ ಒಂದು ದೋಷವು ಕಂಡುಬರುತ್ತದೆ. ನಿತ್ಯತ್ವ, ಕೃತಕತ್ವಗಳೆರಡೂ ಒಂದೇ ವಸ್ತುವಿನಲ್ಲಿ ಇರಲಾರದು. ಕೃತಕವು ಅನಿತ್ಯವೇ, ಘಟದಂತೆ. ಇದೇ ವಿರುದ್ಧಾಭಾಸ.

೩. ಸತ್ ಪ್ರತಿಪಕ್ಷಾಭಾಸ ಅಂದರೆ ಕಾರ್ಯವು ಅನಿತ್ಯವಾದುದರಿಂದ ಅದು ಸತ್ತಾಗಲಾರದು. ಕೇವಲ ಸತ್ತಿನಂತೆ ತೋರುತ್ತದೆ. ಇದಕ್ಕೆ ಸತ್ ಪ್ರತಿಪಕ್ಷ ಆಭಾಸವೆನ್ನುತ್ತಾರೆ.

೪. ಅಸಿದ್ಧ ಆಭಾಸ ಅಂದರೆ ಶಬ್ದವು ಒಂದು ಗುಣವಾಗಿದೆ ಎಂಬಲ್ಲಿ ಗುಣವು ಚಾಕ್ಷುಷ. ಇದು ಶಬ್ದವೆಂದು ಸಿದ್ಧವಾಗಲಾರದು. ಆದುದರಿಂದ ಶಬ್ದವು ಗುಣವಾಗಿದೆ ಎಂಬುದು ಅಸಿದ್ಧ ಆಭಾಸ.

೫. ಬಾಧಿತ ಆಭಾಸ ಅಂದರೆ ಯಾವನಾದರೊಬ್ಬನು ಅಗ್ನಿಯು ಉಷ್ಣವಲ್ಲವೆಂದು ಹೇಳಿದರೆ ಅದು ಅನುಭವಕ್ಕೆ ವಿರೋಧ. ಇಲ್ಲಿ ಉಷ್ಣವಲ್ಲವೆಂಬುದು ಬಾಧಿತವಾಗುತ್ತದೆ. ಆದುದರಿಂದ ಇದು ಬಾಧಿತ ಆಭಾಸವೆನಿಸುತ್ತದೆ.

ಪ್ರ ೨೮೫ : **ಜ್ಞಾನೇಂದ್ರಿಯಗಳೆಷ್ಟು?**

ಉ : ಹೊರಗಿನ ವಿಷಯಗಳನ್ನು ತಿಳಿಯುವ ಸಾಧನಕ್ಕೆ ಜ್ಞಾನೇಂದ್ರಿಯಗಳೆನ್ನುತ್ತಾರೆ. ಇವು ಐದು : ೧. ಶ್ರೋತ್ರ, ೨. ತ್ವಕ್ಕು, ೩. ಚಕ್ಷು, ೪. ಜಿಹ್ವೆ, ೫. ಘ್ರಾಣ.

## ಆರು ವಿಧ ಪದಾರ್ಥಗಳು

ಪ್ರ ೨೮೬ : **ಯತಿ ಅಂದರೆ ಸಂನ್ಯಾಸಿಯ ಧರ್ಮಗಳೆಷ್ಟು?**

ಉ : ಆರು.

೧. ಅಜಿಂಹತ್ವ ಅಂದರೆ ಪಂಚ ವಿಷಯಗಳಲ್ಲಿ ರಸವೆಂಬ ವಿಷಯದ ಆಸಕ್ತಿ ಇಲ್ಲದಿರುವುದು.

೨. ನಪುಂಸಕತ್ವ ಅಂದರೆ ಕುಮಾರಿ, ಕಿಶೋರಿ, ವೃದ್ಧ ಸ್ತ್ರೀ ಇವರ

ವಿಷಯದಲ್ಲಿ ಸಮತಾಭಾವದಿಂದಿರುವುದು. ಅಂದರೆ ಇವರನ್ನು ಕಂಡಾಗ ಮನಸ್ಸಿನಲ್ಲಿ ವಿಕಾರವುಂಟಾಗದೆ ಇರುವುದು.

೩. ಪಂಗುತ್ವ ಅಂದರೆ ಕುಂಟುತನ. ಯತಿಗಳು ಕುಂಟರಾಗಿರಬೇಕು. ಅಂದರೆ ಒಂದು ದಿವಸದಲ್ಲಿ ಒಂದು ಯೋಜನಕ್ಕಿಂತಲೂ ಹೆಚ್ಚಾಗಿ ನಡೆಯಬಾರದು. ಇದ್ದಲ್ಲಿಯೂ ಇರಬಾರದು.

೪. ಅಂಧತ್ವ ಅಂದರೆ ಕುರುಡುತನ ದಾರಿಯನ್ನು ನಡೆಯುವಾಗ ದೃಷ್ಟಿಯು ಒಂದು ಧನುಸ್ಸು ಪ್ರಮಾಣಕ್ಕಿಂತ ಹೆಚ್ಚು ಪ್ರಸರಿಸಕೂಡದು.

೫. ಬಧಿರತ್ವ ಅಂದರೆ ಯತಿಗಳು ಬಧಿರರಾಗಿರಬೇಕು ಅಂದರೆ ಕಿವುಡರಾಗಿರಬೇಕು.

೬. ಮುಗ್ಧತ್ವ ಅಂದರೆ ವ್ಯವಹಾರದಲ್ಲಿ ಬಾಲಕನಂತಿರಬೇಕು. ಅಂದರೆ ಬುದ್ಧಿಶಕ್ತಿಯನ್ನೆಲ್ಲಾ ಆತ್ಮ ವಿಚಾರದಲ್ಲಿಯೇ ಉಪಯೋಗಿಸಬೇಕು.

ಪ್ರ ೨೮೭ : **ಅನಾದಿ ಪದಾರ್ಥಗಳೆಷ್ಟು?**

ಉ : ಅನಾದಿ ಪದಾರ್ಥಗಳೆಂದರೆ ಉತ್ಪತ್ತಿರಹಿತ ಪದಾರ್ಥಗಳು. ಇವು ಆರು. ೧. ಜೀವ, ೨. ಈಶ, ೩. ಶುದ್ಧ ಚೇತನ, ೪. ಅವಿದ್ಯಾ, ೫. ಚೇತನ ಅವಿದ್ಯೆಗಳ ಸಂಬಂಧ, ೬. ಇವುಗಳ ಭೇದ.

ಪ್ರ ೨೮೮ : **ಅರಿವರ್ಗಗಳೆಷ್ಟು?**

ಉ : ಅರಿವರ್ಗವೆಂದರೆ ಶತ್ರುಗಳ ಸಮೂಹ. ಅವು ಆರು.

ಪ್ರ ೨೮೯ : **ಅವು ಯಾವುವು ?**

ಉ : ೧. ಕಾಮ ಅಂದರೆ ಪ್ರಾಪ್ತ ವಸ್ತುವಿನ ಭೋಗದ ಇಚ್ಛೆ.

೨. ಕ್ರೋಧ ಅಂದರೆ ಭೋಗ ಪ್ರಸಂಗದಲ್ಲಿ ಆತಂಕ ಮಾಡಿದವರ ಮೇಲೆ ದ್ವೇಷ.

೩. ಲೋಭ-ಅಂದರೆ ಅಪ್ರಾಪ್ತ ವಸ್ತುವಿನ ಪ್ರಾಪ್ತಿಯ ಇಚ್ಛೆ.

೪. ಮೋಹ ಅಂದರೆ ಆತ್ಮಾನಾತ್ಮಗಳ ಅವಿವೇಕ ಅಥವಾ ಕಾರ್ಯಾಕಾರ್ಯಗಳ ಅವಿವೇಕ.

೫. ಮದ ಅಂದರೆ ಅಹಂಕಾರ.

೬. ಮತ್ಸರ ಅಂದರೆ ಮತ್ತೊಬ್ಬರ ಶ್ರೇಷ್ಠತೆಯನ್ನು ಸಹಿಸದಿರುವುದು, ಅಂದರೆ ಹೊಟ್ಟೆಕಿಚ್ಚು.

ಪ್ರ ೫೯೦ : **ಸ್ಥೂಲದೇಹದ ಅವಸ್ಥೆಗಳೆಷ್ಟು?**

ಉ : ಆರು. ೧. ಶಿಶು – ೧ನೇ ವರ್ಷದಿಂದ ೪ನೇ ವರ್ಷದವರೆಗಿನ ಕಾಲ.

೨. ಕೌಮಾರ – ೫ನೇ ವರ್ಷದವರೆಗಿನ ಕಾಲ.

೩. ಪಾವುಗಂಡ – ೬ನೇ ವರ್ಷದಿಂದ ೧೦ನೇ ವರ್ಷದವರೆಗಿನ ಕಾಲ.

೪. ಕಿಶೋರ – ೧೧ನೇ ವರ್ಷದಿಂದ ೧೬ನೇ ವರ್ಷದವರೆಗಿನ ಕಾಲ.

೫. ಯೌವನ – ೧೬ನೇ ವರ್ಷದಿಂದ ೪೦ನೇ ವರ್ಷದವರೆಗಿನ ಕಾಲ.

೬. ಜರಾ ಅಂದರೆ ವೃದ್ಧಾಪ್ಯ – ೪೦ನೇ ವರ್ಷದ ಮೇಲಿನ ಕಾಲ.

ಪ್ರ ೫೯೧ : **ಈಶ್ವರನ ಭಗಗಳೆಷ್ಟು?**

ಉ : ಭಗವೆಂದರೆ ಐಶ್ವರ್ಯ. ಇವು ಆರು : ೧. ಸಮಗ್ರ ಐಶ್ವರ್ಯ, ೨. ಸಮಗ್ರ ಧರ್ಮ, ೩. ಸಮಗ್ರ ಯಶಸ್ಸು, ೪. ಸಮಗ್ರ ಶ್ರೀ ಅಂದರೆ ಸಂಪತ್ತು, ೫. ಸಮಗ್ರ ಜ್ಞಾನ, ೬. ಸಮಗ್ರ ವೈರಾಗ್ಯ.

ಪ್ರ ೫೯೨ : **ಈಶ್ವರನ ಜ್ಞಾನಗಳೆಷ್ಟು?**

ಉ : ಆರು. ೧. ಸೃಷ್ಟಿಯ ಉತ್ಪತ್ತಿ ಸಂಬಂಧವಾದ ಜ್ಞಾನ, ೨. ಸೃಷ್ಟಿಯ ಪ್ರಳಯ ಸಂಬಂಧವಾದ ಜ್ಞಾನ, ೩. ಸೃಷ್ಟಿಯ ಗತಿಯ ಜ್ಞಾನ, ೪. ಆಗತಿ ಅಂದರೆ ಬರುವಿಕೆ – ಜೀವರುಗಳು ಸೃಷ್ಟಿಗೆ ಬರುವ ವಿಷಯದ ಜ್ಞಾನ, ೫. ವಿದ್ಯೆ, ಮತ್ತು ೬. ಅವಿದ್ಯ. ಇವು ಈಶ್ವರ ಜ್ಞಾನಗಳು.

ಪ್ರ ೫೯೩ : **ಊರ್ಮಿಗಳೆಷ್ಟು?**

ಉ : ಊರ್ಮಿಗಳೆಂದರೆ ದ್ವಂದ್ವಗಳು ಅಥವಾ ಸಂಸಾರ ಸಮುದ್ರದ ತರಂಗಗಳು. ಇವು ಆರು : ೧. ಜನ್ಮ, ೨. ಮರಣ, ೩. ಕ್ಷುಧಾ, ೪. ತೃಷಾ, ೫. ಹರ್ಷ, ೬. ಶೋಕ.

ಪ್ರ ೫೯೪ : **ಸಾಧಕನು ಆಚರಿಸಬೇಕಾದ ಕರ್ಮಗಳೆಷ್ಟು?**

ಉ : ಆರು. ೧ ಸ್ನಾನ, ೨. ಜಪ, ೩ ಹೋಮ ಹವನಾದಿಗಳು, ೪. ಅರ್ಚನ, ೫. ದೇವ ಪೂಜನ, ಮತ್ತು ೬. ಆತಿಥ್ಯ ಅಂದರೆ ಅತಿಥಿ ಸೇವಾ. ಊಟದ ಸಮಯದಲ್ಲಿ ಬಂದ ಅಭ್ಯಾಗತನಿಗೆ ಅನ್ನವನ್ನು ಸಮರ್ಪಿಸುವುದು.

ಪ್ರ ೫೯೫ : **ಕೌಶಿಕಗಳೆಷ್ಟು? ಅಂದರೆ ಅನ್ನಮಯ ಕೋಶದಲ್ಲಿರುವ ಪದಾರ್ಥಗಳೆಷ್ಟು?**

ಉ : ಆರು. ೧. ತ್ವಕ್ಕು, ೨. ಮಾಂಸ, ೩. ರುಧಿರ, ೪. ಮೇಧಸ್ಸು, ೫. ಮಜ್ಜ, ೬. ಅಸ್ಥಿ.

ಪ್ರ ೫೬: **ಪ್ರಮಾಣಗಳೆಷ್ಟು?**

ಉ : ಪ್ರಮಾಣಗಳೆಂದರೆ ಪ್ರಮೇಯದ ಕರಣಗಳು. ಇವು ಆರು.

೧. ಪ್ರತ್ಯಕ್ಷ ಪ್ರಮಾಣ : ಪ್ರತ್ಯಕ್ಷ ಪ್ರಮೇಯ ಕರಣವು ಪ್ರತ್ಯಕ್ಷ ಪ್ರಮಾಣವೆನಿಸುತ್ತದೆ. ಅಂದರೆ ಹೊರಗಿನ ಪಂಚ ವಿಷಯಗಳನ್ನು ತಿಳಿಯುವ ಪಂಚ ಜ್ಞಾನೇಂದ್ರಿಯಗಳು.

೨. ಅನುಮಾನ ಪ್ರಮಾಣ : ಅನುಮಿತಿ ಪ್ರಮೇಯ ಕರಣವು ಅನುಮಾನ ಪ್ರಮಾಣವೆನಿಸುತ್ತದೆ. ಅದಕ್ಕೆ ಲಿಂಗದ ಜ್ಞಾನವೆನ್ನುತ್ತಾರೆ.

ಉದಾ : "ಪರ್ವತೋ ವನ್ಹಿಮಾನ್ ಧೂಮಾತ್" ಪರ್ವತವು ಅಗ್ನಿಯುಳ್ಳದ್ದು. ಹೊಗೆ ಇರುವುದರಿಂದ ಪರ್ವತದಲ್ಲಿರುವ ಅಗ್ನಿಯ ಜ್ಞಾನಕ್ಕೆ ಹೇತುವಾದ ಧೂಮವೆಂಬ ಲಿಂಗದ ಜ್ಞಾನ.

೩. ಉಪಮಾನ ಪ್ರಮಾಣ : ಉಪಮಿತಿಯ ಪ್ರಮೇಯ ಕರಣವೇ ಉಪಮಾನ ಪ್ರಮಾಣ. ಅಂದರೆ ಸಾದೃಶ್ಯದ ಜ್ಞಾನವು ಉಪಮಾನ ಪ್ರಮಾಣ.

ಉದಾ : ಗವಯ ಅಂದರೆ ಕಾಡು ಹಸು. ಕಾಡು ಹಸುವಿನಲ್ಲಿ ಹಸುವಿನ ಸಾದೃಶ್ಯದ ಜ್ಞಾನ.

೪. ಶಬ್ದ ಪ್ರಮಾಣ : ಶಾಬ್ದೀ ಪ್ರಮೇಯ ಕರಣವೇ ಶಬ್ದ ಪ್ರಮಾಣ ; ಇದು ಲೌಕಿಕ ವೈದಿಕ ಶಬ್ದ ರೂಪವಾದುದು.

೫. ಅರ್ಥಾಪತ್ತಿ ಪ್ರಮಾಣ : ಅರ್ಥಾಪತ್ತಿ ಪ್ರಮೇಯ ಕರಣವೇ ಅರ್ಥಾಪತ್ತಿ ಪ್ರಮಾಣ. ಇದಕ್ಕೆ ಉಪಪಾದ್ಯದ ಜ್ಞಾನವೆನ್ನುತ್ತಾರೆ.

ಉದಾ : ಹಗಲಿನಲ್ಲಿ ಊಟ ಮಾಡದ ಸ್ಥೂಲ ಪುರುಷನು ರಾತ್ರಿಯಲ್ಲಿ ಊಟ ಮಾಡುತ್ತಾನೆಂಬ ಜ್ಞಾನರೂಪವಾದ ಅರ್ಥಾಪತ್ತಿ ಪ್ರಮೇಯ ಹೇತುವಾದ ದೇಹದ ಸ್ಥೂಲತ್ವದ ಜ್ಞಾನ.

೬. ಅನುಪಲಬ್ಧಿ ಪ್ರಮಾಣ : ಅಭಾವ ಪ್ರಮೇಯ ಕರಣವೇ ಅನುಪಲಬ್ಧಿ ಪ್ರಮಾಣ, ಅಂದರೆ ಪದಾರ್ಥದ ಪ್ರತೀತಿ.

ಉದಾ : ''ಭೂತತಿ ಘಟೋನಾಸ್ತಿ'' ಅಂದರೆ ಭೂತಲದಲ್ಲಿ ಘಟವಿಲ್ಲ. ಭೂತಲದಲ್ಲಿ ಘಟದ ಅಭಾವದ ಜ್ಞಾನಕ್ಕೆ, ಘಟದ ಅಪ್ರತೀತಿಗೆ ಹೇತು.

ಪ್ರ ೫೭ : **ಭ್ರಮೆಗಳೆಷ್ಟು?**

ಉ : ಆರು. ೧. ಕುಲಭ್ರಮೆ, ೨. ಗೋತ್ರಭ್ರಮೆ, ೩. ಜಾತಿ ಭ್ರಮೆ, ೪. ವರ್ಣ ಭ್ರಮೆ, ೫. ಆಶ್ರಮದ ಭ್ರಮೆ, ಮತ್ತು ೬. ಹೆಸರಿನ ಭ್ರಮೆ.

ಪ್ರ ೫೮ : **ರಸಗಳೆಷ್ಟು?**

ಉ : ಆರು ೧. ಮಧುರ ರಸ, ೨. ಆಮ್ಲರಸ (ಹುಳಿ), ೩. ಲವಣ ರಸ ೪. ಕಟುರಸ (ವಿಷ), ೫. ಕಷಾಯ ರಸ (ಒಗರು), ಮತ್ತು ೬. ಪಿತ್ತ ರಸ.

ಪ್ರ ೫೯ : **ಲಿಂಗವೆಂದರೇನು ? ಅವು ಎಷ್ಟು?**

ಉ : ಲಿಂಗವೆಂದರೆ ವೇದವಾಕ್ಯಗಳನ್ನು ನಿಶ್ಚಯ ಮಾಡುವ ಸಾಧನ ಗಳು. ಅವು ಆರು. "ಉಪಕ್ರಮೋಪಸಂಹಾರ ಅಭ್ಯಾಸೋ ಅಪೂರ್ವತಾ ಫಲಂ ಅರ್ಥವಾದೋಪಪತ್ತೀಚಲಿಂಗಂ ತಾತ್ಪರ್ಯ ನಿರ್ಣಯೆ''.

ಅರ್ಥ : ೧. ಉಪಕ್ರಮ ಉಪಸಂಹಾರ ಅಂದರೆ ಆದಿ ಅಂತ್ಯದ ಏಕ ರೂಪತೆ, ೨. ಅಭ್ಯಾಸ ಪುನಃ ಪುನಃ ಹೇಳುವುದು, ೩. ಅಪೂರ್ವತ ಅಂದರೆ ಅಲೌಕಿಕತ್ವ, ೪. ಫಲ ಅಂದರೆ ಮೋಕ್ಷ, ೫. ಅರ್ಥವಾದ ಅಂದರೆ ಸ್ತುತಿ, ಮತ್ತು ೬. ಉಪಪತ್ತಿ ಅಂದರೆ ಅನುಕೂಲ ದೃಷ್ಟಾಂತ.

ಪ್ರ ೩೦೦ : **ವಿಕಾರಗಳೆಷ್ಟು?**

ಉ : ಆರು. ೧. ಜನ್ಮ, ಅಂದರೆ ಮೊದಲಿಲ್ಲದೆ ತೋರುವುದು ; ೨. ಅಸ್ತಿ, ಜನ್ಮದನಂತರ ಇರುವಿಕೆ ; ೩. ವೃದ್ಧಿ ಅಂದರೆ ಬೆಳೆಯುವುದು ; ೪. ವಿಪರಿಣಾಮ ಅಂದರೆ ಪರಿಣಾಮವಾಗುವುದು ; ೫. ಅಪಕ್ಷಯ ಅಂದರೆ ಕ್ಷಯಿಸುವುದು ; ಮತ್ತು ೬. ವಿನಾಶ ಅಂದರೆ ನಾಶವಾಗುವುದು.

ಪ್ರ ೩೦೧ : **ವೇದಾಂಗಗಳೆಷ್ಟು?**

ಉ : ಆರು. ೧. ಶೀಕ್ಷಾ, ೨. ಕಲ್ಪ, ೩. ವ್ಯಾಕರಣ, ೪. ನಿರುಕ್ತ, ೫. ಛಂದಸ್ಸು, ೬. ಜ್ಯೋತಿಷ.

ಪ್ರ ೩೦೨ : **ಶಮಾದಿಗಳೆಷ್ಟು?**

ಉ : ಆರು. ೧. ಶಮ, ೨. ದಮ, ೩. ತಿತೀಕ್ಷ, ೪. ಸಮಾಧಾನ, ೫. ಉಪರತಿ, ೬. ಶ್ರದ್ಧೆ.

ಪ್ರ ೩೦೩ : **ಶಾಸ್ತ್ರಗಳೆಷ್ಟು?**

ಉ : ಆರು. ೧. ಸಾಂಖ್ಯಶಾಸ್ತ್ರ, ೨. ಯೋಗ ಶಾಸ್ತ್ರ, ೩. ನ್ಯಾಯ ಶಾಸ್ತ್ರ, ೪. ವೈಶೇಷಿಕ ಶಾಸ್ತ್ರ, ೫. ಪೂರ್ವ ಮೀಮಾಂಸ ಶಾಸ್ತ್ರ, ಮತ್ತು ೬. ಉತ್ತರ ಮೀಮಾಂಸ ಶಾಸ್ತ್ರ.

ಪ್ರ ೩೦೪ : **ಸಮಾಧಿಗಳೆಷ್ಟು?**

ಉ : ಆರು. ೧. ಬಾಹ್ಯದೃಶ್ಯಾನುವಿದ್ಧ ಸಮಾಧಿ, ೨. ಆಂತರ ದೃಶ್ಯಾನುವಿದ್ಧ ಸಮಾಧಿ, ೩. ಬಾಹ್ಯ ಶಬ್ದಾನುವಿದ್ಧ ಸಮಾಧಿ, ೪. ಆಂತರ ಶಬ್ದಾನುವಿದ್ಧ ಸಮಾಧಿ, ೫. ಬಾಹ್ಯ ನಿರ್ವಿಕಲ್ಪ ಸಮಾಧಿ, ಮತ್ತು ೬. ಆಂತರ ನಿರ್ವಿಕಲ್ಪ ಸಮಾಧಿ.

ಪ್ರ ೩೦೫ : **ಸೂತ್ರಗಳೆಷ್ಟು?**

ಉ : ಆರು. ೧. ಜೈಮಿನಿ ಸೂತ್ರ, ೨. ಅಶ್ವಲಾಯನ ಸೂತ್ರ, ೩. ಆಪಸ್ತಂಭ ಸೂತ್ರ, ೪. ಬೋಧಾಯನ ಸೂತ್ರ, ೫. ಕಾತ್ಯಾಯನ ಸೂತ್ರ, ಮತ್ತು ೬. ವೈಖಾನಸೀ ಸೂತ್ರ.

## ಏಳು ವಿಧ ಪದಾರ್ಥಗಳು

ಪ್ರ ೩೦೬ : **ಲೋಕಗಳೆಷ್ಟು? ಅವುಗಳ ಹೆಸರೇನು ?**

ಉ : ಲೋಕಗಳು ಏಳು. ೧. ಅತಲ, ೨. ವಿತಲ, ೩. ಸುತಲ, ೪. ತಲಾತಲ, ೫. ರಸಾತಲ, ೬. ಮಹಾತಲ, ೭. ಪಾತಾಳ.

ಪ್ರ ೩೦೭ : **ಚಿದಾಭಾಸನೆಂದರೆ ಜೀವನು. ಆ ಜೀವನಿಗೆ ಅವಸ್ಥೆ ಗಳೆಷ್ಟು?**

ಉ : ಏಳು. ೧. ಅಜ್ಞಾನ ಅಂದರೆ "ನಾನು ತಿಳಿಯದವನಾಗಿದ್ದೇನೆ" ಎಂಬ ವ್ಯವಹಾರಕ್ಕೆ ಹೇತುವಾದ ಆವರಣ ವಿಕ್ಷೇಪ ಶಕ್ತಿಯುಳ್ಳ ಅನಾದಿ ಅನಿರ್ವಚನೀಯ ಭಾವರೂಪವಾದುದೇ ಅಜ್ಞಾನ.

೨. ಆವರಣ ಅಂದರೆ "ಇಲ್ಲ, ತೋರುವುದಿಲ್ಲ" ಎಂಬ ವ್ಯವಹಾರಕ್ಕೆ ಹೇತುವಾದ ಅಜ್ಞಾನದ ಕಾರ್ಯವು ಹೇತುವೆನಿಸುತ್ತದೆ.

೩. ವಿಕ್ಷೇಪ ಅಂದರೆ ಧರ್ಮಸಹಿತವಾದ ದೇಹಾದಿ ಪ್ರಪಂಚ, ಮತ್ತು ಆ ಪ್ರಪಂಚದ ಜ್ಞಾನ – ಇವೆರಡೂ ಸೇರಿ ವಿಕ್ಷೇಪವೆನಿಸುತ್ತದೆ.

೪. ಪರೋಕ್ಷ ಜ್ಞಾನ.

೫. ಅಪರೋಕ್ಷ ಜ್ಞಾನ.

೬. ಶೋಕ ನಾಶ ಅಂದರೆ ವಿಕ್ಷೇಪ ನಾಶ. ಇದಕ್ಕೆ ಭ್ರಾಂತಿ ನಾಶವೆಂದು ಮತ್ತೊಂದು ಹೆಸರು.

೭. ತೃಪ್ತಿ ಅಂದರೆ ಅಹಂಬ್ರಹ್ಮಾಸ್ಮಿ ಎಂಬ ಜ್ಞಾನವೃತ್ತಿಯು ಉತ್ಪತ್ತಿಯಾದ ಮೇಲೆ ತೋರುವ ಹರ್ಷ.

ಪ್ರ ೩೦೮ : **ಚೇತನಗಳೆಷ್ಟು?**

ಉ : ವಾಸ್ತವಿಕವಾಗಿ ಚೇತನವು ಒಂದೇ ಆಗಿದ್ದರೂ, ಉಪಾಧಿ ದೃಷ್ಟಿಯಿಂದ ಚೇತನವು ಏಳು ವಿಧ ಎಂದು ಹೇಳಿಸಿಕೊಳ್ಳುತ್ತದೆ.

೧. ಶುದ್ಧ ಅಂದರೆ ನಿರುಪಾಧಿಕ ಚೇತನ.

೨. ಈಶ್ವರ ಚೇತನ ಅಂದರೆ ಮಾಯಾವಿಶಿಷ್ಟ ಚೇತನ.

೩. ಜೀವ ಚೇತನ ಅಂದರೆ ಅವಿದ್ಯಾ ವಿಶಿಷ್ಟ ಚೇತನ.

೪. ಪ್ರಮಾತೃ ಚೇತನ ಅಂದರೆ ಅಂತಃಕರಣದ ಅವಿಚ್ಛಿನ್ನವಾದ ಚೇತನ.

೫. ಪ್ರಮಾಣ ಚೇತನ ಅಂದರೆ ಇಂದ್ರಿಯಗಳ ಮೂಲಕ ಶರೀರದಿಂದ ಹೊರಗೆ ಹೋಗಿ ಘಟಾದಿ ವಿಷಯಗಳ ಪರಿಯಂತರ ಪಸರಿಸಿದ ವೃತ್ತಿಗೆ ಪ್ರಮಾಣವೆನ್ನುತ್ತಾರೆ. ಈ ಪ್ರಮಾಣದ ಅವಚ್ಛಿನ್ನ ಚೇತನವೇ ಪ್ರಮಾಣ ಚೇತನ.

೬. ಪ್ರಮೇಯ ಚೇತನ ಅಂದರೆ ಪ್ರಮಾಣದಿಂದ ತಿಳಿದುಬರುವ ಘಟಾದಿ ವಿಷಯಗಳು ಪ್ರಮೇಯ. ಈ ಪ್ರಮೇಯಾವಚ್ಛಿನ್ನ ಚೇತನವೇ ಪ್ರಮೇಯ ಚೇತನ.

೭. ಪ್ರಮಾ ಚೇತನ – ಪ್ರಮಾ ಅಂದರೆ ಘಟ ಪಟಾದಿ ವಿಷಯಾಕಾರವಾದ ವೃತ್ತಿ; ಈ ವೃತ್ತಿಯ ಅವಚ್ಛಿನ್ನ ಚೇತನವೇ ಪ್ರಮಾ ಚೇತನ ಅಥವಾ ವೃತ್ತಿಯಲ್ಲಿ ಪ್ರತಿಬಿಂಬಿತವಾದ ಚೇತನವೇ ಪ್ರಮಾ ಚೇತನ.

ಇದನ್ನು ಶಾಸ್ತ್ರದಲ್ಲಿ ಪ್ರಮಿತಿ ಚೇತನನೆಂತಲೂ, ಫಲ ಚೇತನವೆಂತಲೂ ಹೇಳುತ್ತಾರೆ.

ಪ್ರ ೩೦೯ : **ನ್ಯಾಯದರ್ಶನದಲ್ಲಿ ಹೇಳಿದ ಪದಾರ್ಥಗಳೆಷ್ಟು?**

ಉ : ಏಳು. (೧) ದ್ರವ್ಯ; ಇವು ಒಂಭತ್ತು ವಿಧ : ೧. ಪೃಥ್ವಿ, ೨. ಜಲ, ೩. ತೇಜ, ೪. ವಾಯು, ೫. ಆಕಾಶ, ೬. ಕಾಲ, ೭. ದಿಶ (ದಿಕ್ಕು), ೮. ಆತ್ಮ, ಮತ್ತು ೯. ಮನಸ್ಸು.

ಈ ಒಂಭತ್ತು ದ್ರವ್ಯಗಳು ಗುಣಗಳ ಆಶ್ರಯ ರೂಪವಾಗಿರುವುದರಿಂದ ಪದಾರ್ಥಗಳೆಂದು ಹೇಳಿಸಿಕೊಳ್ಳುತ್ತವೆ.

(೨) ಗುಣ – ನ್ಯಾಯ ಮತದಲ್ಲಿ ರೂಪದಿಂದ ಹಿಡಿದು ಸಂಸ್ಕಾರದವರೆಗೆ ೨೪ ಗುಣಗಳನ್ನು ಒಪ್ಪಿರುತ್ತಾರೆ.

(೩) ಕರ್ಮ – ನ್ಯಾಯ ಮತದಲ್ಲಿ ಕರ್ಮಗಳು ಐದು ವಿಧ :

೧. ಉತ್ಕ್ಷೇಪಣ, ಅಂದರೆ ಮೇಲಕ್ಕೆ ಎಸೆಯುವುದು.

೨. ಅಪಕ್ಷೇಪಣ, ಅಂದರೆ ಕೆಳಗೆ ಎಸೆಯುವುದು.

೩. ಆಕುಂಚನ, ಅಂದರೆ ಮುದುಡಿಕೊಳ್ಳುವುದು.

೪. ಪ್ರಸಾರಣ, ಅಂದರೆ ವಿಸ್ತಾರವಾಗುವುದು.

೫. ಗಮನ, ಅಂದರೆ ತಿರುಗಾಡುವುದು.

ಕರ್ಮವು ಈ ರೀತಿ ಐದು ವಿಧ.

(೪) ಸಾಮಾನ್ಯ – ನ್ಯಾಯ ಮತದಲ್ಲಿ ಪರಾ ಅಂದರೆ ಸತ್ತಾ; ಅಪರ ವೆಂದರೆ ತುಚ್ಛವಾದ, ಕೀಳಾದ; ಈ ಭೇದದಿಂದ ಸಾಮಾನ್ಯವು ಎರಡು ವಿಧ.

(೫) ಸಮವಾಯ – ವೇದಾಂತ ಮತದಲ್ಲಿ ತಾದಾತ್ಮ್ಯ ಸಂಬಂಧ ವನ್ನು ಒಪ್ಪಿಕೊಂಡಲ್ಲಿಲ್ಲಾ ನ್ಯಾಯ ಮತದಲ್ಲಿ ನಿತ್ಯ ಸಂಬಂಧವನ್ನು ಒಪ್ಪಿ ಕೊಂಡಿರುತ್ತಾರೆ.

(೬) ಅಭಾವ – ಅಭಾವವೆಂದರೆ ನಾಸ್ತಿ ಪ್ರತೀತಿಗೆ ವಿಷಯವಾದುದು. ನಾಸ್ತಿ ಪ್ರತೀತಿಯು ಐದು ವಿಧ : ೧. ಪ್ರಾಗ್‌ಭಾವ, ೨. ಪ್ರಧ್ವಂಸಾ ಭಾವ, ೩. ಅನ್ಯೋನ್ಯಾಭಾವ, ೪. ಅತ್ಯಂತಾಭಾವ, ಮತ್ತು ೫. ಸಾಮಾಯಿಕಾಭಾವ.

(೭) ವಿಶೇಷ – ಅಂದರೆ ನ್ಯಾಯ ಮತದಲ್ಲಿ ಪ್ರತಿ ಪರಮಾಣುವಿನ

ಮಧ್ಯದಲ್ಲಿರುವ ಅನಂತ ಅವಕಾಶ ರೂಪ. ಅವಕಾಶವನ್ನು ವಿಶೇಷ ಪದಾರ್ಥ ವೆನ್ನುತ್ತಾರೆ.

ಪ್ರ ೩೧೦ : **ಸಪ್ತಧಾತುಗಳು ಯಾವುವು ?**

ಉ : ೧. ರಸ – ಅಂದರೆ ಸೂಕ್ಷ್ಮವಾದ ಪುಣ್ಯ ಪಾಪ ಅನ್ನದ ರಸ ವಾದ ಮಧ್ಯಮ ಭಾಗ, ಸ್ಥೂಲವಾದ ಮಲ – ಈ ರೀತಿ ಭುಕ್ತಾನ್ನವು ಮೂರು ವಿಭಾಗವಾಗಿದೆ ಈ ಮೂರರಲ್ಲಿ ಮಧ್ಯಮ ಭಾಗಕ್ಕೆ ರಸವೆನ್ನು ತ್ತಾರೆ.

೨. ರುಧಿರ – ಅಂದರೆ ರಕ್ತ.

೩. ಮಾಂಸ

೪. ಮೇಧ – ಅಂದರೆ ಚರ್ಬಿ; ಇದಕ್ಕೆ ಶ್ವೇತಮಾಂಸವೆಂದು ಹೇಳು ತ್ತಾರೆ.

೫. ಮಜ್ಜ – ಅಸ್ಥಿಯಲ್ಲಿರುವ ರಸವಿಶೇಷ.

೬. ಅಸ್ಥಿ – ಅಂದರೆ ಎಲುಬು.

೭. ರೇತಸ್ಸು ಅಂದರೆ ವೀರ್ಯ.

ಪ್ರ ೩೧೧. **ಭೂರಾದಿ ಲೋಕಗಳೆಷ್ಟು?**

ಉ : ಏಳು. ಇವು ಊರ್ಧ್ವಸ್ಥಾನದಲ್ಲಿರುವ ಲೋಕಗಳು : ೧. ಭೂಲೋಕ, ೨. ಭುವರ್ಲೋಕ, ೩. ಸ್ವರ್ಗಲೋಕ, ೪. ಮಹಾಲೋಕ, ೫. ಜನಲೋಕ, ೬. ತಪಲೋಕ, ಮತ್ತು ೭. ಸತ್ಯಲೋಕ.

ಪ್ರ ೩೧೨ : **ಯೋಗ ಸಾಧನೆ ಮಾಡುವವರು ಸಾಧಿಸಬೇಕಾದ ವಿಷಯಗಳೆಷ್ಟು?**

ಉ : ಏಳು. ೧. ಮೌನ, ೨. ಯೋಗಾಸನ, ೩. ಯೋಗ, ೪. ತಿತೀಕ್ಷ, ೫. ಏಕಾಂತ ಶೀಲತ, ೬. ನಿಸ್ಪೃಹತ, ಮತ್ತು ೭. ಸಮತಾ.

ಪ್ರ ೩೧೩ : **ರೂಪಗಳೆಷ್ಟು ವಿಧ ?**

ಉ : ಏಳು ವಿಧ. ೧. ಶುಕ್ಲ (ಬಿಳುಪು), ೨. ಕೃಷ್ಣ (ಕಪ್ಪು), ೩. ಪೀತ, ೪. ರಕ್ತ (ಕೆಂಪು), ೫. ಹರಿತ (ಹಸುರು), ೬. ಕಪಿಲ (ನೀಲ), ಮತ್ತು ೭. ಚಿತ್ರ (ಅನೇಕ ಬಣ್ಣ).

ಪ್ರ ೩೧೪ : **ವ್ಯಸನಗಳೆಷ್ಟು?**

ಉ : ಏಳು. ೧. ತನು ವ್ಯಸನ, ೨. ಮನೋವ್ಯಸನ, ೩. ಕ್ರೋಧ ವ್ಯಸನ, ೪. ವಿಷಯ ವ್ಯಸನ, ೫. ಧನ ವ್ಯಸನ, ೬. ರಾಜ್ಯ ವ್ಯಸನ, ಮತ್ತು ೭. ಸೇವಕ ವ್ಯಸನ.

ಪ್ರ ೩೧೫ : **ಜ್ಞಾನಭೂಮಿಕೆಗಳೆಷ್ಟು?**

ಉ : ಏಳು. ಇವುಗಳನ್ನು ಹಿಂದೆ ೧೩ನೇ ಕಲೆಯಲ್ಲಿ ವಿವರಿಸಿದೆ : ೧. ಶುಭೇಚ್ಛೆ, ೨. ಸುವಿಚಾರಣಾ, ೩. ತನು ಮಾನಸ, ೪. ಸತ್ವಾಪತ್ತಿ, ೫. ಅಸಂಸಕ್ತಿ, ೬. ಪದಾರ್ಥಾ ಭಾವಿನಿ, ಮತ್ತು ೭. ತುರೀಯಾ.

## ಎಂಟು ವಿಧ ಪದಾರ್ಥಗಳು

ಪ್ರ ೩೧೬ : **ಪಾಶಗಳು ಎಷ್ಟು ವಿಧ ?**

ಉ : ಪಾಶಗಳೆಂದರೆ ಸ್ವತಂತ್ರವಿಲ್ಲದಂತೆ ಬಂಧಿಸುವ ಸಾಧನ. ಅವು ಎಂಟು : ೧. ದಯ, ೨. ಶಂಕಾ, ೩. ಭಯ, ೪. ಲಜ್ಜಾ, ೫. ನಿಂದಾ, ೬. ಕುಲ, ೭. ಶೀಲ, ೮. ಧನ.

ಪ್ರ ೩೧೭ : **ಪುರಿಗಳೆಷ್ಟು?**

ಉ : ಎಂಟು. ೧. ಜ್ಞಾನೇಂದ್ರಿಯ ಪಂಚಕ, ೨. ಕರ್ಮೇಂದ್ರಿಯ ಪಂಚಕ, ೩. ಪ್ರಾಣ ಪಂಚಕ, ೪. ಭೂತ ಪಂಚಕ, ೫. ಅಂತಃಕರಣ, ೬. ಅವಿದ್ಯಾ, ೭. ಕಾಮ, ಮತ್ತು ೮. ಕರ್ಮ.

ಪ್ರ ೩೧೮ : **ಪ್ರಕೃತಿಗಳೆಷ್ಟು ?**

ಉ : ಎಂಟು. ೧. ಪೃಥ್ವಿ, ೨. ಜಲ, ೩. ಅಗ್ನಿ, ೪. ವಾಯು, ೫. ಆಕಾಶ, ೬. ಮನಸ್ಸು, ೭. ಬುದ್ಧಿ, ೮. ಅಹಂಕಾರ.

ಪ್ರ ೩೧೯ : **ಅಹಂಕಾರವೆಂಬ ಶಬ್ದದಿಂದ ಏನು ಗ್ರಹಿಸಬೇಕು ?**

ಉ : ಮಹತ್ತತ್ವಕ್ಕಿಂತಲೂ ಪೂರ್ವದಲ್ಲಿರುವ ಶುದ್ಧ ಅಹಂಕಾರಕ್ಕೂ ಕಾರಣವಾದ ಅಜ್ಞಾನರೂಪವಾದ ಮೂಲ ಪ್ರಕೃತಿಯನ್ನು ಗ್ರಹಿಸಬೇಕು.

ಪ್ರ ೩೨೦ : **ಬ್ರಹ್ಮಚರ್ಯಗಳೆಷ್ಟು?**

ಉ : ಎಂಟು. ೧. ಸ್ತ್ರೀಯರ ದರ್ಶನ, ೨. ಸ್ಪರ್ಶನ, ೩. ಕೇಳಿ, ೪. ಕೀರ್ತನ, ೫. ಗುಹ್ಯ ಭಾಷಣ, ೬. ಸಂಕಲ್ಪ ಅಂದರೆ ಚಿಂತನ, ೭.

ನಿಶ್ಚಯ, ಮತ್ತು ೮. ಕ್ರಿಯಾಜನ್ಯ ಸುಖ – ಇವು ಇಲ್ಲದಿರುವುದು ಬ್ರಹ್ಮಚರ್ಯ.

ಪ್ರ ೩೨೧ : **ಮದಗಳೆಷ್ಟು? ಅವು ಯಾವುವು ?**

ಉ : ಎಂಟು. ೧. ಕುಲ ಮದ, ೨. ಶೀಲ ಮದ, ೩. ಧನ ಮದ, ೪. ಯೌವನ ಮದ, ೬. ವಿದ್ಯಾ ಮದ, ೭. ತಪೋ ಮದ, ಮತ್ತು ೮. ರಾಜ್ಯ ಮದ.

ಪ್ರ ೩೨೨ : **ಮೂರ್ತಿ ಮದಗಳೆಷ್ಟು?**

ಉ : ಎಂಟು

೧. ಪೃಥ್ವಿ ಮದ ಅಂದರೆ ಸ್ಥೂಲ ದೇಹದಲ್ಲಿರುವ ಅಸ್ಥಿ, ಮಾಂಸ, ಮೊದಲಾದ ಪೃಥ್ವಿಯ ತತ್ವಗಳ ಅಭಿಮಾನ.

೨. ಜಲ ಮದ ಅಂದರೆ ಸ್ಥೂಲ ದೇಹದಲ್ಲಿರುವ ಶುಕ್ಲ, ಶೋಣಿತ, ಮೊದಲಾದ ಜಲ ತತ್ವಗಳ ಅಭಿಮಾನ.

೩. ತೇಜ ಮದ ಅಂದರೆ ಸ್ಥೂಲ ದೇಹದಲ್ಲಿರುವ ಅಗ್ನಿ ತತ್ವಕ್ಕೆ ಸಂಬಂಧಪಟ್ಟ ಉಷ್ಣತ್ವದ ಅಭಿಮಾನ.

೪. ಪವನ ಮದ ಅಂದರೆ ಚಲನ, ವಲನ, ಧಾವನ, ಮೊದಲಾದ ಸ್ಥೂಲದೇಹದಲ್ಲಿರುವ ಗಮನಾಗಮನಗಳ ಅಭಿಮಾನ.

೫. ಆಕಾಶ ಮದ ಅಂದರೆ ಕಾಮ, ಕ್ರೋಧ, ಮೊದಲಾದವುಗಳ ಆಕಾಶದ ಅಂಶಗಳ ಅಭಿಮಾನ.

೬. ಚಂದ್ರ ಮದ ಅಂದರೆ ಚಂದ್ರನ ಧರ್ಮವಾದ ಶೀತಲತ್ವದ ಅಭಿಮಾನ.

೭. ಆತ್ಮ ಮದ ಅಂದರೆ ಆತ್ಮಕ್ಕೆ ಸಂಬಂಧಪಟ್ಟ ಅಂದರೆ ಬುದ್ಧಿಗೆ ಸಂಬಂಧಪಟ್ಟ ವಿದ್ಯಾ, ಧನ, ಕುಲ ಮೊದಲಾದುವುಗಳ ಅಭಿಮಾನ.

೮. ಸೂರ್ಯ ಮದ ಅಂದರೆ ಸೂರ್ಯನ ಧರ್ಮಗಳಾದ ತಾಪ ಕೋಪಾದಿಗಳ ಅಭಿಮಾನ.

ಪ್ರ ೩೨೩ : **ಶಬ್ದಶಕ್ತಿಯನ್ನು ಗ್ರಹಣ ಮಾಡುವ ಪದಾರ್ಥಗಳೆಷ್ಟು ?**

ಉ : ಎಂಟು. ೧. ವ್ಯಾಕರಣ, ೨. ಉಪಮಾನ, ೩. ಕೋಶ,

೪. ಆಪ್ತ ವಾಕ್ಯ, ೫. ವೃದ್ಧ ವ್ಯವಹಾರ, ೬. ವಾಕ್ಯ ಶೇಷ, ೭. ವಿವರಣ, ಮತ್ತು ೮. ಸಿದ್ಧ ಪುರುಷರ ಸನ್ನಿಧಿ.

ಪ್ರ ೩೨೪ : **ಸಮಾಧಿಯ ಅಂಗಗಳೆಷ್ಟು?**

ಉ : ಎಂಟು. ೧. ಯಮ, ೨. ನಿಯಮ, ೩. ಆಸನ, ೪. ಪ್ರಾಣಾಯಾಮ, ೫. ಪ್ರತ್ಯಾಹಾರ, ೬. ಧಾರಣ, ೭. ಧ್ಯಾನ, ಮತ್ತು ೮. ಸಮಾಧಿ.

## ಒಂಭತ್ತು ವಿಧ ಪದಾರ್ಥಗಳು

ಪ್ರ ೩೨೫ : **ತತ್ವಗಳೆಷ್ಟು?**

ಉ : ಒಂಭತ್ತು. ಕೆಲವು ಶಾಸ್ತ್ರಗಳಲ್ಲಿ ಲಿಂಗ ದೇಹಕ್ಕೆ ಒಂಭತ್ತು ತತ್ವಗಳು ಹೇಳಲ್ಪಟ್ಟಿವೆ : ೧. ಜ್ಞಾನೇಂದ್ರಿಯಗಳೈದು, ೨. ಅಂತಃಕರಣ ಚತುಷ್ಟಯ.

ಪ್ರ ೩೨೬ : **ಸಂಸಾರ ಪದಾರ್ಥಗಳೆಷ್ಟು?**

ಉ : ಒಂಭತ್ತು. ೧. ಜ್ಞಾತಾ, ೨. ಜ್ಞಾನ, ೩. ಜ್ಞೇಯ, ೪. ಭೋಕ್ತ, ೫. ಭೋಗ್ಯ, ೬. ಭೋಗ, ೭. ಕರ್ತ. ೮. ಕರಣ, ಮತ್ತು ೯. ಕ್ರಿಯೆ.

## ಹತ್ತು ವಿಧ ಪದಾರ್ಥಗಳು

ಪ್ರ ೩೨೭ : **ನಾಡಿಗಳೆಷ್ಟು? ಅವುಗಳ ದೇವತೆಗಳು ಯಾರು ?**

ಉ : ನಾಡಿಗಳು ಹತ್ತು. ದೇವತೆಗಳೂ ಹತ್ತು.

೧. ಈಡಾ : ಅದಿರುವ ಸ್ಥಳ ವಾಮನಾಸಿಕ. ಅದಕ್ಕೆ ಚಂದ್ರನಾಡಿಯೆಂದು ಹೆಸರು. ಅದಕ್ಕೆ ಹರಿ ದೇವತ.

| ನಾಡಿ | ಸ್ಥಳ | ದೇವತಾ |
|---|---|---|
| ೧. ಈಡಾ | ವಾಮನಾಸಿಕ (ಚಂದ್ರನಾಡಿಯೆಂದು ಹೆಸರು) | ಹರಿ |
| ೨. ಪಿಂಗಳಾ | ದಕ್ಷಿಣ ನಾಸಿಕ (ಸೂರ್ಯನಾಡಿಯೆಂದು ಹೆಸರು) | ಬ್ರಹ್ಮ |
| ೩. ಸುಷುಮ್ನಾ | ಮಧ್ಯನಾಸಿಕ (ಮಧ್ಯಮ ನಾಡಿಯೆಂದು ಹೆಸರು) | ರುದ್ರ |

| | ನಾಡಿ | ಸ್ಥಳ | ದೇವತಾ |
|---|---|---|---|
| ೪. | ಗಾಂಧಾರಿ | ದಕ್ಷಿಣ (ಬಲ) ನೇತ್ರ | ಇಂದ್ರ |
| ೫. | ಅಸ್ತಿ | ಎಡ (ವಾಮ)ನೇತ್ರ | ವರುಣ |
| ೬. | ಪೂಷ | ದಕ್ಷಿಣ ಕರ್ಣ | ಈಶ್ವರ |
| ೭. | ಯಶಶ್ವಿನಿ | ವಾಮುಕರ್ಣ | ಬ್ರಹ್ಮದೇವತೆ |
| ೮. | ಕೂಹು | ಗುದಸ್ಥಾನ | ಪೃಥ್ವಿ |
| ೯. | ಅಲಂಬುಷಾ | ಮೇಂಡ್ರಸ್ಥಾನ | ಸೂರ್ಯ |
| ೧೦. | ಶಂಖಿನಿ | ನಾಭಿ | ಇಂದ್ರದೇವತಾ |

ಪ್ರ ೩೨೮: **ರಸಗಳೆಷ್ಟು ?**

ಉ : ಹತ್ತು. ೧. ಶೃಂಗಾರ ರಸ, ೨. ವೀರ ರಸ, ೩. ಕರುಣಾ ರಸ, ೪. ಅದ್ಭುತ ರಸ, ೫. ಹಾಸ್ಯ ರಸ, ೬. ಭಯಾನಕ ರಸ, ೭. ಭೀಭತ್ಸ ರಸ, ೮. ರೌದ್ರ ರಸ, ೯. ಶಾಂತಿ ರಸ. (ಇವು ನವರಸಗಳು. ವೇದಾಂತದಲ್ಲಿ ಹೇಳಿರುವುದು ಜ್ಞಾನ ರಸ) ಮತ್ತು ೧೦. ಜ್ಞಾನ ರಸ.

## ಹನ್ನೊಂದು ವಿಧ ಪದಾರ್ಥಗಳು

ಪ್ರ ೩೨೯ : **ಜ್ಞಾನ ಸಾಧನಗಳೆಷ್ಟು ?**

ಉ : ಹನ್ನೊಂದು. ೧. ವಿವೇಕ, ೨. ವೈರಾಗ್ಯ, ೩. ಶಮಾದಿ ಷಟ್ ಸಂಪತ್ತಿ, ೪. ಮುಮುಕ್ಷುತಾ, ೫. ಗುರೂಪ ಸತ್ತಿ ಅಂದರೆ ವಿಧಿಪೂರ್ವಕ ವಾಗಿ ಗುರುಗಳಿಗೆ ಶರಣು ಹೋಗುವುದು, ೬. ಶ್ರವಣ, ೭. ತತ್ವಜ್ಞಾನಾ ಭ್ಯಾಸ, ೮. ಮನನ, ೯. ನಿಧಿ ಧ್ಯಾಸನ, ೧೦. ಮನೋನಾಶ. (ಅಂದರೆ ಮನಸ್ಸೆಂಬ ಶಬ್ದದಿಂದ ಅದರಲ್ಲಿರುವ ಸತ್ವಗುಣವು ರಜೋ-ತಮೋ ಗುಣಗಳನ್ನು ತಿರಸ್ಕರಿಸುವುದು. ಅಂದರೆ ಮನಸ್ಸಿನ ಸ್ಥೂಲಭಾಗ ನಾಶವಾಗಿ ಸೂಕ್ಷ್ಮವಾಗುವುದು. ಇದರಲ್ಲಿ ಬ್ರಹ್ಮಾಭ್ಯಾಸದ ಪ್ರಬಲತೆಯಿಂದ ರಜೋ-ತಮೋ ಗುಣಗಳು ತಿರಸ್ಕಾರವಾಗಿ ಸತ್ವಗುಣದ ಆವಿರ್ಭಾವವಾಗುವುದು.) ೧೧. ವಾಸನಾ ಕ್ಷಯ.

## ಹನ್ನೆರಡು ವಿಧ ಪದಾರ್ಥಗಳು

ಪ್ರ ೩೩೦ : **ಅನಾತ್ಮದ ಧರ್ಮಗಳೆಷ್ಟು ?**

ಉ : ಹನ್ನೆರಡು. ೧. ಅನಿತ್ಯ, ೨. ವಿನಾಶಿ, ೩. ಅಶುದ್ಧ, ೪. ನಾನಾ (ಅನೇಕ), ೫. ಕ್ಷೇತ್ರ (ಪರಾಧೀನ), ೬. ಆಶ್ರಿತ, ೭. ವಿಕಾರಿ, ೮. ಪರ ಪ್ರಕಾಶ, ೯. ಹೇತುವುಳ್ಳವುಗಳು, ೧೦. ವ್ಯಾಪ್ಯ (ಪರಿಚ್ಛಿನ್ನ) ಅಂದರೆ ದೇಶ ಕಾಲ ವಸ್ತುಕೃತ ಪರಿಚ್ಛಿನ್ನವುಳ್ಳವುಗಳು, ೧೧. ಸಂಗೀ (ಸಂಗವುಳ್ಳವುಗಳು), ಮತ್ತು ೧೨. ಆವೃತ.

ಪ್ರ ೩೩೧ : **ಆತ್ಮನ ಧರ್ಮಗಳೆಷ್ಟು ?**

ಉ : ಹನ್ನೆರಡು.

೧. ನಿತ್ಯ

೨. ಅವ್ಯಯ – ವೃದ್ಧಿಕ್ಷಯಗಳಿಲ್ಲದ್ದು.

೩. ಶುದ್ಧ – ಅಂದರೆ ಮಾಯಾ – ಅವಿದ್ಯಾ ರೂಪ ಮಲವಿಲ್ಲದ್ದು.

೪. ಏಕ – ಅಂದರೆ ಸಜಾತೀಯ ವಿಜಾತೀಯ ಸ್ವಗತಭೇದ ರಹಿತ ವಾದದ್ದು.

೫. ಕ್ಷೇತ್ರಜ್ಞ – ಅಂದರೆ ಶರೀರವೆಂಬ ಕ್ಷೇತ್ರವನ್ನು ತಿಳಿಯುವವನು.

೬. ಆಶ್ರಯ – ಅಂದರೆ ಅಧಿಷ್ಠಾನ.

೭. ಅವಿಕ್ರಿಯ – ಅಂದರೆ ವಿಕಾರ ರಹಿತವಾದದ್ದು

೮. ಸ್ವಪ್ರಕಾಶ – ಅಂದರೆ ಸ್ವಯಮಿತರ ಜ್ಞಪ್ತಿವುಳ್ಳದ್ದು. ತನ್ನ ಪ್ರಕಾಶದಲ್ಲಿಯೂ, ಇತರ ಪ್ರಕಾಶದಲ್ಲಿಯೂ ಇತರ ವಸ್ತುಗಳ ಪ್ರಕಾಶವನ್ನು ಬಯಸದೇ ಇರುವುದು. ಇದಕ್ಕೆ ಶಾಸ್ತ್ರ ಪರಿಭಾಷೆಯಲ್ಲಿ "ಅದೃಶ್ಯತ್ವೇಸತಿ ಅಪರೋಕ್ಷತ್ವಂ ಸ್ವಯಂಪ್ರಕಾಶಂ" ಎನ್ನುತ್ತಾರೆ.

೯. ಹೇತು – ಅಂದರೆ ಕಾರಣ, ಅಂದರೆ ಪಟಕ್ಕೆ ಊರ್ಣ ನಾಭಿಯಂತೆ ನಖ, ರೋಮ, ಕೇಶಗಳಿಗೆ ಕಾರಣವಾದ ಪುರುಷನಂತೆ ಜಗತ್ತಿಗೆ ಅಭಿನ್ನ ನಿಮಿತ್ತೋಪದಾನ ಕಾರಣವಾದದ್ದು.

೧೦. ವ್ಯಾಪಕ – ಅಂದರೆ ಅಪರಿಚ್ಛಿನ್ನ.

೧೧. ಅಸಂಗಿ – ಅಂದರೆ ಸಜಾತೀಯ ವಿಜಾತೀಯ ಸ್ವಗತ ಭೇದವಿಲ್ಲದ್ದು. ಇದಕ್ಕೆ ಶೃತಿಯಲ್ಲಿ ''ಅಸಂಗೋಹ್ಯಯಂ ಪುರುಷ'' ಎಂದು ಹೇಳಿದೆ.

೧೨. ಅನಾವೃತ – ಅಂದರೆ ನಿರಾವರಣ.

ಪ್ರ ೩೩೨ : **ಬ್ರಾಹ್ಮಣ ಧರ್ಮಗಳೆಷ್ಟು ?**

ಉ : ಹನ್ನೆರಡು.

೧. ಜ್ಞಾನ

೨. ಸತ್ಯ

೩. ಶಮ

೪. ದಮ

೫. ಶಾಸ್ತ್ರ ಶ್ರವಣ

೬. ಅಮಾತ್ಸರ್ಯ – ಅಂದರೆ ಮತ್ತೊಬ್ಬರ ಉತ್ಕರ್ಷದ ಸಹನವಿಲ್ಲದಿದ್ದರೆ ಅದು ಮಾತ್ಸರ್ಯ, ಅದಿಲ್ಲದ್ದು ಅಮಾತ್ಸರ್ಯ.

೭. ಲಜ್ಜಾ

೮. ತಿತೀಕ್ಷಾ

೯. ಅನಸೂಯ – ಅಂದರೆ ಗುಣಗಳಲ್ಲಿ ದೋಷಾರೋಪಣೆ ಮಾಡದಿರುವುದು.

**''ನಗುಣಾನ್ ಗುಣೀನೋಹಂತಿ**
**ಸ್ತೌತಿಮಂದ ಗುಣಾನಪಿ ।**
**ನಾನ್ಯ ದೋಷೇಷುರಮತೇ**
**ಸಾನುಸೂಯ ಪ್ರಕೀರ್ತಿತ** (ಅತ್ರಿಸ್ಮೃತಿ)

ತಾತ್ಪರ್ಯ : ಗುಣವಂತರ ಗುಣಗಳನ್ನು ಕೊಲ್ಲದಿರುವುದು; ಮಂದ ಗುಣವುಳ್ಳವರನ್ನು ಸ್ತುತಿಸುವುದು ; ಅನ್ಯರ ದೋಷದಲ್ಲಿ ರಮಿಸದಿರುವುದು (ಉಪೇಕ್ಷಿಸುವುದು) ; ಇಂಥ ವೃತ್ತಿಯು ಅನಸೂಯವೆಂದು ಹೇಳಿಸಿ ಕೊಳ್ಳುತ್ತದೆ.

೧೦. ಯಜ್ಞ

೧೧. ದಾನ

೧೨. ಧೈರ್ಯ, ಅಂದರೆ ಕಾಮ ಕ್ರೋಧಗಳ ವೇಗವನ್ನು ತಡೆಯುಬಲ್ಲದ್ದು.

ಪ್ರ ೩೩೩ : **ಮಹತ್ವಕ್ಕೆ ಕಾರಣವಾದ ಧರ್ಮಗಳೆಷ್ಟು ?**

ಉ : ಹನ್ನೆರಡು.

೧. ಧನಾಢ್ಯತ

೨. ಅಭಿಜನ ಅಂದರೆ ದೊಡ್ಡ ಕುಟುಂಬದಲ್ಲಿರುವವರು.

೩. ರೂಪ, ಅಂದರೆ ಸುಂದರರೂಪ

೪. ತಪ, ಅಂದರೆ ತಪಸ್ವಿಯಾಗುವುದು

೫. ಶೃತ, ಅಂದರೆ ಶಾಸ್ತ್ರಾಭ್ಯಾಸ

೬. ಓಜ, ಅಂದರೆ ಇಂದ್ರಿಯಗಳಲ್ಲಿಯೂ ಮುಖದಲ್ಲಿಯೂ ತೇಜಸ್ಸಿರುವುದು.

೭. ತೇಜ, ಅಂದರೆ ಬಹಳ ಜನರು ಅವನ ಮಾತನ್ನು ಮನ್ನಿಸುವುದು.

೮. ಪ್ರಭಾವ, ಅಂದರೆ ಎಲ್ಲರಿಂದಾಗದ ಕೆಲಸ ಮಾಡುವುದು.

೯. ಬಲ, ಅಂದರೆ ಸಾತ್ವಿಕವಾದ ದೇಹಬಲ ಮನೋಬಲವಿರುವುದು.

೧೦. ಪೌರುಷ, ಅಂದರೆ ಕಾಯಾ ವಾಚಾ ಮನಸಾ ಕ್ರಿಯೆಗಳು ಶುದ್ಧವಾಗಿರುವುದು.

೧೧. ಬುದ್ಧಿ, ಅಂದರೆ ವ್ಯವಹಾರ ಚತುರತೆ.

೧೨ ಯೋಗ, ಅಂದರೆ ಕುಶಲತೆ ಅಥವಾ ಅಭ್ಯಾಸ

## ಹದಿಮೂರು ವಿಧ ಪದಾರ್ಥಗಳು

ಪ್ರ ೩೩೪ : **ಭಾಗವತ ಅಥವಾ ಭಕ್ತನ ಧರ್ಮಗಳೆಷ್ಟು?**

ಉ : ಹದಿಮೂರು

೧. ಸಕಾಮ ಕರ್ಮವನ್ನು ನಿಂದಿಸುವುದು.

೨. ಧನ, ಗೃಹ, ಮೊದಲಾದವುಗಳ ವಿಷಯವಾಗಿ ಇರುವ ದೋಷವನ್ನು ಕಂಡು ಮನಸ್ಸಿನಲ್ಲಿ ಜಿಗುಪ್ಸೆ ಪಡುವುದು.

೩. ಪರಲೋಕ ವಿಷಯದಲ್ಲಿ ನಶ್ವರ ಬುದ್ಧಿ.

೪. ಶಬ್ದಬ್ರಹ್ಮ ಮತ್ತು ಪರಬ್ರಹ್ಮರ ವಿಷಯದಲ್ಲಿ ಕುಶಲನಾದ ಗುರುವನ್ನು ಹೊಂದುವುದು.

೫. ಗುರುವಿನಲ್ಲಿ ಈಶ್ವರ ಬುದ್ಧಿಯನ್ನಿಟ್ಟು ನಿಷ್ಕಪಟದಿಂದ ಸೇವೆ ಮಾಡುವುದು.

೬. ಮೂರು ದೇಹಗಳಿಂದಲೂ ನಡೆಯುವ ಸರ್ವ ಕ್ರಿಯೆಗಳನ್ನು ಪರಮೇಶ್ವರನಿಗೆ ಅರ್ಪಿಸುವುದು.

೭. ಸಾಧು ಸಂಗದಲ್ಲಿದ್ದು ವೈರಾಗ್ಯ ಸಹಿತವಾಗಿ ಸ್ವರೂಪಾನು ಸಂಧಾನವನ್ನು ಮಾಡುವುದು.

೮. (i) ಶೌಚ, (ii) ತಪಸ್ಸು, (iii) ತಿತೀಕ್ಷ್ಯ, (iv) ಮೌನ.

೯. ಸರಳ ಸ್ವಭಾವದಿಂದಿದ್ದು ಸ್ವಾಧ್ಯಾಯ ಮಾಡುವುದು. ಇದು ಎರಡು ವಿಧ :

- i. ಶಾಸ್ತ್ರವನ್ನು ಅಧ್ಯಯನ ಮಾಡುವುದು.
- ii. ಸ್ವ + ಅಧ್ಯಾಯ = ಸ್ವಾಧ್ಯಾಯ. 'ಸ್ವ' ಅಂದರೆ ಆತ್ಮ. ಆತ್ಮನನ್ನು ತೋರಿಸುವ ಶಾಸ್ತ್ರವನ್ನು ಅಧ್ಯಯನ ಮಾಡುವುದು.

೧೦. ಸರ್ವತ್ರವೂ ಆತ್ಮದರ್ಶನ.

೧೧. (i) ಕೈವಲ್ಯ – ಏಕಾಕಿಯಾಗುವುದು.

(ii) ನಿಕೇತ – ವಾಸಸ್ಥಾನ, ಅದಿಲ್ಲದವನು ಅಂದರೆ ದೇಹವೇ ವಾಸಸ್ಥಾನವಾಗಿರುವವನು.

(iii) ಏಕಾಂತ, ಅಂದರೆ ಬ್ರಹ್ಮದಲ್ಲಿ ಮನಸ್ಸಿಟ್ಟಿರುವವನು.

(iv) ಸದಾ ಸಂತೋಷವಾಗಿರುವವನು.

೧೨. ಸರ್ವ ಭೂತಗಳಲ್ಲಿಯೂ ತನ್ನನ್ನೇ ನೋಡುವವನು.

೧೩. ಜನ್ಮ, ಕರ್ಮ, ವರ್ಣಾಶ್ರಮ ಮೊದಲಾದವುಗಳಲ್ಲಿ ನಿರಭಿ ಮಾನವಿರುವುದು.

## ಹದಿನಾಲ್ಕು ವಿಧ ಪದಾರ್ಥಗಳು

ಪ್ರ ೩೩೫ : **ತ್ರಿಪುಟಿಗಳೆಷ್ಟು ?**

ಉ : ಮೂರು ವಿಧ ಸೇರಿ ಹದಿನಾಲ್ಕು.

೧. ಜ್ಞಾನೇಂದ್ರಿಯ ತ್ರಿಪುಟಿ.

೨. ಅಂತಃಕರಣ ತ್ರಿಪುಟಿ.

೩. ಕರ್ಮೇಂದ್ರಿಯ ತ್ರಿಪುಟಿ.

## ಹದಿನೈದು ವಿಧ ಪದಾರ್ಥಗಳು

ಪ್ರ ೩೩೬ : **ಮಾಯೆಯ ನಾಮಗಳೆಷ್ಟು?**

ಉ : ಹದಿನೈದು. ೧. ಮಾಯಾ, ೨. ಅವಿದ್ಯಾ, ೩. ಪ್ರಕೃತಿ, ೪. ಶಕ್ತಿ, ೫. ಸತ್ತ್ವಾ, ೬. ಮೂಲಾವಿದ್ಯಾ, ೭. ತೂಲಾ ವಿದ್ಯಾ, ೮. ಯೋನಿ, ೯. ಅವ್ಯಕ್ತ, ೧೦. ಅವ್ಯಾಕೃತ, ೧೧. ಅಜ, ೧೨. ಅಜ್ಞಾನ, ೧೩. ತಪಸ್ಸು, ೧೪. ತುಚ್ಛ, ಮತ್ತು ೧೫. ಅನಿರ್ವಚನೀಯ.

## ಹದಿನಾರು ವಿಧ ಪದಾರ್ಥಗಳು

ಪ್ರ ೩೩೭ : **ಕಲೆಗಳೆಷ್ಟು?**

ಉ : ಹದಿನಾರು. ೧. ಹಿರಣ್ಯಗರ್ಭ, ೨. ಶ್ರದ್ಧಾ, ೩. ಆಕಾಶ, ೪. ವಾಯು, ೫. ತೇಜ, ೬. ಜಲ, ೭. ಪೃಥ್ವಿ, ೮. ಸಮಷ್ಟಿ ದಶೇಂದ್ರಿಯಗಳು, ೯. ಸಮಷ್ಟಿ ಮನಸ್ಸು, ೧೦. ಸಮಷ್ಟಿ ಅನ್ನ, ೧೧. ಸಮಷ್ಟಿ ಬಲ, ೧೨. ತಪ, ೧೩. ಮಂತ್ರ, ೧೪. ಸಮಷ್ಟಿ ಕರ್ಮ, ೧೫. ಲೋಕಲೋಕಾಂತರಗಳು, ಮತ್ತು ೧೬. ಸಮಷ್ಟಿ ನಾಮ. ಇವು ಈಶ್ವರನ ಹದಿನಾರು ಕಲೆಗಳು.

ಪ್ರ ೩೩೮ : **ಜೀವನ ಹದಿನಾರು ಕಲೆಗಳು ಯಾವುವು ?**

ಉ : ವ್ಯಷ್ಟಿಲಿಂಗ ದೇಹದಲ್ಲಿರುವ ಪಂಚಜ್ಞಾನೇಂದ್ರಿಯಗಳು ೫, ಪಂಚ ಕರ್ಮೇಂದ್ರಿಯಗಳು ೫, ಪಂಚ ಪ್ರಾಣಗಳು ೫, ಮತ್ತು ಅಂತಃಕರಣ ೧. ಒಟ್ಟು ೧೬.

ಶ್ರೀ ವಿಚಾರ ಚಂದ್ರೋದಯಂ । ಶುದ್ಧಾಂಧಿಯಂ ಸಮಾಪ್ಯ
ವಿಚಾರೇತಿ ಪರಾನಂದ, ತತ್ವಜ್ಞಾನಮವಾಪ್ಯ ॥

ಶ್ರದ್ಧೆಯಿಂದ ವಿಚಾರ ಮಾಡಿದವರಿಗೆ ಸರ್ವ ದುಃಖಗಳ ಅತ್ಯಂತ ನಿವೃತ್ತಿ ಪರಮಾನಂದ ಪ್ರಾಪ್ತಿಯನ್ನುಂಟುಮಾಡುವ ಹದಿನಾರು ಕಲೆಗಳಿಂದ ಕೂಡಿದ ಶ್ರೀ ವಿಚಾರ ಚಂದ್ರೋದಯವು ಸಮಾಪ್ತ.

ಓಂ ಲೋಕಾಸ್ಸಮಸ್ತಾ ಸುಖಿನೋಭವಂತು
ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ

ನಮೋ ಭಗವತೇ ಶಂಕರಾನಂದಾಯ

## ಪರಿಶಿಷ್ಟ

# ವೃತ್ತಿರತ್ನಾವಳಿಯ ಸಾರ ಪರಿಚಯ

ಸರ್ವ ದುಃಖಗಳ ಅತ್ಯಂತ ನಿವೃತ್ತಿ ಪರಮಾನಂದ ಪ್ರಾಪ್ತಿರೂಪವಾದ ಮೋಕ್ಷವನ್ನು ಸರ್ವ ಪ್ರಾಣಿಗಳೂ ಕೋರುತ್ತವೆ. ಇದು ಅಂದರೆ ಮೋಕ್ಷವು "ಅಹಂಬ್ರಹ್ಮಾಸ್ಮಿ" ಎಂಬ ಅಖಂಡಾಕಾರ ವೃತ್ತಿಯಿಂದಲೇ ಉಂಟಾಗುತ್ತದೆ ಎಂಬುದು ವೇದಾಂತದ ಸಿದ್ಧಾಂತ. ಆದುದರಿಂದ ಮೋಕ್ಷವನ್ನು ಬೇಡುವ ಮುಮುಕ್ಷುಗಳು ಸರ್ವ ವಿಧದಿಂದಲೂ ಪ್ರಯತ್ನ ಮಾಡಿ ಬ್ರಹ್ಮಾಕಾರ ವೃತ್ತಿಯನ್ನು ಸಂಪಾದಿಸಿಕೊಳ್ಳಬೇಕು. ಈ ವೃತ್ತಿಯನ್ನು ಸಂಪಾದಿಸುವಾಗ ೧. ವೃತ್ತಿಯ ಸ್ವರೂಪ, ೨. ವೃತ್ತಿಗೆ ಕಾರಣ, ಮತ್ತು ೩. ವೃತ್ತಿಯ ಫಲ ಈ ವಿಷಯಗಳನ್ನು ಮುಮುಕ್ಷುಗಳು ತಿಳಿಯುವುದು ಅತ್ಯಾವಶ್ಯಕವಾಗಿದೆ ಎಂಬುದನ್ನು ಗ್ರಹಿಸಿ, ಪರಮ ಕರುಣಾಮೂರ್ತಿಯಾದ ಶ್ರೋತ್ರೀಯ ಬ್ರಹ್ಮನಿಷ್ಠರಾದ ವಿಚಾರ ಸಾಗರ ಗ್ರಂಥಕರ್ತರಾದ ಸಾಧು ಶ್ರೀ ನಿಶ್ಚಲ ದಾಸರವರು ಹಿಂದೀ ಭಾಷೆಯಲ್ಲಿ "ವೃತ್ತಿ ಪ್ರಭಾಕರ" ಎಂಬ ಹೃದ್ಗ್ರಂಥವನ್ನು ರಚಿಸಿದ್ದಾರೆ. ಅದು ವಿಸ್ತಾರವಾಗಿಯೂ, ಗಹನವಾಗಿಯೂ, ಗಂಭೀರವಾಗಿಯೂ, ಸಾಮಾನ್ಯ ಜನರಿಗೆ ತಿಳಿದುಕೊಳ್ಳಲು ಅಸಾಧ್ಯವಾಗಿಯೂ ಇರುವುದರಿಂದ, ಅದು ಸರ್ವ ಮುಮುಕ್ಷುಗಳಿಗೂ ಸುಬೋಧವಾಗುವಂತೆ ವೃತ್ತಿ ಪ್ರಭಾಕರದ ಸಾರವಾದ "ವೃತ್ತಿರತ್ನಾವಳಿ" ಎಂಬ ಗ್ರಂಥವನ್ನು ಪಂಡಿತ ಪೀತಾಂಬರಜೀಯವರು

ಹಿಂದೀ ಭಾಷೆಯಲ್ಲಿ ರಚಿಸಿ, ವಿಚಾರ ಸಾಗರ ಗ್ರಂಥದ ಕೊನೆಯಲ್ಲಿ ಜೋಡಿಸಿದ್ದಾರೆ. ಅದು ಅಪರಿಚಿತ ಭಾಷೆಯಲ್ಲಿರುವುದರಿಂದ ಎಷ್ಟೋ ಜನ ವಿದ್ವಾಂಸರು ಅದನ್ನು ದೇಶ ಭಾಷೆಯಲ್ಲಿಯೂ ಪ್ರಸಿದ್ಧಪಡಿಸಿದ್ದಾರೆ. ಅದೇ ಗ್ರಂಥದ ಸಾರವನ್ನು ಕನ್ನಡ ಭಾಷೆಯಲ್ಲಿ ಸರಳವಾಗಿ, ಸಂಕ್ಷೇಪವಾಗಿ, ಎಲ್ಲರಿಗೂ ತಿಳಿಯುವಂತೆ ವಿಚಾರ ಚಂದ್ರೋದಯ ಗ್ರಂಥದ ಕೊನೆಯಲ್ಲಿ "ಪರಿಶಿಷ್ಟ"ವೆಂಬ ಹೆಸರಿನಿಂದ ಜೋಡಿಸಿದ್ದಾಗಿದೆ. ಮುಮುಕ್ಷುಗಳೆಲ್ಲರೂ ಇದರ ಸಾರವನ್ನು ತಿಳಿದು ಧನ್ಯರಾಗಬೇಕು.

ಶ್ರೀ ವಿಚಾರ ಚಂದ್ರೋದಯದ ಪಾಠಕರೆಲ್ಲರೂ ಇದನ್ನು ಪಾಠ ಮಾಡಿರುತ್ತಾರೆ.

## ವೃತ್ತಿಯ ಸಾಮಾನ್ಯ ಲಕ್ಷಣ

"ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯು ಉದಯಿಸುತ್ತಲೇ ಕಾರ್ಯ ಸಹಿತವಾದ ಅಜ್ಞಾನವು ಸಮೂಲವಾಗಿ ನಿವೃತ್ತಿಯಾಗಿ ಪರಮಾನಂದ ಪ್ರಾಪ್ತಿಯು ಸಿದ್ಧಿಸುವುದೆಂದು ವೇದಾಂತಗಳ ಸಿದ್ಧಾಂತ.

ಈ ಪ್ರಸಂಗದಲ್ಲಿ ಮುಖ್ಯವಾಗಿ ಮೂರು ವಿಷಯಗಳನ್ನು ತಿಳಿದುಕೊಳ್ಳಬೇಕಾಗಿದೆ.

೧. ವೃತ್ತಿಯೆಂದರೇನು ?

೨. ವೃತ್ತಿಗೆ ಕಾರಣವೇನು ?

೩. ವೃತ್ತಿಗೆ ಪ್ರಯೋಜನವೇನು ?

ಈ ಮೂರು ವಿಷಯಗಳನ್ನು ಮುಮುಕ್ಷುಗಳು ಜಿಜ್ಞಾಸ ಮಾಡಿಕೊಳ್ಳಬೇಕು.

ಪ್ರ : **ವೃತ್ತಿಯೆಂದರೇನು ? ವೃತ್ತಿಯ ಲಕ್ಷಣವೇನು ?**

ಉ : ಇದಕ್ಕೆ ಎರಡು ಲಕ್ಷಣಗಳು. ಅಂತಃಕರಣದ ಪರಿಣಾಮವನ್ನು ಅಥವಾ ಅಜ್ಞಾನದ ಪರಿಣಾಮವನ್ನು ವೃತ್ತಿಯೆನ್ನುತ್ತಾರೆ.

ಇದರ ವಿಶೇಷ ವಿಚಾರ : ಕ್ರೋಧ, ಸುಖ, ಮೊದಲಾದುವುಗಳು ಅಂತಃಕರಣದ ಪರಿಣಾಮಗಳೇ. ಅದರಂತೆ ಆಕಾಶಾದಿಗಳು ಅಜ್ಞಾನದ ಪರಿಣಾಮಗಳು. ಹಾಗೆಂದರೆ ಅವುಗಳನ್ನು ಸಹವೃತ್ತಿಗಳೆಂದು ಹೇಳಬಹುದೇ?

ಸಮಾಧಾನ : ಹೇಳಕೂಡದು. ಮೇಲೆ ಹೇಳಿದ ವೃತ್ತಿಯ ಲಕ್ಷಣಕ್ಕೂ, ಈಗ ಹೇಳುವ ವೃತ್ತಿಯ ಲಕ್ಷಣಕ್ಕೂ ಅತಿವ್ಯಾಪ್ತಿ ದೋಷ ಬರುತ್ತದೆ.

ಪ್ರ : **ಅತಿವ್ಯಾಪ್ತಿ ದೋಷವೆಂದರೇನು ?**

ಉ: ಒಂದು ಲಕ್ಷಣವು ಲಕ್ಷ್ಯದಲ್ಲಿ ವರ್ತಿಸುತ್ತಿದ್ದು ಲಕ್ಷ್ಯಕ್ಕಿಂತ ಭಿನ್ನವಾದ ಅಲಕ್ಷ್ಯದಲ್ಲಿಯೂ ಸಹ ವರ್ತಿಸುತ್ತಿದ್ದರೆ, ಆಗ ಅವಕ್ಕೆ ಅತಿವ್ಯಾಪ್ತಿ ದೋಷವುಳ್ಳದ್ದೆಂದು ಹೇಳುತ್ತಾರೆ.

ಉದಾ : "ಯಥಾಶೃಂಗಿತ್ವಂ ಗೋಲಕ್ಷಣಂ" ಅಂದರೆ ಕೊಂಬುಗಳುಳ್ಳದ್ದು ಹಸು. ಹಸುವಿಗೆ ಇಷ್ಟು ಲಕ್ಷಣ ಮಾತ್ರ ಹೇಳಿದರೆ ಸಾಲದು. ಈ ಲಕ್ಷಣವು ಹಸುವಿನಲ್ಲಿಯೇ ಅಲ್ಲದೆ ಅದಕ್ಕಿಂತ ಭಿನ್ನವಾದ ವೃಷಭದಲ್ಲಿಯೂ, ಕೋಣದಲ್ಲಿಯೂ, ಮೇಕೆಯಲ್ಲಿಯೂ ಕಂಡುಬರುತ್ತದೆ. ಹೀಗಿದ್ದರೆ ಈ ಲಕ್ಷಣವು ಅತಿವ್ಯಾಪ್ತಿ ದೋಷವೆಂದು ಹೇಳಿಸಿಕೊಳ್ಳುತ್ತದೆ. ಮೇಲೆ ನೀವು ವೃತ್ತಿಗೆ ಹೇಳಿದ ಲಕ್ಷಣವು ವೃತ್ತಿಯಲ್ಲಿಯೇ ಅಲ್ಲದೆ ಪರಿಣಾಮದಲ್ಲಿಯೂ ತೋರುವುದರಿಂದ ಈ ಲಕ್ಷಣವು ಅತಿವ್ಯಾಪ್ತಿ ದೋಷವುಳ್ಳದ್ದು. ಪರಂತು ನಿರ್ದೋಷವುಳ್ಳದ್ದನ್ನು ಹೇಳಿರಿ.

ಸಮಾಧಾನ : ಈ ಕಾರಣದಿಂದಲೇ ವೃತ್ತಿಗೆ ಎರಡು ಲಕ್ಷಣಗಳನ್ನು ಹೇಳಿದೆವು ಎರಡನೆಯ ಲಕ್ಷಣವು ನಿರ್ದೋಷವಾದದ್ದು.

ಪ್ರ : **ಎರಡನೆಯ ಲಕ್ಷಣವಾವುದು ?**

ಉ : ವಿಷಯವನ್ನು ಪ್ರಕಾಶ ಮಾಡಬಲ್ಲ ಅಂತಃಕರಣದ ಇಲ್ಲವೇ ಅಜ್ಞಾನದ ಪರಿಣಾಮ ವಿಶೇಷವನ್ನು ವೃತ್ತಿಯೆನ್ನುತ್ತಾರೆ

ಇದರ ವಿಶೇಷ ವಿಚಾರ : ಕ್ರೋಧ, ಸುಖ, ಮೊದಲಾದವುಗಳು ಅಂತಃಕರಣದ ಪರಿಣಾಮಗಳೇ ಆಗಿದ್ದರೂ ಅವುಗಳಿಂದ ಯಾವ ವಿಷಯಗಳೂ ಪ್ರಕಾಶವಾಗುವುದಿಲ್ಲ. ಆಕಾಶ ಮೊದಲಾದವುಗಳು ಅಜ್ಞಾನದ ಪರಿಣಾಮಗಳೇ ಆಗಿದ್ದರೂ ಅವುಗಳಿಂದಲೂ ಯಾವ ಪದಾರ್ಥವೂ ಪ್ರಕಾಶವಾಗುವುದಿಲ್ಲ. ಆದುದರಿಂದ ಅಂತಃಕರಣದ ಮತ್ತು ಅಜ್ಞಾನದ ಪರಿಣಾಮವನ್ನು ವೃತ್ತಿಯೆಂದು ಹೇಳಕೂಡದು.

ವೃತ್ತಿಯು ಆಭಾಸಸಹಿತವಾದದ್ದು. ವೃತ್ತಿಯಿಂದ ವಿಷಯದ ಆವರಣವು ನಿವೃತ್ತಿಯಾಗಿ ಅದರಲ್ಲಿರುವ ಆಭಾಸದಿಂದ ವಿಷಯ ಪ್ರಕಾಶವಾಗುತ್ತದೆ.

ಉದಾ : ಮನುಷ್ಯನ ಕೈಯ್ಯಲ್ಲಿ ಒಂದು ಬ್ಯಾಟರಿ ಇದೆ. ಆ ಬ್ಯಾಟರಿಯು ವಸ್ತುವಿನ ಆವರಣವನ್ನು ನಿವಾರಣೆ ಮಾಡಿದ ಮೇಲೆ ಮನುಷ್ಯನು ಆ ವಸ್ತುವನ್ನು ತಿಳಿದುಕೊಳ್ಳುತ್ತಾನೆ. ಹೀಗಿರುವುದರಿಂದ ಜ್ಞಾನರೂಪವಾದ ಪರಿಣಾಮದಿಂದ ಪ್ರಕಾಶವನ್ನುಂಟುಮಾಡುವುದೇ ವೃತ್ತಿಯೆಂದು ಹೇಳಬಹುದು.

ಪ್ರ : **ಸುಖ, ದುಃಖ, ಕಾಮ, ಕ್ರೋಧ, ತೃಪ್ತಿ, ಕ್ಷಮೆ, ಧೃತಿ, ಅಧೃತಿ, ಲಜ್ಜಾ, ಭಯ ಮೊದಲಾದುವುಗಳು ಅಂತಃಕರಣದ ಪರಿಣಾಮಗಳು. ಇವುಗಳಿಗೂ ಸಹ ಕೆಲವರು ವೃತ್ತಿಯೆಂದು ವ್ಯವಹಾರ ಮಾಡುತ್ತಾರೆ. ಇದಕ್ಕೆ ಸಮಾಧಾನವೇನು?**

ಉ : ಈ ವಿಷಯವನ್ನು ಹೆಚ್ಚಾಗಿ ವಿವರಿಸಿದ ತತ್ವಾನುಸಂಧಾನ, ಅದ್ವೈತ ಕೌಸ್ತುಭ ಮೊದಲಾದ ಗ್ರಂಥಗಳು ''ಪ್ರಕಾಶಕ ಪರಿಣಾಮ''ವನ್ನೇ ವೃತ್ತಿಯೆಂದು ಹೇಳುತ್ತವೆ. ವೃತ್ತಿ ರತ್ನಾವಳಿ, ವೃತ್ತಿ ಪ್ರಭಾಕರ ಇತ್ಯಾದಿ ಗ್ರಂಥಗಳಲ್ಲಿ "ಅಜ್ಞಾನ''ವನ್ನು ನಾಶಮಾಡಬಲ್ಲ ಪರಿಣಾಮವನ್ನು ವೃತ್ತಿಯೆಂದು ಹೇಳಿದ್ದಾರೆ. ಆದರೆ ವಿಷಯ ಚೇತನನಿಷ್ಠವಾದ ಆವರಣದ ನಾಶವು ಅಪರೋಕ್ಷ ಜ್ಞಾನವಿಲ್ಲದೆ ಸಂಭವಿಸಲಾರದು. ಇಲ್ಲಿ ಅಪರೋಕ್ಷವೆಂಬ ಪದಕ್ಕೆ ಪ್ರತ್ಯಕ್ಷವೆಂದರ್ಥ. ವಿಷಯ ಚೇತನನಿಷ್ಠವಾದ ಆವರಣವೆಂದರೆ ವಿಷಯಾವಚ್ಛಿನ್ನ ಚೇತನವನ್ನು ಆವರಿಸಿದ ಆವರಣ. ಅದು ಅಪರೋಕ್ಷ ಜ್ಞಾನವಿಲ್ಲದೆ ಸಂಭವಿಸಲಾರದು. ಆದರೆ ಪ್ರಮಾತೃಚೇತನವನ್ನು ಆವರಿಸಿದ ಆವರಣದ ನಾಶವು ಪರೋಕ್ಷ ಜ್ಞಾನದಿಂದ ಆಗಬಹುದು. ಆದುದರಿಂದ ಅಜ್ಞಾನ ನಾಶಕವಾದ ಪರಿಣಾಮವು ''ವೃತ್ತಿ'' ಎಂದು ಹೇಳಲ್ಪಟ್ಟಿದೆ ವೃತ್ತಿಯ ಲಕ್ಷಣದಿಂದ ಪರೋಕ್ಷ ಜ್ಞಾನದಲ್ಲಿ ಅವ್ಯಾಪ್ತಿಯುಂಟಾಗಲಾರದು. ಅಜ್ಞಾನ ನಾಶಕವೆಂದರೆ ಆವರಣವನ್ನು ನಿವರ್ತಿಸುವುದು. ಅದಕ್ಕೆ ಪರಿಣಾಮವೆಂದು ಮತ್ತೊಂದು ಹೆಸರು. ಯಾವುದರ ಪರಿಣಾಮ? ಅಂತಃಕರಣದ ಅಥವಾ ಅಜ್ಞಾನದ ಪರಿಣಾಮ.

ಪ್ರ : **ವಿಷಯ ಚೇತನನಿಷ್ಠವಾದ ಆವರಣವನ್ನು ಏನೆಂದು ಹೇಳುತ್ತಾರೆ?**

ಉ : ಅದಕ್ಕೆ ಅಭಾನಾಪಾದಕ ಆವರಣವೆನ್ನುತ್ತಾರೆ.

ಪ್ರ : **ಪ್ರಮಾತೃ ಚೇತನನಿಷ್ಠವಾದ ಆವರಣವನ್ನು ಏನೆಂದು ಹೇಳುತ್ತಾರೆ ?**

ಉ : ಅಸತ್ತ್ವಾಪಾದಕ ಆವರಣವೆನ್ನುತ್ತಾರೆ.

ಪ್ರ : **ಅವ್ಯಾಪ್ತಿಯೆಂಬುದೊಂದು ದೋಷವೆ? ಅದರ ಲಕ್ಷಣ ವೇನು ?**

ಉ : ಹೌದು, ದೋಷ. ಅದರ ಲಕ್ಷಣವೇನೆಂದರೆ, ಲಕ್ಷ್ಯ ವಸ್ತುವಿಗೆ ಹೇಳಿದ ಲಕ್ಷಣವು ಲಕ್ಷ್ಯವಸ್ತುವಿನಲ್ಲಿ ಪೂರ್ಣವಾಗಿ ಪ್ರವರ್ತಿಸದೆ, ಲಕ್ಷ್ಯದ ಏಕದೇಶದಲ್ಲಿ ಪ್ರವರ್ತಿಸಿದರೆ ಆ ಲಕ್ಷಣವು ಅವ್ಯಾಪ್ತಿ ದೋಷವುಳ್ಳದ್ದು.

ಪ್ರ : **ಉದಾಹರಣೆಯೇನು ?**

ಉ : ಗೋವು ಕಪಿಲ ವರ್ಣದ್ದು. ಇಲ್ಲಿ ಗೋವಿಗೆ ಕಪಿಲತ್ವ ಲಕ್ಷಣವು ಹೇಳಲ್ಪಟ್ಟಿದೆ. ಈ ಕಪಿಲತ್ವ ಲಕ್ಷಣವು ಎಲ್ಲಾ ಗೋವುಗಳಲ್ಲಿ ವರ್ತಿಸು ವುದಿಲ್ಲ. ಗೋವುಗಳಲ್ಲಿ ಅನೇಕ ಬಣ್ಣದ ಗೋವುಗಳಿರುತ್ತವೆ. ಆದುದ ರಿಂದ ಈ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷ ಬರುತ್ತದೆ.

ಪ್ರ : **ವೃತ್ತಿಗೆ ''ಅಜ್ಞಾನ ನಾಶಕ ಪರಿಣಾಮವೇ ವೃತ್ತಿ" ಯೆಂದು ಹೇಳಿದರೆ ಪರೋಕ್ಷ ಜ್ಞಾನದಲ್ಲಿ ಅವ್ಯಾಪ್ತಿ ದೋಷವು ಬರುವುದಿಲ್ಲವೆಂಬುದು ನಿಜವೇ ? ಆದರೆ ಈ ಲಕ್ಷಣಕ್ಕೆ ಅವ್ಯಾಪ್ತಿ ದೋಷವು ಎಲ್ಲೆಲ್ಲಿ ಬರುತ್ತದೆ ?**

ಉ : ಏಳು ಸ್ಥಳಗಳಲ್ಲಿ ಬರುತ್ತದೆ.

೧ ಸುಖ ದುಃಖ ಜ್ಞಾನರೂಪ ವೃತ್ತಿಯಲ್ಲಿ.

೨. ಮಾಯಾ ವೃತ್ತಿರೂಪವಾದ ಈಶ್ವರನ ಜ್ಞಾನದಲ್ಲಿ.

೩. ಶುಕ್ತಿಯು ರಜತ ರೂಪವಾಗಿ ತೋರುವ ಭ್ರಮೆಯೆಂಬ ಅವಿದ್ಯಾ ವೃತ್ತಿಯಲ್ಲಿ.

೪. ಸ್ವಪ್ನದಲ್ಲಿ ಗೋಚರವಾಗುವ ಜ್ಞಾನದಲ್ಲಿ.

೫. ಸುಷುಪ್ತಿಗತವಾದ ಸುಖದಲ್ಲಿಯ ಅವಿದ್ಯಾ ವೃತ್ತಿಯಲ್ಲಿ.

೬. ಪ್ರತ್ಯಭಿಜ್ಞಾ ಜ್ಞಾನರೂಪವಾದ ವೃತ್ತಿಯಲ್ಲಿ.

೭. ಧಾರಾವಾಹಿಕವಾದ ''ಅಹಂಬ್ರಹ್ಮಾಸ್ಮಿ" ಜ್ಞಾನದಲ್ಲಿ.

ಈ ಏಳು ಸ್ಥಳಗಳಲ್ಲಿಯೂ ಆವರಣ ಅಂದರೆ ಅಜ್ಞಾನವು ಇಲ್ಲವಾದು

ದರಿಂದ ''ಅಜ್ಞಾನ ನಾಶಕ ಪರಿಣಾಮವು ವೃತ್ತಿ'' ಎಂಬ ಲಕ್ಷಣಕ್ಕೆ ಅವ್ಯಾಪ್ತಿ ದೋಷ ಉಂಟಾಗುತ್ತದೆ.

ಪ್ರ : **ಕಾರಣವೇನು ?**

ಉ : ೧. ಸುಖ ದುಃಖ ಜ್ಞಾನರೂಪ ವೃತ್ತಿಯಲ್ಲಿ :

ವಿವರಣೆ : ಮೊದಲು ಅಜ್ಞಾತಗಳಾದ ಸುಖ ದುಃಖಗಳು ಉಂಟಾಗಿ, ಅನಂತರ ಅವುಗಳ ಜ್ಞಾನವು ಉಂಟಾಗುವ ಪಕ್ಷದಲ್ಲಿ ವೃತ್ತಿಯು ಸುಖ ದುಃಖಾದಿಗಳನ್ನು ಆವರಿಸಿರುವ ಆವರಣವನ್ನು ತಿಳಿಯಿತೆಂದು ಹೇಳಬಹುದು. ಆದರೆ ಹಾಗಿಲ್ಲ. ಸುಖಾದಿಗಳು ಅಜ್ಞಾತಗಳಾಗಿ ಉಂಟಾಗುವುದಿಲ್ಲ. ಸುಖ ದುಃಖಗಳೂ, ಅವುಗಳ ಜ್ಞಾನವೂ ಏಕಕಾಲದಲ್ಲಿ ಉಂಟಾಗುತ್ತವೆ. ಆದುದ ರಿಂದ ಅಜ್ಞಾತಗಳಾದ ಸುಖಾದಿಗಳೇ ಇಲ್ಲ. ಅಂದರೆ ಅವುಗಳ ಆವರಣ ವೃತ್ತಿಯಿಂದ ಕಳೆಯಿತು ಎಂಬುದು ಸಂಭವಿಸುವುದಿಲ್ಲ.

೨. ಮಾಯೆಯ ವೃತ್ತಿರೂಪವಾದ ಈಶ್ವರನ ಜ್ಞಾನದಲ್ಲಿ :

ವಿವರಣೆ : ಈಶ್ವರನಲ್ಲಿ ಅಜ್ಞಾನವು ಇಲ್ಲವೇ ಇಲ್ಲ. ಈಶ್ವರನಿಗೆ ಅಸಾಧಾರಣ ರೂಪದಿಂದಲೇ ಆಗಲಿ, ಸಾಧಾರಣ ರೂಪದಿಂದಲೇ ಆಗಲಿ, ಸರ್ವ ಪದಾರ್ಥಗಳೂ ಪ್ರತ್ಯಕ್ಷವಾಗಿಯೇ ಇರುತ್ತವೆ. ಆದುದರಿಂದಲೇ ಅವನಿಗೆ ಅಜ್ಞಾನವಿಲ್ಲವೆಂದು ಹೇಳಬೇಕಾಗುತ್ತದೆ. ಈ ಕಾರಣದಿಂದ ಆತನ ಮಾಯೆಯೆಂಬ ವೃತ್ತಿರೂಪ ಜ್ಞಾನದಿಂದ ಅಜ್ಞಾನವು ನಾಶವಾಗುತ್ತದೆಂಬುದು ಸಂಭವಿಸುವುದಿಲ್ಲ.

೩. ಶುಕ್ತಿಯು ರಜತರೂಪವಾಗಿ ತೋರುವ ಭ್ರಮೆಯೆಂಬ ಅವಿದ್ಯಾ ವೃತ್ತಿಯಲ್ಲಿ :

ವಿವರಣೆ : ೧. ಶುಕ್ತಿ ರಜತ, ೨. ರಜ್ಜು ಸರ್ಪ ಮೊದಲಾದ ಭ್ರಾಂತಿ ಸ್ಥಾನದಲ್ಲಿ ಶುಕ್ತಿಯು ವಸ್ತು, ರಜತವು ಭ್ರಾಂತಿ ; ರಜ್ಜುವು ವಸ್ತು, ಸರ್ಪವು ಭ್ರಾಂತಿ. ರಜತವೂ ಅದರ ಜ್ಞಾನವೂ, ಸರ್ಪವೂ ಅದರ ಜ್ಞಾನವೂ ಒಂದೇ ಸಾರಿಗೆ ತೋರುವುದರಿಂದ ಭ್ರಮರೂಪವಾದ ಅವಿದ್ಯಾ ವೃತ್ತಿ ಯಿಂದಲೂ ಸಹ ಅಜ್ಞಾನವು ನಾಶವಾಗುತ್ತದೆಂದು ಹೇಳಲಾಗುವುದಿಲ್ಲ.

೪. ಸ್ವಪ್ನದಲ್ಲಿ ಗೋಚರವಾಗುವ ಜ್ಞಾನದಲ್ಲಿ :

ವಿವರಣೆ : ಸ್ವಪ್ನ ಪದಾರ್ಥಗಳೂ, ಆ ಪದಾರ್ಥಗಳ ಜ್ಞಾನವೂ ಏಕ

ಕಾಲದಲ್ಲಿಯೇ ಉಂಟಾಗುವುದರಿಂದ ಅಲ್ಲಿ ಅಜ್ಞಾನ ನಾಶಕ ಪರಿಣಾಮವೇ ವೃತ್ತಿಯೆಂಬುದು ಹೊಂದುವುದಿಲ್ಲ.

೫ ಸುಷುಪ್ತಿಗತವಾದ ಸುಖದಲ್ಲಿಯು ಅವಿದ್ಯಾ ವೃತ್ತಿಯಲ್ಲಿ :

ವಿವರಣೆ : ಸುಷುಪ್ತಿಯಲ್ಲಿ ವೃತ್ತಿ ಇದೆಯೆಂಬುದಕ್ಕೆ ಸಂದೇಹವಿಲ್ಲ. ಅದು ತನಗೆ ವಿಷಯವಾದ ಸ್ವರೂಪ ಸುಖವನ್ನು ಆವರಿಸಿದ ಅಜ್ಞಾನವನ್ನು ನಾಶ ಮಾಡಲಿಲ್ಲ. ಈ ಕಾರಣದಿಂದ ವೃತ್ತಿಗೆ ಹೇಳಿದ ಲಕ್ಷಣಕ್ಕೆ ಅವ್ಯಾಪ್ತಿ ದೋಷ ಬರುತ್ತದೆ.

೬. ಪ್ರತ್ಯಭಿಜ್ಞಾ ಜ್ಞಾನರೂಪವಾದ ವೃತ್ತಿಯಲ್ಲಿ :

ವಿವರಣೆ : ಜ್ಞಾನಕ್ಕೆ ಗೋಚರವಾದ ಪ್ರತ್ಯಭಿಜ್ಞಾ ಜ್ಞಾನವು ಸರ್ವರಿಗೂ ಗೋಚರವೇ. ಆದರೂ ಪ್ರತ್ಯಭಿಜ್ಞೆಯಲ್ಲಿ ಆವರಣವು ಇಲ್ಲವೇ ಇಲ್ಲ. ಅದನ್ನು ನಾಶ ಮಾಡಬೇಕಾದರೆ ವೃತ್ತಿಯ ಅಗತ್ಯವಿಲ್ಲ. ಈ ಕಾರಣ ದಿಂದಲೂ ಅಜ್ಞಾನ ನಾಶಕ ಪರಿಣಾಮವೇ ವೃತ್ತಿಯೆಂಬ ಲಕ್ಷಣದಲ್ಲಿ ಅವ್ಯಾಪ್ತಿ ದೋಷ ಬರುತ್ತದೆ.

೭. ಧಾರಾವಾಹಿಕವಾದ ಅಹಂಬ್ರಹ್ಮಾಸ್ಮಿ ಜ್ಞಾನದಲ್ಲಿ :

ವಿವರಣೆ : ಅಹಂಬ್ರಹ್ಮಾಸ್ಮಿಯೆಂಬ ವೃತ್ತಿಯ ದ್ವಾರ ಒಂದೇ ಸಾರಿಗೆ ಆವರಣ ಭಂಗದಿಂದ ಅಪರೋಕ್ಷ ಜ್ಞಾನವು ಉದಯಿಸುತ್ತದೆ. ಅಂದರೆ ಸ್ವರೂಪತಃ ಆವರಣವು ಹೋಗಿ ಸ್ವರೂಪ ಸಾಕ್ಷಾತ್ಕಾರವಾಗುತ್ತದೆ ಎಂದರ್ಥ. ನಂತರ ಶ್ರವಣಾದಿಗಳನ್ನು ಮಾಡುವ ವಿದ್ವಾಂಸನಿಗೆ ಶ್ರವಣ ಮಾಡಿದಾಗಲೆಲ್ಲಾ ಅಹಂಬ್ರಹ್ಮಾಸ್ಮಿಯೆಂಬ ವೃತ್ತಿಯು ಸಂಭವಿಸುತ್ತಲೇ ಇರುತ್ತದೆ. ಆದರೆ ಅನೇಕ ಸಾರಿ ಉಂಟಾದ ಅಹಂಬ್ರಹ್ಮಾಸ್ಮಿಯೆಂಬ ವೃತ್ತಿಯಿಂದ ಆವರಣ ಭಂಗವು ಆಗುತ್ತಲೇ ಇರುವುದೆಂಬುದು ಹೊಂದುವುದಿಲ್ಲ. ಕಾರಣವೇನೆಂದರೆ, ಶ್ರವಣ ಮಾಡಿದವನ ಸ್ವರೂಪ ಆವರಣವು ಈ ಮೊದಲೇ ತೊಲಗಿ ನಿರಾವೃತ ವಾಗಿರುವುದರಿಂದ, ಆವರಣವೇ ಆಗಲಿ ಅಜ್ಞಾನವೇ ಆಗಲಿ ಇದ್ದರಲ್ಲವೇ ತೊಲಗುವುದಕ್ಕೆ ಅವಕಾಶವಿರುವುದು ? ಈ ವಿಧವಾಗಿ ವೃತ್ತಿಯು ಧಾರಾ ವಾಹಿಕವಾಗಿದ್ದರೂ ಮೊದಲಿನ ವೃತ್ತಿಯಿಂದಲೇ ಆವರಣವು ಭಂಗವಾಗಿರು ವುದರಿಂದ, ನಂತರ ಉಂಟಾಗುವ ವೃತ್ತಿಗಳಿಗೆ ಆವರಣ ಭಂಗವು ಫಲವೆಂಬ ಅವ್ಯಾಪ್ತಿಯು ಸಂಭವಿಸುತ್ತದೆ. ಈ ಪ್ರಕಾರವಾಗಿ ೧. ಸುಖ ದುಃಖ

ಜ್ಞಾನರೂಪ ವೃತ್ತಿಯಲ್ಲಿಯೂ, ೨. ಮಾಯೆಯ ವೃತ್ತಿರೂಪವಾದ ಈಶ್ವರನ ಜ್ಞಾನದಲ್ಲಿಯೂ, ೩. ಶುಕ್ತಿಯು ರಜತರೂಪದಲ್ಲಿ ಗೋಚರಿಸುವ ಭ್ರಮೆ ಯೆಂಬ ಅವಿದ್ಯಾ ವೃತ್ತಿಯಲ್ಲಿಯೂ, ೪. ಸ್ವಪ್ನ ಗೋಚರವಾದ ಜ್ಞಾನ ದಲ್ಲಿಯೂ, ೫. (ಅ) ಸುಷುಪ್ತಿಗತವಾದ ಸುಖದಲ್ಲಿಯೂ, (ಆ) ಅಜ್ಞಾನ ಗೋಚರವಾದ ಅವಿದ್ಯಾ ವೃತ್ತಿಯಲ್ಲಿಯೂ, ೬. ಪ್ರತ್ಯಭಿಜ್ಞಾ ಜ್ಞಾನರೂಪ ವೃತ್ತಿಯಲ್ಲಿಯೂ, ಮತ್ತು ೭. ಧಾರಾವಾಹಿಕವಾದ ಅಹಂಬ್ರಹ್ಮಾಸ್ಮಿ ವೃತ್ತಿ ಯಲ್ಲಿಯೂ – ಹೀಗೆ ಏಳು ಸ್ಥಳಗಳಲ್ಲಿಯೂ ಆವರಣವೆಂದರೆ ಅಜ್ಞಾನವು ಇಲ್ಲ ವಾದುದರಿಂದ ''ಅಜ್ಞಾನನಾಶಕ ಪರಿಣಾಮ ವೃತ್ತಿ'' ಎಂದು ಹೇಳಿದೆ. ಈ ವೃತ್ತಿಯ ಲಕ್ಷಣಕ್ಕೆ ಅವ್ಯಾಪ್ತಿ ಉಂಟಾಗುತ್ತದೆ.

ಈ ವಿಧವಾಗಿ ಅತಿವ್ಯಾಪ್ತಿ ಅವ್ಯಾಪ್ತಿಯೆಂಬ ದೋಷಗಳು ಸಂಭವಿಸ ದಂತೆ ಪ್ರಕಾಶಕ ಪರಿಣಾಮವೇ ವೃತ್ತಿ ಎಂದು ಹೇಳಬಹುದು.

ಪ್ರ : **ಹಾಗೆಂದರೇನು ?**

ಉ : ''ಅಸ್ತಿಯೆಂಬ ವ್ಯವಹಾರಕ್ಕೆ ಹೇತುವಾದ ಅವಿದ್ಯೆಯ ಅಥವಾ ಅಂತಃಕರಣದ ಪರಿಣಾಮವು ವೃತ್ತಿ'' ಎಂದು ಹೇಳಬೇಕು. ಮೇಲೆ ಪ್ರಕಾಶಕ ಪರಿಣಾಮವೇ ವೃತ್ತಿಯೆಂದು ಹೇಳಿದ್ದಾಗಿದೆ. ಅಜ್ಞಾತ ಪದಾರ್ಥ ಗೋಚರ ವೃತ್ತಿಯಲ್ಲಿ ಅಜ್ಞಾನವನ್ನು ನಾಶ ಮಾಡುವುದೆಂಬ ಪ್ರಕಾಶತ್ವವು ಸಂಭವಿಸುತ್ತದೆ. ಅಷ್ಟೇ ಅಲ್ಲದೆ, ಅನಾವೃತ ಪದಾರ್ಥ ಗೋಚರ ವೃತ್ತಿ ಯಲ್ಲಿ ಪ್ರಕಾಶ ತಪ್ಪಲಿಲ್ಲ. ಕಾರಣವೇನೆಂದರೆ, ವಿಷಯವು ಪ್ರಕಾಶಿಸುವಾಗ ಅನಾವೃತ ಚೇತನದ ಸಂಬಂಧದಿಂದಲೇ ಪ್ರಕಾಶಿಸುತ್ತದೆ. ಜಡವಾದ ವೃತ್ತಿ ಯಲ್ಲಿ ಪ್ರಕಾಶತ್ವವನ್ನು ಕಲ್ಪಿಸುವುದು ಯೋಗ್ಯವಲ್ಲ. ಜಡವಾದ ವೃತ್ತಿಗೆ ಆವರಣ ಭಂಗ ಮಾಡುವುದನ್ನು ಬಿಟ್ಟರೆ ಅನ್ಯ ವಿಧವಾದ ಪ್ರಕಾಶಕತ್ವವು ಯಾವುದೂ ಸಂಭವಿಸುವುದಿಲ್ಲ. ಆದುದರಿಂದಲೇ ಅಂತಃಕರಣದ ಪರಿಣಾ ಮವೇ ಅಥವಾ ಅಜ್ಞಾನದ ಪರಿಣಾಮವೇ ವೃತ್ತಿಯೆಂಬ ಪ್ರಥಮ ಲಕ್ಷಣ ದಂತೆ ಅಜ್ಞಾನನಾಶಕ ಪರಿಣಾಮವೇ ವೃತ್ತಿಯೆಂಬ ಎರಡನೆಯ ಲಕ್ಷಣದ ಲ್ಲಿಯೂ ಅವ್ಯಾಪ್ತಿ ದೋಷವು ಉಂಟಾಗುತ್ತದೆ. ಈ ದೋಷವನ್ನು ನಿವೃತ್ತಿ ಮಾಡುವುದಕ್ಕಾಗಿ ವೃತ್ತಿಗೆ ಹೇಳಿದ ಮೂರನೇ ಲಕ್ಷಣವಾದ ಅಂದರೆ ''ಅಸ್ತಿ''

ಯೆಂಬ ವ್ಯವಹಾರಕ್ಕೆ ಹೇತುವಾದ ಅವಿದ್ಯೆ ಇಲ್ಲವೇ ಅಂತಃಕರಣದ ಪರಿಣಾಮವೇ ವೃತ್ತಿ ಎಂಬ ವೃತ್ತಿ ಲಕ್ಷಣಕ್ಕೆ ಯಾವ ದೋಷವೂ ಬರುವುದಿಲ್ಲ.

## ವೃತ್ತಿ ಭೇದ ನಿರೂಪಣೆ

ಪ್ರ : **ಹಿಂದೆ ಹೇಳಿದ ವೃತ್ತಿ ಜ್ಞಾನವು ಎಷ್ಟು ವಿಧ ?**

ಉ : ಅದು ಎರಡು ವಿಧ. ೧. ಪ್ರಮಾ ರೂಪ, ೨. ಅಪ್ರಮಾ ರೂಪ.

ಪ್ರಮಾವೆಂದರೆ ಪ್ರಮಾ ಜ್ಞಾನ.

ಅಪ್ರಮಾವೆಂದರೆ ಅಪ್ರಮಾ ಜ್ಞಾನ.

ಪ್ರ : **ಪ್ರಮಾ ಜ್ಞಾನಕ್ಕೆ ಲಕ್ಷಣವೇನು ?**

ಉ : ಶ್ರೇಷ್ಠವಾದ ವೇದಾಂತ ಗ್ರಂಥಗಳಲ್ಲಿ ಪ್ರಮಾ ಜ್ಞಾನವು ನಾಲ್ಕು ವಿಧವಾಗಿ ಹೇಳಲ್ಪಟ್ಟಿದೆ.

೧. ಪ್ರಮಾಣ ಜನ್ಯವಾದ ಯಥಾರ್ಥ ಜ್ಞಾನವನ್ನು ''ಪ್ರಮಾ'' ಎನ್ನುತ್ತಾರೆ.

೨. ಅಬಾಧಿತ ಅರ್ಥವನ್ನು ವಿಷಯೀಕರಿಸುವ ಜ್ಞಾನವನ್ನು "ಪ್ರಮಾ" ಎನ್ನುತ್ತಾರೆ.

೩. ಅಬಾಧಿತ ಅರ್ಥವನ್ನು ವಿಷಯೀಕರಿಸುತ್ತಾ ಸ್ಮೃತಿಗೆ ಭಿನ್ನವಾದ ಜ್ಞಾನವನ್ನು ''ಪ್ರಮಾ'' ಎನ್ನುತ್ತಾರೆ.

೪. ಯಥಾರ್ಥವಾದ ಅನುಭವವನ್ನು "ಪ್ರಮಾ'' ಎನ್ನುತ್ತಾರೆ.

ಪ್ರ : **ಅಪ್ರಮಾ ಎಂದರೇನು ?**

ಉ : ಪ್ರಮಾ ಜ್ಞಾನಕ್ಕೆ ಭಿನ್ನವಾದ ಜ್ಞಾನವನ್ನು ಅಪ್ರಮಾ ಎನ್ನುತ್ತಾರೆ.

ಪ್ರ : **ಇವುಗಳ ವಿವರಣೆಯೇನು ?**

ಉ : ವಿವರಣೆಯನ್ನು ತಿಳಿದುಕೊಳ್ಳಬೇಕಾಗಿದ್ದರೆ ವೃತ್ತಿ ಜ್ಞಾನವು ಎಷ್ಟು ವಿಧವೆಂದು ತಿಳಿದುಕೊಳ್ಳಬೇಕು. ಅದು ಹತ್ತು ವಿಧ.

ಪ್ರ : **ಅವು ಯಾವುವು ?**

ಉ : ವೃತ್ತಿಗೆ ಲಕ್ಷಣವನ್ನು ಹೇಳಿದ ಪ್ರಥಮ ಲಕ್ಷಣವನ್ನು ಅನುಸರಿಸಿ ಪ್ರಮಾ ಜ್ಞಾನವು ಆರು ವಿಧ: ೧. ಪ್ರತ್ಯಕ್ಷ, ೨. ಅನುಮತಿ, ೩.

ಉಪಮಿತಿ, ೪. ಶಾಬ್ದಿ, ೫. ಅರ್ಥಾಪತ್ತಿ, ಮತ್ತು ೬. ಅಭಾವ. ಇವಲ್ಲದೆ ಇವುಗಳಿಗೆ ಭಿನ್ನವಾದ ೧. ಈಶ್ವರಜ್ಞಾನ, ೨. ಸುಖಾದಿ ಗೋಚರಜ್ಞಾನ, ೩. ಸ್ಮೃತಿಜ್ಞಾನ, ಮತ್ತು ೪. ಭ್ರಾಂತಿಜ್ಞಾನ – ಈ ನಾಲ್ಕು ಸೇರಿ ಹತ್ತು. ಇವುಗಳಲ್ಲಿ ಕೊನೆಗೆ ಹೇಳಿದ ನಾಲ್ಕು ಜ್ಞಾನಗಳು ಅಪ್ರಮಾರೂಪಗಳು. ಅಪ್ರಮಾರೂಪವಾದ ಈ ನಾಲ್ಕರಲ್ಲಿ ಮೊದಲಿನ ಮೂರು ಯಥಾರ್ಥವಾಗಿ ಅಪ್ರಮಾರೂಪವಾದವುಗಳು. ನಾಲ್ಕನೆಯ ಭ್ರಾಂತಿಜ್ಞಾನವು ಅಯಥಾರ್ಥ ಅಪ್ರಮಾರೂಪವೆಂದು ಹೇಳಿಸಿಕೊಳ್ಳುತ್ತದೆ. ಇವುಗಳ ವಿವರಣೆಯು ಕ್ರಮ ವಾಗಿ ಮುಂದೆ ಬರುತ್ತದೆ.

೧. ಈಶ್ವರಜ್ಞಾನ

೨. ಸುಖಾದಿಗೋಚರಜ್ಞಾನ

೩. ಸ್ಮೃತಿಜ್ಞಾನ

ಈ ಮೂರೂ ಪ್ರಮಾರೂಪಗಳೇ. ನಾಲ್ಕನೆಯ ಭ್ರಾಂತಿಜ್ಞಾನವು ಅಪ್ರಮಾರೂಪವಾದುದು. ಈ ಎರಡನೆಯ ಲಕ್ಷಣವನ್ನು ಅನುಸರಿಸಿ ಪ್ರಮಾಜ್ಞಾನರೂಪಗಳಾದ ಪ್ರತ್ಯಕ್ಷಾದಿಗಳು ಆರು. ಈಶ್ವರಜ್ಞಾನ ಮೊದ ಲಾದ ಮೂರು ಸೇರಿ ಪ್ರಮಾಜ್ಞಾನವು ಒಂಭತ್ತು ವಿಧ. ಕೊನೆಯ ಭ್ರಾಂತಿ ಜ್ಞಾನವು ಅಪ್ರಮಾರೂಪ.

ಸೂತ್ರಕಾರರಾದ ವ್ಯಾಸಮಹರ್ಷಿಗಳೂ, ಭಾಷ್ಯಕಾರರಾದ ಶಂಕರಾ ಚಾರ್ಯರೂ ಮತ್ತೆ ಕೆಲವು ಪ್ರಾಚೀನ ಆಚಾರ್ಯರೂ ಸ್ಮೃತಿಗೆ ಭಿನ್ನವಾದ ಯಥಾರ್ಥಜ್ಞಾನವನ್ನು ಪ್ರಮಾ ಎಂದು ವ್ಯವಹರಿಸಿರುತ್ತಾರೆ. ಅವರ ಮತ ವನ್ನನುಸರಿಸಿದ ಈಗಿನ ವೇದಾಂತಿಗಳು ಅಬಾಧಿತ ಅರ್ಥವನ್ನು ವಿಷಯೀ ಕರಿಸುತ್ತಾ, ಸ್ಮೃತಿಗೆ ಭಿನ್ನವಾದ ಜ್ಞಾನವನ್ನು ಪ್ರಮಾ ಎಂದು ಹೇಳಿದ್ದಾರೆ. ಮತ್ತು ಯಥಾರ್ಥವಾದ ಅನುಭವವನ್ನೂ ಪ್ರಮಾ ಎನ್ನುತ್ತಾರೆ. ಈ ವಿಧ ವಾಗಿ ಪ್ರಮಾಜ್ಞಾನಕ್ಕೆ ಲಕ್ಷಣಗಳು ಹೇಳಲ್ಪಟ್ಟಿವೆ.

ಮೇಲೆ ಹೇಳಿದ ಲಕ್ಷಣಗಳೆಲ್ಲವನ್ನೂ ಸೂಕ್ಷ್ಮದೃಷ್ಟಿಯಿಂದ ವಿಚಾರಿಸಿ ದರೆ ದೊರೆಯುವ ಸಾರಾಂಶವೇನೆಂದರೆ, ಪ್ರತ್ಯಕ್ಷಾದಿಗಳಾದ ಆರು ವಿಧವಾದ ಜ್ಞಾನಗಳು, ಏಳನೆಯ ಈಶ್ವರಜ್ಞಾನ, ಎಂಟನೆಯ ಸುಖಾದಿಗೋಚರ ಜ್ಞಾನ – ಹೀಗೆ ಪ್ರಮಾಜ್ಞಾನವು ಎಂಟು ವಿಧವಾಗಿದೆ. ಇವುಗಳಿಗೆ ಭಿನ್ನವಾದ

ಸ್ಮೃತಿಜ್ಞಾನ ಮತ್ತು ಭ್ರಾಂತಿಜ್ಞಾನ ಇವು ಅಪ್ರಮಾಜ್ಞಾನವೆಂದು ನಿರ್ಣಯ ವಾಗುತ್ತದೆ.

ಪ್ರ : **ಮೇಲೆ ಹೇಳಿದ ಪ್ರಮಾಜ್ಞಾನದ ಲಕ್ಷಣವನ್ನು ಪದಕೃತಿ ಪೂರ್ವಕವಾಗಿ ವಿವರಿಸಿರಿ.**

ಉ : ಶುಕ್ತಿಯನ್ನು ನೋಡಿ ರಜತವೆಂಬ ಜ್ಞಾನವು ಸ್ಮೃತಿಗಿಂತ ಭಿನ್ನ ವಾಗಿದೆ. ಆದರೂ ಆ ಜ್ಞಾನವು ಅಬಾಧಿತ ಅರ್ಥವನ್ನು ವಿಷಯೀಕರಿಸಲಿಲ್ಲ. ಬಾಧಿತ ಅರ್ಥವನ್ನೇ ವಿಷಯೀಕರಿಸುತ್ತದೆ. ಆದುದರಿಂದ ಅದು ಭ್ರಾಂತಿ ಜ್ಞಾನ. ಅದು ಪ್ರಮಾರೂಪವಲ್ಲ. ಸ್ಮೃತಿ ಜ್ಞಾನವು ಅಬಾಧಿತ ಅರ್ಥ ವನ್ನು ವಿಷಯೀಕರಿಸುವುದಾದರೂ ಪ್ರಮಾ ಎಂದು ಹೇಳಿಸಿಕೊಳ್ಳುವುದಿಲ್ಲ. ಆದುದರಿಂದಲೇ ಶಾಸ್ತ್ರಗಳಲ್ಲಿ ಸ್ಮೃತಿಗಿಂತ ಭಿನ್ನವಾಗಿದ್ದು ಅಬಾಧಿತ ಅರ್ಥ ಗೋಚರವಾದ ಜ್ಞಾನಕ್ಕೆ ಪ್ರಮೆಯೆನ್ನುತ್ತಾರೆ.

ಪ್ರ : **ಪ್ರತ್ಯಕ್ಷಜ್ಞಾನವು ಯಥಾರ್ಥ ಜ್ಞಾನವೇ ?**

ಉ : ಯಥಾರ್ಥಜ್ಞಾನವು ಸ್ಮೃತಿಜ್ಞಾನವಾಗಿಯೂ ಸಹ ಇರಬಹುದು. ಆದರೆ ಅದು ಅನುಭವರೂಪಕವಾಗಿದ್ದರೂ ಪ್ರತ್ಯಕ್ಷರೂಪಕವಾಗಿ ಇರಲಾರದು.

ಅನುಭವವೆಂದರೆ ಪ್ರತ್ಯಕ್ಷರೂಪವಾದ ಜ್ಞಾನವು ಭ್ರಾಂತಿಜ್ಞಾನವೂ ಸಹ ಆಗಿರಬಹುದು. ಅದು ಯಥಾರ್ಥಜ್ಞಾನವಾಗಿರಲಾರದು. ಹಿಂದೆ ಹೇಳಿದ ಲಕ್ಷಣದಲ್ಲಿ ಯಥಾರ್ಥ ಅನುಭವವೇ ಪ್ರಮಾಜ್ಞಾನವೆಂದು ಹೇಳಿದೆ ! ಇದಕ್ಕೆ ಭಿನ್ನವಾದದ್ದು ಅಪ್ರಮಾಜ್ಞಾನ.

ತಿಳಿದುಕೊಳ್ಳಬೇಕಾದ ಅಂಶವೇನೆಂದರೆ, ಇಲ್ಲಿ ಪ್ರಮಾ ಲಕ್ಷಣವನ್ನು ಸ್ಮೃತಿಯಿಂದ ಬೇರ್ಪಡಿಸಿದೆ.

ಪ್ರ : **ಈಶ್ವರಜ್ಞಾನ ಮತ್ತು ಸುಖಾದಿಗೋಚರಜ್ಞಾನ – ಇವುಗಳ ವಿಷಯವಾಗಿ ತಿಳಿದುಕೊಳ್ಳಬೇಕಾದ ಅಂಶವೇನು ?**

ಉ: ಈ ಎರಡು ಜ್ಞಾನಗಳು ಯಥಾರ್ಥ ಅನುಭವರೂಪಗಳೇ. ಆದುದ ರಿಂದ ಪ್ರತ್ಯಕ್ಷಾದಿಗಳಾರು ಅನುಭವರೂಪಗಳಾದಂತೆ ಪ್ರಮಾರೂಪಗಳು. ಈ ಪ್ರಮೆಗಿಂತ ಭಿನ್ನವಾದ ಜ್ಞಾನಗಳೆಲ್ಲವೂ ಸ್ಮೃತಿಜ್ಞಾನವಾದರೂ ಆಗ ಬಹುದು, ಭ್ರಾಂತಿಜ್ಞಾನರೂಪಗಳಾದರೂ ಆಗಬಹುದು, ಅಪ್ರಮಾರೂಪ ಗಳಾದರೂ ಆಗಬಹುದು.

ಪ್ರ : **ಈ ಸಂದರ್ಭಕ್ಕನುಸಾರವಾಗಿ ಪ್ರಮಾಜ್ಞಾನವು ಎಷ್ಟು ವಿಧ ?**

ಉ : ಅದು ಎಂಟು ವಿಧ. ೧. ಪ್ರತ್ಯಕ್ಷ, ೨. ಅನುಮತಿ, ೩. ಉಪಮಿತಿ, ೪. ಶಾಬ್ಧಿ, ೫. ಅರ್ಥಾಪತ್ತಿ, ೬. ಅಭಾವ (ಈ ಆರು ಪ್ರಮಾಣ ಜನ್ಯಗಳಾದ ಯಥಾರ್ಥಜ್ಞಾನಗಳು), ೭. ಈಶ್ವರಜ್ಞಾನ, ಮತ್ತು ೮. ಸುಖಾದಿಗೋಚರಜ್ಞಾನ. ಈ ವಿಧವಾಗಿ ಪ್ರಮಾಜ್ಞಾನವು ಎಂಟು ವಿಧ.

ಪ್ರ : **ಪ್ರಮಾಜ್ಞಾನ ವಿಷಯವು ಸ್ವಲ್ಪ ಗೋಚರವಾದಂತಾಯಿತು. ಈ ಪ್ರಮಾಜ್ಞಾನದಲ್ಲಿ ಮತ್ತೆ ಯಾವುದಾದರೂ ಭೇದವಿರುವುದೇ ?**

ಉ : ಇದೆ. ಇದು ಜೀವಾಶ್ರಿತ ಪ್ರಮಾಜ್ಞಾನ ಮತ್ತು ಈಶ್ವರಾಶ್ರಿತ ಪ್ರಮಾಜ್ಞಾನವೆಂದು ಎರಡು ವಿಧ.

ಪ್ರ : **ಜೀವಾಶ್ರಿತ ಪ್ರಮೆಯ ಲಕ್ಷಣವೇನು ?**

ಉ : "ಅನಧಿಗತ ಅಬಾಧಿತ ವಿಷಯಾಕಾರ ಅಂತಃಕರಣವೃತ್ತಿ ಪ್ರತಿಬಿಂಬಿತಾಚಿತ್ ಜೀವಾಶ್ರಯ ಪ್ರಮಾ.''

ಅರ್ಥ : ಅನಧಿಗತವೆಂದರೆ ಅಜ್ಞಾನವೆಂದರ್ಥ. ಅಂದರೆ ಈವರೆಗೆ ತಿಳಿಯದೆ ಇದ್ದದ್ದು. ಮತ್ತು ಅಬಾಧಿತವೆಂದರೆ ಬಾಧೆ ಇಲ್ಲದ್ದು ಎಂದರ್ಥ. ಅಂತಹುದೊಂದು ವಿಷಯವಿದೆ ಎಂದು ತಿಳಿದುಕೊ. ಅಂತಃಕರಣ ವೃತ್ತಿ ಆ ವಸ್ತುವಿನ ವಿಷಯಾಕಾರವಾಗಿದೆ. ಅಂತಹ ವೃತ್ತಿಯಲ್ಲಿ ಪ್ರತಿಬಿಂಬಿತವಾದ ಚೈತನ್ಯವನ್ನು ಜೀವಾಶ್ರಿತ ಪ್ರಮೆಯೆನ್ನುತ್ತಾರೆ.

ಪ್ರ : **ಜೀವಾಶ್ರಿತ ಪ್ರಮೆಗಳು ಎಷ್ಟು ವಿಧ ?**

ಉ : ಪ್ರತ್ಯಕ್ಷಾದಿಗಳು ಆರು ವಿಧ. ಪ್ರತ್ಯಕ್ಷಜ್ಞಾನದಲ್ಲಿಯೇ ಅಂತರ್ಗತವಾದ ಶ್ರೋತ್ರಜ, ತ್ವಾಚ್ಯ, ಚಾಕ್ಷುಷ, ರಾಸನ, ಘ್ರಾಣಜ – ಈ ಐದು ಭೇದಗಳು ಜೀವಾಶ್ರಿತ ಪ್ರಮೆಗಳೆನಿಸುತ್ತವೆ.

ಪ್ರ : **ಈಶ್ವರಾಶ್ರಿತ ಪ್ರಮೆಯೆಂದರೇನು ?**

ಉ : "ಈಕ್ಷಣಾ ಪರಪರಿಯಾಯ, ಶ್ರಷ್ಟವ್ಯ ವಿಷಯಾಕಾರ ಮಾಯಾವೃತ್ತಿ ಪ್ರತಿಬಿಂಬಿತಾಚಿತ್ ಈಶ್ವರಾಶ್ರಯಾ ಪ್ರಮಾ.''

ಅರ್ಥ : ಸೃಷ್ಟಿಯ ಪ್ರಾರಂಭ ಸಮಯದಲ್ಲಿ ಭವಿಷ್ಯತ್ತಿನಲ್ಲಿ ಉತ್ಪನ್ನ

ವಾಗುವ ಜಗತ್ತನ್ನು ವಿಷಯೀಕರಿಸುವ ಮಾಯಾವೃತ್ತಿಯನ್ನು ಶ್ರುತಿಯಲ್ಲಿ "ಈಕ್ಷಣಾ" ಎಂದು ಹೇಳಿದೆ. ಆ ಮಾಯಾವೃತ್ತಿಯಲ್ಲಿ ಪ್ರತಿಬಿಂಬಿತ ವಾದ ಚೈತನ್ಯವನ್ನು ಈಶ್ವರಾಶ್ರಯ ಪ್ರಮಾವೆನ್ನುತ್ತಾರೆ.

ಭೂತ, ಭವಿಷ್ಯತ್, ವರ್ತಮಾನ ರೂಪವಾದ ಮೂರೂ ಕಾಲ ಗಳಲ್ಲಿಯೂ ಸಕಲ ಪದಾರ್ಥಗಳನ್ನೂ ವಿಷಯೀಕರಿಸುವ ಮಾಯಾವೃತ್ತಿ ರೂಪವಾದ ಜ್ಞಾನವನ್ನು ಈಶ್ವರಾಶ್ರಿತ ಪ್ರಮಾವೆನ್ನುತ್ತಾರೆ.

ಪ್ರ : **ಹಿಂದೆ ಹೇಳಿದ ೧೨ ವಿಧವಾದ ಪ್ರಮಾಜ್ಞಾನಗಳಲ್ಲಿ ಪ್ರತ್ಯಕ್ಷ ರೂಪವಾದ ಜ್ಞಾನಗಳೆಷ್ಟು? ಪರೋಕ್ಷರೂಪವಾದ ಜ್ಞಾನಗಳೆಷ್ಟು?**

ಉ : ಪ್ರತ್ಯಕ್ಷ ಪ್ರಮೆಯಲ್ಲಿ ಶ್ರೋತ್ರಜ, ತ್ವಾಚ್ಚ, ಚಾಕ್ಷುಷ, ರಾಸನ, ಘ್ರಾಣಜ ಈ ಐದು ಭೇದಗಳು, ಮತ್ತು ಮಾಯಾವೃತ್ತಿರೂಪವಾದ ಈಶ್ವರನ ಜ್ಞಾನ ಮತ್ತು ಸುಖಾದಿಗೋಚರ ಜ್ಞಾನ – ಈ ಏಳು ಪ್ರಮಾ ಜ್ಞಾನಗಳಲ್ಲಿ ಪ್ರತ್ಯಕ್ಷರೂಪ ಜ್ಞಾನಗಳಾಗಿವೆ.

ಪ್ರ : **ಶಾಬ್ದಿ ಪ್ರಮೆ ಯಾವುದಕ್ಕೆ ಸೇರಿದ್ದು?**

ಉ : ಇದು ಪ್ರತ್ಯಕ್ಷ ಪರೋಕ್ಷವೆಂಬ ಭೇದದಿಂದ ಎರಡು ವಿಧ ವಾಗಿದೆ. ಮತ್ತು ಅಭಾವ ಪ್ರಮೆಯೂ ಸಹ ಪ್ರತ್ಯಕ್ಷ, ಪರೋಕ್ಷವೆಂದು ಎರಡು ವಿಧ. ಹೀಗಿದ್ದರೂ ಅಭಾವ ಪ್ರಮೆಯು ವಿವಾದಾಸ್ಪದವಾದುದರಿಂದ ಪ್ರತ್ಯಕ್ಷವೇ ಎಂದು ಹೇಳಿಸಿಕೊಳ್ಳುತ್ತದೆ.

ಪ್ರ : **ಪರೋಕ್ಷ ಜ್ಞಾನಗಳಾವುವು ?**

ಉ : ಅನುಮತಿ ಪ್ರಮಾ, ಉಪಮಿತಿ ಪ್ರಮಾ, ಮತ್ತು ಅರ್ಥಾಪತ್ತಿ ಪ್ರಮಾ – ಈ ಮೂರಕ್ಕೆ ಪರೋಕ್ಷರೂಪವಾದ ಪ್ರಮಾಜ್ಞಾನಗಳೆನ್ನುತ್ತಾರೆ.

ಪ್ರ : **ಪ್ರಮಾಜ್ಞಾನದ ಕಾರಣಗಳಾವುವು ?**

ಉ : ೧. ಜೀವರುಗಳ ಕರ್ಮಾನುಸಾರವಾಗಿ ಜರಗುವ ಸೃಷ್ಟಿಯ ಆದಿ ಕಾಲದಲ್ಲಿಯ ಸರ್ವ ಪದಾರ್ಥಗಳನ್ನು ವಿಷಯೀಕರಿಸುವ ಈಶ್ವರ ಜ್ಞಾನವು ತ್ರಿಕಾಲದಲ್ಲಿಯೂ ಸಕಲ ಪದಾರ್ಥಗಳನ್ನೂ ಸಾಮಾನ್ಯ ಭಾವ ದಿಂದಲೂ, ವಿಶೇಷಭಾವದಿಂದಲೂ ವಿಷಯೀಕರಿಸುತ್ತದೆ. ಅದು ಪ್ರಳಯದ ವರೆಗೂ ಹೆಚ್ಚು ಕಮ್ಮಿ ಆಗದೆ ಹಾಗೆಯೇ ಇರುತ್ತದೆ. ಅದಕ್ಕೋಸ್ಕರ ಈ

ಮಾಯಾ ವೃತ್ತಿರೂಪವಾದ ಜ್ಞಾನವು ಏಕವೂ ನಿತ್ಯವೂ ಎಂದು ಹೇಳಿಸಿ ಕೊಳ್ಳುತ್ತದೆ. ಇದೇ ಹಿಂದೆ ಹೇಳಿದ ಈಶ್ವರಾಶ್ರಿತವಾದ ಪ್ರಮಾಜ್ಞಾನ.

ಕಾರಣವೇನೆಂದರೆ, ಈಶ್ವರಾಶ್ರಿತವಾದ ಪ್ರಮಾಜ್ಞಾನಕ್ಕೆ ಮಾಯೆಯೇ ಉಪಾದಾನ ಕಾರಣ ; ಸರ್ವ ಜೀವರುಗಳ ಅದೃಷ್ಟವೇ ನಿಮಿತ್ತಕಾರಣ.

೨. ಆಯಾ ಧರ್ಮಾದಿಗಳ ನಿಮಿತ್ತದಿಂದ ಅನುಕೂಲ ಪ್ರತಿಕೂಲ ಪದಾರ್ಥಗಳ ಸಂಬಂಧದಿಂದ ಅಂತಃಕರಣದಲ್ಲಿಯ ಸತ್ವಗುಣವು ರಜೋಗುಣ ರೂಪದಿಂದ ಪರಿಣಮಿಸಿ ಸುಖದುಃಖಗಳನ್ನುಂಟುಮಾಡುತ್ತದೆ. ಸುಖದುಃಖ ಗಳಿಗೆ ಯಾವುದು ನಿಮಿತ್ತವೋ, ಆ ನಿಮಿತ್ತದಿಂದಲೇ ಸುಖದುಃಖಗಳನ್ನು ವಿಷಯೀಕರಿಸುವ ಅಂತಃಕರಣ ವೃತ್ತಿಯು ಉತ್ಪನ್ನವಾಗುತ್ತದೆ. ಆ ವೃತ್ತಿ ಯಲ್ಲಿ ಆರೂಢವಾದ ಸಾಕ್ಷೀ ಚೈತನ್ಯವು ಸುಖದುಃಖಗಳನ್ನು ಪ್ರಕಾಶ ಮಾಡುತ್ತದೆ. ಅದಕ್ಕೆ ಜೀವಾಶ್ರಿತ ಪ್ರಮೆಯೆನ್ನುತ್ತಾರೆ.

ಸುಖದುಃಖ ಜ್ಞಾನಕ್ಕೆ ಉಪಾದಾನ ಕಾರಣ ಅಂತಃಕರಣ. ಆಯಾ ಧರ್ಮಾದಿಗಳು ನಿಮಿತ್ತ ಕಾರಣಗಳು. ಪ್ರಮಾಣಜನ್ಯ ಯಥಾರ್ಥ ಜ್ಞಾನವು ಆರು ವಿಧವಾಗಿದೆ. ಅದಕ್ಕೆ ಅಂತಃಕರಣವು ಉಪಾದಾನ ಕಾರಣ. ಪ್ರತ್ಯ ಕ್ಷಾದಿ ಪ್ರಮಾಣಗಳೂ, ಇಂದ್ರಿಯ ಸಂಯೋಗಾದಿಗಳೂ ನಿಮಿತ್ತ ಕಾರಣ.

ಪ್ರ : **ಭ್ರಮಾ ಜ್ಞಾನಕ್ಕೆ ಕಾರಣಗಳಾವುವು ?**

ಉ : ಭ್ರಮಾ ಜ್ಞಾನವೆಂದರೆ ಅವಿದ್ಯೆಯ ಪರಿಣಾಮರೂಪವಾದುದು. ಅವಿದ್ಯೆಯು ಭ್ರಮಾಜ್ಞಾನಕ್ಕೆ ಉಪಾದಾನ ಕಾರಣ.

೧. ಸಜಾತೀಯ ವಸ್ತು ಜ್ಞಾನದಿಂದ ಉಂಟಾದ ಸಂಸ್ಕಾರ.

೨. ಪ್ರಮಾತೃ ದೋಷ.

೩. ಪ್ರಮಾಣ ದೋಷ.

೪. ಪ್ರಮೇಯ ದೋಷ.

೫. ಅಧಿಷ್ಠಾನದ ಸಾಮಾನ್ಯ ಅಂಶದ ಜ್ಞಾನ ಮತ್ತು ತಿಮಿರಾದಿ ಕಾರಣಗಳು. ಈ ಐದು ನಿಮಿತ್ತ ಕಾರಣಗಳು.

ಪ್ರ : **ಪ್ರಮಾಣಗಳೆಷ್ಟು? ಅವುಗಳ ಹೆಸರೇನು ? ಅವುಗಳ ವಿವರಣೆಯೇನು ?**

ಉ : ಪ್ರಮಾಣಗಳ ವಿಷಯವು ಬಹಳ ವಿಸ್ತಾರವಾಗಿದ್ದರೂ ಇಲ್ಲಿ ಸಂಕ್ಷೇಪವಾಗಿ ಹೇಳಲ್ಪಡುತ್ತದೆ.

ಪ್ರಮಾಣಗಳು ಆರು : ೧. ಪ್ರತ್ಯಕ್ಷ, ೨. ಅನುಮಾನ, ೩. ಉಪಮಾನ, ೪. ಶಬ್ದ, ೫. ಅರ್ಥಾಪತ್ತಿ ಮತ್ತು ೬. ಅನುಪಲಬ್ಧಿ.

ಪ್ರ : **ಪ್ರಮಾಣಕ್ಕೆ ಲಕ್ಷಣವೇನು ?**

ಉ : "ಪ್ರಮಾಕರಣಂ ಪ್ರಮಾಣಂ" ಅಂದರೆ ಪ್ರಮೆಗೆ ಕಾರಣವಾದದ್ದು ಪ್ರಮಾಣ. ಅರ್ಥಾತ್ ಹಿಂದೆ ಜೀವಾಶ್ರಿತ ಪ್ರಮೆಯೆಂದು ಹೇಳಿದೆ. ಆ ಪ್ರಮೆಯ ಕರಣವೇ ಇಲ್ಲಿ ಪ್ರಮಾಣವೆನಿಸುತ್ತದೆ.

ಪ್ರ : **ಇದರ ವಿವರಣೆ ಏನು ?**

ಉ : ೧. ಪ್ರತ್ಯಕ್ಷ ಪ್ರಮೆಗೆ ಯಾವುದು ಕರಣವೋ ಅದನ್ನು ಪ್ರತ್ಯಕ್ಷ ಪ್ರಮಾಣವೆನ್ನುತ್ತಾರೆ.

೨. ಅನುಮಿತಿ ಪ್ರಮೆಗೆ ಯಾವುದು ಕರಣವೋ ಅದನ್ನು ಅನುಮಾನ ಪ್ರಮಾಣವೆನ್ನುತ್ತಾರೆ.

೩. ಶಾಬ್ದಿ ಪ್ರಮೆಗೆ ಯಾವುದು ಕರಣವೋ ಅದನ್ನು ಶಬ್ದ ಪ್ರಮಾಣವೆನ್ನುತ್ತಾರೆ.

೪. ಉಪಮಿತಿ ಪ್ರಮೆಗೆ ಯಾವುದು ಕರಣವೋ ಅದನ್ನು ಉಪಮಾನ ಪ್ರಮಾಣವೆನ್ನುತ್ತಾರೆ.

೫. ಅರ್ಥಾಪತ್ತಿ ಪ್ರಮೆಗೆ ಯಾವುದು ಕರಣವೋ ಅದನ್ನು ಅರ್ಥಾಪತ್ತಿ ಪ್ರಮಾಣವೆನ್ನುತ್ತಾರೆ.

೬. ಅಭಾವ ಪ್ರಮೆಗೆ ಯಾವುದು ಕರಣವೋ ಅದನ್ನು ಅನುಪಲಬ್ಧಿ ಪ್ರಮಾಣವೆನ್ನುತ್ತಾರೆ.

ಪ್ರ : **ಯಾವ ಯಾವ ಮತದವರು ಯಾವ ಯಾವ ಪ್ರಮಾಣವನ್ನು ಅಂಗೀಕರಿಸಿದ್ದಾರೆ ?**

ಉ : ೧. ಚಾರ್ವಾಕ ಮತಸ್ಥರು ಒಂದೇ ಪ್ರತ್ಯಕ್ಷ ಪ್ರಮಾಣವನ್ನು ಅಂಗೀಕರಿಸಿದ್ದಾರೆ.

೨. ವೈಶೇಷಿಕ ಮತಾಚಾರ್ಯರಾದ ಕಣಾದ ಮಹರ್ಷಿಗಳು ಮತ್ತು

ಬೌದ್ಧ ಮತಕ್ಕೆ ಸೇರಿದ ಸೌಗತಮತದವರು, ಪ್ರತ್ಯಕ್ಷ ಮತ್ತು ಅನುಮಾನ ವೆಂಬೆರಡೂ ಪ್ರಮಾಣವನ್ನು ಅಂಗೀಕರಿಸುತ್ತಾರೆ.

೩. ಸಾಂಖ್ಯ ಶಾಸ್ತ್ರಮತ ಪ್ರವರ್ತಕರಾದ ಕಪಿಲ ಮಹರ್ಷಿಗಳು ಪ್ರತ್ಯಕ್ಷ, ಅನುಮಾನ, ಶಬ್ದ – ಈ ಮೂರೂ ಪ್ರಮಾಣಗಳನ್ನು ಅಂಗೀ ಕರಿಸುತ್ತಾರೆ.

೪. ನ್ಯಾಯ ದರ್ಶನ ಕರ್ತರಾದ ಗೌತಮ ಋಷಿಗಳು ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ – ಈ ನಾಲ್ಕೂ ಪ್ರಮಾಣಗಳನ್ನು ಅಂಗೀ ಕರಿಸಿದ್ದಾರೆ.

೫. ಪೂರ್ವ ಮೀಮಾಂಸ ಶಾಸ್ತ್ರದಲ್ಲಿ (ಕರ್ಮ) ಏಕದೇಶೀ ಮತ ಕಾರನಾದ ಭಾಟ್ಟನ ಶಿಷ್ಯನಾದ ಪ್ರಭಾಕರನು ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ, ಅರ್ಥಾಪತ್ತಿ – ಈ ಐದೂ ಪ್ರಮಾಣಗಳನ್ನು ಅಂಗೀಕರಿಸಿ ದ್ದಾನೆ.

ಪ್ರ : **ನೀವು ಹೇಳಿದ್ದನ್ನು ಒಪ್ಪಲು ನನಗೆ ಇಷ್ಟವಿಲ್ಲ. ಮುಖ್ಯ ವಾಗಿ ಸೂತ್ರಕಾರರೂ, ಭಾಷ್ಯಕಾರರೂ ಎಷ್ಟು ಪ್ರಮಾಣವನ್ನು ಒಪ್ಪಿರುತ್ತಾರೆ ?**

ಉ : ಸೂತ್ರಕಾರನಾದ ವ್ಯಾಸ ಮಹರ್ಷಿಯೂ, ಭಾಷ್ಯಕಾರರಾದ ಶಂಕರ ಭಗವತ್ಪಾದರೂ ತಮ್ಮ ತಮ್ಮ ಗ್ರಂಥಗಳಲ್ಲಿ ಪ್ರಮಾಣಗಳು ಇಷ್ಟೇ ಎಂಬುದನ್ನು ಎಲ್ಲಿಯೂ ಹೇಳಿಲ್ಲ. ಆದರೂ ವೇದಾಂತ ಸಿದ್ಧಾಂತಕ್ಕೆ ವಿರೋಧವಲ್ಲದ ಆರೇ ಪ್ರಮಾಣಗಳೆಂದು ಹೇಳುವ ಕುಮಾರಿಲಭಟ್ಟನ ಅಭಿ ಪ್ರಾಯವೇ ಅದ್ವೈತ ಮತಕ್ಕೆ ಸಮ್ಮತವಾಗಿದೆ. ಈ ಕಾರಣದಿಂದ ವೇದಾಂತ ಸಿದ್ಧಾಂತಗಳನ್ನು ಪ್ರತಿಪಾದಿಸುವ ವೇದಾಂತ ಪರಿಭಾಷಾದಿ ಮಹಾ ಮಹಾ ಗ್ರಂಥಗಳಲ್ಲಿ ಆರು ಪ್ರಮಾಣಗಳೆಂದು ಅಂಗೀಕರಿಸಲ್ಪಟ್ಟಿವೆ.

ಪ್ರ : **ಪ್ರಮಾಣವೆಂದರೇನು ? ಅವುಗಳ ಲಕ್ಷಣವೇನು ?**

ಉ : ಪ್ರಮಾಣಗಳು ಎರಡು ವಿಧ.

೧. ಪ್ರಮಾ ಜ್ಞಾನದ ಕರಣವನ್ನು ಪ್ರಮಾಣವೆನ್ನುತ್ತಾರೆ. ಈ ಲಕ್ಷಣವು ಮೊದಲೇ ಹೇಳಲ್ಪಟ್ಟಿದೆ.

೨. ಅಜ್ಞಾತ ವಸ್ತುವನ್ನು ಜ್ಞಾಪಕ ಮಾಡಿಕೊಟ್ಟರೆ ಅದಕ್ಕೆ ಪ್ರಮಾಣವೆನ್ನುತ್ತಾರೆ.

ಸಾರಾಂಶವೇನೆಂದರೆ, ಪ್ರತ್ಯಕ್ಷ ಪ್ರಮೆಗೆ ನೇತ್ರಾದಿ ಇಂದ್ರಿಯಗಳೇ ಕರಣಗಳು. ಆದುದರಿಂದಲೇ ನೇತ್ರಾದಿ ಇಂದ್ರಿಯಗಳನ್ನು ಪ್ರತ್ಯಕ್ಷ ಪ್ರಮಾಣವೆನ್ನುತ್ತಾರೆ.

ಪ್ರ : **ಕರಣಕ್ಕೆ ಲಕ್ಷಣವೇನು ?**

ಉ: ವ್ಯಾಪಾರಯುಕ್ತವಾದ ಅಸಾಧಾರಣ ಕಾರಣವನ್ನು ಕರಣವೆನ್ನುತ್ತಾರೆ. ಇಲ್ಲವೆ ವ್ಯಾಪಾರಕ್ಕೆ ಭಿನ್ನವಾದ ಅಸಾಧಾರಣ ಕಾರಣವನ್ನು ಕರಣವೆನ್ನುತ್ತಾರೆ. ಈ ವಿಷಯವನ್ನು ಕುರಿತು ಶಾಸ್ತ್ರದಲ್ಲಿ "ಅಸಾಧಾರಣಂ ಕಾರಣಂ ಕರಣಂ" ಎಂದು ನಿರ್ವಚನ ಮಾಡಿರುತ್ತಾರೆ.

ಪ್ರ : **ಕಾರಣಕ್ಕೆ ಲಕ್ಷಣವೇನು ?**

ಉ : ಕಾರ್ಯಕ್ಕೆ ನಿಯತವಾಗಿ ಅ ವ್ಯ ವ ಹಿ ತ ಪೂರ್ವಕಾಲದಲ್ಲಿ ಇರುವುದನ್ನು ಕಾರಣವೆನ್ನುತ್ತಾರೆ.

ಪ್ರ : **ಕಾರಣಗಳು ಎಷ್ಟು ವಿಧ ?**

ಉ : ಸಾಧಾರಣ ಕಾರಣ, ಅಸಾಧಾರಣ ಕಾರಣವೆಂದು ಎರಡು ವಿಧ.

ಪ್ರ : **ಸಾಧಾರಣ ಕಾರಣವೆಂದರೇನು ?**

ಉ : ಎಲ್ಲಾ ಕಾರ್ಯಗಳಿಗೂ ಯಾವುದು ಕಾರಣವಾಗಿರುವುದೋ ಅದನ್ನು ಸಾಧಾರಣ ಕಾರಣವೆನ್ನುತ್ತಾರೆ.

ಪ್ರ : **ನ್ಯಾಯಮತ ಪ್ರಕಾರ ಸಾಧಾರಣ ಕಾರಣಗಳೆಷ್ಟು ?**

ಉ : ೧. ಈಶ್ವರ, ೨. ಈಶ್ವರಜ್ಞಾನ, ೩. ಇಚ್ಛೆ, ೪. ಕೃತಿ, ೫. ದಿಕ್ಕು, ೬. ಕಾಲ, ೭. ಅದೃಷ್ಟ, ೮. ಪ್ರಾಗಭಾವ, ಮತ್ತು ೯. ಪ್ರತಿಬಂಧಕಾಭಾವ – ಈ ಒಂಭತ್ತು ನ್ಯಾಯಮತ ಪ್ರಕಾರ ಸಾಧಾರಣ ಕಾರಣಗಳು.

ಪ್ರ : **ವೇದಾಂತ ಶಾಸ್ತ್ರ ಪ್ರಕಾರ ಸಾಧಾರಣ ಕಾರಣಗಳೆಷ್ಟು?**

ಉ : ೧. ಈಶ್ವರ, ೨. ಈಶ್ವರಜ್ಞಾನ, ೩. ಇಚ್ಛೆ, ೪. ಕೃತಿ, ೫. ಅದೃಷ್ಟ, ಮತ್ತು ೬. ಪ್ರತಿಬಂಧಕಾಭಾವ – ಈ ಆರು ವೇದಾಂತ ಶಾಸ್ತ್ರಗಳಲ್ಲಿ ಹೇಳಿದ ಅಸಾಧಾರಣ ಕಾರಣಗಳು.

ಪ್ರ : **ಅಸಾಧಾರಣ ಕಾರಣವೆಂದು ಯಾವುದನ್ನು ಹೇಳುತ್ತಾರೆ ?**

ಉ : ಯಾವುದೋ ಒಂದು ಕಾರ್ಯಕ್ಕೆ ಕಾರಣವಾಗಿರುವುದನ್ನು ಅಸಾಧಾರಣ ಕಾರಣವೆನ್ನುತ್ತಾರೆ.

ಉದಾ : ಘಟಕ್ಕೆ ಮಣ್ಣು ಕಾರಣ, ಪಟಕ್ಕೆ ಅದು ಕಾರಣವಲ್ಲ.

ಪ್ರ : **ಮೇಲೆ ಹೇಳಿದ ಆರು ಪ್ರಮಾಣಗಳಿಗೆ ಕರಣಗಳು ಯಾವುವು ? ಮತ್ತು ಕರಣಗಳೂ ಕಾರಣಗಳೂ ಎರಡೂ ಆಗಿರುವುವು ಯಾವುವು ?**

ಉ : ಪ್ರತ್ಯಕ್ಷ, ಅನುಮಾನ, ಶಬ್ದ – ಈ ಮೂರು ಪ್ರಮಾಣಗಳು ವ್ಯಾಪಾರಯುಕ್ತವಾಗಿಯೂ ಮತ್ತು ಅಸಾಧಾರಣಗಳಾಗಿಯೂ ಇರುತ್ತವೆ; ಅಸಾಧಾರಣ ಕರಣಗಳೂ, ಕಾರಣಗಳೂ ಆಗಿರುತ್ತವೆ.

ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ ಅಥವಾ ಅಭಾವ ಎಂಬ ಈ ಮೂರು ಪ್ರಮಾಣಗಳು ವ್ಯಾಪಾರಯುಕ್ತವಾದವುಗಳು ಮತ್ತು ಅವು ಅಸಾಧಾರಣ ಕಾರಣಗಳಾಗಿರುತ್ತವೆ. ಆದುದರಿಂದ ಈ ಮೂರು ಕೇವಲ ಕರಣಗಳು ಮಾತ್ರ.

ಪ್ರ : **ಅಸಾಧಾರಣ ಕಾರಣಗಳು ಎಷ್ಟು ವಿಧ ?**

ಉ : ಅಸಾಧಾರಣ ಕಾರಣಗಳು ನಿಮಿತ್ತ ಕಾರಣ, ಉಪಾದಾನ ಕಾರಣಗಳೆಂದು ಎರಡು ವಿಧ.

ಪ್ರ : **ಉಪಾದಾನ ಕಾರಣವೆಂದರೇನು ?**

ಉ : ಕಾರ್ಯವು ಕಾರಣದಲ್ಲಿ ಸ್ಥಿತವಾಗಿದ್ದು ಯಾವುದು ಇಲ್ಲದೆ ಹೋದರೆ ಕಾರ್ಯವು ಉತ್ಪನ್ನವಾಗಲಾರದೋ ಅದು ಉಪಾದಾನ ಕಾರಣ.

ಪ್ರ : **ನಿಮಿತ್ತ ಕಾರಣವೆಂದರೇನು ?**

ಉ : ಯಾವ ಕಾರಣವು ಕಾರ್ಯಕ್ಕಿಂತ ಭಿನ್ನವಾಗಿದ್ದು, ಕಾರ್ಯವನ್ನು ಉತ್ಪತ್ತಿ ಮಾಡಿ, ಕಾರ್ಯವು ಉತ್ಪನ್ನವಾದ ಮೇಲೆ ಕಾರ್ಯವೂ ನಾಶವಾದರೆ ಕಾರಣವು ನಾಶವಾಗುವುದಿಲ್ಲವೋ ಅದು ನಿಮಿತ್ತ ಕಾರಣ.

ಉದಾ : ಘಟಕ್ಕೆ ಕಾರಣಗಳೆರಡು.

ಮಣ್ಣು – ಉಪಾದಾನ ಕಾರಣ.

ಕುಂಬಾರ – ನಿಮಿತ್ತ ಕಾರಣ.

ಇದರಲ್ಲಿ ಘಟವು ನಾಶವಾದರೂ ಕುಂಬಾರನು ನಾಶವಾಗುವುದಿಲ್ಲ. ಕುಂಬಾರನು ನಾಶವಾದರೂ ಘಟವು ನಾಶವಾಗುವುದಿಲ್ಲ.

ಪ್ರ : **ಅಸಾಧಾರಣ ಕಾರಣಗಳು ಎಷ್ಟು ವಿಧ ?**

ಉ : ಎರಡು ವಿಧ.

೧ ವ್ಯಾಪಾರಯುಕ್ತ ಕಾರಣಗಳು.

೨ ವ್ಯಾಪಾರರಹಿತ ಕಾರಣಗಳು.

ಪ್ರ : **ವ್ಯಾಪಾರವೆಂದರೇನು ? ವ್ಯಾಪಾರಯುಕ್ತ ಕಾರಣವೆಂದರೇನು ?**

ಉ : ಕಾರಣದಿಂದ ಉತ್ಪನ್ನವಾಗಿ ಕಾರ್ಯವನ್ನುಂಟುಮಾಡುವುದನ್ನು ವ್ಯಾಪಾರವೆನ್ನುತ್ತಾರೆ. ಹೇಗೆಂದರೆ, ಕಪಾಲವು ಘಟಕ್ಕೆ ಕಾರಣ. ಎರಡು ಕಪಾಲಗಳ ಸೇರುವಿಕೆಯೂ ಸಹ ಘಟಕ್ಕೆ ಕಾರಣವೇ. ಆದರೆ ಕಪಾಲಗಳ ಕಾರಣತ್ವದಲ್ಲಿ ಸಂಯೋಗವೆಂಬ ವ್ಯಾಪಾರವಿರುತ್ತದೆ. ಆ ಸಂಯೋಗವು ಕಪಾಲಕ್ಕೆ ಕಾರ್ಯವಾದ ಘಟವನ್ನು ಉತ್ಪನ್ನ ಮಾಡುತ್ತದೆ. ಆದುದರಿಂದ ಅವೆರಡು ಕಪಾಲಗಳು ಸಂಯೋಗ ರೂಪವಾದ ವ್ಯಾಪಾರದಿಂದ ಉಂಟಾದ ಕಾರಣಗಳು. ಆದುದರಿಂದಲೇ ಅವುಗಳಲ್ಲಿ ಕರಣತ್ವ, ಕಾರಣತ್ವ ಎರಡೂ ಲಕ್ಷಣಗಳು ಸಂಭವಿಸುತ್ತವೆ. ಇನ್ನು ವ್ಯಾಪಾರರಹಿತವಾದ ಕಾರಣವೇನೆಂದರೆ, ಒಂದು ಕಾರಣವು ಮತ್ತೊಂದರ ಸಹಾಯದಿಂದ ಕಾರ್ಯವನ್ನುಂಟುಮಾಡುವುದಲ್ಲದೆ ತಾನೂ ಸ್ವತಃ ಕಾರ್ಯವನ್ನು ಉತ್ಪನ್ನ ಮಾಡುವುದಾದರೆ ಆ ಕಾರಣವು ವ್ಯಾಪಾರರಹಿತ ಕಾರಣವೆಂದು ಹೇಳಿಸಿಕೊಳ್ಳುತ್ತದೆ. ಅದು ಕೇವಲ ಕಾರಣವೇ ವಿನಹ ಕರಣತ್ವವು ಅದಕ್ಕಿಲ್ಲ. ಏಕೆಂದರೆ, ಎರಡು ಕಪಾಲಗಳ ಸಂಯೋಗವು ಘಟಕ್ಕೆ ಅಸಾಧಾರಣ ಕಾರಣವೆನಿಸುತ್ತದೆ. ಆದರೆ ಅದು ಕಾರಣವಲ್ಲ. ಆದುದರಿಂದ ಅದು ಕರಣವೆನಿಸಲಾರದು. ಈ ಕಾರಣದಿಂದ ಅದು ಘಟಕ್ಕೆ ಕೇವಲ ಕಾರಣವಾಗಿದ್ದು ವ್ಯಾಪಾರರಹಿತ ಕಾರಣವೆಂದು ಹೇಳಿಸಿಕೊಳ್ಳುತ್ತದೆ.

ಪ್ರ : **''ವ್ಯಾಪಾರ ಮತ್ತು ವ್ಯಾಪಾರಯುಕ್ತ ಕಾರಣ" ಎಂಬ ವಿಷಯಗಳನ್ನು ಪ್ರತ್ಯಕ್ಷ ಪ್ರಮೆಯೊಂದಿಗೆ ಸೇರಿಸಿ ವಿವರಿಸಿರಿ.**

ಉ : ನೇತ್ರಾದಿ ಜ್ಞಾನೇಂದ್ರಿಯಗಳು ಪ್ರತ್ಯಕ್ಷ ಪ್ರಮೆಗೆ ಕರಣವೆನಿಸು

ತ್ತವೆ. ನೇತ್ರಾದಿ ಜ್ಞಾನೇಂದ್ರಿಯಗಳು ಅವವುಗಳ ವಿಷಯಗಳೊಂದಿಗೆ ಸಂಬಂಧಪಡದಿದ್ದರೆ ಪ್ರತ್ಯಕ್ಷ ಪ್ರಮೆಯು ಸಂಭವಿಸಲಾರದು. ಇಂದ್ರಿಯ ಗಳಿಗೆ ವಿಷಯಗಳೊಡನೆ ಸಂಬಂಧವುಂಟಾದರೆ ಮಾತ್ರ ಪ್ರತ್ಯಕ್ಷ ಪ್ರಮೆಯು ಉಂಟಾಗುತ್ತದೆ

ಇಂದ್ರಿಯ ಮತ್ತು ವಿಷಯಗಳ ಸಂಬಂಧವೆನ್ನುವುದು ಇಂದ್ರಿಯಗಳಿಂದ ಉತ್ಪನ್ನವಾಗಿ ಪ್ರತ್ಯಕ್ಷ ಪ್ರಮೆಯನ್ನುಂಟುಮಾಡುತ್ತದೆ. ಪರಂತು ಇದೇ ವ್ಯಾಪಾರವೆನಿಸುತ್ತದೆ. ಸಂಬಂಧರೂಪ ವ್ಯವಹಾರವುಳ್ಳ ಪ್ರತ್ಯಕ್ಷ ಪ್ರಮೆಗೆ ಇಂದ್ರಿಯಗಳೇ ಅಸಾಧಾರಣ ಕರಣಗಳು. ಇಂಥ ಇಂದ್ರಿಯಗಳನ್ನು ಕುರಿತು ಪ್ರತ್ಯಕ್ಷ ಪ್ರಮಾಣವೆನ್ನುತ್ತಾರೆ. ಇಂದ್ರಿಯಜನ್ಯ ಯಥಾರ್ಥ ಜ್ಞಾನವನ್ನು ಪ್ರತ್ಯಕ್ಷ ಪ್ರಮೆ ಎನ್ನುತ್ತಾರೆ.

ಪ್ರ : **ಈ ಪ್ರತ್ಯಕ್ಷ ಪ್ರಮೆಯನ್ನು ಕುರಿತು ಮತ್ತಷ್ಟು ವಿವರಣೆ ಕೊಡಿರಿ.**

ಉ : ಈ ವಿಷಯವನ್ನು ಶಾಸ್ತ್ರಾಂತರದಲ್ಲಿ ''ವಿಷಯ ಚೈತನ್ಯಾಭಿನ್ನ ಪ್ರಮಾಣಚೈತನ್ಯಂ ಪ್ರತ್ಯಕ್ಷ ಪ್ರಮಾ" ಎಂದು ಹೇಳಿದೆ. ಅಂದರೆ ವಿಷಯ ಚೈತನ್ಯಕ್ಕೆ ಅಭಿನ್ನವಾದ ಪ್ರಮಾಣ ಚೈತನ್ಯವನ್ನು ಪ್ರತ್ಯಕ್ಷ ಪ್ರಮೆಯೆನ್ನು ತ್ತಾರೆ. ಇದು ಪ್ರತ್ಯಕ್ಷ ಪ್ರಮೆಯ ಲಕ್ಷಣ.

ಪ್ರ : **ಮೇಲೆ ಹೇಳಿದ ಅರ್ಥವನ್ನು ಸ್ಪಷ್ಟವಾಗಿ ತಿಳಿದುಕೊಳ್ಳು ವುದಕ್ಕೋಸ್ಕರ ಚೈತನ್ಯದ ಉಪಾಧಿಕೃತ ಭೇದಗಳನ್ನು ನಿರೂಪಿಸಿರಿ.**

ಉ : ವಾಸ್ತವವಾಗಿ ಚೈತನ್ಯವು ಒಂದೇ ಆಗಿದ್ದರೂ ಉಪಾಧಿ ಭೇದ ದಿಂದ ನಾಲ್ಕು ವಿಧವಾಗಿ ಪರಿಗಣಿಸಲ್ಪಟ್ಟಿದೆ.

೧. ಪ್ರಮಾತೃ ಚೈತನ್ಯ
೨. ಪ್ರಮಾಣ ಚೈತನ್ಯ
೩. ವಿಷಯ ಚೈತನ್ಯ
೪. ಫಲ ಚೈತನ್ಯ.

ಪ್ರ : **ಪ್ರಮಾತೃ ಚೈತನ್ಯವೆಂದರೇನು ?**

ಉ : ಅಂತಃಕರಣದ ವೃತ್ತಿಯ ಅವಚ್ಛಿನ್ನ ಚೇತನವನ್ನು ಪ್ರಮಾಣ ಚೇತನವೆನ್ನುತ್ತಾರೆ.

ಪ್ರ : **ಪ್ರಮಾಣ ಚೈತನ್ಯವೆಂದರೇನು ?**

ಉ : ಅಂತಃಕರಣದ ವೃತ್ತಿಯ ಅವಚ್ಛಿನ್ನ ಚೇತನವನ್ನು ಪ್ರಮಾಣ ಚೇತನವೆನ್ನುತ್ತಾರೆ.

ಪ್ರ : **ವಿಷಯ ಚೈತನ್ಯವೆಂದರೇನು ?**

ಉ : ಘಟ ಮೊದಲಾದ ವಿಷಯಗಳ ಅವಚ್ಛಿನ್ನ ಚೇತನಕ್ಕೆ ವಿಷಯ ಚೇತನವೆನ್ನುತ್ತಾರೆ.

ಪ್ರ : **ಫಲ ಚೈತನ್ಯವೆಂದರೇನು ?**

ಉ : ಘಟ ಮೊದಲಾದ ವಿಷಯಗಳ ಸಮಾನಾಕಾರವನ್ನು ಧರಿಸಿದ ಅಂತಃಕರಣ ವೃತ್ತಿಯಿಂದ ಅಭಿವ್ಯಕ್ತವಾದ ಚೈತನ್ಯವನ್ನು ಫಲ ಚೈತನ್ಯವೆನ್ನುತ್ತಾರೆ. ಇದನ್ನೇ ಪ್ರಮಾ ಚೈತನ್ಯವೆಂತಲೂ ಹೇಳಬಹುದು.

ಈ ವಿಧವಾಗಿ ಅಂತಃಕರಣ ಮೊದಲಾದುವುಗಳ ಉಪಾಧಿಗಳ ಭೇದದಿಂದ ಏಕವಾದ ಚೇತನವು ನಾಲ್ಕು ವಿಧವಾಗಿದೆ.

ಪ್ರ : **ಉಪಾಧಿಗಳ ಸ್ವಭಾವವೇನು ?**

ಉ : ಇವು ಅಂದರೆ ಉಪಾಧಿಗಳು ಭಿನ್ನ ಭಿನ್ನ ಪ್ರದೇಶದಲ್ಲಿರುವವರೆಗೆ ಉಪಾಧಿ ಉಪಹಿತ ಚೈತನ್ಯಕ್ಕೆ ಭೇದವನ್ನುಂಟುಮಾಡುತ್ತವೆ. ಉಪಾಧಿಗಳು ಒಂದೇ ಸ್ಥಳದಲ್ಲಿ ಸೇರಿದರೆ ಉಪಹಿತ ಚೇತನದಲ್ಲಿ ಭೇದವುಂಟಾಗಲಾರದು ; ಅಭೇದವೇ ಸಿದ್ಧಿಸುತ್ತದೆ.

ಉದಾ : ಮಠದ ಹೊರಗಡೆ ಘಟವಿದ್ದರೆ ಮಠೋಪಹಿತ ಆಕಾಶವೂ, ಘಟೋಪಹಿತ ಆಕಾಶವೂ ಬೇರೆ ಬೇರೆಯಾಗಿ ತೋರುತ್ತವೆ. ಘಟವನ್ನು ಮಠದ ಒಳಗೆ ತಂದು ಇರಿಸಿದರೆ ಆಕಾಶದಲ್ಲಿ ಯಾವ ಭೇದವೂ ತೋರದೆ ಎರಡೂ ಆಕಾಶಗಳು ಅಭೇದವೆನಿಸುತ್ತವೆ.

ದಾರ್ಷ್ಟಾಂತ : ಇದರಂತೆ ಅಂತಃಕರಣ, ವೃತ್ತಿ ಮತ್ತು ಘಟಾದಿ ವಿಷಯಗಳು – ಈ ಮೂರೂ ಉಪಾಧಿಗಳೇ. ಈ ಉಪಾಧಿಗಳು ಬೇರೆ ಬೇರೆ ಸ್ಥಳದಲ್ಲಿರುವವರೆಗೆ ಚೇತನವೂ ಸಹ ಬೇರೆ ಬೇರೆಯಾಗಿ ಪ್ರಮಾತೃ ಚೇತನ, ಪ್ರಮಾಣ ಚೇತನ, ಮತ್ತು ಪ್ರಮೇಯ ಚೇತನ (ವಿಷಯ ಚೇತನ) ಈ ರೀತಿ ಮೂರು ವಿಧವಾಗಿ ತೋರುತ್ತವೆ. ಆದರೆ ಆ ಚೈತನ್ಯವು ನೇತ್ರಾದಿ ಇಂದ್ರಿಯ

ಗಳ ದ್ವಾರ ವೃತ್ತಿರೂಪದಿಂದ ಹೊರಬಿದ್ದು ಘಟಾದಿ ವಿಷಯಗಳಲ್ಲಿ ಪ್ರವರ್ತಿಸಿದಾಗ ಅಂತಃಕರಣ ಮೊದಲಾದ ಉಪಾಧಿಗಳು ಒಂದೇ ಸ್ಥಾನದಲ್ಲಿ ಸೇರಿದರೆ, ಪ್ರಮಾತೃ ಮೊದಲಾದ ಮೂರೂ ಚೇತನಗಳು ಒಂದೇ ಆಗಿ ಪ್ರಮಾ ಚೇತನವೆನಿಸಿಕೊಳ್ಳುತ್ತದೆ. ಈ ವಿಧವಾಗಿ ವಿಷಯ ಪರಿಚ್ಛಿನ್ನ ಚೇತನ ಮತ್ತು ಪ್ರಮಾಣ ಚೇತನಕ್ಕೆ ಇರುವ ಅಭೇದವನ್ನು ಪ್ರತ್ಯಕ್ಷ ಪ್ರಮೆಯೆನ್ನುತ್ತಾರೆ.

ಪ್ರ : **''ಮನಸ್ಸು ಇಂದ್ರಿಯವಲ್ಲ" ಎಂಬುವರ ಮತದಲ್ಲಿ ಪ್ರತ್ಯಕ್ಷ ಪ್ರಮೆಯ ಲಕ್ಷಣವೇನು ?**

ಉ : ಮನಸ್ಸು ಇಂದ್ರಿಯವಲ್ಲವೆಂಬುವರ ಮತದಲ್ಲಿ ಇಂದ್ರಿಯ ಜನ್ಯತ್ವವನ್ನು ಪ್ರತ್ಯಕ್ಷ ಲಕ್ಷಣವೆಂದು ಹೇಳದೆ, ವಿಷಯ ಅವಚ್ಛಿನ್ನ ಚೈತನ್ಯದೊಂದಿಗೆ ವೃತ್ತಿ ಚೇತನದ ಅಭೇದವೇ ಪ್ರತ್ಯಕ್ಷ ಜ್ಞಾನದ ಲಕ್ಷಣವೆಂದು ತಿಳಿಯಬೇಕು. ಈ ಜ್ಞಾನವನ್ನು ಪ್ರತ್ಯಕ್ಷ ಪ್ರಮೆಯೆನ್ನುತ್ತಾರೆ.

ಪ್ರ : **ಪ್ರತ್ಯಕ್ಷಪ್ರಮೆ ಯು ಎಷ್ಟು ವಿಧ ?**

ಉ : ಅಭಿಜ್ಞಾ ಪ್ರತ್ಯಕ್ಷ ಮತ್ತು ಪ್ರತ್ಯಭಿಜ್ಞಾ ಪ್ರತ್ಯಕ್ಷವೆಂದು ಎರಡು ವಿಧ.

ಪ್ರ : **ಅವುಗಳ ವಿವರವೇನು ?**

ಉ : ಕೇವಲ ಇಂದ್ರಿಯಗಳ ಸಂಬಂಧದಿಂದ ಹುಟ್ಟಿದ ಜ್ಞಾನವನ್ನು ಅಭಿಜ್ಞಾ ಪ್ರತ್ಯಕ್ಷವೆನ್ನುತ್ತಾರೆ.

ಪ್ರತ್ಯಕ್ಷದ ಸಾಮಗ್ರಿಗಳಿಂದ ಕೂಡಿ ಉಂಟಾದ ಸಂಸ್ಕಾರಜನ್ಯ ಜ್ಞಾನವನ್ನು ಪ್ರತ್ಯಭಿಜ್ಞಾ ಪ್ರತ್ಯಕ್ಷವೆನ್ನುತ್ತಾರೆ.

ಪ್ರ : **ಉದಾಹರಣೆಯೇನು ?**

ಉ : ಈಗ ನಿನ್ನಲ್ಲಿಗೆ ಕೃಷ್ಣನೆಂಬ ವ್ಯಕ್ತಿ ಬಂದಿರುತ್ತಾನೆ. ಅವನನ್ನು ನೀನು ಹಿಂದೆ ಪ್ರಯಾಗದಲ್ಲಿ ನೋಡಿರುವೆ; ಆದುದರಿಂದ ಆ ಪೂರ್ವ ಸಂಸ್ಕಾರಜನ್ಯ ಜ್ಞಾನವು ಈಗಿನ ಪ್ರತ್ಯಕ್ಷ ಸಾಮಗ್ರಿಯೊಂದಿಗೆ ಕೂಡಿರುವುದರಿಂದ ಆ ಕೃಷ್ಣನೇ ಇವನು ಎಂದು ಹೇಳುವೆ. ಈ ಜ್ಞಾನವನ್ನು ಪ್ರತ್ಯಭಿಜ್ಞಾ ಪ್ರತ್ಯಕ್ಷ ಜ್ಞಾನವೆನ್ನುತ್ತಾರೆ.

ಪ್ರ : **ಈ ಪ್ರಮೆಯೆಂಬುವುದು ಒಂದೊಂದೇ ಎಷ್ಟು ವಿಧವಾಗಿದೆ?**

ಉ : ಪ್ರತಿ ಪ್ರಮೆಯು ಎರಡು ವಿಧವಾಗಿದೆ : ೧. ಅಂತರ ಪ್ರತ್ಯಕ್ಷ ಪ್ರಮೆ, ೨. ಬಾಹ್ಯ ಪ್ರತ್ಯಕ್ಷ ಪ್ರಮೆ.

ಪ್ರ : **ಅಂತರ ಪ್ರತ್ಯಕ್ಷ ಪ್ರಮೆಯು ಎಷ್ಟು ವಿಧ ?**

ಉ : ಇದು ಆತ್ಮಗೋಚರವೆಂತಲೂ, ಅನಾತ್ಮ ಗೋಚರವೆಂತಲೂ ಎರಡು ವಿಧ.

ಪ್ರ : **ಆತ್ಮಗೋಚರವೆಂಬ ಅಂತರ ಪ್ರತ್ಯಕ್ಷ ಪ್ರಮೆಯು ಎಷ್ಟು ವಿಧ ?**

ಉ : ಅದು ಶುದ್ಧಾತ್ಮ ಗೋಚರವೆಂತಲೂ, ವಿಶಿಷ್ಟಾತ್ಮ ಗೋಚರ ವೆಂತಲೂ ಎರಡು ವಿಧ.

ಪ್ರ : **ಶುದ್ಧಾತ್ಮ ಗೋಚರವೆಂಬ ಪ್ರತ್ಯಕ್ಷ ಪ್ರಮೆಯು ಎಷ್ಟು ವಿಧ ?**

ಉ : ಶುದ್ಧಾತ್ಮ ಗೋಚರ ಪ್ರತ್ಯಕ್ಷ ಪ್ರಮೆಯು ಬ್ರಹ್ಮಾಗೋಚರ ವೆಂತಲೂ, ಬ್ರಹ್ಮಗೋಚರ ಪ್ರತ್ಯಕ್ಷ ಪ್ರಮೆಯೆಂತಲೂ ಎರಡು ವಿಧ.

ಪ್ರ : **ಬ್ರಹ್ಮಗೋಚರ ಅಂದರೆ ಶುದ್ಧಾತ್ಮ ಗೋಚರ ಎಂಬುವ ಪ್ರತ್ಯಕ್ಷ ಪ್ರಮೆಯ ವಿವರಣೆಯೇನು ?**

ಉ : 'ತ್ವಂ' ಪದಾರ್ಥ ಬೋಧಕ ವೇದಾಂತ ವಾಕ್ಯಕ್ಕೆ "ಶುದ್ಧ ಪ್ರಕಾಶೋಹವ್" ಎಂಬ ವೃತ್ತಿಯುಂಟಾಗುತ್ತದೆ. ಆ ವೃತ್ತಿಯ ದೇಶ ದಲ್ಲಿ ಅಂತಃಕರಣೋಪಹಿತ ಶುದ್ಧ ಚೇತನವಿರುತ್ತದೆ. ಆ ವೃತ್ತಿ ಅವಿಚ್ಛಿನ್ನ ಚೇತನವು ವಿಷಯಾವಚ್ಛಿನ್ನ ಚೈತನ್ಯಕ್ಕೂ ಅಭೇದವಾಗುವುದರಿಂದ ಆ ವೃತ್ತಿ ಜ್ಞಾನವು ಅಪರೋಕ್ಷವಾಗುತ್ತದೆ. ಆ ವೃತ್ತಿಗೆ ವಿಷಯವು ಚೈತನ್ಯವಾಗಿದೆ ಆ ಚೈತನ್ಯದಲ್ಲಿ ಬ್ರಹ್ಮರೂಪತ್ವವಿರುತ್ತದೆ. ಅದು ಬ್ರಹ್ಮಾಕಾರ ವೃತ್ತಿಗೆ ಫಲ. ಏಕೆಂದರೆ, ಅವಾಂತರ ವಾಕ್ಯದಿಂದ ಉತ್ಪನ್ನವಾದ ಜ್ಞಾನವು ಇದಲ್ಲ. ಮಹಾವಾಕ್ಯದಿಂದ ಉತ್ಪನ್ನವಾಗಿದ್ದರೆ ಅದು ಬ್ರಹ್ಮಾಕಾರವಾಗುತ್ತಿತ್ತು; ಆಗ ಅಪರೋಕ್ಷವೆನಿಸಿಕೊಳ್ಳುತ್ತಿತ್ತು. ಶಬ್ದಜನ್ಯ ಜ್ಞಾನದ ಸ್ವಭಾವವೇ ನೆಂದರೆ, ಸನ್ನಿಹಿತ ಪದಾರ್ಥವನ್ನು ಯಾವ ರೂಪದಿಂದ ಶಬ್ದವು ಬೋಧಿಸು ತ್ತದೆಯೋ ಆ ರೂಪವನ್ನೇ ಶಬ್ದಜನ್ಯ ಜ್ಞಾನವು ವಿಷಯೀಕರಿಸುತ್ತದೆ. ಶಬ್ದ ಬೋಧನವು ಉಂಟಾಗದಿದ್ದರೆ ಆ ರೂಪವನ್ನು ಅದು ವಿಷಯೀಕರಿಸಲಾರದು.

ಉದಾ : ದಶಮನ ಉದಾಹರಣೆಯಲ್ಲಿ ಎರಡು ವಾಕ್ಯಗಳಿರುತ್ತವೆ. (೧) ದಶಮೋಽಸ್ತಿ, (೨) ದಶಮೋಽಹಂ ಅಥವಾ ದಶಮಸ್ತ್ವಮಸಿ. ಈ ವಾಕ್ಯಗಳಲ್ಲಿ ದಶಮನು ಇದ್ದಾನೆಂಬ ಅರ್ಥವನ್ನು ಕೊಡುವ ವಾಕ್ಯವನ್ನು ಕೇಳುತ್ತಲೇ, ಕೇಳಿದವನಿಗೆ "ದಶಮೋಽಹಮ್" ಅಂದರೆ ನಾನು ದಶಮನು ಎಂಬ ದಶಮನ ಜ್ಞಾನವು ಉಂಟಾಗಲಾರದು.

ಪ್ರ : **ದಶಮ ಪುರುಷನು ತಾನೇ ಆಗಿದ್ದರೂ, ಅವನಿಗೆ ಆಗ ಆತ್ಮತ್ವವಿದ್ದರೂ ದಶಮನ ಅಪರೋಕ್ಷ ಜ್ಞಾನವು ಏಕೆ ಉಂಟಾಗಲಿಲ್ಲ ?**

ಉ : ಆತ್ಮತ್ವವು ಅಂದರೆ ದಶಮನು ತಾನೇ ಆಗಿರುವಿಕೆಯು ಬೋಧಿಸಿದ ವಾಕ್ಯದಲ್ಲಿ ಸ್ವರೂಪ ಬೋಧಕ ಪದವು ಇಲ್ಲದ್ದರಿಂದ ಅವನು ದಶಮನೇ ಆಗಿದ್ದನು. "ದಶಮೋಽಹಮ್'' ಎಂಬ ಜ್ಞಾನವುಂಟಾಗುವುದಿಲ್ಲ. ಈ ವಿಧವಾಗಿ ಸ್ವರೂಪಭೂತವಾದ ಆತ್ಮನಲ್ಲಿ ಬ್ರಹ್ಮತ್ವವು ಸದಾ ಇದ್ದರೂ ಬೋಧಿಸಿದ ವಾಕ್ಯದಲ್ಲಿ ಸ್ವರೂಪ ಬೋಧಕ ಪದವಿಲ್ಲದಿದ್ದರೆ "ಅಹಂಬ್ರಹ್ಮಾಸ್ಮಿ" ಎಂಬ ದೃಢವಾದ ಅಪರೋಕ್ಷ ಜ್ಞಾನವುಂಟಾಗಲಾರದು. ಆದುದರಿಂದ "ತ್ವಂ'' ಪದಕ್ಕೆ ಅರ್ಥವಾದ ಆತ್ಮನು ಆ ವೃತ್ತಿಗೆ ಗೋಚರನಾಗಲಾರನು. ಆತ್ಮನನ್ನು ವಿಷಯೀಕರಿಸುವ ಶುದ್ಧಾತ್ಮ ಗೋಚರವಾದ 'ಅಹಂಬ್ರಹ್ಮಾಸ್ಮಿ' ಎಂಬ ಮೋಕ್ಷದಾಯಕವಾದ ವೃತ್ತಿ ಉಂಟಾಗಬೇಕಿದ್ದರೆ ಬೋಧಾವಾಕ್ಯದಲ್ಲಿ ಸ್ವರೂಪ ಬೋಧಕ ಪದವಿರಬೇಕು.

ಪ್ರ : **ಇಲ್ಲಿಯವರೆವಿಗೂ ಹೇಳಿದ ಅಂತರ ಪ್ರತ್ಯಕ್ಷ ಪ್ರಮೆಯು ಎರಡು ವಿಧವೆಂದು ಗೊತ್ತಾಯಿತು. ಆ ಎರಡು ವಿಧ ಪ್ರಮೆಗಳಲ್ಲಿ ಬ್ರಹ್ಮಗೋಚರ ಪ್ರತ್ಯಕ್ಷಪ್ರಮೆಯು ವಿವರಿಸಲ್ಪಟ್ಟಿತು. ಉಳಿದ ಬ್ರಹ್ಮಾಗೋಚರ ಅಂತರ ಪ್ರತ್ಯಕ್ಷ ಪ್ರಮೆಯನ್ನು ವಿವರಿಸಿರಿ.**

ಉ : ಮಹಾವಾಕ್ಯಜನ್ಯವಾಗಿ "ಅಹಂಬ್ರಹ್ಮಾಸ್ಮಿ'' ಎಂದು ಹೇಳಲ್ಪಟ್ಟ ಪ್ರಕಾರ ಬ್ರಹ್ಮಕ್ಕೆ ಭಿನ್ನವಲ್ಲದ ಆತ್ಮನನ್ನು ವಿಷಯೀಕರಿಸುವ ಪ್ರಮೆಯನ್ನು ಶುದ್ಧಾತ್ಮಗೋಚರವಾದ ಅಂತರ ಪ್ರತ್ಯಕ್ಷ ಪ್ರಮೆಯೆನ್ನುತ್ತಾರೆ.

ಪ್ರ : **ವಾಚಸ್ಪತಿ ಮಿಶ್ರನು ''ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನವನ್ನು ಕುರಿತು ಏನು ಹೇಳುತ್ತಾನೆ ?**

ಉ : ಅವನು ಅದು ಮನೋಜನ್ಯವೆನ್ನುತ್ತಾನೆ.

ಪ್ರ : **ಉಳಿದವರು ಅದಕ್ಕೆ ಏನು ಅಭಿಪ್ರಾಯ ಪಡುತ್ತಾರೆ ?**

ಉ : ಉಳಿದ ಆಚಾರ್ಯರೆಲ್ಲರೂ ಅದನ್ನು ಮಹಾವಾಕ್ಯಜನ್ಯವೆಂದು ಹೇಳುತ್ತಾರೆ. ಅವರಲ್ಲಿಯೂ ಸಂಕ್ಷೇಪ ಶಾರೀರಕಕಾರರಾದ ಶ್ರೀ ಶಂಕರಾಚಾರ್ಯರು ಮಹಾವಾಕ್ಯದಿಂದ ಉಂಟಾದ ಬ್ರಹ್ಮಜ್ಞಾನವು ಬ್ರಹ್ಮದ ಪ್ರತ್ಯಕ್ಷ ಜ್ಞಾನವೇ ವಿನಾ ಪರೋಕ್ಷವಲ್ಲ ಎಂದು ಹೇಳುತ್ತಾರೆ. ಮತ್ತೆ ಕೆಲವು ಗ್ರಂಥ ಕಾರರ ಮತದಲ್ಲಿ ವಿಚಾರಸಹಿತವಾದ ಮಹಾವಾಕ್ಯದಿಂದ ಅಪರೋಕ್ಷ ಜ್ಞಾನ ಉಂಟಾಗುತ್ತದೆ. ವಿಚಾರವಿಲ್ಲದ ಕೇವಲ ವಾಕ್ಯದಿಂದ ಪರೋಕ್ಷ ಜ್ಞಾನವೇ ಉಂಟಾಗುತ್ತದೆಂದು ಹೇಳುತ್ತಾರೆ.

ಪ್ರ : **ಸಾರಾಂಶವೇನು ?**

ಉ : ಸರ್ವರ ಮತದಲ್ಲಿಯೂ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನವು ಶುದ್ಧಾತ್ಮ ಗೋಚರವೆಂತಲೂ, ಬ್ರಹ್ಮ ಗೋಚರವೆಂತಲೂ ಎರಡು ವಿಧದಲ್ಲಿ ಪ್ರತ್ಯಕ್ಷವೆಂದು ಅಂಗೀಕರಿಸಲ್ಪಟ್ಟಿದೆ. ಈ ಅಭಿಪ್ರಾಯದಲ್ಲಿ ಯಾರಿಗೂ ವಿವಾದವಿಲ್ಲ.

ಪ್ರ : **ಇಲ್ಲಿಯವರೆಗೆ ಆತ್ಮಗೋಚರ ಅಂತರ ಪ್ರತ್ಯಕ್ಷ ಪ್ರಮೆಯ ಭೇದಗಳನ್ನು ತಿಳಿದಂತಾಯಿತು. ಅನಾತ್ಮಗೋಚರ ಅಂತರ ಪ್ರತ್ಯಕ್ಷ ಪ್ರಮೆಯ ಭೇದಗಳು ಉಳಿದುಕೊಂಡವು. ಅವು ಯಾವುವು? ಮತ್ತು ಅನಾತ್ಮಗೋಚರ ಪ್ರತ್ಯಕ್ಷ ಪ್ರಮೆಯ ಸ್ವರೂಪವೇನು ?**

ಉ : "ಮಯಿ ಸುಖಂ, ಮಯಿ ದುಃಖಂ" ಅಂದರೆ ನನ್ನಲ್ಲಿ ಸುಖ ವಿದೆ, ನನ್ನಲ್ಲಿ ದುಃಖವಿದೆ ಎಂಬ ಸುಖದುಃಖಾದಿ ಗೋಚರ ಜ್ಞಾನವೂ ಸಹ ಒಳಗಿನ ಅನಾತ್ಮಗೋಚರ ಪ್ರತ್ಯಕ್ಷ ಪ್ರಮೆಯೆನಿಸುತ್ತದೆ. ವಿಶೇಷವೇನೆಂದರೆ, ''ಅಹಂ ಸುಖಿ, ಅಹಂ ದುಃಖಿ'' ಅಂದರೆ ನಾನು ಸುಖಿ, ನಾನು ದುಃಖಿ ಎಂಬುದೂ ಸಹ ಪ್ರಮೆಯೇ. ಇಲ್ಲಿ 'ಅಹಂ' ಪದಕ್ಕೆ ಅರ್ಥವಾದ ಆತ್ಮನು ವಿಶೇಷ್ಯನು; ಸುಖದುಃಖಾದಿಗಳು ವಿಶೇಷಣಗಳು. ಹಿಂದೆ ಹೇಳಿದ "ಮಯಿ ಸುಖಂ, ಮಯಿ ದುಃಖಂ" ಅಂದರೆ ನನ್ನಲ್ಲಿ ಸುಖವಿದೆ, ನನ್ನಲ್ಲಿ ದುಃಖವಿದೆ ಎಂಬ ಪ್ರಮೆಯಲ್ಲಿ ಸುಖದುಃಖಾದಿಗಳು ವಿಶೇಷ್ಯ, ಆತ್ಮನು ವಿಶೇಷಣ.

ಆದುದರಿಂದ ''ಮಯಿ ಸುಖಂ, ಮಯಿ ದುಃಖಂ" ಅಂದರೆ ನನ್ನಲ್ಲಿ

ಸುಖವಿದೆ, ನನ್ನಲ್ಲಿ ದುಃಖವಿದೆ ಎಂಬ ತಿಳಿವಳಿಕೆಯನ್ನು ಆತ್ಮಗೋಚರವಾದ ಪ್ರತ್ಯಕ್ಷ ಪ್ರಮೆಯೆಂದು ಹೇಳಲಿಲ್ಲ.

ಪ್ರ : **ಕಾರಣವೇನು ?**

ಉ : ಸುಖದುಃಖಾದಿಗಳು ವಿಶೇಷ್ಯವಾದ ಕಾರಣದಿಂದ ಅನಾತ್ಮ ಗೋಚರವಾದ ಒಳಗಿನ ಪ್ರತ್ಯಕ್ಷ ಪ್ರಮೆಯೆಂದು ಹೇಳಲ್ಪಟ್ಟಿತು. ಇಲ್ಲಿಯ ವರೆಗೆ ಒಳಗಿನ ಪ್ರತ್ಯಕ್ಷ ಪ್ರಮೆಯ ಭೇದಗಳನ್ನು ಸರಳವಾಗಿ ವಿಸ್ತಾರವಾಗಿ ಹೇಳಿದ್ದಾಯಿತು.

ಪ್ರ : **ಇಲ್ಲಿಯುವರೆಗೆ ತಿಳಿದುಕೊಂಡ ಪ್ರತ್ಯಕ್ಷ ಪ್ರಮೆಯ ವಿಚಾರಕ್ಕೆ ಫಲವೇನು ?**

ಉ : ವೃತ್ತಿರೂಪ ಜ್ಞಾನವನ್ನು ಬಲ್ಲವರ ಮುಖದಿಂದ ಶ್ರವಣ ಮಾಡಿದರೆ ಎರಡು ವಿಧವಾದ ಪ್ರಯೋಜನ ಉಂಟಾಗುತ್ತದೆ.

೧. ಜೀವನಿಗೆ ವೃತ್ತಿಯಿಂದಲೇ ಮೂರು ಅವಸ್ಥೆಗಳೊಡನೆ ಸಂಬಂಧ ಉಂಟಾಗುತ್ತದೆ.

೨. ಪುರುಷಾರ್ಥ ಅಂದರೆ ಮೋಕ್ಷಪ್ರಾಪ್ತಿಯೂ ಸಹ ವೃತ್ತಿಯಿಂದಲೇ ಉಂಟಾಗುತ್ತದೆ. ಅಂದರೆ ಸಂಸಾರಾಕಾರ ವೃತ್ತಿಯಿಂದ ಸಂಸಾರ ಪ್ರಾಪ್ತಿ; ಬ್ರಹ್ಮಾಕಾರ ವೃತ್ತಿಯಿಂದ ಬ್ರಹ್ಮಪ್ರಾಪ್ತಿ ಅಥವಾ ಮೋಕ್ಷಪ್ರಾಪ್ತಿ. ಆದುದರಿಂದಲೇ ಭಾಷ್ಯಕಾರರು ವೃತ್ತಿಯೇ ಸಂಸಾರಭ್ರಾಂತಿಗೆ ಹೇತುವೆಂತಲೂ ಬೋಧಿಸಿರುತ್ತಾರೆ. ಅರ್ಥಾತ್ ಯಾವ ಸಂಬಂಧವೂ ಇಲ್ಲದ ಅಸಂಗಾತ್ಮ ನಿಗೆ ಅವಸ್ಥೆಗಳ ಸಂಬಂಧವಾದ ಕೂಡಲೇ ಅವನು ಜೀವನೆಂತಲೂ, ಸಂಸಾರಿ ಯೆಂತಲೂ ಹೇಳಿಸಿಕೊಳ್ಳುತ್ತಾನೆ.

ಪ್ರ : **ವೃತ್ತಿಯ ಮೂರು ಅವಸ್ಥೆಗಳ ಸ್ವರೂಪವೇನು ?**

ಉ : ಜಾಗ್ರತ್, ಸ್ವಪ್ನ, ಸುಷುಪ್ತಿ – ಈ ಮೂರು ವೃತ್ತಿಯ ಅವಸ್ಥೆಗಳು.

ಪ್ರ : **ಜಾಗ್ರದಾವಸ್ಥೆಯೆಂದರೇನು ?**

ಉ : ಸ್ವಪ್ನಾವಸ್ಥೆಗೂ ಸುಷುಪ್ತಾವಸ್ಥೆಗೂ ಭಿನ್ನವಾಗಿದ್ದು, ಇಂದ್ರಿಯ ಜನ್ಯ ಜ್ಞಾನಕ್ಕೂ, ಇಂದ್ರಿಯಜನ್ಯ ಜ್ಞಾನ ಸಂಸ್ಕಾರಕ್ಕೂ ಆಧಾರವಾದ ಕಾಲವನ್ನು ಜಾಗ್ರದಾವಸ್ಥೆಯೆನ್ನುತ್ತಾರೆ.

ಪ್ರ : **ಇಂದ್ರಿಯಜನ್ಯಜ್ಞಾನ ಸಂಸ್ಕಾರವಿರುವುದು ಯಾವಾಗ ?**

ಉ : ಸುಖಾದಿ ಜ್ಞಾನ ಕಾಲದಲ್ಲಿಯೂ, ಉದಾಸೀನಾವಸ್ಥೆಯ ಕಾಲ ದಲ್ಲಿಯೂ ಇಂದ್ರಿಯಜನ್ಯ ಜ್ಞಾನವು ಇರುವುದು ಸಂಭವಿಸುವುದಿಲ್ಲ. ಆಗ ಇಂದ್ರಿಯಜನ್ಯಜ್ಞಾನ ಸಂಸ್ಕಾರವಿರುತ್ತದೆ.

ಪ್ರ : **ಜಾಗ್ರದಾವಸ್ಥೆಯನ್ನು ಸ್ವಪ್ನ ಸುಷುಪ್ತಿ ಅವಸ್ಥೆಗಳಿಗಿಂತಲೂ ಭಿನ್ನವೆಂದು ಹೇಳಲು ಕಾರಣವೇನು ?**

ಉ : ಸ್ವಪ್ನಾವಸ್ಥೆಯಲ್ಲಿಯೂ, ಸುಷುಪ್ತಿ ಅವಸ್ಥೆಯಲ್ಲಿಯೂ ಇಂದ್ರಿಯಜನ್ಯ ಜ್ಞಾನವಿರುವುದಿಲ್ಲ. ಆದರೆ ಅಲ್ಲಿ ಇಂದ್ರಿಯಜನ್ಯಜ್ಞಾನ ಸಂಸ್ಕಾರವಿರುವುದರಿಂದ ಜಾಗ್ರದಾವಸ್ಥೆಯನ್ನು ಸ್ವಪ್ನ ಸುಷುಪ್ತಿ ಅವಸ್ಥೆಗಳಿಗಿಂತ ಭಿನ್ನವೆಂದು ಹೇಳಿದ್ದಾಗಿದೆ.

ಈ ಪ್ರಕಾರವಾಗಿ ಜಾಗ್ರದಾವಸ್ಥೆಯೂ, ಆ ಅವಸ್ಥೆಯ ಸಮಸ್ತ ವ್ಯವಹಾರವೂ ಇಂದ್ರಿಯಜನ್ಯ ಜ್ಞಾನಕ್ಕೆ ಅಧೀನವಾಗಿದೆ. ಆ ಇಂದ್ರಿಯಜನ್ಯ ಜ್ಞಾನವು ಅಂತಃಕರಣದ ವೃತ್ತಿರೂಪವಾಗಿದೆ.

ಕೆಲವರು ಅಂತಃಕರಣದ ವೃತ್ತಿಯ ಪ್ರಯೋಜನವು "ಆವರಣ ನಿವೃತ್ತಿ"ಯೆಂದು ಹೇಳುತ್ತಾರೆ. ಮತ್ತೆ ಕೆಲವರು ಪ್ರಕಾಶಕ್ಕೆ ಹೇತುವಾದ ಪ್ರಮಾತನೊಂದಿಗೆ ವಿಷಯಗಳ ಸಂಬಂಧವೇ ವೃತ್ತಿಯ ಪ್ರಯೋಜನವೆಂದು ಹೇಳುತ್ತಾರೆ.

ಪ್ರ : **ಮೇಲೆ ಹೇಳಿದ ಪ್ರಯೋಜನಗಳು ಯಾವ ಅವಸ್ಥೆಯಲ್ಲಿ ತೋರಿಬರುತ್ತವೆ ?**

ಉ : ಮೇಲೆ ಹೇಳಿದ ಪ್ರಯೋಜನಗಳೂ, ಇಂದ್ರಿಯಜನ್ಯವಾದ ಅಂತಃಕರಣ ವೃತ್ತಿಯೂ ಜಾಗ್ರದಾವಸ್ಥೆಯಲ್ಲಿ ತೋರಿಬರುತ್ತವೆ

ಪ್ರ : **ಹಾಗಾದರೆ ಸ್ವಪ್ನಾವಸ್ಥೆ ಅಂದರೇನು ?**

ಉ : ಇಂದ್ರಿಯಜನ್ಯವಲ್ಲದೆ ವಿಷಯ ಗೋಚರವಾದ ಅಂತಃಕರಣದ ಅಪರೋಕ್ಷವೃತ್ತಿ ಉಂಟಾದ ಅವಸ್ಥೆಯನ್ನು ಸ್ವಪ್ನಾವಸ್ಥೆಯೆನ್ನುತ್ತಾರೆ. ಸ್ವಪ್ನಾವಸ್ಥೆಯಲ್ಲಿ ತೋರಿದ ಜ್ಞೇಯ, ಜ್ಞಾನ ಇವುಗಳು ಅಂತಃಕರಣದ ಪರಿಣಾಮಗಳೇ.

ಪ್ರ : **ಹಾಗಾದರೆ ಸುಷುಪ್ತಿ ಅವಸ್ಥೆ ಅಂದರೇನು ?**

ಉ : ಸುಖ ಗೋಚರವೂ, ಅವಿದ್ಯಾ ಗೋಚರವೂ ಆದ ಅಜ್ಞಾನದ ಸಾಕ್ಷಾತ್ ಪರಿಣಾಮ ರೂಪವಾದ ವೃತ್ತಿಯ ಅವಸ್ಥೆಯನ್ನು ಸುಷುಪ್ತ್ಯವಸ್ಥೆಯೆನ್ನುತ್ತಾರೆ. ಸುಷುಪ್ತಿಯಲ್ಲಿ ತೋರಿಬಂದ ಅವಿದ್ಯೆಯ ವೃತ್ತಿಗೆ ಎರಡು ಲಕ್ಷಣಗಳು : ೧. ಸುಖಗೋಚರ. ೨ ಅಜ್ಞಾನ ಗೋಚರ. ಇಲ್ಲಿ ಅಜ್ಞಾನ ಗೋಚರವೆಂದರೂ, ಅವಿದ್ಯಾಗೋಚರವೆಂದರೂ ಒಂದೇ.

ಪ್ರ : **ಜಾಗ್ರದಾವಸ್ಥೆಯಲ್ಲಿಯೂ ಸಹ "ಅಹಂ ನ ಜಾನಾಮಿ" ಅಂದರೆ ನಾನು ಏನನ್ನೂ ತಿಳಿಯುವುದಿಲ್ಲ ಎಂಬ ಅವಿದ್ಯಾಗೋಚರವಾದ ವೃತ್ತಿ ಇರುವುದಲ್ಲವೇ ?**

ಉ : ಜಾಗ್ರದಾವಸ್ಥೆಯಲ್ಲಿ ತೋರುವ "ಅಹಂ ನ ಜಾನಾಮಿ"ಯೆಂಬ ಅವಿದ್ಯಾಗೋಚರ ವೃತ್ತಿಯು ನೀನು ಹೇಳಿದಂತೆ ಅವಿದ್ಯಾ ವೃತ್ತಿಯಲ್ಲ; ಅಂತಃಕರಣದ ವೃತ್ತಿ. ಆದರಂತೆ ಜಾಗ್ರದಾವಸ್ಥೆಯಲ್ಲಿ ಪ್ರಾತಿಭಾಸಿಕವಾದ ರಜತಾಕಾರವು ಅವಿದ್ಯೆಯ ಪರಿಣಾಮ; ಅದು ಅವಿದ್ಯಾ ಗೋಚರ ವೃತ್ತಿಯಲ್ಲ; ಅಂತಃಕರಣದ ವೃತ್ತಿ. ಅದರಂತೆ ಜಾಗ್ರದಾವಸ್ಥೆಯಲ್ಲಿ ಪ್ರಾತಿಭಾಸಿಕವಾದ ರಜತಾಕಾರವು ಅವಿದ್ಯೆಯ ಪರಿಣಾಮ; ಅದು ಅವಿದ್ಯಾ ಗೋಚರ ವೃತ್ತಿಯಲ್ಲ. ಮತ್ತು ಜಾಗ್ರದಾವಸ್ಥೆಯಲ್ಲಿರುವ ಸುಖಾಕಾರ ವೃತ್ತಿಯೂ ಅಂತಃಕರಣದ ವೃತ್ತಿಯೇ; ಅದು ಅವಿದ್ಯೆಯ ಪರಿಣಾಮವಲ್ಲ.

ಪ್ರ : **ಸುಷುಪ್ತಿಯಲ್ಲಿ ತೋರಿದ ಅವಿದ್ಯೆಯನ್ನೂ, ಸ್ವರೂಪ ಪ್ರಕಾಶವನ್ನೂ ಬೆಳಗುವುದಾವುದು ?**

ಉ : ಸುಷುಪ್ತಿಯಲ್ಲಿರುವ ಅವಿದ್ಯಾವೃತ್ತಿಯನ್ನು ಆರೋಹಿಸಿದ ಸಾಕ್ಷಿಯು ಅವಿದ್ಯೆಯನ್ನು ಬೆಳಗುತ್ತದೆ. ಸುಷುಪ್ತಿಯಲ್ಲಿ ತೋರಿದ ಸ್ವರೂಪ ಸುಖವು ಸ್ವಯಂಪ್ರಕಾಶವಾದುದರಿಂದ ಅದು ತನ್ನ ಬೆಳಕಿನಲ್ಲಿ ತಾನು ಬೆಳಗುತ್ತದೆ.

ಪ್ರ : **ಸುಷುಪ್ತಿಯಲ್ಲಿ ಅಂತಃಕರಣದ ಗತಿಯೇನು ?**

ಉ : ಅದು ತನಗೆ ಕಾರಣವಾದ ಸುಷುಪ್ತಿಯಲ್ಲಿಯ ಅಜ್ಞಾನದಲ್ಲಿ ಒಂದಾಗಿರುತ್ತದೆ. ಆ ಅಜ್ಞಾನವು ಜಾಗ್ರದಾವಸ್ಥೆಯಲ್ಲಿ ಅಂತಃಕರಣ ರೂಪವನ್ನು ಧರಿಸಿರುತ್ತದೆ. ಜಾಗ್ರದಾವಸ್ಥೆಗೆ ಬಂದ ಕೂಡಲೆ ಸುಷುಪ್ತಿಯಲ್ಲಿ

ಅಜ್ಞಾನ ವೃತ್ತಿಯಿಂದ ಅನುಭವಿಸಿದ ಸುಖವನ್ನು ಸ್ಮರಣೆಗೆ ತಂದುಕೊಡು ತ್ತದೆ. ಉಪಾದಾನ ಕಾರಣಕ್ಕೂ, ಅದರ ಕಾರ್ಯಕ್ಕೂ ಭೇದವಿರುವುದಿಲ್ಲ. ಆದುದರಿಂದ ಅನುಭವವೂ ಸ್ಮರಣೆಯೂ ಭಿನ್ನಾಧಿಕರಣವುಳ್ಳವುಗಳಲ್ಲ.

ಇಲ್ಲಿಗೆ ಮೂರು ಅವಸ್ಥೆಗಳ ವರ್ಣನೆಯು ಮುಗಿಯಿತು.

ಪ್ರ : **ಮರಣ ಮತ್ತು ಮೂರ್ಛಾವಸ್ಥೆಗಳನ್ನು ಯಾವ ಅವಸ್ಥೆಯಲ್ಲಿ ಸೇರಿಸಬೇಕು** ?

ಉ : ಕೆಲವರು ಮರಣ ಮತ್ತು ಮೂರ್ಛಾವಸ್ಥೆಗಳನ್ನು ಸುಷುಪ್ತಾವಸ್ಥೆಯಲ್ಲಿ ಸೇರಿಸುತ್ತಾರೆ. ಮತ್ತೆ ಕೆಲವರು ಸುಷುಪ್ತಾವಸ್ಥೆಗೆ ಭಿನ್ನವೆಂದು ಹೇಳುತ್ತಾರೆ.

ಪ್ರ : **ಈ ಅವಸ್ಥೆಗಳಲ್ಲಿ ಭೇದವು ಏಕೆ ತೋರುತ್ತದೆ ?**

ಉ : ಭೇದವು ವೃತ್ತಿಗಳ ಭೇದದಿಂದ ತೋರುತ್ತದೆ

ಪ್ರ : **ಅವಸ್ಥೆಗಳ ಭೇದವು ವೃತ್ತಿಗೆ ಅಧೀನವೆಂದು ಹೇಳಿದ್ದಾಯಿತು. ಹಾಗೆಂದರೇನು** ?

ಉ : ಜಾಗ್ರದಾವಸ್ಥೆಯಲ್ಲಿಯೂ, ಸ್ವಪ್ನಾವಸ್ಥೆಯಲ್ಲಿಯೂ, ಸುಷುಪ್ತಿ ಅವಸ್ಥೆಯಲ್ಲಿಯೂ ಅಂತಃಕರಣದ ವೃತ್ತಿಯು ಇದ್ದೇ ಇರುತ್ತದೆ. ಆ ವೃತ್ತಿಯು ಜಾಗ್ರದಾವಸ್ಥೆಯಲ್ಲಿ ಇಂದ್ರಿಯಜನ್ಯ ಅಂತಃಕರಣ ವೃತ್ತಿಯೂ, ಸ್ವಪ್ನಾವಸ್ಥೆಯಲ್ಲಿ ಇಂದ್ರಿಯ ಅಜನ್ಯ ಅಂತಃಕರಣ ವೃತ್ತಿಯೂ, ಸುಷುಪ್ತಿ ಅವಸ್ಥೆಯಲ್ಲಿ ಅಜ್ಞಾನ ವೃತ್ತಿ ರೂಪವೂ ಆಗಿರುತ್ತದೆ.

ಪ್ರ : **ವೃತ್ತಿ ಜ್ಞಾನದ ಪ್ರಯೋಜನವೇನು** ?

ಉ : ನಿಜವಾಗಿ ನೋಡಿದರೆ ಈ ಮೂರವಸ್ಥೆಗಳು ಬಂಧರೂಪವಲ್ಲ. ಮೂರವಸ್ಥೆಗಳ ಅಭಿಮಾನವೇ ಬಂಧರೂಪ. ಈ ಅಭಿಮಾನವೇ ಭ್ರಮಾಜ್ಞಾನವೆನಿಸುತ್ತದೆ. ಈ ಭ್ರಮಾ ಜ್ಞಾನವೂ ಸಹ ಒಂದು ವೃತ್ತಿ ವಿಶೇಷವೇ. ಈ ವಿಧವಾಗಿ ನೋಡಿದರೆ ವೃತ್ತಿಕೃತ ಬಂಧವೇ ಸಂಸಾರವೆನಿಸುತ್ತದೆ. ಈ ಸಂಸಾರರೂಪ ಬಂಧವನ್ನು ಬಿಡಿಸಿಕೊಳ್ಳುವುದು ಹೇಗೆಂದರೆ, ವೇದಾಂತ ವಾಕ್ಯ ಶ್ರವಣ ದ್ವಾರ "ಅಹಂ ಬ್ರಹ್ಮಾಸ್ಮಿ" ಇತ್ಯಾಕಾರವಾದ ಅಂತಃಕರಣ ವೃತ್ತಿಯು ಉಂಟಾದಾಗ ಅದರಿಂದ ಕಾರ್ಯರೂಪ ಅಂದರೆ ಪ್ರಪಂಚ ಸಹಿತ

ವಾದ ಕಾರಣ ಅಂದರೆ ಅಜ್ಞಾನವು ನಿವೃತ್ತಿಯಾಗುತ್ತದೆ. ಇದನ್ನೇ ಶಾಸ್ತ್ರದಲ್ಲಿ ಮೋಕ್ಷವೆಂದು ವರ್ಣಿಸಿರುತ್ತಾರೆ. ಸಂಸಾರಿಕ ದೆಸೆಯಲ್ಲಿ ವೃತ್ತಿಯ ಪ್ರಯೋಜನವು ವ್ಯವಹಾರ ಸಿದ್ಧಿಯಾದರೂ ವೃತ್ತಿಯ ಪರಮ ಪ್ರಯೋಜನವು ಮೋಕ್ಷವೇ.

## ಜೀವ ಬ್ರಹ್ಮರ ಅಭೇದ ಸಾಧಕ, ಭೇದ ಬಾಧಕ ಯುಕ್ತಿಗಳು

ಈ ವಿಷಯವು ಮನನಾಭ್ಯಾಸಕ್ಕೆ ಸೇರಿದ್ದು. ಕೆಲವು ಅಧಿಕಾರಿಗಳಿಗೆ ಅಪರೋಕ್ಷ ಬ್ರಹ್ಮಜ್ಞಾನವಾಗುವುದಕ್ಕಾಗಿ ಮನನವನ್ನು ಮಾಡಲೇಬೇಕಾಗುತ್ತದೆ. ಶ್ರವಣ ಮಾಡಿದ ವಿಷಯವನ್ನು ಮನನ ಮಾಡದಿದ್ದರೆ ಆ ವಿಷಯವು ತನ್ನದಾಗುವುದಿಲ್ಲ ; ಮತ್ತೊಬ್ಬರ ಅನುಭವವಾಗುತ್ತದೆ. ಹಸುವು ಮೆಲುಕು ಆಡಿಸಿ ಹುಲ್ಲನ್ನು ಹಾಲನ್ನಾಗಿ ತಯಾರುಮಾಡಿಕೊಂಡಂತೆ, ಜಿಜ್ಞಾಸುವು ಶ್ರವಣ ಮಾಡಿದ ವಿಷಯವನ್ನು ಮನನ ಮಾಡಿ ಜ್ಞಾನವನ್ನಾಗಿ ತಯಾರು ಮಾಡಿಕೊಳ್ಳಬೇಕು. ಮನನಕ್ಕೆ ಅಭೇದ ಸಾಧಕ, ಭೇದಬಾಧಕ ಯುಕ್ತಿಗಳೆಂದು ಎರಡು ಯುಕ್ತಿಗಳು.

ಪ್ರ : **ಜೀವಬ್ರಹ್ಮರ ಅಭೇದ ಸಾಧಕ ಯುಕ್ತಿಗಳು ಯಾವುವು ?**

ಉ : ಪ್ರತ್ಯಕ್ಷ ಪ್ರಮಾಣದಿಂದಲೇ ಆಗಲಿ, ಶಬ್ದ ಪ್ರಮಾಣದಿಂದಲೇ ಆಗಲಿ, ಮನಸ್ಸಿಗೆ ಸಮಾಧಾನ ಉಂಟಾಗದಿದ್ದರೆ ಇತರೇ ಪ್ರಮಾಣದ ಯುಕ್ತಿಗಳನ್ನು ಉಪಯೋಗಿಸಿಕೊಳ್ಳಬೇಕಾಗುತ್ತದೆ. ಅಂದರೆ ಜೀವಬ್ರಹ್ಮರ ಏಕತ್ವವು ಅಂದರೆ ಅಭೇದವು ಪ್ರತ್ಯಕ್ಷ ಪ್ರಮಾಣದಿಂದಲೂ, ಶಬ್ದ ಪ್ರಮಾಣದಿಂದಲೂ ಉಂಟಾಗದಿದ್ದರೆ ಈ ಎರಡೂ ಪ್ರಮಾಣಗಳಿಗೆ ಭಿನ್ನವಾದ ೧. ಅನುಮಾನ ಪ್ರಮಾಣ, ೨. ಉಪಮಾನ ಪ್ರಮಾಣ, ೩. ಅರ್ಥಾಪತ್ತಿ ಪ್ರಮಾಣ – ಈ ಮೂರು ವಿಧವಾದ ಪ್ರಮಾಣಗಳಿಂದ ನಿರ್ಣಯ ಮಾಡಿಕೊಳ್ಳಬೇಕು. ಈ ವಿಷಯುವನ್ನು ವಿಚಾರ ಸಾಗರದ ಎರಡನೇ ತರಂಗದಲ್ಲಿ ನೋಡಿಕೊಳ್ಳಬಹುದು.

ಪ್ರ : **ಅನುಮಾನ ಪ್ರಮಾಣರೂಪವಾದ ಯುಕ್ತಿ ಯಾವುದು ?**

ಉ : "ಜೀವೋ ಬ್ರಹ್ಮಾಭಿನ್ನ ಸಚ್ಚಿದಾನಂದ ಲಕ್ಷಣತ್ವಾತ್ ಈಶ್ವರವತ್." ಅನುಮಾನ ಪ್ರಮಾಣಕ್ಕೆ ಮೂರು ಅವಯುವಗಳು : ೧.

ಪ್ರತಿಜ್ಞೆ, ೨. ಹೇತು, ೩. ದೃಷ್ಟಾಂತ. ಇದರಲ್ಲಿ "ಜೀವೋಬ್ರಹ್ಮಾಭಿನ್ನ"– ಇದು ಪ್ರತಿಜ್ಞೆ. ಏಕೆ ? "ಸಚ್ಚಿದಾನಂದ ಲಕ್ಷಣತ್ವಾತ್"– ಇದು ಹೇತು. ಹೇಗೆ ? "ಈಶ್ವರವತ್" ಈಶ್ವರ ಚೇತನದಂತೆ – ಇದು ದೃಷ್ಟಾಂತ.

ಯಾವುದು ಸಚ್ಚಿದಾನಂದ ಲಕ್ಷಣಾತ್ಮಕವಾಗಿದೆಯೋ ಅದು ಬ್ರಹ್ಮಕ್ಕೆ ಅಭಿನ್ನವೇ. ಹೇಗೆಂದರೆ, ಈಶ್ವರನು ಸಚ್ಚಿದಾನಂದ ಲಕ್ಷಣಾತ್ಮಕನಾದುದ ರಿಂದ ಬ್ರಹ್ಮಕ್ಕೆ ಅಭಿನ್ನನು. ಅದರಂತೆ ಜೀವನು ಸಚ್ಚಿದಾನಂದ ಲಕ್ಷಣಾ ತ್ಮಕನಾದುದರಿಂದ ಬ್ರಹ್ಮಕ್ಕೆ ಅಭಿನ್ನನೇ.

ಪ್ರ : **ಈಶ್ವರನು ಸಚ್ಚಿದಾನಂದ ಲಕ್ಷಣಾತ್ಮಕನಾಗಿರುವುದು ಹೇಗೆ ?**

ಉ : ಸತ್ ಎಂದರೆ ಇರುವಿಕೆ ; ಚಿತ್ ಎಂದರೆ ಅರಿಯುವಿಕೆ ; ಆನಂದ ವೆಂದರೆ ನಿರ್ವಿಕಾರತ್ವ. ಆದುದರಿಂದ ಈಶ್ವರನು ಜಗತ್ತು ಹುಟ್ಟುವುದಕ್ಕಿಂತ ಮೊದಲೂ, ಜಗತ್ತು ನಾಶವಾದ ಮೇಲೂ ಇರುವುದರಿಂದ ಅವನು ಸತ್. ತನ್ನಿಂದಾದ ಜಗತ್ತನ್ನು ತಿಳಿಯುವುದರಿಂದ ಚಿತ್. ಜಗತ್ತನ್ನು ಉಂಟು ಮಾಡಿಯೂ ನಿರ್ವಿಕಾರನಾಗಿರುವುದರಿಂದ ಆನಂದರೂಪನು. ಇದರಂತೆ ಜೀವನು ಅವಸ್ಥಾತ್ರಯಕ್ಕೆ ಮೊದಲು ಇರುವುದರಿಂದಲೂ, ಅವಸ್ಥಾತ್ರಯ ಗಳಲ್ಲಿ ಇರುವುದರಿಂದಲೂ, ಮೂರು ಅವಸ್ಥೆಗಳೂ ಹೋಗಿ ತುರ್ಯಾವಸ್ಥೆ ಯಲ್ಲಿಯೂ ಇರುವುದರಿಂದಲೂ ಸತ್. ಮೂರೂ ಅವಸ್ಥೆಗಳ ಬರುವಿಕೆ ಹೋಗುವಿಕೆಯನ್ನು ನೋಡುವುದರಿಂದ ಚಿತ್. ಅವಸ್ಥೆಗಳ ವಿಕಾರಕ್ಕೆ ಸಾಕ್ಷಿ ಯಾಗಿದ್ದರಿಂದ ಆನಂದರೂಪನು. ಈ ರೀತಿ ಜೀವನು ಬ್ರಹ್ಮದಂತೆ ಸಚ್ಚಿದಾ ನಂದ ಲಕ್ಷಣಾತ್ಮಕನಾದುದರಿಂದ ಬ್ರಹ್ಮಸ್ವರೂಪನು.

ಸಚ್ಚಿದಾನಂದ ಸ್ವರೂಪವಲ್ಲದ ವಸ್ತುವು ಬ್ರಹ್ಮಕ್ಕೆ ಅಭಿನ್ನವಲ್ಲದ ಘಟ. ಘಟವು ಸಚ್ಚಿದಾನಂದ ಲಕ್ಷಣಾತ್ಮಕವಲ್ಲ; ಆದುದರಿಂದ ಘಟವು ಬ್ರಹ್ಮಕ್ಕೆ ಅಭಿನ್ನವಲ್ಲ. ಜೀವನು ಘಟದಂತವನಲ್ಲ ; ಆದುದರಿಂದ ಬ್ರಹ್ಮಕ್ಕೆ ಭಿನ್ನವಲ್ಲ, ಅಭಿನ್ನನು. ಈ ಅನುಮಾನ ಪ್ರಮಾಣದಲ್ಲಿ ಜೀವನು ಪಕ್ಷ, ಜೀವಬ್ರಹ್ಮರ ಅಭೇದವು ಸಾಧ್ಯ. ಪಕ್ಷ ಸಾಧ್ಯಗಳೆರಡೂ ಯಾವ ವಾಕ್ಯದಲ್ಲಿ ಸೇರಿರುವವೋ ಅದು ಪ್ರತಿಜ್ಞಾವಾಕ್ಯವೆನಿಸುತ್ತದೆ. ಸಚ್ಚಿದಾನಂದ ರೂಪ

ತ್ವವು ಹೇತು ; ಈಶ್ವರ ಚೇತನವು ಅನ್ವಯ ; ಘಟವು ವ್ಯತಿರೇಕ. ಇವು ದೃಷ್ಟಾಂತಗಳು. ಇದು ಅನುಮಾನ ಪ್ರಮಾಣ ಸ್ವರೂಪ.

ಪ್ರ : **ಉಪಮಾನ ಪ್ರಮಾಣದ ಯುಕ್ತಿ ಯಾವುದು ?**

ಉ : (೧) ಘಟೋಪಾಧಿಯನ್ನೂ ಮಠೋಪಾಧಿಯನ್ನೂ ದೂರ ಮಾಡಿದರೆ ಆಕಾಶದಲ್ಲಿ ಭೇದವಿಲ್ಲ. ಅದರಂತೆ ಮಾಯೆ, ಅವಿದ್ಯಾ ಉಪಾಧಿಗಳನ್ನು ದೂರಮಾಡಿದರೆ ಜೀವನಿಗೂ ಬ್ರಹ್ಮಕ್ಕೂ ಅಭೇದವು ಸಿದ್ಧಿಸುತ್ತದೆ. ಜೀವ-ಬ್ರಹ್ಮರ ಭೇದವು ಉಪಾಧಿಗತವಾದದ್ದೇ ವಿನಾ ನಿಜವಾದುದಲ್ಲ. ಉಪಾಧಿ ದೂರವಾಗುತ್ತಲೇ ಅದೂ ದೂರವಾಗುತ್ತದೆ. ಈ ಯುಕ್ತಿಯು ವಿಚಾರ ಸಾಗರದಲ್ಲಿ ನಿರೂಪಿಸಲ್ಪಟ್ಟಿದೆ.

(೨) ಘಟಾಕಾಶ, ಜಲಾಕಾಶ, ಮೇಘಾಕಾಶ, ಮಹಾಕಾಶವೆಂದು ಆಕಾಶವು ನಾಲ್ಕು ವಿಧ. ಇವುಗಳಲ್ಲಿ ಜಲಾಕಾಶ ಮೇಘಾಕಾಶಗಳಿಗೆ ಅಭೇದ ಉಂಟಾಗುವುದಿಲ್ಲ. ಘಟಾಕಾಶ ಮಹಾಕಾಶದಲ್ಲಿ ತೋರುವ ಭೇದವು ನಿಜವಾದುದಲ್ಲ ; ನಾಮಮಾತ್ರವೇ. ಇದರಂತೆ ಕೂಟಸ್ಥ, ಜೀವ, ಈಶ್ವರ, ಬ್ರಹ್ಮ ಇವು ನಾಲ್ಕು ಚೇತನ ವಸ್ತುಗಳು. ಇವುಗಳಲ್ಲಿ ಜೀವನಿಗೂ ಈಶ್ವರನಿಗೂ ಅಭೇದ ಉಂಟಾಗುವುದಿಲ್ಲ. ಜೀವಸಾಕ್ಷಿಯಾದ ಕೂಟಸ್ಥನಿಗೂ ಈಶ್ವರ ಸಾಕ್ಷಿಯಾದ ಬ್ರಹ್ಮಕ್ಕೂ ಅಭೇದವು ಸಿದ್ಧಿಸುತ್ತದೆ. ಅವುಗಳಿಗೆ ಭೇದವು ಹೆಸರಿಗೆ ಮಾತ್ರ ವಾಸ್ತವವಲ್ಲ

ಪ್ರ : **ಅರ್ಥಾಪತ್ತಿ ಪ್ರಮಾಣರೂಪ ಯುಕ್ತಿ ಅಂದರೇನು ?**

ಉ : ಶಾಸ್ತ್ರದಲ್ಲಿ "ನೇಹನಾನಾಸ್ತಿ ಕಿಂಚನ"ವೆಂಬ ವಾಕ್ಯವು ಕಂಡು ಬರುತ್ತದೆ. ಈ ವಾಕ್ಯವು ನಾನತ್ವವನ್ನು ನಿಷೇಧಿಸುತ್ತದೆ. ಈ ನಿಷೇಧವು ಅಭೇದವು ವಾಸ್ತವವಾಗಿದ್ದ ಪಕ್ಷದಲ್ಲಿ ಸಾಧ್ಯ. ಅಂದರೆ ಭೇದವು ಕಲ್ಪಿತವಾಗಿರಬೇಕು. ಅಭೇದವು ವಾಸ್ತವವಾಗಿರಬೇಕು. ಅಭೇದವು ವಾಸ್ತವವಾಗಿರದೇ ಹೋದರೆ ಆ ಭೇದ ನಿಷೇಧ ವಾಕ್ಯಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ಅರ್ಥವು ಇಲ್ಲದಂತಾಗುವುದು ಅರ್ಥಾಪತ್ತಿ. ನಾನತ್ವದ ಅನುಪಪತ್ತಿಯನ್ನು ಸೂಚಿಸುತ್ತಾ ಭೇದವನ್ನು ನಿಷೇಧ ಮಾಡಿದ ಅರ್ಥಾಪತ್ತಿ ಪ್ರಮಾಣದಿಂದ ಜೀವಬ್ರಹ್ಮರ ಅಭೇದ ಜ್ಞಾನವುಂಟಾಗುತ್ತದೆ. ಇದೇ ಅರ್ಥಾಪತ್ತಿ ಪ್ರಮಾಣ.

ಇಲ್ಲಿಯವರೆಗೆ ಅಭೇದ ಸಾಧಕ ಯುಕ್ತಿಗಳನ್ನು ನಿರೂಪಿಸಿದ್ದಾಯಿತು. ಇನ್ನು ಭೇದ ಬಾಧಕ ಯುಕ್ತಿಗಳು.

ಪ್ರ : **ಭೇದ ಬಾಧಕ ಯುಕ್ತಿಗಳು ಎಷ್ಟು ವಿಧ ?**

ಉ : ನಾಲ್ಕು ವಿಧ : ೧. ಅನುಮಾನ ಪ್ರಮಾಣ, ೨. ಉಪಮಾನ ಪ್ರಮಾಣ, ೩. ಅರ್ಥಾಪತ್ತಿ ಪ್ರಮಾಣ, ಮತ್ತು ೪. ಅನುಪಲಬ್ಧಿ ಪ್ರಮಾಣ. ಇವು ಭೇದವನ್ನು ಬಾಧಿಸುವ ಪ್ರಮಾಣಗಳು.

ಪ್ರ : **ಭೇದಬಾಧಕವಾದ ಅನುಮಾನ ಪ್ರಮಾಣ ಯುಕ್ತಿಯೆಂದರೇನು ?**

ಉ : ಇದಕ್ಕೂ ಮೂರು ಅವಯವಗಳು : ೧. ಪ್ರತಿಜ್ಞಾ, ೨. ಹೇತು, ೩. ದೃಷ್ಟಾಂತ.

ಪ್ರ : **ಪ್ರತಿಜ್ಞಾ ಅಂದರೇನು ?**

ಉ : ಜೀವ-ಬ್ರಹ್ಮರ ಭೇದವು ಮಿಥ್ಯೆ. ಇದು ಪ್ರತಿಜ್ಞೆ.

ಪ್ರ : **ಏಕೆ ಮಿಥ್ಯೆ ?**

ಉ : ಉಪಾಧಿಕೃತವಾದುದರಿಂದ ಹೇತು.

ಪ್ರ : **ಹೇಗೆ ?**

ಉ : ಘಟಾಕಾಶ, ಮಹಾಕಾಶಗಳ ಭೇದದಂತೆ ಇದು ದೃಷ್ಟಾಂತ.

ಯಾವುದು ಮಿಥ್ಯೆಯಲ್ಲವೋ ಅದು ಉಪಾಧಿಕೃತವಾಗಿರಲಾರದು. ಹೇಗೆಂದರೆ, ಘಟಪಟಗಳ ವ್ಯವಹಾರ ದೆಸೆಯು ಮಿಥ್ಯೆಯಲ್ಲ ; ಅದು ಸತ್ಯ. ಆ ಭೇದವು ಉಪಾಧಿಕೃತವಲ್ಲ. ಆದುದರಿಂದ ಮಿಥ್ಯೆಯಾಗದೆ ನಿಜವೇ ಆಗಿರುತ್ತದೆ. ಆದರೆ ಜೀವ-ಬ್ರಹ್ಮರ ಭೇದವು ಇಂತಹುದಲ್ಲ. ಆದುದರಿಂದ ಅದನ್ನು ಮಿಥ್ಯೆಯಲ್ಲವೆಂದು ಹೇಳಲು ಸಾಧ್ಯವಿಲ್ಲ. ಅದು ಮಿಥ್ಯೆಯೇ ಆಗಿರುತ್ತದೆ ಈ ವಾಕ್ಯಕ್ಕೆ "ನಿಗಮನ ವಾಕ್ಯ''ವೆನ್ನುತ್ತಾರೆ.

ಪ್ರ : **ಇನ್ನು ಉಪಮಾನ ಪ್ರಮಾಣ ರೂಪ ಯುಕ್ತಿ ಯಾವುದು ?**

ಉ : ಉಪಮಾನ ಪ್ರಮಾಣ ಯುಕ್ತಿಗಳು ಐದು.

೧. ಬಿಂಬ ಪ್ರತಿಬಿಂಬ ಭೇದವು ಮಿಥ್ಯೆಯಾದಂತೆ ಜೀವಬ್ರಹ್ಮರ ಭೇದವು ಮಿಥ್ಯವಾದುದು.

೨. ಸ್ವಪ್ನದಲ್ಲಿ ಸ್ವಪ್ನ ಜೀವರ, ಸ್ವಪ್ನ ಪದಾರ್ಥಗಳ ಭೇದವು ಮಿಥ್ಯೆಯಾದಂತೆ ಜೀವ ಜಡರುಗಳ ಭೇದವು ಮಿಥ್ಯವಾದುದು.

೩. ಅನೇಕ ಘಟಾಕಾಶಗಳ ಪರಸ್ಪರ ಭೇದವು ಮಿಥ್ಯೆಯಾದಂತೆ ಜೀವರುಗಳ ಪರಸ್ಪರ ಭೇದವು ಮಿಥ್ಯೆಯಾದುದು.

೪. ರಜ್ಜುವಿಗೂ, ರಜ್ಜುವಿನಲ್ಲಿ ಕಲ್ಪಿಸಲ್ಪಟ್ಟ ಸರ್ಪಕ್ಕೂ ಇರುವ ಭೇದವು ಮಿಥ್ಯೆಯಾದಂತೆ ಮತ್ತು ಸಾಕ್ಷಿ ಚೇತನಕ್ಕೂ, ಸ್ವಪ್ನ ಪ್ರಪಂಚಕ್ಕೂ ಇರುವ ಭೇದವು ಮಿಥ್ಯೆಯಾದಂತೆ, ಜಡ ಜಗತ್ತಿಗೆ ಜಗತ್ಕರ್ತನಾದ ಈಶ್ವರನಲ್ಲಿರುವ ಭೇದವು ಮಿಥ್ಯೆಯಾದುದು.

೫. ರಜ್ಜುವಿನಲ್ಲಿ ಕಲ್ಪಿಸಲ್ಪಟ್ಟ ಸರ್ಪ, ದಂಡ, ಮಾಲಾ, ಜಲ, ಧಾರಾದಿಗಳ ಭೇದವು ಮಿಥ್ಯೆಯಾದಂತೆ ಮತ್ತು ಸ್ವಪ್ನ ಪದಾರ್ಥಗಳ ಪರಸ್ಪರ ಭೇದವು ಮಿಥ್ಯೆಯಾದಂತೆ, ಜಡ ಪದಾರ್ಥಗಳ ಪರಸ್ಪರ ಭೇದವು ಮಿಥ್ಯೆಯಾದುದು.

ಪ್ರ : **ಅರ್ಥಾಪತ್ತಿ ಪ್ರಮಾಣ ರೂಪ ಯುಕ್ತಿ ಯಾವುದು ?**

ಉ : ನಾಲ್ಕು ವೇದಗಳ ನಾಲ್ಕು ಮಹಾ ವಾಕ್ಯಗಳಲ್ಲಿಯೂ ಅಭೇದವು ಪ್ರತಿಪಾದಿಸಲ್ಪಟ್ಟಿದೆ. ಎದುರಿಗೆ ಪ್ರತೀತವಾಗುವ ಭೇದದ ಮಿಥ್ಯತ್ವವು ನಿಶ್ಚಯವಾದಾಗಲೇ ಅಭೇದವು ಸಿದ್ಧಿಸುತ್ತದೆ. ಈ ವಿಧವಾಗಿ ಅನುಮಾನದಿಂದ ಜೀವ–ಬ್ರಹ್ಮರ ಭೇದವನ್ನು ಮಿಥ್ಯೆಯೆಂದು ಅರ್ಥಾಪತ್ತಿ ಪ್ರಮಾಣದಿಂದ ನಿಶ್ಚಯಿಸಬಹುದು.

ಪ್ರ : **ಅನುಪಲಬ್ಧಿ ಪ್ರಮಾಣರೂಪ ಯುಕ್ತಿ ಯಾವುದು ?**

ಉ : ಜಾಗ್ರದಾವಸ್ಥೆಯಲ್ಲಿಯ ವೃತ್ತಿಯೆಂಬ ಉಪಾಧಿಯನ್ನು ಆಶ್ರಯಿಸಿ, ಸ್ವಪ್ನಾವಸ್ಥೆಯಲ್ಲಿಯ ಅಂತಃಕರಣವೆಂಬ ಉಪಾಧಿಯನ್ನಾಶ್ರಯಿಸಿ, ಜೀವನಿಗೂ ಬ್ರಹ್ಮಕ್ಕೂ ಭೇದವು ಗೋಚರವಾಗುತ್ತದೆ. ಸುಷುಪ್ತ್ಯವಸ್ಥೆಯಲ್ಲಿ ಯಾವ ಉಪಾಧಿಯೂ ಇಲ್ಲದ್ದರಿಂದ ಭೇದವು ಭಾಸಿಸುವುದಿಲ್ಲ. ಇದರಿಂದ ಜೀವ–ಬ್ರಹ್ಮರ ಭೇದವು ಪಾರಮಾರ್ಥಿಕವಾಗಿ ಇಲ್ಲವೇ ಇಲ್ಲವೆಂದು ನಿಶ್ಚಯ ಮಾಡಿಕೊಳ್ಳಬೇಕು.

ಪ್ರ : **ಇಲ್ಲಿಯವರೆಗೆ ಅನುಮಾನಾದಿ ನಾಲ್ಕು ಪ್ರಮಾಣಗಳನ್ನು ಕುರಿತು ಹೇಳಿದ್ದಾಯಿತು. ಈ ಅನುಮಾನಾದಿ ನಾಲ್ಕು ಪ್ರಮಾಣ**

**ಗಳಿಂದ ಅನುಮಿತಿ ಪ್ರಮಾ ಏರ್ಪಡುತ್ತದೆ. ಈ ಅನುಮಿತಿ ಪ್ರಮಾ ಎನ್ನುವುದು ಎಷ್ಟು ವಿಧ? ಅವುಗಳ ಸ್ವರೂಪವೇನು?**

ಉ : ಅನುಮಿತಿ ಪ್ರಮೆಯು ಸ್ವಾರ್ಥಾನುಮಿತಿ ಪ್ರಮೆ, ಪರಾರ್ಥಾನು ಮಿತಿ ಪ್ರಮೆ ಎಂದು ಎರಡು ವಿಧ.

ಪ್ರ : **ಸ್ವಾರ್ಥಾನುಮಿತಿ ಪ್ರಮಾ ಅಂದರೇನು?**

ಉ : ಒಬ್ಬ ಪುರುಷನಿಗೆ ಮತ್ತೊಬ್ಬನ ಬೋಧೆಯಿಲ್ಲದೆ ವ್ಯಾಪ್ತಿ, ಜ್ಞಾನ, ಲಿಂಗ ಮೊದಲಾದುವುಗಳ ದ್ವಾರ ಉಂಟಾಗುವ ಅನುಮಿತಿಯು ಸ್ವಾರ್ಥಾನುಮಿತಿ ಪ್ರಮಾ ಎನಿಸುತ್ತದೆ.

ಪ್ರ : **ಪರಾರ್ಥಾನುಮಿತಿ ಪ್ರಮೆ ಎಂದರೇನು?**

ಉ : ಒಬ್ಬ ಪುರುಷನು ವ್ಯಾಪ್ತಿ, ಲಿಂಗ, ಜ್ಞಾನಾದಿಗಳ ಮುಖಾಂತರ ಪರ್ವತದಲ್ಲಿರುವ ಅಗ್ನಿಯನ್ನು ತಾನು ನಿಶ್ಚಯಿಸಿ, ನಂತರ ಆ ನಿಶ್ಚಯವನ್ನು ಮತ್ತೊಬ್ಬನಿಗೆ ಹೇಳಿದರೆ ಅದು ಪರಾರ್ಥಾನುಮಿತಿ ಪ್ರಮೆಯೆನಿಸುತ್ತದೆ.

ಪ್ರ : **ವ್ಯಾಪ್ತಿಯೆಂಬ ಪದಕ್ಕೆ ಅರ್ಥವೇನು? ದೃಷ್ಟಾಂತ ದ್ವಾರ ತಿಳಿಸಿ.**

ಉ : ಎಲ್ಲೆಲ್ಲಿ ಹೊಗೆ ಇರುವುದೋ ಅಲ್ಲಲ್ಲಿ ಅಗ್ನಿ ಇರಲೇಬೇಕು. ಹೊಗೆ, ಅಗ್ನಿ ಎರಡೂ ಸೇರಿಯೇ ಇರುತ್ತದೆಂಬ ಜ್ಞಾನದ ಪ್ರತೀತಿಯು ತಮ್ಮ ಅಡಿಗೆ ಮನೆಯಲ್ಲಿ ಪ್ರತೀತಿಯಾಗುತ್ತದೆ. ಇದರ ಮೇಲಿಂದ "ವ್ಯಾಪ್ತಿ" ಪದಕ್ಕೆ ಅರ್ಥವಾಗಿರಬಹುದು. ಅಗ್ನಿಗೆ ಹೊಗೆಯಲ್ಲಿ ವ್ಯಾಪ್ತಿ; ಹೊಗೆಯು ಅಗ್ನಿಯಲ್ಲಿ ವ್ಯಾಪಕ.

ಉದಾ : ಘೃತವು ಹಾಲಿನಲ್ಲಿ ವ್ಯಾಪ್ತಿ. ಹಾಲು ವ್ಯಾಪಕ. ಈ ರೀತಿ ಯಾಗಿ ಅನುಮಿತಿ ಪ್ರಮೆಯಿಂದ ತಿಳಿದುಕೊಳ್ಳಬೇಕು.

ಪ್ರ : **ಜೀವನು ಸಚ್ಚಿದಾನಂದ ಲಕ್ಷಣಾತ್ಮಕನಾದುದರಿಂದ ಬ್ರಹ್ಮ ದೊಂದಿಗೆ ಸದಾ ಅಭೇದವೆಂದು ತಿಳಿದಂತಾಯಿತು. ಜೀವನು ಸಚ್ಚಿದಾ ನಂದ ಲಕ್ಷಣಾತ್ಮಕನೆಂಬ ವಿಷಯವು ಯಾವ ಪ್ರಮಾಣದಿಂದ ಸಿದ್ಧ ವಾಗುತ್ತದೆ?**

ಉ : ಶೃತಿ, ಸ್ಮೃತಿ, ಯುಕ್ತಿ, ಅನುಭವಗಳೆಂಬ ನಾಲ್ಕು ಪ್ರಮಾಣ ಗಳಿಂದ ಜೀವನು ಸಚ್ಚಿದಾನಂದ ಲಕ್ಷಣಾತ್ಮಕನೆಂದು ಸಿದ್ಧವಾಗುತ್ತದೆ.

ಪ್ರ : **ಜೀವನು ಸಚ್ಚಿದಾನಂದ ಲಕ್ಷಣಾತ್ಮಕನೆಂಬ ವಿಷಯದಲ್ಲಿ ಶೃತಿ ಪ್ರಮಾಣಗಳಾವುವು ?**

ಉ : ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮಹರ್ಷಿಗಳು ಮೈತ್ರೇಯಿಯನ್ನು ಕುರಿತು "ಅವಿನಾಶಿ ವಾ ಅರೇSಯ ಮಾತ್ಮಾ, ಸನ್ಮಾತ್ರೋ ನಿತ್ಯಃ ಶುದ್ಧಃ ಬುದ್ಧಃ" ಅಂದರೆ "ಮೈತ್ರೇಯಿ, ಈ ಆತ್ಮನು ನಾಶರಹಿತನು. ಸತ್ತಾ ಮಾತ್ರನಾದ ನಿತ್ಯನೂ, ಶುದ್ಧನೂ, ಬುದ್ಧನೂ ಅಂದರೆ ಜ್ಞಾನ ಸ್ವರೂಪನೂ ಆಗಿದ್ದಾನೆ." ಇದು ಶೃತಿ ಪ್ರಮಾಣ.

ಸ್ಮೃತಿ ಪ್ರಮಾಣ : ಭಗವದ್ಗೀತೆಯ ಎರಡನೆ ಅಧ್ಯಾಯದಲ್ಲಿ "ನಿತ್ಯಃ ಸರ್ವಗತಃ ಸ್ಥಾಣು ರಚಲೋಽಯಮ್ ಸನಾತನಃ" ಎಂದು ಹೇಳಿದೆ. ಇದರ ಅರ್ಥ : ಈ ಆತ್ಮನು ನಿತ್ಯನು, ಸರ್ವತ್ರ ವ್ಯಾಪಕನು, ಕೂಟಸ್ಥನು, ಅಚಲನು, ಸನಾತನನು. ಈ ರೀತಿ ಗೀತಾ ಸ್ಮೃತಿಯಲ್ಲಿಯೂ ಆತ್ಮನು ಸಚ್ಚಿದಾನಂದ ಲಕ್ಷಣಾತ್ಮಕನೆಂದು ಹೇಳಿದೆ.

ಪ್ರ : **ಜೀವನು ಸಚ್ಚಿದಾನಂದ ಲಕ್ಷಣಾತ್ಮಕನೆಂದು ಪ್ರತಿಪಾದಿಸುವ ಯುಕ್ತಿ ಯಾವುದು?**

ಉ : ಜೀವನು ಸತ್ಯಸ್ವರೂಪನಾಗದೆ ಹೋದರೆ, ಅಂದರೆ ಮೂರು ಕಾಲದಲ್ಲಿ ಇರುವವನಲ್ಲ ಅಂದರೆ, ಕೃತ ಪ್ರಣಾಶ, ಅಕೃತಾಭ್ಯಾಗಮ ದೋಷ ಗಳು ಸಂಭವಿಸುತ್ತವೆ.

ಪ್ರ : **ಕೃತಪ್ರಣಾಶ ದೋಷವೆಂದರೇನು ?**

ಉ : ಮಾಡಿದ ಪುಣ್ಯ ಪಾಪ ಕರ್ಮಗಳ ಫಲ ಭೋಗವು ಇಲ್ಲದೆ ನಾಶವಾಗುವುದು ಕೃತಪ್ರಣಾಶ ದೋಷವೆನಿಸುತ್ತದೆ.

ಪ್ರ : **ಅಕೃತಾಭ್ಯಾಗಮ ದೋಷವೆಂದರೇನು ?**

ಉ : ಪೂರ್ವದಲ್ಲಿ ಮಾಡಿದ ಕರ್ಮಗಳ ಫಲವನ್ನು ಅನುಭವಿಸುವುದು ಅಕೃತಾಭ್ಯಾಗಮ ದೋಷ. ಈ ಯುಕ್ತಿಯಿಂದ ಜೀವನು ಸಚ್ಚಿದಾನಂದ ಲಕ್ಷಣಾತ್ಮಕನೆಂದು ಊಹಿಸಬಹುದು.

ಅನುಭವ ಪ್ರಮಾಣ : ಸರ್ವರಿಗೂ "ಅಹಂ ಅಸ್ಮಿ" ಅಂದರೆ ನಾನು ಇದ್ದೇನೆ ಎಂಬ ಅನುಭವವು ಪ್ರಸಿದ್ಧವಾಗಿದೆ. ತಾನು ಇಲ್ಲದಿರುವುದನ್ನು

ಯಾರೂ ಅನುಭವಿಸಿಲ್ಲ. ಇದರ ಮೇಲಿಂದ ಜೀವನು ಸತ್ಯಸ್ವರೂಪನೆಂದು ಸಿದ್ಧಿಸುತ್ತದೆ.

ಇಲ್ಲಿಯವರೆಗೆ ಜೀವನು ಸದ್ರೂಪನೆಂದು ನಿರೂಪಿಸಿದ್ದಾಯಿತು. ಇನ್ನು ಜೀವನು ಚಿದ್ರೂಪನೆಂಬುದಕ್ಕೆ ಪ್ರಮಾಣಗಳು.

ಪ್ರ : **ಜೀವನು ಚಿದ್ರೂಪನು ಹೇಗೆ?**

ಉ : ಇದನ್ನು ಶೃತಿ ಪ್ರಮಾಣದಿಂದಲೇ ನಿರ್ಣಯಿಸಬೇಕು.

೧. "ಅತ್ರಾಯಂ ಪುರುಷಃ ಸ್ವಯಂ ಜ್ಯೋತಿರ್ಭವತಿ" (ಬೃಹ)

ಅರ್ಥ : ಸ್ವಪ್ನಾವಸ್ಥೆಯಲ್ಲಿ ಈ ಆತ್ಮನೆಂಬ ಪುರುಷನು ಸ್ವಯಂಜ್ಯೋತಿಯಾಗಿದ್ದಾನೆ.

ಪ್ರ : **ಹೇಗೆ?**

ಉ : ಸ್ವಪ್ನಾವಸ್ಥೆಯಲ್ಲಿ ಸೂರ್ಯ, ಚಂದ್ರ ಮೊದಲಾದ ಜ್ಯೋತಿಗಳು ಇಲ್ಲದೆ ಹೋದರೂ ಆತ್ಮಜ್ಯೋತಿಯಿಂದಲೇ ಸರ್ವ ವ್ಯವಹಾರಗಳೂ ನಡೆಯುತ್ತವೆ.

೨. "ಆತ್ಮೈವಾಸ್ಯ ಜ್ಯೋತಿರ್ಭವತಿ'' (ಕೇನ)

ಅರ್ಥ : ಅಸ್ಯ – ಈ ಸಂಘಾತಕ್ಕೆ ಆತ್ಮ, ಏವ – ಆತ್ಮನೆ, ಜ್ಯೋತಿರ್ಭವತಿ – ಜ್ಯೋತಿಯಾಗಿದ್ದಾನೆ.

೩. ''ಯೋಽಯಂ ವಿಜ್ಞಾನಮಯಃ'' (ಮುಂಡಕ)

ಅರ್ಥ : ಈ ಆತ್ಮನು ವಿಜ್ಞಾನರೂಪನು.

ಶ್ಲೋಕ : ''ತ್ರಿಷುಧಾಮಸು ಯದ್ಭೋಜ್ಯಂ
ಭೋಕ್ತಾ ಭೋಗಂ ಚ ಯದ್ಭವೇತ್
ತೇಭ್ಯೋ ವಿಲಕ್ಷಣ ಸ್ಸಾಕ್ಷಿ
ಚಿನ್ಮಾತ್ರೋಽಹಂ ಸದಾಶಿವ''.

ಅರ್ಥ : ತ್ರಿಷುಧಾಮಸು – ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿ, ಭೋಕ್ತಾ – ವಿಶ್ವ, ತೈಜಸ, ಪ್ರಾಜ್ಞರೆಂಬ ಮೂರು ಜನ ಭೋಕ್ತೃರುಗಳು, ಭೋಜ್ಯಂ – ವಿಶ್ವ, ತೈಜಸ, ಪ್ರಾಜ್ಞರೆಂಬ ಭೋಕ್ತೃರುಗಳು

ಭೋಗಿಸುವ ಸ್ಥೂಲ, ಸೂಕ್ಷ್ಮ, ಕಾರಣವೆಂಬ ಭೋಗ್ಯ ಪದಾರ್ಥಗಳು, ಭೋಗಂಚ – ಅಂತಃಕರಣದ ಅಜ್ಞಾನ ವೃತ್ತಿರೂಪವಾದ ಭೋಗ ಈ ಎಲ್ಲವು ಗಳಿಗೂ ವಿಲಕ್ಷಣವಾಗಿದ್ದು ಚೈತನ್ಯರೂಪವಾದ, ಸಾಕ್ಷಿಯಾದ ಸದಾಶಿವ ರೂಪನೇ ನಾನು.

ಈ ರೀತಿಯಾಗಿ ಆತ್ಮನು ಚಿದ್ರೂಪನೆಂಬುದು ಶೃತಿ ಪ್ರಮಾಣ.

## ಸ್ಮೃತಿ ಪ್ರಮಾಣ

ಸ್ಮೃತಿಯೆಂದರೆ ಪ್ರಧಾನವಾಗಿ ಭಗವದ್ಗೀತೆ. ಗೀತೆಯ ೧೩ನೇ ಅಧ್ಯಾಯದ ೩೩ನೇ ಶ್ಲೋಕದಲ್ಲಿ ಹೀಗೆ ಹೇಳಿದೆ :

ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥

ಅರ್ಥ : ಅರ್ಜುನಾ ! ಸೂರ್ಯನು ಸಮಸ್ತ ಲೋಕಗಳನ್ನು ಪ್ರಕಾಶ ಮಾಡಿದಂತೆ ಆತ್ಮನು ಸಂಪೂರ್ಣವಾದ ಸಂಘಾತವನ್ನು ಪ್ರಕಾಶ ಮಾಡು ತ್ತಾನೆ. ಆದುದರಿಂದ ಆತ್ಮನು ಚಿದ್ರೂಪನು.

## ಯುಕ್ತಿ ಪ್ರಮಾಣ

ಈ ಆತ್ಮನು ಚಿದ್ರೂಪನಾಗದಿದ್ದರೆ ಪ್ರಕಾಶದ ಅಭಾವದಿಂದ ಜಗತ್ತಿಗೆ ಅಂಧತ್ವ ಪ್ರಾಪ್ತಿಯಾಗುತ್ತಿತ್ತು.

## ಅನುಭವ ಪ್ರಮಾಣ

''ಅಹಂ ಅನುಭವಾಮಿ''– ನಾನು ಅನುಭವಿಸುತ್ತೇನೆ– ಎಂಬ ಅನು ಭವವು ಸರ್ವರಿಗೂ ಇರುವುದರಿಂದ ಆತ್ಮನು ಚೇತನರೂಪನೆಂದು ಸಿದ್ಧಿಸುತ್ತದೆ. ಈ ನಾಲ್ಕೂ ಪ್ರಮಾಣಗಳಿಂದಲೂ ಆತ್ಮನು ಚಿದ್ರೂಪನು.

## ಆತ್ಮನು ಆನಂದರೂಪನು ಎಂಬುದಕ್ಕೆ ಶೃತಿ ಪ್ರಮಾಣ

೧. "ಯೋ ವೈ ಭೂಮಾ ತತ್ಸುಖಮ್" (ಛಾಂದೋ)

ಅರ್ಥ : ಭೂ ಮಾ – ದೇಶ ಕಾಲ ವಸ್ತು ಪರಿಚ್ಛೇದವಿಲ್ಲದ ಆತ್ಮನು ಸುಖ ಸ್ವರೂಪನು.

೨. "ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಶ ಆಕಾಶ ಆನಂದೋ ನ ಸ್ಯಾತ್" (ಪ್ರಶ್ನ)

ಅರ್ಥ : ಈ ಆತ್ಮನು ಆನಂದರೂಪನಾಗದಿದ್ದರೆ ಅಪಾನದ ಪ್ರಾಣದ ದೇಹೇಂದ್ರಿಯಾದಿಗಳ ವ್ಯಾಪಾರಗಳನ್ನು ಮಾಡುವವರ್ಯಾರು ? ಯಾವನೂ ಇಲ್ಲವೆಂದರ್ಥ.

೩. "ಯೇಷ ಏವಾನಂದ ಯತಿ" (ಮೈತ್ರೇಯಿ)

ಅರ್ಥ : ಕಾರಣವೇನೆಂದರೆ – ಲೋಕದ ಜೀವನವೆಲ್ಲವೂ ಆನಂದ ಪೂರ್ವಕವಾಗಿಯೇ ನಡೆಯುತ್ತದೆ.

## ಜೀವನು ಆನಂದರೂಪನೆಂಬುದಕ್ಕೆ ಸ್ಮೃತಿ ಪ್ರಮಾಣ

ಭಗವದ್ಗೀತೆಯಲ್ಲಿ "ಯೋಽಂತಸ್ಸು ಖೋಽಂತರಾರಾಮ ಸ್ತಥಾಂತ ಜ್ಯೋತಿರೇವಯಃ ಸಯೋಗೀ ಬ್ರಹ್ಮನಿರ್ವಾಣಂ, ಬ್ರಹ್ಮಭೂತೋಽಧಿ ಗಚ್ಛತಿ" ಎಂಬ ಐದನೇ ಅಧ್ಯಾಯದ ೨೪ನೇ ಶ್ಲೋಕದ ಪೂರ್ವಾರ್ಧದಲ್ಲಿ ಪ್ರತ್ಯಗಾತ್ಮನು ಅಂತರಾನಂದ ಸ್ವರೂಪನು, ಆರಾಮ ಸ್ವರೂಪನು, ಜ್ಯೋತಿ ಸ್ವರೂಪನು ಎಂದು ಹೇಳಿರುವುದರಿಂದ ಪ್ರತ್ಯಗಾತ್ಮನು ಅಂದರೆ ಜೀವನು ಆನಂದಸ್ವರೂಪನೇ ಎಂದು ಹೇಳಿದೆ.

## ಜೀವನು ಆನಂದಸ್ವರೂಪನೆಂಬುದಕ್ಕೆ ಯುಕ್ತಿ ಪ್ರಮಾಣ

ಆತ್ಮನು ಆನಂದಸ್ವರೂಪನು. ಆನಂದಸ್ವರೂಪನಾಗದಿದ್ದರೆ ಯಾರಿಗೂ ತನ್ನ ಮೇಲೆ ತನಗೆ ಪ್ರೀತಿ ಇರಬಾರದು. ಪ್ರತಿಯೊಬ್ಬರಿಗೂ ತನ್ನ ಮೇಲೆ ತನಗೆ ಅತಿ ಪ್ರೀತಿ ಇರುವುದು ಕಂಡುಬರುತ್ತದೆ. ಆದುದರಿಂದ ಯುಕ್ತಿ ಪ್ರಮಾಣದಿಂದಲೂ ಜೀವನು ಆನಂದಸ್ವರೂಪನು.

## ಜೀವನು ಆನಂದಸ್ವರೂಪನೆಂಬುದಕ್ಕೆ ಅನುಭವ ಪ್ರಮಾಣ

ಸುಷುಪ್ತಿಯಿಂದ ಏಳುತ್ತಲೇ ಪ್ರತಿಯೊಬ್ಬನೂ ನಾನು ಸುಖವಾಗಿ ನಿದ್ರಿಸಿದ್ದೆನು ಎಂದು ಸ್ಮರಿಸುತ್ತಾನೆ. ಆ ಸ್ಮರಣೆಯು ಅನುಭವಿಸದೆ ಆಗ ಲಾರದು. ಆದುದರಿಂದ ಜಾಗ್ರದಾವಸ್ಥೆಯಲ್ಲಿಯೂ ಸಹ ಸುಖವನ್ನು ಅನು ಭವಿಸಿದೆನು ಎಂದು ಊಹಿಸಬಹುದು. ಸುಷುಪ್ತಿಯಲ್ಲಿ ಅನುಭವಿಸಿದ ಆನಂದವು ವಿಷಯಜನ್ಯವಾದ ಆನಂದವಲ್ಲ; ಅದು ಸ್ವರೂಪಾನಂದವೇ. ಈ ಕಾರಣದಿಂದ ಜೀವನು ಆನಂದರೂಪನು.

ಮೇಲೆ ಹೇಳಿದ ಶೃತಿ, ಸ್ಮೃತಿ, ಯುಕ್ತಿ, ಅನುಭವಗಳಿಂದ ಜೀವಾ ತ್ಮನು ಸಚ್ಚಿದಾನಂದ ರೂಪನೆಂದು ಸಿದ್ಧವಾಯಿತು.

ಪ್ರ: **ಇಲ್ಲಿಯವರೆಗೆ ಜೀವಬ್ರಹ್ಮರ ಅಭೇದ ಸಾಧಕ ಯುಕ್ತಿಗಳೂ, ಭೇದಬಾಧಕ ಯುಕ್ತಿಗಳೂ ನಿರೂಪಿಸಲ್ಪಟ್ಟವು. ಮತ್ತು ಜೀವನು ಸಚ್ಚಿದಾನಂದ ಸ್ವರೂಪನು ಎಂಬ ವಿಷಯವು ನಿರ್ಣಯವಾಯಿತು. ಅಧಿಕಾರಿಯಾದ ಜಿಜ್ಞಾಸುವು ಇದನ್ನು ವಿಚಾರಮಾಡಿ ತಿಳಿಯುವು ದರಿಂದ ಬರುವ ಫಲವೇನು ?**

ಉ : ಮೇಲೆ ಹೇಳಿದ ಪ್ರಕಾರ ಯುಕ್ತಿಗಳಿಂದ ಅಧಿಕಾರಿಯಾದ ಪುರುಷನು ವಿಚಾರ ಮಾಡುತ್ತಾ ಸಾಗಿದರೆ, ಶ್ರೋತ್ರೀಯ ಬ್ರಹ್ಮನಿಷ್ಠರಾದ ಸದ್ಗುರುವಿನ ಮುಖಾಂತರ ತತ್ವಮಸ್ಯಾದಿ ಮಹಾವಾಕ್ಯವನ್ನು ಶ್ರವಣ ಮಾಡಿ ದರೆ ಭಾಗತ್ಯಾಗ ಮೂಲಕ ಮಹಾವಾಕ್ಯಾರ್ಥವನ್ನು ತಿಳಿಯುವ ಶಕ್ತಿ ಬರು ತ್ತದೆ. ನಂತರ ಉಪಾಧಿಗಳಾದ ಮಾಯೆ, ಅಂತಃಕರಣ ಮೊದಲಾದ ವಾಚ್ಯ ಭಾಗವನ್ನು ಪರಿತ್ಯಾಗ ಮಾಡಿ, ಸ್ವರೂಪಕ್ಕೆ ಭಿನ್ನವಲ್ಲದ ಅಖಂಡವಾದ, ದೃಢ ವಾದ ಅಪರೋಕ್ಷ ಜ್ಞಾನವನ್ನು ಪಡೆದುಕೊಳ್ಳುತ್ತಾನೆ.

ಪ್ರ : **ದೃಢವಾದ ಅಪರೋಕ್ಷ ಜ್ಞಾನದ ಸ್ವರೂಪವೇನು ?**

ಉ : "ಅಹಂ ಬ್ರಹ್ಮಾಸ್ಮಿ", "ಬ್ರಹ್ಮೈವಾಹಮಸ್ಮಿ" ಅಂದರೆ ನಾನು ಬ್ರಹ್ಮಸ್ವರೂಪನು, ಬ್ರಹ್ಮಸ್ವರೂಪವೇ ನಾನು ಎಂಬ ಪರಸ್ಪರಾ ಭೇದ ರೂಪವಾದ ಸಂಶಯವಿಲ್ಲದ ಜ್ಞಾನವೇ ದೃಢಾಪರೋಕ್ಷಜ್ಞಾನ.

ಪ್ರ : **"ಅಹಂ ಬ್ರಹ್ಮಾಸ್ಮಿ", "ಬ್ರಹ್ಮೈವಾಹಮಸ್ಮಿ" ಎಂಬ ಎರಡು ವಾಕ್ಯಗಳನ್ನು ಉಪಯೋಗಿಸಲು ಕಾರಣವೇನು ?**

ಉ : ದೃಢವಾದ ಅಪರೋಕ್ಷ ಜ್ಞಾನಿಗಳಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯುಳ್ಳವರು ಕೆಲವು ಜನ. "ಬ್ರಹ್ಮೈವಾಹಮಸ್ಮಿ" ಎಂಬ ವೃತ್ತಿಯಿರುವವರು ಕೆಲವು ಜನ. "ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯುಳ್ಳ ಅನುಭವವೇನೆಂದರೆ, ಅಹಂ ಪದಕ್ಕೆ ಲಕ್ಷ್ಯಾರ್ಥವಾದ ಪ್ರತ್ಯಗಾತ್ಮನಿಗೂ, ಈಶ್ವರ ಸಾಕ್ಷಿಯಾದ ಪರಬ್ರಹ್ಮಕ್ಕೂ ಅಭೇದವನ್ನು ಅನುಭವಿಸುವವನು. ಬ್ರಹ್ಮೈವಾಹಮಸ್ಮಿ" ಎಂಬ ವೃತ್ತಿಯುಳ್ಳ ಅನುಭವವೇನೆಂದರೆ, ಬ್ರಹ್ಮಕ್ಕೂ ಪ್ರತ್ಯಗಾತ್ಮನಿಗೂ ಅಭೇದವನ್ನು ಅನುಭವಿಸುವವನು.

ಪ್ರ : **ಈ ತರದ ಅನುಭವದಿಂದ ಪ್ರಯೋಜನವೇನು ?**

ಉ : ಅಹಂ ಪದ ಲಕ್ಷ್ಯಾರ್ಥವಾದ ಪ್ರತ್ಯಕ್ ಚೇತನವು ಸರ್ವರಿಗೂ ಅಪರೋಕ್ಷವಾಗಿ, ಆತ್ಮವಾಗಿ, ಸ್ವರೂಪವಾಗಿಯೇ ಇದೆ. ಬ್ರಹ್ಮವು ಸರ್ವರಿಗೂ ಪರೋಕ್ಷವಾಗಿ, ತನಗಿಂತ ಭಿನ್ನವಾಗಿ ತಿಳಿದು ಬರುತ್ತದೆ. ಪ್ರತ್ಯಗಾತ್ಮನೊಂದಿಗೆ ಬ್ರಹ್ಮದ ಅಭೇದವನ್ನು ಅನುಭವಿಸಿದರೆ "ಅಹಂ ಬ್ರಹ್ಮಾಸ್ಮಿ"ಯೆಂಬ ಅಪರೋಕ್ಷ ಜ್ಞಾನವುಂಟಾಗುತ್ತದೆ. ಈ ತರದ ಅಪರೋಕ್ಷ ಜ್ಞಾನದಿಂದ ಬ್ರಹ್ಮದ ಪರೋಕ್ಷತ್ವವೂ ಅನಾತ್ಮತ್ವವೂ ನಿವೃತ್ತಿಯಾಗುತ್ತದೆ. ಇದೇ "ಅಹಂ ಬ್ರಹ್ಮಾಸ್ಮಿ" ಎಂಬ ಅರಿವಿನ ಪ್ರಯೋಜನ.

ಪ್ರ : **ಬ್ರಹ್ಮೈವಾಹಮಸ್ಮಿ" ಎಂಬ ಅರುಹಿನ ಪ್ರಯೋಜನವೇನು?**

ಉ : ಅವಿವೇಕಿಗಳ ದೃಷ್ಟಿಯಲ್ಲಿ ಆತ್ಮನು ಪರಿಚ್ಛಿನ್ನನಾಗಿಯೂ, ಬ್ರಹ್ಮಕ್ಕೆ ಭಿನ್ನನಾಗಿಯೂ ಪ್ರತೀತಿಯಾಗುತ್ತಾನೆ. ಯಾವಾಗ ಬ್ರಹ್ಮದೊಂದಿಗೆ ಆತ್ಮನ ಅಭೇದವಾಗುತ್ತದೆಯೋ ಅಂದರೆ "ಬ್ರಹ್ಮೈವಾಹಮಸ್ಮಿ" ಎಂಬ ಅರಿವು ಉಂಟಾಗುತ್ತದೆಯೋ, ಆ ಅಪರೋಕ್ಷ ಜ್ಞಾನದಿಂದ ಇದಕ್ಕಿಂತ ಮೊದಲು ಆತ್ಮನಲ್ಲಿ ತೋರಿದ ಪರಿಚ್ಛಿನ್ನತ್ವವೂ ಅಬ್ರಹ್ಮತ್ವವೂ ದೂರವಾಗುತ್ತದೆ. ಈ ರೀತಿಯಾಗಿ ಬ್ರಹ್ಮದ ಪರೋಕ್ಷತ್ವ, ಆತ್ಮನ ಪರಿಚ್ಛಿನ್ನತ್ವ ಎಂಬ ಭ್ರಮೆಗಳು ನಿವೃತ್ತಿಯಾಗುವುದಕ್ಕಾಗಿ "ಅಹಂ ಬ್ರಹ್ಮಾಸ್ಮಿ", "ಬ್ರಹ್ಮೈವಾಹಮಸ್ಮಿ" ಎಂಬ ಆತ್ಮ ಬ್ರಹ್ಮರ ಪರಸ್ಪರ ಅಭೇದವನ್ನು ನಿಶ್ಚಯ ಮಾಡುವ ಎರಡು ಜ್ಞಾನಗಳು ತೋರುತ್ತವೆ, ಅಷ್ಟೆ. ಅವೆರಡರಲ್ಲಿ ಯಾವ ಭೇದವೂ ಇಲ್ಲ.

**ಪ್ರ : ಈ ರೀತಿಯಾಗಿ ಆತ್ಮ – ಬ್ರಹ್ಮರ ಪರಸ್ಪರ ಅಭೇದ ನಿಶ್ಚಯು ದಿಂದ ಅಂದರೆ ''ಅಹಂ ಬ್ರಹ್ಮಾಸ್ಮಿ" ಎಂಬ ದೃಢವಾದ ಅಪರೋಕ್ಷ ಜ್ಞಾನದಿಂದ ಉಂಟಾಗುವ ಫಲವೇನು ?**

ಉ : ಸದ್ಗುರು ಮುಖದಿಂದ ತತ್ವಮಸ್ಯಾದಿ ಮಹಾವಾಕ್ಯಗಳನ್ನು ಶ್ರವಣ ಮಾಡಿದ ಮೇಲೆ ಅಖಂಡವಾದ ಬ್ರಹ್ಮಾಕಾರವಾದ ಅಪರೋಕ್ಷ ವೃತ್ತಿಯು ಉಂಟಾಗುತ್ತದೆ. ಆ ವೃತ್ತಿರೂಪ ಜ್ಞಾನದಿಂದ – ೧. ಕಾರ್ಯ ಪ್ರಪಂಚ ಸಹಿತ ಅಜ್ಞಾನರೂಪ ಅನರ್ಥವು ನಿವೃತ್ತಿಯಾಗುತ್ತದೆ. ೨. ಪ್ರತ್ಯಗಾತ್ಮನಲ್ಲಿ ಅಖಂಡೈಕರಸ ಬ್ರಹ್ಮಾನಂದರೂಪ ಸ್ಥಿತಿಯು ಉಂಟಾಗುತ್ತದೆ. ಸಾರಾಂಶವೇನೆಂದರೆ, ಅನರ್ಥಗಳ ಅತ್ಯಂತ ನಿವೃತ್ತಿಯೂ, ಪರಮಾನಂದ ಪ್ರಾಪ್ತಿರೂಪ ಮೋಕ್ಷವೂ ಉಂಟಾಗುತ್ತದೆ.

**ಪ್ರ : ಇದಕ್ಕೆ ಶೃತಿ ಪ್ರಮಾಣವೇನು ?**

ಉ : ''ತರತಿ ಶೋಕಮಾತ್ಮವಿತ್'' (ಛಾಂದೋ), ಅಂದರೆ ಆತ್ಮ ಸಾಕ್ಷಾತ್ಕಾರಿಯು ಅನರ್ಥರೂಪವಾದ ಶೋಕ ಸಂಸಾರವನ್ನು ದಾಟುತ್ತಾನೆ.

೨. "ಬ್ರಹ್ಮವಿದ್ಬ್ರಹ್ಮೈವ ಭವತಿ'' (ಅನೇಕ ಶೃತಿಗಳು), ಅಂದರೆ ಬ್ರಹ್ಮವನ್ನು ಆತ್ಮಸ್ವರೂಪವಾಗಿ ತಿಳಿದ ಪಂಡಿತನು ಬ್ರಹ್ಮವೇ ಆಗುತ್ತಾನೆ.

ಈ ರೀತಿ ಅನೇಕ ಶೃತಿಗಳಲ್ಲಿಯೂ, ಪ್ರಕರಣ ಗ್ರಂಥಗಳಲ್ಲಿಯೂ, ಸ್ಮೃತಿಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಬ್ರಹ್ಮವೇತ್ತನು ಬ್ರಹ್ಮ ಸಾಕ್ಷಾತ್ಕಾರ ದ್ವಾರ ಅಜ್ಞಾನ ನಿವೃತ್ತಿ ಮತ್ತು ಬ್ರಹ್ಮಾನಂದ ಪ್ರಾಪ್ತಿರೂಪ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ ಎಂದು ಪ್ರತಿಪಾದಿಸಿದೆ. ಮತ್ತು ಬ್ರಹ್ಮಜ್ಞಾನಿಯ ದರ್ಶನ ಸೇವೆಯಿಂದಲೂ ಬ್ರಹ್ಮಜ್ಞಾನ ಪ್ರಾಪ್ತಿಯೆಂದು ಹೇಳಿದೆ.

ಅಸಂಗೋಽಹಂ ಅಸಂಗೋಽಹಮ್<br>
ಅಸಂಗೋಽಹಂ ಪುನಃ ಪುನಃ ।<br>
ಸಚ್ಚಿದಾನಂದರೂಪೋಽಹಮ್<br>
ಅಹಮೇವಾಹಮವ್ಯಯಃ ॥

ಅರ್ಥ : ನಾನು ಅಸಂಗನು, ನಾನು ಅಸಂಗನು, ನಾನು ಅಸಂಗನು ಎಂಬುದನ್ನು ಪುನಃ ಪುನಃ ಸ್ಮರಿಸುತ್ತಿರಬೇಕು. ನಾನು ಸಚ್ಚಿದಾನಂದ ಲಕ್ಷಣಾತ್ಮಕನು, ನಾನೇ ಸಚ್ಚಿದಾನಂದ ಲಕ್ಷಣಾತ್ಮಕನು, ನಾನು ಅವ್ಯಯನು.

ನ ವಿದ್ಯತೇವ್ಯಯಃ ಯಸ್ಯ ಸಃ ಅವ್ಯಯಃ – ಯಾವನಿಗೆ ವ್ಯಯ ವಿಲ್ಲವೋ ಅವನು ಅವ್ಯಯನು.

ವೃತ್ತಿರತ್ನಾವಳಿ ಸಾರಸಹಿತವಾದ ವಿಚಾರ ಚಂದ್ರೋದಯ ವಿಚಾರ ಗೋಷ್ಠಿ ಎಂಬ ಗ್ರಂಥವು ಸಮಾಪ್ತಃ.

ಓಂ ಲೋಕಾಸ್ಸಮಸ್ತಾ ಸುಖಿನೋಭವಂತು
ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ತತ್ಸತ್

---